# ಕನ್ನಡ ಶಾಸನಗಳಲ್ಲಿ ಕೃಷಿ

(ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧೪ನೆಯ ಶತಮಾನದವರೆಗೆ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

ರಂಜಿತಾ ಆರ್.

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಪ್ರಾಧ್ಯಾಪಕರು








ಸಮಾಜ ವಿಜ್ಞಾನಗಳ ನಿಕಾಯ

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩. ೨೭೬

೨೦೨೦

# ಕನ್ನಡ ಶಾಸನಗಳಲ್ಲಿ ಕೃಷಿ

## (ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧೪ನೆಯ ಶತಮಾನದವರೆಗೆ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


**ಸಂಶೋಧಕರು**
**ರಂಜಿತಾ ಆರ್.**

**ಮಾರ್ಗದರ್ಶಕರು**
**ಡಾ. ಕಲವೀರ ಮನ್ವಾಚಾರ**
ಪ್ರಾಧ್ಯಾಪಕರು






ಸಮಾಜ ವಿಜ್ಞಾನಗಳ ನಿಕಾಯ
ಶಾಸನಶಾಸ್ತ್ರ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬
೨೦೨೦

## ಮಾರ್ಗದರ್ಶಕರ ಪ್ರಮಾಣಪತ್ರ

**ರಂಜಿತಾ ಆರ್.** ಅವರು **"ಕನ್ನಡ ಶಾಸನಗಳಲ್ಲಿ ಕೃಷಿ"** (ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧೪ನೆಯ ಶತಮಾನದ ವರೆಗೆ) ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿ ಕನ್ನಡ ವಿಶ್ವವಿದ್ಯಾಲಯಕ್ಕೆ, ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ್ದಾರೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಾಗಿ ಬೇರೆ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೨/೦೮/೨೦೨೦

**ಡಾ. ಕಲವೀರ ಮನ್ವಾಚಾರ**
ಪ್ರಾಧ್ಯಾಪಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

## ಸಂಶೋಧಕರ ಪ್ರಮಾಣಪತ್ರ

**ಡಾ. ಕಲವೀರ ಮನ್ವಾಚಾರ** ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಇವರ ಮಾರ್ಗದರ್ಶನದಲ್ಲಿ **"ಕನ್ನಡ ಶಾಸನಗಳಲ್ಲಿ ಕೃಷಿ"** (ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧೪ನೆಯ ಶತಮಾನದ ವರೆಗೆ) ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ, ಈ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಾಗಿ ಬೇರೆ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

Ranjitha R
**ರಂಜಿತಾ ಆರ್.**
ಸಂಶೋಧನಾ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 17/08/2020

# ಸಂಕ್ಷೇಪಗಳು

| | |
|---|---|
| ಕ ವಿ ಹಂ ಶಾ ಸಂ | ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ ಸಂಪುಟಗಳು. |
| ರೈ ಸಂ | ರೈಸ್ ಸಂಪುಟಗಳು. |
| **A R I E** | Annual Report of Indian Epigraphy. |
| **BKI** | Bombay Karnataka Inscriptions |
| **EC** | Epigraphia Carnatica. |
| **EI** | Epigraphia Indica. |
| **IA** | Indian Antiquary. |
| **I N K K S** | Inscriptions of North Karnataka and Kolhapura State. |
| **KI** | Karnataka Inscriptions. |
| **MAR** | Mysore Archaeological Annual Reports. |
| **SII** | South Indian Inscriptions. |

# ಪರಿವಿಡಿ

## ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮತ್ತು ಈವರೆಗಿನ ಅಧ್ಯಯನಗಳ ಸಮೀಕ್ಷೆ

೧. ಅಧ್ಯಯನದ ಉದ್ದೇಶ
೨. ಅಧ್ಯಯನದ ವ್ಯಾಪ್ತಿ
೩. ಅಧ್ಯಯನದ ಸ್ವರೂಪ
೪. ಅಧ್ಯಯನದ ವಿಧಾನ
೫. ಅಧ್ಯಯನದ ಸಮೀಕ್ಷೆ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮತ್ತು ಈವರೆಗಿನ ಅಧ್ಯಯನಗಳ ಸಮೀಕ್ಷೆ

**ಪೀಠಿಕೆ**

ಮಾನವ ಸಮಾಜದ ಸಂಸ್ಕೃತಿಯನ್ನು ಗಮನಿಸುವಾಗ ಮಾನವನ ಸಾಂಸ್ಕೃತಿಕ ಚರಿತ್ರೆಯ ಆರಂಭದ ಬಗೆಗೆ ಖಚಿತವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಮನುಕುಲ ವಿಕಾಸದ ಸ್ವರೂಪ ಹಂತ-ಹಂತವಾಗಿ ಬೆಳೆಯುತ್ತಾ, ಮಹತ್ವದ ಬದಲಾವಣೆಯನ್ನು ಕಂಡುಕೊಂಡಿತು. ಪ್ರಾರಂಭದಲ್ಲಿ ಮಾನವನು ತನ್ನ ಹಸಿವಿನ ಇಂಗಿತವನ್ನು ನಿವಾರಿಸಿಕೊಳ್ಳಲು ಗೆಡ್ಡೆಗೆಣಸುಗಳನ್ನು, ಬೇಟೆಯಾಡಿದ ಹಸಿಮಾಂಸವನ್ನು ಭಕ್ಷಿಸುತ್ತಿದ್ದನು. ಕೃಷಿಯಿಂದಾಗಿ ಅಲೆಮಾರಿಯಾಗಿ ಜೀವನ ಸಾಗಿಸುತ್ತಿದ್ದ ಮಾನವನು ಒಂದೆಡೆ ನೆಲೆನಿಂತನು. ಪ್ರಕೃತಿಯಲ್ಲಿನ ನಿಗೂಢ ವಿಸ್ಮಯಗಳನ್ನು ಕುತೂಹಲದಿಂದ ಬೇಧಿಸಲಾರಂಭಿಸಿದನು. ಈ ರೀತಿಯ ಅವನ ಕುತೂಹಲ, ಬೌದ್ಧಿಕ ವಿಕಾಸಗಳ ಆವಿಷ್ಕಾರದ ಫಲಶ್ರುತಿಯೇ ಕೃಷಿ ವ್ಯವಸ್ಥೆಯಾಗಿದೆ. ಪ್ರಾಚೀನ ಕಾಲದಿಂದ ಬದಲಾವಣೆಗಳನ್ನು ಮೈಗೂಡಿಸಿಕೊಂಡು ಸಾಗಿ ಬಂದ ವ್ಯವಸ್ಥೆ ಕೃಷಿಯಾಗಿದ್ದು, ಇಂದಿಗೂ ಶೇಕಡಾ ೬೫% ಭಾರತೀಯ ಜನರು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ತಮ್ಮ ಜೀವನ ನಿರ್ವಹಣೆಯ ಕಸುಬನ್ನಾಗಿಸಿಕೊಂಡಿದ್ದಾರೆ. ಕೃಷಿಯಿಂದಾಗಿ ಮಾನವನು ಗುಂಪು ಜೀವನ ಆರಂಭಿಸಿದುದರ ಜೊತೆಗೆ ಅವನ ಆಲೋಚನಾ ಸಾಮರ್ಥ್ಯವು ವಿಸ್ತಾರಗೊಂಡಿತು. ವಿಶ್ವದ ಎಲ್ಲಾ ಕಡೆಗಳಲ್ಲಿಯೂ ಏಕಕಾಲದಲ್ಲಿ ಕೃಷಿ ಚಟುವಟಿಕೆಗಳು ಆರಂಭವಾದಂತೆ ಕಂಡುಬರುವುದಿಲ್ಲ. ಬದಲಿಗೆ ಏಳೆಂಟು ಸಾವಿರ ವರ್ಷಗಳಲ್ಲಿ ಜರುಗಿರಬಹುದೆಂದು ತಿಳಿದುಬರುತ್ತದೆ. ಕೃಷಿಯು ಮೊದಲು ೧೦ಸಾವಿರ ವರ್ಷಗಳ ಹಿಂದೆ ಫರ್ಟೈಲ್ ಕ್ರೆಸೆಂಟ್ ಎಂದು ಹೆಸರಿಸಲಾದ ಸಿರಿಯಾ, ತುರ್ಕಿ ಭೂಭಾಗಗಳಲ್ಲಿ ಆರಂಭವಾಯಿತು. ಕ್ರಿ.ಪೂ ೭೦೦೦ದಿಂದ ಕ್ರಿ.ಪೂ ೫೦೦೦ ವರ್ಷಗಳ(ಕಾರ್ಬನ್-೧೪) ಕಾಲಮಾನ ಸೂಚಿಸುವಂತೆ ಮೆಹರಘಢ-೧ರಲ್ಲಿ ಆರು ಸಾಲುಗಳ ತೆರೆದ ಬಾರ್ಲಿ, ಎನಿಕಾರ್ನ್, ಎಮರ್ ಮುಂತಾದ ಗೋಧಿಯ ಉಪಸಂಕುಲಗಳು ದೊರೆತಿವೆ. ಇದರಿಂದಾಗಿ ಧಾನ್ಯಗಳ ವ್ಯವಸಾಯ ಪಶ್ಚಿಮ ಏಷ್ಯದಿಂದಲೇ ವಿವಿಧೆಡೆ ಹರಡಿರಬಹುದು ಎನ್ನಲಾಗಿದೆ. ಕ್ರಿ.ಪೂ. ೭೦೦೦ ಸುಮಾರಿಗೆ ಸಿಂಧೂ ಬಯಲಿನಲ್ಲಿ ಕಾಣಿಸಿಕೊಂಡ ಕೃಷಿ ಉತ್ಪಾದನೆಯೂ ಕ್ರಿ.ಪೂ ೪೦೦೦ದವರೆಗೆ ಭಾರತದ ಯಾವ ಭಾಗದಲ್ಲಿಯು ಕಾಣಿಸುವುದಿಲ್ಲ. ಇದರಿಂದಾಗಿ ಭಾರತದಲ್ಲಿ ಕೃಷಿಯ ಆರಂಭ ಸಿಂಧೂ ಬಯಲಿನಲ್ಲಿ ಕ್ರಿ.ಪೂ. ೭೦೦೦ದ ಅವಧಿಯಲ್ಲಿ ಆಗಿರಬಹುದೆಂದು ಹೇಳಬಹುದಾಗಿದೆ. ಕರ್ನಾಟಕವನ್ನು ಗಮನಿಸುವಾಗ ಕೃಷಿಯು ಕ್ರಿ.ಪೂ. ಸುಮಾರು ೨೨೦೦ರ ವೇಳೆಗೆ ಆರಂಭವಾಗಿದೆ ಎಂದು ತಿಳಿದುಬರುತ್ತದೆ. ೧೯೬೦-೭೦ರ ದಶಕದಲ್ಲಿ ನಡೆದ ಉತ್ಖನನದಲ್ಲಿ ಕರ್ನಾಟಕದ ಬಳ್ಳಾರಿ ಜಿಲ್ಲೆಯ ತೆಕ್ಕಲುಕೋಟೆಯಲ್ಲಿ ಹುರುಳಿಕಾಳು, ಹಾವೇರಿ ಜಿಲ್ಲೆಯ ಹಳ್ಳೂರಿನಲ್ಲಿ ರಾಗಿ ಧಾನ್ಯಗಳು ದೊರೆತಿವೆ. ಇದರಿಂದ ಕ್ರಿ.ಪೂ. ೨೨೦೦ಕ್ಕೂ ಹಿಂದೆಯೇ ಕೃಷಿವ್ಯವಸ್ಥೆ ರೂಪುಗೊಂಡಿರಬೇಕು ಎಂಬುದು ದಾಖಲೆಗಳಿಂದ ತಿಳಿದುಬರುತ್ತದೆ.

ಕೃಷಿ ವ್ಯವಸ್ಥೆಯಲ್ಲಿ ಉಳುಮೆ ಮಾಡುವ ಮೊದಲು ಭೂಮಿಯು ಕಾಡು, ಪೊದೆ, ಕಲ್ಲು, ಬೆಟ್ಟ-ಗುಡ್ಡಗಳಿಂದ ಆವೃತವಾಗಿರುತ್ತಿತ್ತು. ಇಂತಹ ಭೂಮಿಯನ್ನು ಕಾಡಿಗೆ ಬೆಂಕಿ ಹಾಕುವ ಮೂಲಕ ಸಮತಟ್ಟಾಗಿ ಮಾಡಿಕೊಳ್ಳಲಾಗುತ್ತಿತ್ತು. ನಂತರ ಸಣ್ಣ ಪ್ರಮಾಣದ ಉಳುಮೆಯೊಂದಿಗೆ ಕೃಷಿ ಪ್ರಾರಂಭವಾಗಿರುವ ಸಾಧ್ಯತೆಗಳಿವೆ. ಈ ರೀತಿ ಕಾಡಿಗೆ ಬೆಂಕಿ ಹಚ್ಚಿ, ಕಾಡು ಕಡಿದು, ಹೊಸ ಭೂಮಿಯನ್ನು ವ್ಯವಸಾಯಕ್ಕೆ ಪರಿವರ್ತನೆ ಮಾಡಿಕೊಂಡ ಸಾಧ್ಯತೆಗಳಿವೆ. ಒಂದು ಭೂಮಿ

ಬರಡಾದ ನಂತರ ಅದನ್ನು ಬಿಟ್ಟು ಮತ್ತೊಂದು ಭೂಮಿಯನ್ನು ಸ್ವಚ್ಛಗೊಳಿಸಿಕೊಂಡು ಉಳುಮೆ ಮಾಡುವ ವಿಧಾನಕ್ಕೆ ಜೂಮ್ ಅಥವಾ ಕಡಿ ಅಥವಾ ಸುಡು ವಿಧಾನವೆಂದು ಕರೆಯಲಾಗುತ್ತದೆ. ಇಂದಿಗೂ ಆದಿವಾಸಿಗಳಲ್ಲಿ ಈ ವಿಧಾನ ರೂಢಿಯಲ್ಲಿದೆ. ಈ ರೀತಿ ಆರಂಭವಾದ ಕೃಷಿ ವ್ಯವಸ್ಥೆಯು ಆಹಾರ ಉತ್ಪಾದನೆಯ ಉದ್ದೇಶವನ್ನು ಹೊಂದಿತ್ತೇ ವಿನಃ ಆರ್ಥಿಕ ಲಾಭಗಳಿಕೆಯ ಉದ್ಯಮವಾಗಿರಲಿಲ್ಲ. ಜೊತೆಗೆ ತಲೆಮಾರಿನಿಂದ ತಲೆಮಾರಿಗೆ ಕೃಷಿಯ ಜ್ಞಾನ ಮೌಖಿಕವಾಗಿಯೇ ಹರಿದು ಬಂದಿರುವುದು ಕಂಡುಬರುತ್ತದೆ. ಕೃಷಿ ಉತ್ಪಾದನೆಯ ಸಂಪತ್ತು ಹೆಚ್ಚಾದಂತೆ ಕೃಷಿಯು ವ್ಯಾಪಾರ-ವ್ಯವಹಾರಗಳಿಗೆ ಹಾದಿ ಮಾಡಿಕೊಟ್ಟಿತು. ವ್ಯಾಪಾರಗಳಿಂದ ಬಂದ ಲಾಭ ಕರ್ನಾಟಕದಲ್ಲಿ ಕೆಲವು ರಾಜವಂಶಗಳ ಉಗಮಕ್ಕೆ ಕಾರಣವಾಯಿತು. ಈ ಹಿನ್ನೆಲೆಯಲ್ಲಿ ಕದಂಬ, ಗಂಗ, ಚಾಲುಕ್ಯ ರಾಷ್ಟ್ರಕೂಟ, ಹೊಯ್ಸಳ ವಂಶಗಳು ಬೆಳವಣಿಗೆ ಹೊಂದಿದವು. ಜೊತೆಗೆ ರಾಜ್ಯಗಳ ಉದಯಕ್ಕೆ ನದಿ ನೀರಾವರಿ ವ್ಯವಸಾಯವು ಪ್ರಮುಖ ಕಾರಣವಾಯಿತು.

ಕೃಷಿ ಮೂಲದಿಂದ ಹುಟ್ಟಿಕೊಂಡ ಪ್ರಭುವರ್ಗವು ಜನರನ್ನು ಆಳ್ವಿಕೆ ಮಾಡಲು ಆರಂಭಿಸಿತು. ಜೊತೆಗೆ ಜನರ ಸಂಪೂರ್ಣ ಹೊಣೆಗಾರಿಕೆ ಅರಸನ ಕೈಸೇರಿತು. ಕರ್ನಾಟಕವನ್ನಾಳಿದ ಅರಸು ಮನೆತನಗಳ ಆಳ್ವಿಕೆಯ ಕಾಲದಲ್ಲೂ-ಕೃಷಿಯೇ ಪ್ರಧಾನ ಕಸುಬಾಗಿ, ರಾಜ್ಯದ ಬೊಕ್ಕಸಕ್ಕೆ ಆದಾಯದ ಒಂದು ಭಾಗವಾಗಿತ್ತು. ಇಂತಹ ಅರಸುಗಳು ತಮ್ಮ ಆಡಳಿತಾವಧಿಯಲ್ಲಿ ಹಲವಾರು ಶಾಸನಗಳನ್ನು ರಾಜ್ಯದ ಹಿತದೃಷ್ಟಿಯಿಂದ, ತಾವು ಹಾಕಿಸಿದ ವಿಷಯ ಶಾಶ್ವತವಾಗಬೇಕೆಂಬ ದೃಷ್ಟಿಯಿಂದ ನಿರ್ಮಿಸಿದರು. ಇವುಗಳಲ್ಲಿ ಶೇ.೮೦ರಷ್ಟು ದಾನಶಾಸನಗಳೇ ಆಗಿವೆ. ರಾಜರು ದಾನ ನೀಡುವಾಗ ಭೂಮಿಯನ್ನೇ ದಾನವಾಗಿ ನೀಡುತ್ತಿದ್ದರು. ಪಂಡಿತರಿಗೆ, ಬ್ರಾಹ್ಮಣರಿಗೆ, ದೇವಾಲಯ ಮೊದಲಾದವುಗಳಿಗೆ ದಾನ ನೀಡಿದಾಗ ಅದು ಪುನಃ ಗೇಣಿಯ ರೂಪದಲ್ಲಿ ರೈತನ ಕೈಸೇರುತ್ತಿತ್ತು. ಕ್ರಿ.ಶ. ೧೧೫೩ರ ಶಾಸನವು ಭೂಮಿಯಿಂದ ಬೆಳೆಯುವ ಧಾನ್ಯಗಳಿಂದ ಜನರನ್ನು ಸಾಕುವ ಭೂಮಿಯನ್ನು 'ಭೂಮಿತಾಯಿ' ಎಂದು ಕರೆದಿದೆ. ಜೊತೆಗೆ ರೈತರನ್ನು ಭೂದೇವಿಯ ಮಕ್ಕಳೆಂದು ಕರೆದಿದೆ. "ಅನ್ನದಾನ ಸಂಪೂರ್ಣರುಂ ಭೂಮಿಪುತ್ರಕರು ಮಪ್ಪ ಚಂದ್ರಗೌಡ" ಕ್ರಿ.ಶ. ೧೯೩ ಮತ್ತು ಕ್ರಿ.ಶ. ೧೧೦೫ರ ಶಾಸನಗಳು ರೈತರನ್ನು ಒಕ್ಕಲ ಮಕ್ಕಳೆಂದು ಕರೆದಿವೆ.[೬] ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಭೂಮಿಯ ಪರಿಕಲ್ಪನೆ ಅತ್ಯಮೂಲ್ಯವಾದುದು. ಶಾಸನಗಳ ಶಾಪಾಶಯಗಳಲ್ಲಿ ಬರುವ ಭೂಮಿಯ ಬಗೆಗಿನ ಹೇಳಿಕೆಗಳು ಇದಕ್ಕೆ ಸಾಕ್ಷಿಗಳಾಗಿವೆ. "ಇದಾನ್ ಕೊಳೆಯಿರೆಟ್ಟಿತ್ತಜಿಳುಂ ಒಕ್ಕಲ್ತನಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯಾಗದೆ ಕೆಡುಗೆ", "ಇದಾನ್ ಕಾದು ಸಲ್ವೊನ್ ಪರಮ ಕಲ್ಯಾಣ ತೀರ್ಥಂಗಳ್ ಅಪ್ಪಾರ್, ನೆಲನುಂ ವೆಳೆಗೆ ಪಾರ್ವರುಂ ಪ್ರಜೆಯುಂ ತಣಿಗೆ"[೭] ಎಂಬ ಈ ಮಾತುಗಳು ಭೂಮಿಯ ಬಗೆಗಿನ ಗೌರವ, ಪೂಜ್ಯನೀಯ ಭಾವವನ್ನು ಪ್ರತಿನಿಧಿಸುತ್ತವೆ. ಜೊತೆಗೆ ರೈತ ಬೆಳೆದರೆ ಲೋಕ ಬೆಳಗುತ್ತದೆ ಎಂಬ ಆಶಯ ವ್ಯಕ್ತವಾಗುತ್ತದೆ.

ಭೂದಾನವನ್ನು ನೀಡುವುದು-ಪವಿತ್ರ ಕಾರ್ಯವೆಂದು ಭಾವಿಸಿ ರಾಜರು ಭೂಮಿಯನ್ನು ದಾನವಾಗಿ ನೀಡುತ್ತಿದ್ದರು. ಜೊತೆಗೆ ಕೃಷಿ ಉತ್ಪನ್ನವನ್ನು ಹೆಚ್ಚಿಸುವ ಸಲುವಾಗಿ, ಆರ್ಥಿಕತೆಯನ್ನು ಬಲಗೊಳಿಸುವ ಕಾರಣಗಳಿಂದ ದಾನ ನೀಡುತ್ತಿದ್ದರು. ಕೆಲವೊಮ್ಮೆ ಕಾಡನ್ನೋ, ಬಂಜರು ಭೂಮಿಯನ್ನೋ, ಕಲ್ಲು ನೆಲವನ್ನೋ ದಾನವಾಗಿ ನೀಡಲಾಗುತ್ತಿತ್ತು. ಇಂತಹ ಭೂಮಿಯನ್ನು ಗೇಣಿ ತೆಗೆದುಕೊಂಡ ರೈತನಿಗೆ ಇಂತಿಷ್ಟು ವರ್ಷಗಳ ಕಾಲ ತೆರಿಗೆ ವಿನಾಯಿತಿ, ಗೇಣಿ ಹಣದ ವಿನಾಯಿತಿ ಇರುತ್ತಿತ್ತು. ಅದು ಕೃಷಿ ಭೂಮಿಯಾಗಿ ಪರಿವರ್ತನೆಗೊಂಡು ಸಮೃದ್ಧಿಯಾಗಿ ಬೆಳೆಯಲು ಆರಂಭಿಸಿದ ನಂತರ ಅದಕ್ಕೆ ತೆರಿಗೆ, ಗೇಣಿಯ ಮೊತ್ತವನ್ನು ರೈತರು ಭರಿಸಬೇಕಾಗುತ್ತಿತ್ತು. ಕ್ರಿ.ಶ.

೧೧ನೆಯ ಶತಮಾನದ ಜಯಸಿಂಹನ ತಳಂಗೆರೆ ಶಾಸನವು ಕಲ್ಕಾಡ ನೆಲವನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದುದರ ಬಗೆಗೆ ಮಾಹಿತಿ ನೀಡುತ್ತದೆ.

ಕೃಷಿ ಭೂಮಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಬೆಟ್ಟಲೆ ಮತ್ತು ಗಟ್ಡೆ ಭೂಮಿಗಳ ಉಲ್ಲೇಖ ಕಂಡುಬರುತ್ತದೆ. ಮಣ್ಣಿನ ಗುಣ ಮತ್ತು ಪ್ರಾಕೃತಿಕ ಲಕ್ಷಣಗಳಿಗೆ ಅನುಗುಣವಾಗಿ ಭೂಮಿಯನ್ನು ಬೆದ್ದಲು ಮತ್ತು ನೀರ್ಮಣ್ಣು(ನೀರಾವರಿ)ಎಂದು ವಿಂಗಡಿಸಲಾಗುತ್ತದೆ. ದಾನ ನೀಡುವ ಸಂದರ್ಭದಲ್ಲಿ ನೀರಾವರಿ ಭೂಮಿಯನ್ನು ಕಡಿಮೆ ಮತ್ತು ಬೆದ್ದಲು ಭೂಮಿಯನ್ನು ಅಧಿಕ ಪ್ರಮಾಣದಲ್ಲಿ ನೀಡಲಾಗುತ್ತಿತ್ತು. ಇಂದಿನಂತೆ ಕೃಷಿ ಬದುಕಿನಲ್ಲಿ ಪ್ರಾಚೀನ ಕಾಲದಲ್ಲಿಯೂ ಏರುಪೇರುಗಳು ಸಂಭವಿಸುತ್ತಿದ್ದವು. ಇದರಿಂದಾಗಿ ಕೃಷಿಯೊಂದಿಗೆ ಮಳೆಯು ನಿರಂತರವಾಗಿ ಜೂಜಾಟವಾಡುತ್ತಿತ್ತು. ಈ ಕಾರಣದಿಂದಾಗಿ ಸಹಜವಾಗಿಯೇ ನೀರಾವರಿ ಭೂಮಿ ಕಡಿಮೆ ಹಾಗೂ ಮೌಲ್ಯಯುಕ್ತವಾಗಿರುತ್ತಿತ್ತು. ಜೊತೆಗೆ ಮಣ್ಣಿನ ವಿಧಗಳಿಗೆ ಸಂಬಂಧಿಸಿದಂತೆ ಎರೆಮಣ್ಣು, ಕರಿಯಕೆಯಿ, ಕೆಂಗಾಡು, ಮಳಲಕೆಯಿ(ಕಲ್ಲು ಅಥವಾ ಮರಳು ಮಿಶ್ರಿತ ಕಲ್ಲುಭೂಮಿ)ಭೂಮಿಗಳು ಉಲ್ಲೇಖಗೊಂಡಿರುವುದು ಕಂಡುಬರುತ್ತದೆ.

ಕೃಷಿಗೆ ಭೂಮಿಯಂತೆ ನೀರಾವರಿಯು ಅತ್ಯಗತ್ಯವಾಗಿರುತ್ತದೆ. ಭೂಮಿಯ ಉಳುಮೆಗಾಗಿ ನೀರಿನ ಪೂರೈಕೆ ಮನಗಂಡ ಅರಸರು, ವರ್ತಕರು, ಶ್ರೀಮಂತರು, ಪೇರ್ಗಡೆ, ಗಾವುಂಡರು, ಸೂಳೆಯರು, ಜನಸಾಮಾನ್ಯರುವ ಮೊದಲುಗೊಂಡಂತೆ ಕೆರೆಗಳನ್ನು ನಿರ್ಮಿಸುವುದು ಸಾಮಾಜಿಕ ಕಾರ್ಯವೆಂದು ಭಾವಿಸಿದ್ದರು. ಜೊತೆಗೆ ಆರ್ಥಿಕ ಅಭಿವೃದ್ಧಿ ಸಾಧಿಸುವ ಉದ್ದೇಶದಿಂದ ಕೆರೆ, ಬಾವಿ, ಕಾಲುವೆ, ಅಣೆಕಟ್ಟುಗಳ ನಿರ್ಮಾಣದಲ್ಲಿ ಮುಂದಾದರು. ಕದಂಬದೊರೆ ಮಯೂರಶರ್ಮನ ಚಂದ್ರವಳ್ಳಿ ಶಾಸನ, ಕಾಕುತ್ಸವರ್ಮನ ತಾಳಗುಂದ ಶಾಸನಗಳು ತಟಾಕ ನಿರ್ಮಾಣದ ಬಗೆಗೆ ತಿಳಿಸುತ್ತವೆ. ಕೆರೆಯ ನಿರ್ವಹಣೆಗೆ 'ಬಿತ್ತುವಾಟ'ವೆಂದು ದಾನ ನೀಡಲಾಗುತ್ತಿತ್ತು. ಈ ಬಿತ್ತುವಾಟ ಆದಾಯದಿಂದ ಕೆರೆಯ ದುರಸ್ಥಿ ಮೊದಲಾದ ಕಾರ್ಯಗಳನ್ನು ಮಾಡಲಾಗುತ್ತಿತ್ತು. ಇಂತಹ ನೀರಾವರಿ ಬೇಸಾಯದಿಂದ ಆದ ಆರ್ಥಿಕ ಲಾಭಗಳೇನು, ಸಮಾಜದಲ್ಲಾದ ಬದಲಾವಣೆಗಳೇನು ಎಂಬುದನ್ನು ಅಧ್ಯಯನ ಮಾಡಲಾಗಿದೆ.

ಕೆರೆಗಳನ್ನು ನಿರ್ಮಿಸುವಾಗ ಕೆರೆಯ ಸುತ್ತಲೂ ಕೃಷಿ ಯೋಗ್ಯ ಭೂಮಿ, ಇಳಿಜಾರು ಪ್ರದೇಶ, ನೀರು ಹರಿಸಲು ಯೋಗ್ಯ ಸ್ಥಳ ಮತ್ತು ನೀರು ನಿಲ್ಲಲು ಗಟ್ಟಿ ಭೂಮಿಯನ್ನು ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಕ್ರಿ.ಶ. ೧೧೦೩ರ ಶಾಸನವು ತೋಟದ ಬೆಳೆಗಳಾದ ತೆಂಗು, ವೀಳ್ಯದೆಲೆ, ಅಡಿಕೆ, ಬಾಳೆಗಳನ್ನು ಉಲ್ಲೇಖಿಸುತ್ತದೆ. ಮಣ್ಣಿನ ಗುಣಗಳಿಗೆ ಅನುಗುಣವಾಗಿ ಮಳೆಯನ್ನು ಆಶ್ರಯಿಸಿ ಬೆದ್ದಲು ಭೂಮಿಯಲ್ಲಿ ಹತ್ತಿ, ಜೋಳ, ಸಾಸಿವೆ, ಸಜ್ಜೆ, ಗೋಧಿಗಳಂತಹ ಆಹಾರ ಧಾನ್ಯಗಳನ್ನು ಬೆಳೆಯಲಾಗುತ್ತಿತ್ತು. ಇಮ್ಮಡಿ ಪುಲಿಕೇಶಿಯ ಆಳ್ತೆಂ ಶಾಸನವು ಭತ್ತ, ಕಬ್ಬು, ನವಣೆ, ಗೋಧಿ, ವ್ರೀಹಿ, ರಾಗಿ ಬೆಳೆಗಳನ್ನು ಬೆಳೆಯಲಾಗುತ್ತಿತ್ತು ಎಂದು ತಿಳಿಸುತ್ತದೆ. ಸಾಮಾನ್ಯವಾಗಿ ಭೂಮಿಯನ್ನು ಉಳುಮೆ ಮಾಡಲು ಎತ್ತುಗಳನ್ನು, ಕೆಲವು ಕಡೆ ಗದ್ದೆಗಳಲ್ಲಿ ಉಳುಮೆ ಮಾಡಲು ಕೋಣಗಳನ್ನು ಬಳಸಲಾಗುತ್ತಿತ್ತು. ಜೊತೆಗೆ ಆಹಾರ ಸಾಮಗ್ರಿಗಳ ಸಾಗಾಣಿಕೆಗೆ ಎತ್ತಿನಗಾಡಿಗಳನ್ನು ಉಪಯೋಗಿಸಲಾಗುತ್ತಿತ್ತು. ಇದಕ್ಕೆ ಸಾಕ್ಷಿ ಎಂಬಂತೆ ಶಾಸನಗಳು ಎತ್ತಿನ ತೆರಿಗೆಯ ಬಗೆಗೆ ಉಲ್ಲೇಖಿಸುತ್ತವೆ. ಬಾವಿ ನೀರಾವರಿಗೆ ಸಂಬಂಧಿಸಿದಂತೆ ಕ್ರಿ.ಶ. ೧೦೮೭ರ ಶಾಸನವು ಬೆಳ್ಕೆಯರ ಎಱೆಗ ಎಂಬಾತನು ಸಿರಗುಪ್ಪೆಯಲ್ಲಿ ಮರಕಟ್ಟಿನ ಪಿಜೆಯ ಬಾವಿಯನ್ನು ನಿರ್ಮಿಸಿದನೆಂದು ತಿಳಿಸುತ್ತದೆ. ಬಾವಿಗಳಿಂದ ನೀರೆತ್ತುವ ಯಂತ್ರಗಳನ್ನು ಏತಗಳೆಂದು ಕರೆಯಲಾಗುತ್ತಿತ್ತು. ಕ್ರಿ.ಶ.

೧೧೪೭ರ ಶಾಸನವು ಘಟೀಯಂತ್ರಗಳಿಂದ ತೋಟಕ್ಕೆ ನೀರುಣಿಸುವ ಬಗೆಗೆ ತಿಳಿಸುತ್ತದೆ. ಕೆರೆ, ಬಾವಿ, ಅಣೆಕಟ್ಟುಗಳಿಂದಾಗಿ ಅವುಗಳ ಸುತ್ತಲ ಭೂಮಿ ನೀರಾವರಿ ಭೂಮಿಯಾಗಿ ಬೆಳೆ ಬೆಳೆಯಲು ಅನುಕೂಲವಾಗುತ್ತಿದ್ದವು. ಜೊತೆಗೆ ನೀರಾವರಿಯಿಂದಾಗಿ ಕೃಷಿ–ಬದುಕು ಸಮೃದ್ಧವಾಗಿ ಸಾಗುತ್ತಿತ್ತು. ಬಹುಮುಖ್ಯವಾಗಿ ನೀರಾವರಿಯಿಂದ ಎಲೆಬಳ್ಳಿಯ ತೋಟಗಳ ಬಗೆಗೆ ಶಾಸನಗಳು ತಿಳಿಸುತ್ತವೆ. ಸಾವಿರ ಬಳ್ಳಿಗಳ ತೋಟವು ಹನ್ನೆರಡು ಮತ್ತರಿನಷ್ಟು ಭೂಮಿಯನ್ನು ಆವರಿಸಿತ್ತೆಂದು ಕ್ರಿ.ಶ. ೯೪೬ರ ಶಾಸನವು ಹೇಳುತ್ತದೆ. ಅಲ್ಲದೆ ಹತ್ತಿ, ಅಡಿಕೆಯಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಕೃಷಿ ಭೂಮಿಯಿಂದ ಬರುವ ಇಂತಹ ಉತ್ಪನ್ನಗಳು ವಿನಿಮಯಕ್ಕೆ ಕಾರಣವಾದ ಬಗೆ, ಉತ್ಪನ್ನಗಳ ಹೆಚ್ಚಳದಿಂದ ವ್ಯಾಪಾರ, ಆರ್ಥಿಕತೆಗಳು ಅಭಿವೃದ್ಧಿ ಹೊಂದಿದುದ್ದನ್ನು ಅಧ್ಯಯನ ಮಾಡಲಾಗಿದೆ. ಜೊತೆಗೆ ಭೂಮಿಯನ್ನು ಅಳತೆ ಮಾಡುವ ವಿಧಾನ ಕರಾರು ಒಕ್ಕಾಗಿರದೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತಿತ್ತು. ನಿವರ್ತನ ಅಥವಾ ಮತ್ತರು, ರಾಜಮಾನ, ಕೋಲು ಮೊದಲಾದವುಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಕುರುಗೋಡಿನ ಚಾಲುಕ್ಯರ ಶಾಸನ ೧೮ ಗೇಣಿನ ಕೋಲಿನ ಬಗೆಗೆ ಉಲ್ಲೇಖಿಸಿದೆ.

ಕೃಷಿ ಉತ್ಪನ್ನಗಳು ಹೆಚ್ಚಿದಂತೆ ವ್ಯಾಪಾರದ ಚಟುವಟಿಕೆಗಳು ವಿಸ್ತಾರಗೊಳ್ಳಲು ಆರಂಭಿಸಿದವು. ಪ್ರಾಚೀನ ಕಾಲದ ಜನರು ತಮಗಿರುವ ಸಾಧ್ಯತೆಗಳಲ್ಲಿಯೇ, ತಮ್ಮ ಆಲೋಚನಾ ಕ್ರಮದಿಂದ ಪರ್ಯಾಯ ಯೋಜನೆಗಳನ್ನು ರೂಪಿಸಿಕೊಂಡು ಕೃಷಿ ಚಟುವಟಿಕೆಗಳನ್ನು ಸಾಗಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇಂದಿನಂತೆ ಯಾವ ವಿಧವಾದ ರಾಸಾಯನಿಕ ಗೊಬ್ಬರ, ಔಷಧಗಳನ್ನು ಬಳಸದೆ ಪರಂಪರೆಯಿಂದ ಬಂದ ಜ್ಞಾನವನ್ನೇ ಕೃಷಿಯಲ್ಲಿ ಬಳಸಿಕೊಂಡು ಹೆಚ್ಚಿನ ಕೃಷಿ ಉತ್ಪನ್ನಗಳನ್ನು ಬೆಳೆಯುತ್ತಿದ್ದರು. ಇಂತಹ ಬೆಳೆಗಳಿಗೆ ರಾಜ್ಯವನ್ನಾಳುವ ಪ್ರಭುಗಳು ಬೆಳೆದ ಬೆಳೆಯ ಇಂತಿಷ್ಟು ಭಾಗವನ್ನು ತೆರಿಗೆಯಾಗಿ ರೈತರಿಗೆ ವಿಧಿಸುತ್ತಿದ್ದರು. ತೆರಿಗೆಯಿಂದ ಬಂದ ಹಣವನ್ನು ರಾಜ್ಯದ ಹಿತಕ್ಕಾಗಿ ವಿನಿಯೋಗಿಸುತ್ತಿದ್ದರು. ಶಾಸನಗಳು ರೈತರಿಗೆ ವಿಧಿಸುತ್ತಿದ್ದ ತೆರಿಗೆಗಳನ್ನು ಉಲ್ಲೇಖಿಸಿವೆ. ಅವುಗಳಲ್ಲಿ ಸಿದ್ಧಾಯ, ಇದು ಭೂ ಕಂದಾಯವಾಗಿದ್ದು, ಕೆಲವೊಮ್ಮೆ ಎಲ್ಲ ವಸ್ತುಗಳ ಮೇಲೂ ವಿಧಿಸಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ಇದು ಷಡ್ಭಾಗ ಅಂದರೆ ೧/೬ಭಾಗವಾಗಿರುತ್ತಿತ್ತು. ದಶವಂದ ಅಥವಾ ಪತ್ತೊನ್ದಿಯು ೧/೧೦ಭಾಗವಾಗಿರುತ್ತಿತ್ತು. ಕ್ರಿ.ಶ. ೪೫೦ರ ಹಲ್ಮಿಡಿ ಶಾಸನವು ಪತ್ತೊನ್ದಿ, ಒಡ್ಡಲಿ, ಎಂಬ ತೆರಿಗೆಗಳನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦ನೆಯ ಶತಮಾನದ ಬೇಲೂರಿನ ನಾರಾಯಣ ಪುರದ ಶಾಸನ ಧಾನ್ಯಾದಾಯದ ಬಗ್ಗೆ ತಿಳಿಸುತ್ತದೆ.

ಕೃಷಿ ಉತ್ಪನ್ನಗಳು ಸ್ಥಳೀಯ ಮಾರುಕಟ್ಟೆಗಳಾದ ಸಂತೆಗಳಲ್ಲಿ ವಿನಿಮಯವಾಗುತ್ತಿದ್ದವು. ಉದಾಹರಣೆಗೆ ಭತ್ತ, ಉಪ್ಪು ಮೊದಲಾದವುಗಳ ವಿನಿಮಯದ ಜೊತೆಗೆ ಕೊಡುಕೊಳುಗೆಗಳು ಏರ್ಪಡುತ್ತಿದ್ದವು. ಹೆಚ್ಚಾಗಿ ಈ ವಸ್ತು ವಿನಿಮಯ ಪದ್ಧತಿ ಇದ್ದರೂ ಇತರ ಚಟುವಟಿಕೆಗಳು ಇಲ್ಲಿ ಜರುಗುತ್ತಿದ್ದವು. ಸಂತೆಸುಂಕ, ಮಾರಾಟ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಗ್ರಾಮೀಣ ಪ್ರದೇಶದಲ್ಲಿ ಜರುಗುವ ಕೃಷಿ ವ್ಯವಸ್ಥೆ ನಗರಗಳನ್ನು ವ್ಯಾಪಾರದ ಮೂಲಕ ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿತ್ತು. ವ್ಯಾಪಾರಕ್ಕೆ ಸಂಬಂಧಿಸಿದಂತೆ ವರ್ತಕ ಸಮುದಾಯದವರು ವ್ಯಾಪಾರದ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಇವರು ತಮ್ಮ ವ್ಯಾಪಾರದ ಲಾಭದಿಂದ ಬಂದ ಹಣವನ್ನು ರೈತರಿಗೆ ಬಡ್ಡಿಯಂತೆ ಸಾಲ ವಿತರಿಸುತ್ತಿದ್ದರು. ರೈತರಿಂದ ವ್ಯಾಪಾರಿಗಳು ಶೇ.೫ ರಿಂದ ಶೇ.೭ರಷ್ಟು ಬಡ್ಡಿ ವಸೂಲಿ ಮಾಡುತ್ತಿದ್ದರು. ಕೆಲವೊಮ್ಮೆ ಇದಕ್ಕೂ ಹೆಚ್ಚಿನ ಬಡ್ಡಿ ಪಡೆದಿರುವುದು ತಿಳಿದುಬರುತ್ತದೆ. ಜೊತೆಗೆ ಕೃಷಿ

ಉತ್ಪನ್ನಗಳ ಮಾರಾಟದ ವ್ಯವಸ್ಥೆಯಲ್ಲಿ ಸಮಾಜದಲ್ಲಿ ಅಡಿಗಲ್ಲಾಗಿ ಅವರು ನಿರ್ವಹಿಸಿದ ಕಾರ್ಯಗಳನ್ನು ಕೃಷಿಗೆ ಪೂರಕವಾಗಿ ಅಧ್ಯಯನ ಮಾಡಲಾಗಿದೆ.

ಮಾನವನ ವಿಚಾರಶಕ್ತಿ, ಅನುಭವ, ಪರಂಪರೆಯ ಶೋಧಗಳಿಂದ ರೂಪಿತವಾದ ಕೃಷಿ ವ್ಯವಸ್ಥೆಯಿಂದ ಸಮಾಜದ ಸಾಮಾಜಿಕ ರಚನೆಯಲ್ಲಾದ ಬದಲಾವಣೆಗಳಲ್ಲಿ ಪ್ರಭುತ್ವ, ಭೂಮಾಲೀಕತ್ವಗಳು ಪ್ರಮುಖ ಪಾತ್ರ ನಿರ್ವಹಿಸುತ್ತವೆ. ಕ್ರಿ.ಪೂ. ೬ನೆಯ ಶತಮಾನದ ವೇಳೆಗೆ ವ್ಯಾಪಾರಸ್ಥರು ಮತ್ತು ಸ್ವತಂತ್ರ ರೈತರು ಎಂಬ ಎರಡು ಪಂಗಡಗಳು ರಚನೆಯಾದವು. ಜೊತೆಗೆ ಸಂಪತ್ತನ್ನು ಕ್ರೂಢೀಕರಿಸಿಕೊಂಡು ಖಾಸಗೀ ಒಡೆತನ ಮತ್ತು ಖಾಸಗೀ ವ್ಯಾಪಾರಿಗಳು ರಚನೆಗೊಂಡವು. ಇವು ಆರ್ಥಿಕತೆಯ ಬಯಲುದಾರಿಗೆ ಕಾರಣವಾದವು. ಕ್ರಿ.ಪೂ. ೬ನೆಯ ಶತಮಾನದಲ್ಲಿ ರಾಜ್ಯಗಳ ಉದಯ ಆರಂಭವಾಗಿ ಫಲವತ್ತಾದ ಭೂಮಿಯ ಆಕ್ರಮಣ, ನದಿಗಳ ನಿಯಂತ್ರಣ ಪ್ರಾರಂಭವಾಗಿತ್ತು. ಬೌದ್ಧ ಗ್ರಂಥಗಳ ಪ್ರಕಾರ ಮಗದ ರಾಜ್ಯದಲ್ಲಿ ಪ್ರತಿ ರೈತನು ಭೂಮಾಲೀಕನಾಗಿದ್ದನು. ಭೂಮಿಯ ಒಡೆಯ ರೈತನೋ, ರಾಜನೋ ಎಂಬ ಭೂಮಾಲೀಕತ್ವದ ಪ್ರಶ್ನೆ ಎದುರಾಗುತ್ತದೆ. ಶಾಸನಗಳು ರೈತನ ಕೃಷಿ ಜೀವನದ ಕಷ್ಟವನ್ನು ಸಹ ಹಿಡಿದಿಡುತ್ತವೆ. ಕ್ರಿ.ಶ. ೧೧೧೫ರ ಬಿಜಾಪುರ ಜಿಲ್ಲೆಯ ನಿಡೋಣಿಯ ಶಾಸನವು ಬರ್ಮಣನ ಬಗ್ಗೆ ಹೇಳುವಾಗ ಒಕ್ಕಲಿಗನ ಕಷ್ಟವನ್ನು ಹಿಡಿದಿಡುತ್ತದೆ. ಬಿಸಿಲಲ್ಲಿ ಬೆವರು ಸುರಿಸಿ ರೈತ ದುಡಿಯುತ್ತಾನೆ. ಇದರಲ್ಲಿ ಅವನ ಕಷ್ಟ ನಿಷ್ಠೂರಗಳನ್ನು ಶಾಸನವು ತಿಳಿಸುತ್ತದೆ. "ಪಡೆದಪೆವೆಂದು ನೆತ್ತಿಯಬೆವರು ಮಿಡಿಯಿಂದಿಳಿವನ್ತುದುಕ್ಕದಲು ದುಡಿಯುತಮಿರ್ಪ್ಪರು".....ಗಿಡಗಡಿದುರ್ತ್ತುಬಿತ್ತಿ...ಇದನ್ನು ಗಮನಿಸಿದರೆ ಕೃಷಿ ವ್ಯವಸ್ಥೆಯ ಅಂತರ್ಯ ಬಿಚ್ಚಿಕೊಳ್ಳುತ್ತದೆ. ಭೂಮಿಯ ಒಡೆಯನಾರು, ಅವನು ಕೃಷಿಯಲ್ಲಿ ನಿರ್ವಹಿಸಿದ ಕಾರ್ಯಗಳೇನು, ಅದರ ಅಗತ್ಯತೆಗಳೇನು ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕೃಷಿ ಚಟುವಟಿಕೆಗಳು ಅಭಿವೃದ್ಧಿ ಹೊಂದಿದಂತೆಲ್ಲ ಸಮಾಜದಲ್ಲಿ ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತ್ಯಂತರಗಳು ಉಂಟಾದವು. ಈ ಹಿನ್ನೆಲೆಯಲ್ಲಿ ದೇವಾಲಯಗಳ ಸ್ಥಾಪನೆ, ಅವುಗಳಿಗೆ ದಾನವಾಗಿ ಬ್ರಹ್ಮದೇಯ, ದೇವದೇಯ ಮೊದಲಾದ ದಾನ ಕಾರ್ಯಗಳು ಆರಂಭವಾದವು. ದೇವಾಲಯಗಳು ಹೇಗೆ ಕೃಷಿಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಚಹರೆಗಳಾಗಿ ಬಿಂಬಿತವಾದವೆಂಬುದರ ಕುರಿತು ಅಧ್ಯಯನ ಮಾಡಲಾಗಿದೆ. ಜೊತೆಗೆ ಕೃಷಿ ಬದುಕಿನಲ್ಲಿ ರೈತರು ತಿಳಿಯದೆ ಇರುವುದು ಯಾವುದು ಕಂಡುಬರುವುದಿಲ್ಲ. ಶಾಸನಗಳಲ್ಲಿ ಕೃಷಿ ಬದುಕಿನ ನಂಬಿಕೆ, ಆಚರಣೆಗಳ ಕುರಿತು ನೇರವಾದ ಉಲ್ಲೇಖಗಳು ದೊರೆಯುವುದು ವಿರಳ. ಕ್ರಿ.ಶ. ೧೦೮೩ರ ಬಿಜಾಪುರದ ಮ್ಯೂಸಿಯಂನ ೧೩ನೆಯ ಶಾಸನವು "ಚೈತ್ರದಲು ಹಾಗ ಪವಿತ್ರದಲು ಹಾಗ ಸಂಕ್ರಾಂತಿಯಲು ಬೇಳೆ ದೀಪಾವಳಿಯಲು ಬೇಳೆ" ಎಂದು ಉಲ್ಲೇಖಿಸುತ್ತದೆ. ಶಾಸನಗಳಲ್ಲಿ ಅಲ್ಲಲ್ಲಿ ಉಲ್ಲೇಖವಾಗುವ ಅಂಶಗಳ ಆಧಾರದ ಮೇಲೆ ನಂಬಿಕೆ, ಆಚರಣೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

**ಉದ್ದೇಶ**

ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ತಂತ್ರಜ್ಞಾನದ ಅವಧಿಯಲ್ಲಿಯೂ, ಕೃಷಿ ಪದ್ಧತಿಯ ನಿಯಮಗಳು ಮಾರ್ಪಾಟುಗಳೊಂದಿಗೆ ಉಳಿದುಕೊಂಡೇ ಬಂದಿವೆ. ಪ್ರಾಚೀನ ಕರ್ನಾಟಕದ ಆರಂಭದ ಕನ್ನಡ ಶಾಸನಗಳಿಂದ ಕೃಷಿ ವ್ಯವಸ್ಥೆ ಬೆಳೆದುಬಂದ ವಿಧಾನವನ್ನು ಕುರಿತು ಅಧ್ಯಯನ ನಡೆಸುವ ಅಗತ್ಯವಿದೆ. ಅಲೆಮಾರಿಯಾಗಿದ್ದ ಮಾನವ ಒಂದೆಡೆ ನೆಲೆನಿಂತು ನಾಗರೀಕತೆಯನ್ನು ಹೊಂದಲು ಪ್ರಮುಖ ಕಾರಣ ಕೃಷಿಯಾಗಿದೆ. ಇಂತಹ ಮಾನವನ ಕೃಷಿ ಬದುಕು ವ್ಯವಸ್ಥಿತವಾಗಿ,

ಆಲೋಚನ ಕ್ರಮದ ವೈಶಿಷ್ಟ್ಯದಿಂದ ಸಾಗಿ ಬಂದುದನ್ನು ಕುರಿತು ಅಧ್ಯಯನ ಮಾಡುವ ಅಗತ್ಯವಿದೆ. ಶಾಸನಗಳು ಪ್ರಾಚೀನ ಜನತೆಯ ಕೃಷಿ ಜೀವನವನ್ನು ಎಲ್ಲಿಯೂ ಇಡಿಯಾಗಿ ದಾಖಲಿಸದೆ ಬಿಡಿ-ಬಿಡಿಯಾಗಿ ದಾಖಲಿಸಿವೆ. ಇಂತಹ ಕರ್ನಾಟಕದ ಪ್ರಾಚೀನ ಕನ್ನಡ ಶಾಸನಗಳನ್ನು ಮೂಲ ಆಕರಗಳನ್ನಾಗಿಸಿಕೊಂಡು ಶಾಸನದಲ್ಲಿ ಉಲ್ಲೇಖವಾಗಿರುವ ಕೃಷಿಯ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಅಗತ್ಯವಿದೆ. ಆದ್ದರಿಂದ ಪ್ರಾಚೀನ ಕರ್ನಾಟಕದ ಕನ್ನಡ ಶಾಸನಗಳನ್ನು ಉಲ್ಲೇಖಿಸಿ ಸಂಶೋಧನೆಗಳು ನಡೆದಿವೆ. ಆದರೂ ಕೃಷಿಯನ್ನು ಪ್ರಮುಖ ವಸ್ತು ವಿಷಯವನ್ನಾಗಿ ಆಯ್ಕೆ ಮಾಡಿಕೊಂಡು ನಡೆದಿರುವ ಸಂಶೋಧನೆಗಳು ವಿರಳ. ಶಾಸನಗಳಲ್ಲಿ ಕೃಷಿಯ ಅಧ್ಯಯನದ ಸಂಶೋಧನೆಗಳು ಆರ್ಥಿಕತೆಯ ಭಾಗವಾಗಿ, ಒಂದು ರೂಪದಲ್ಲಿ ಅಧ್ಯಾಯವಾಗಿ ಕಾಣಿಸಿಕೊಳ್ಳುತ್ತವೆ ಹಾಗೂ ಕೃಷಿಯ ಬಗೆಗೆ ಇಡಿಯಾದ ಸಂಶೋಧನೆ ನಡೆಯುವ ಅಗತ್ಯವಿದೆ. ಶಾಸನಗಳಲ್ಲಿ ಕಂಡುಬರುವ ದಾನದ ಭಾಗಗಳು ಸಾಂಸ್ಕೃತಿಕ ರಾಜಕಾರಣ, ಆರ್ಥಿಕ ರಾಜಕಾರಣ, ಧಾರ್ಮಿಕ ರಾಜಕಾರಣದ ಅಂಶಗಳನ್ನು ಸೂಕ್ಷ್ಮವಾಗಿ ಒಳಗೊಂಡಿವೆ. ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಈ ಅಂಶಗಳು ಹೊರಬರುತ್ತವೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕರ್ನಾಟಕದ ಕನ್ನಡ ಶಾಸನಗಳಲ್ಲಿ ದೊರೆಯುವ ಕೃಷಿ ಕುರಿತಾದ ಮಾಹಿತಿಗಳು ಬಿಡಿ ಬಿಡಿಯಾಗಿಯಾದರೂ ಪ್ರಮಾಣದಲ್ಲಿ ಹೇರಳವಾಗಿಯೇ ದೊರೆಯುತ್ತವೆ. ದೇವದೇಯ, ಬ್ರಹ್ಮದೇಯ ಮೊದಲಾದವುಗಳಿಗೆ ನೀಡುವ ಭೂದಾನಗಳಲ್ಲಿ ದೊರೆಯುವ ಬೆಳೆ, ಭೂಮಿ, ನೀರಾವರಿ, ತೆರಿಗೆ, ಮಾರಾಟ, ಮತ್ತಿತರ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ ಈ ಅಂಶಗಳನ್ನು ಒಳಗೊಂಡ ಇಡಿಯಾದ ಅಧ್ಯಯನವು ಮೌಲ್ಯಯುಕ್ತ ಅಧ್ಯಯನದಲ್ಲಿ ಒಂದಾಗುತ್ತದೆ ಎಂಬ ಉದ್ದೇಶದಿಂದ ಕನ್ನಡ ಶಾಸನಗಳಲ್ಲಿ ಕೃಷಿ ಎಂಬ ವಸ್ತು ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಲ್ಲದೆ ಬದಲಾದ ಇಂದಿನ ಆಧುನಿಕ ಕೃಷಿ ಚಟುವಟಿಕೆಗಳಿಗೆ ಪ್ರಾಚೀನ ಕೃಷಿಯು ಉತ್ತರದಾಯಿಯಾಗುತ್ತದೆ ಎಂಬ ಅಂಶದ ಹಿನ್ನೆಲೆಯಲ್ಲಿಯೂ ಈ ವಿಷಯವನ್ನು ಆಯ್ಕೆಮಾಡಿಕೊಳ್ಳಲಾಗಿದೆ.

ಪ್ರಾಚೀನ ಕರ್ನಾಟಕದ ಸಂದರ್ಭದಲ್ಲಿ ಕೃಷಿ ವಿಸ್ತರಣೆಯಾದಂತೆ ಸಮಾಜದಲ್ಲಿನ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ. ಕೃಷಿ ವ್ಯವಸ್ಥೆಯೊಂದು ಅಭಿವೃದ್ಧಿ ಹೊಂದಿ ಆರ್ಥಿಕತೆ, ಧಾರ್ಮಿಕತೆ, ಪ್ರಭುತ್ವದ ಹುಟ್ಟು, ಕೃಷಿಯ ಬೆಳವಣಿಗೆಗೆ ಹೇಗೆ ಕಾರಣವಾಯಿತು ಎಂಬುದನ್ನು ಕುರಿತು ಚರ್ಚಿಸುವ ಅಗತ್ಯವಿದೆ. ರೈತರು ಉತ್ತಿ, ಬಿತ್ತಿ, ಬೆವರು ಸುರಿಸಿ ದುಡಿದರೆ ನಾಡೆಲ್ಲಾ ಸಮೃದ್ಧಿಯಾಗಿರುತ್ತದೆ. ಇಂತಹ ಶ್ರಮಜೀವಿಯಾದ ರೈತನನ್ನು ಕುರಿತು ಶಾಸನಗಳು ನೇರವಾಗಿ ದಾಖಲಿಸಿರುವುದು ವಿರಳದ ಸಂಗತಿಯಾಗಿದೆ. ಇಂತಹ ಶಾಸನಗಳನ್ನು ಆಕರಗಳನ್ನಾಗಿಟ್ಟುಕೊಂಡು ಶಾಸನಗಳಲ್ಲಿ ಅಡಕವಾಗಿರುವ ರೈತನ ಕೃಷಿ ಬದುಕನ್ನು ದಾಖಲಿಸುವ ಅಗತ್ಯವಿದೆ.

ಭೂಮಿಯನ್ನು ಯಾರು, ಏತಕ್ಕಾಗಿ ದಾನ ನೀಡುತ್ತಿದ್ದರು ಎಂಬ ಉದ್ದೇಶದ ಹಿಂದಿರುವ ಮಹತ್ವವನ್ನು ಕುರಿತು ಚರ್ಚಿಸುವ ಅಗತ್ಯವಿದೆ. ಅರಸ ಕೇಂದ್ರಿತ ಅಧ್ಯಯನಗಳ ವೈಭವೀಕರಣದ ಮುಂದೆ ರಾಜ್ಯದ ಜನರ ಆಧಾರಸ್ತಂಭವಾದ ಕೃಷಿ ವ್ಯವಸ್ಥೆ ಮರೆಯಾಗಿ ಹೋಗುತ್ತದೆ. ಇದರಿಂದಾಗಿ ಕೃಷಿ ವ್ಯವಸ್ಥೆಯನ್ನು ಶಾಸನಗಳ ಅಧ್ಯಯನದ ಮೂಲಕ ದಾಖಲಿಸುವ ಕಾರ್ಯವನ್ನು ಮಾಡಲಾಗಿದೆ.

ಭಾರತದ ಸಂದರ್ಭದಲ್ಲಿ ಅದರಲ್ಲೂ ಕರ್ನಾಟಕದಂತಹ ರಾಜ್ಯದಲ್ಲಿ, ರಾಜ್ಯದ ಜನರ ಜೀವನದ ಅಳಿವು ಉಳಿವುಗಳೆಲ್ಲವು ಕೃಷಿಯನ್ನೇ ಅವಲಂಬಿಸಿವೆ. ಅಲ್ಲದೆ ಕೃಷಿಯ ಮೇಲೆಯೇ ಕೇಂದ್ರೀಕೃತವಾಗಿವೆ. ಇಂತಹ ಪ್ರಾಚೀನ ಕರ್ನಾಟಕದ ಕೃಷಿ ವ್ಯವಸ್ಥೆಯಲ್ಲಿ ಜರುಗಿದ ನಿರಂತರ ಪ್ರಕ್ರಿಯೆಗಳನ್ನು ಕುರಿತು ಚರ್ಚಿಸಲಾಗಿದೆ. ಜೊತೆಗೆ ಆರ್ಥಿಕ, ಚಾರಿತ್ರಿಕ, ಸಾಂಸ್ಕೃತಿಕ ಮತ್ತು ಪ್ರಭುತ್ವವನ್ನು ಪ್ರಭಾವಿಸುವ ಅಂಶವಾಗಿ ಕೃಷಿಯನ್ನು ಅಧ್ಯಯನ ಮಾಡಲಾಗಿದೆ.

ಚರಿತ್ರೆಯಲ್ಲಿ ಭೂಮಿಗೆ ಮತ್ತು ಅದರ ಉತ್ಪನ್ನಕ್ಕೆ ದೊರೆತ ಪ್ರಾಮುಖ್ಯತೆ ಕೃಷಿಕನ ಶ್ರಮಕ್ಕೆ ದೊರೆತಿರುವುದು ಕಂಡುಬರುವುದಿಲ್ಲ. ಅರಸಕೇಂದ್ರಿತ ಅಧ್ಯಯನದ ನೆಲೆಯಲ್ಲಿ ಸಾಗಿದ ಈವರೆಗಿನ ಅಧ್ಯಯನಗಳು ಚರಿತ್ರೆಯಲ್ಲಿ ಕೃಷಿಕನನ್ನು ಮತ್ತು ಅವನ ಶ್ರಮವನ್ನು ನಿರ್ಲಕ್ಷಿಸಿವೆ. ಆರ್ಥಿಕತೆಯ ಹಿನ್ನೆಲೆಯಲ್ಲಿ ದ್ವಿಗುಣಗೊಂಡ ಕೃಷಿಯ ಬೆಳವಣಿಗೆಯಲ್ಲಿ ಕೃಷಿಯ ಮೂಲಕ ಕೃಷಿಕನನ್ನು ಅರ್ಥೈಸುವ ಅಧ್ಯಯನ ಕ್ರಮವು ಸಾಮಾನ್ಯವಾಗಿ ಕಂಡುಬರುತ್ತದೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಕೃಷಿಕನ ಮೂಲಕ ಕೃಷಿಯನ್ನು ಅರ್ಥೈಸುವ ಪ್ರಯತ್ನವನ್ನು ಮಾಡಲಾಗಿದೆ.

ಕೃಷಿಯ ಮೂಲಕ ಪ್ರಭುತ್ವ ವರ್ಗವೊಂದು ಮೇಲುಗೈ ಸಾಧಿಸಿದ ಬಗೆಯನ್ನು ಅಧ್ಯಯನದ ಮೂಲಕ ಗುರುತಿಸಲಾಗಿದೆ. ಕೃಷಿ, ಭೂಮಿ, ಬೆಳೆಗಳು, ಕೃಷಿ ನಿರ್ವಹಣೆಯಲ್ಲಿ ನೀರಾವರಿಯ ಪಾತ್ರ, ಅಳತೆ, ಕೃಷಿಯೊಂದಿಗೆ ಆರ್ಥಿಕತೆಯ ಸಮತೋಲನವನ್ನು ಕಾಯ್ದುಕೊಳ್ಳುವ ಪಶುಸಂಗೋಪನೆ ಮುಂತಾದ ಕೃಷಿ ಚಟುವಟಿಕೆಗಳು, ಸಮಸ್ಯೆ ಸವಾಲುಗಳನ್ನು ಕುರಿತು ಚರ್ಚಿಸಲಾಗಿದೆ,

ಪ್ರಸ್ತುತ ಅಧ್ಯಯನದಲ್ಲಿ ಪ್ರಬಂಧವನ್ನು ಇಂದಿನ ಸಮಕಾಲೀನ ಸಂದರ್ಭಕ್ಕೆ ಮುಖಾಮುಖಿಗೊಳಿಸುವ ಉದ್ದೇಶವನ್ನು ಇಟ್ಟುಕೊಂಡು, ಈ ಅಧ್ಯಯನವನ್ನು ಸಿದ್ಧಪಡಿಸುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಯನದಲ್ಲಿ ಕೃಷಿ ಸಂಬಂಧಿ ಆಕರಗಳ ಬಳಿ ನಿಂತು ಅವು ಏಕೆ, ಹೇಗೆ, ಸಮಾಜದಲ್ಲಿ ಪ್ರತಿನಿಧಿಸಿವೆ. ಅದರ ಅಗತ್ಯತೆಗಳೇನಿದ್ದವು ಎಂಬ ಅಂಶಗಳನ್ನು ಚರ್ಚಿಸಲಾಗಿದೆ. ಇದರೊಂದಿಗೆ ಕೃಷಿಗೆ ಪ್ರೇರಕವಾದ ಮತ್ತು ಪೋಷಕವಾದ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಕೃಷಿ ಕಾರ್ಯಗಳು ಜರುಗುತ್ತಿದ್ದುದು ಸಾಮಾನ್ಯ ಶ್ರಮಿಕ ವರ್ಗದವರಿಂದ. ಇಂತಹ ಶ್ರಮಿಕ ವರ್ಗದಲ್ಲಿ ಜರುಗುತ್ತಿದ್ದ ಕೃಷಿ ಸಂಬಂಧಿ ಚಟುವಟಿಕೆಗಳಿಗೆ ಸಂಬಂಧಿಸಿದ ನಂಬಿಕೆ, ಆಚರಣೆಗಳನ್ನು ಶಾಸನಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಕೃಷಿ ವ್ಯವಸ್ಥೆಯ ಒಟ್ಟಾರೆ ಸಮಸ್ಯೆ, ಸವಾಲು, ಪರಿಣಾಮ, ಪರಿಹಾರೋಪಾಯಗಳನ್ನು ಪ್ರಾಚೀನ ಕರ್ನಾಟಕದ ಕನ್ನಡ ಶಾಸನಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

**ವ್ಯಾಪ್ತಿ**

ಭಾರತ ದೇಶದ ಮುಖ್ಯ ಕಸುಬು ಕೃಷಿಯಾಗಿದೆ. ಭೂಮಿಯನ್ನು ಉಳುಮೆ ಮಾಡುವ ರೈತನನ್ನು 'ದೇಶದ ಬೆನ್ನೆಲುಬು' ಎಂದು ಕರೆಯಲಾಗುತ್ತದೆ. ಇಂತಹ ಕೃಷಿ ವ್ಯವಸ್ಥೆಯ ಅಧ್ಯಯನವನ್ನು ಪ್ರಾಚೀನ ಕರ್ನಾಟಕದ ಕನ್ನಡ ಶಾಸನಗಳ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಯಾವುದೇ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳುವಾಗ ಅದಕ್ಕೊಂದು ಸೀಮಿತ ಚೌಕಟ್ಟಿನ ಅಗತ್ಯವಿರುತ್ತದೆ. ವ್ಯಾಪ್ತಿಗೆ ಒಳಪಡದ ಅಧ್ಯಯನ ಎಲ್ಲೆಯನ್ನು ಮೀರಿ ಬೆಳೆಯುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಕೈಗೊಂಡ ಕನ್ನಡ ಶಾಸನಗಳಲ್ಲಿ ಕೃಷಿ ಎಂಬ ವಸ್ತು ವಿಷಯವನ್ನು ಪ್ರಾಚೀನ ಕರ್ನಾಟಕಕ್ಕೆ ಸಂಬಂಧಿಸಿದ ಶಾಸನಗಳನ್ನು ಮೂಲ

ಆಕರಗಳನ್ನಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ. ಜೊತೆಗೆ ಕ್ರಿ.ಪೂ.೩ನೆಯ ಶತಮಾನದಿಂದ ಕ್ರಿ.ಶ. ೧೪ನೆಯ ಶತಮಾನದವರೆಗಿನ ಶಾಸನಗಳ ಕಾಲದ ವ್ಯಾಪ್ತಿಯ ಪರಿಧಿಯೊಳಗಡೆ ಅಧ್ಯಯನ ಮಾಡಲಾಗಿದೆ. ಪ್ರಾಚೀನ ಕಾಲದಲ್ಲಿ ಕರ್ನಾಟಕವೆಂಬುದು ಕಂಡುಬರುವುದಿಲ್ಲ. ಅಂದಿನ ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿತ್ತು. ವ್ಯಾಪ್ತಿಯ ವಿಸ್ತಾರತೆಯ ಬಾಹುಳ್ಯದಿಂದ ಅಧ್ಯಯನಕ್ಕೆ ಒಳಪಡಿಸಿಕೊಳ್ಳುವಾಗ ಸೀಮಿತ ಚೌಕಟ್ಟಿನ ಅಗತ್ಯವಿರುತ್ತದೆ. ಇದರಿಂದ ಇಂದು ಕರ್ನಾಟಕ ರಾಜ್ಯವೆಂದು ಗುರುತಿಸುವ ವ್ಯಾಪ್ತಿಯೊಳಗಡೆ ಅಧ್ಯಯನ ಮಾಡಲಾಗಿದೆ.

### ಸ್ವರೂಪ

ಪ್ರಸ್ತುತ ಕನ್ನಡ ಶಾಸನಗಳಲ್ಲಿ ಕೃಷಿ (ಕ್ರಿ.ಪೂ. ೩ರಿಂದ ಕ್ರಿ.ಶ. ೧೪ನೆಯ ಶತಮಾನದವರೆಗೆ) ಎಂಬ ಅಧ್ಯಯನದ ವಸ್ತು ವಿಷಯವನ್ನು ಏಳು ಅಧ್ಯಾಯಗಳಲ್ಲಿ ರೂಪಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ, ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಕುರಿತು ವಿಸ್ತರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕೃಷಿಯ ಹುಟ್ಟು ಮತ್ತು ಬೆಳವಣಿಗೆಯನ್ನು ಕುರಿತು ಚರ್ಚಿಸಲಾಗಿದೆ. ಕಲ್ಲು, ಬೆಟ್ಟ, ಗುಡ್ಡ, ಕಾಡನ್ನು ಸವೆಸಿ ಕೃಷಿಯೋಗ್ಯ ಭೂಮಿಯ ವಿಸ್ತರಣೆಯಾದ ಬಗೆಯನ್ನು ಕುರಿತು ಚರ್ಚಿಸಲಾಗಿದೆ. ಕೃಷಿ ಭೂಮಿಯನ್ನು ಹಲವು ವಿಧಗಳಲ್ಲಿ ವಿಂಗಡಿಸಲಾಗಿದೆ. ಭೂಮಿಯ ವಿಧಗಳನ್ನು ಶಾಸನಗಳ ಹಿನ್ನೆಲೆಯಲ್ಲಿ ಕುರಿತು ಚರ್ಚಿಸಲಾಗಿದೆ. ಜೊತೆಗೆ ಒಣಭೂಮಿ ಬೇಸಾಯದ ವಿಧಾನ ಮತ್ತು ನೀರಾವರಿ ಬೇಸಾಯದ ವಿಧಾನ ಮತ್ತು ಉಳುಮೆ ಮಾಡುವ ಪದ್ಧತಿಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕೃಷಿಗೆ ಅವಶ್ಯಕವಾಗಿ ಉಳುಮೆಗೆ ಸಹಾಯಕವಾಗುವ ಜಾನುವಾರುಗಳು, ಸಾಗಾಣಿಕೆಗೆ ಅನುಕೂಲಕರವಾಗುವ ಬಂಡಿಗಳು ಮೊದಲಾದ ಕೃಷಿ ಉಪಕರಣಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕೃಷಿ ಮತ್ತು ಬೆಳೆಗಳನ್ನು ಕುರಿತು ಚರ್ಚಿಸಲಾಗಿದೆ. ಇದರೊಂದಿಗೆ ಆಹಾರ ಬೆಳೆಗಳು, ವಾಣಿಜ್ಯ ಬೆಳೆಗಳು, ತೋಟಗಾರಿಕಾ ಬೆಳೆಗಳ ವಿಸ್ತೃತವಾದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಕೃಷಿ ಮತ್ತು ಆರ್ಥಿಕತೆಯನ್ನು ಕುರಿತುದಾಗಿದೆ. ಇದರಲ್ಲಿ ಕೃಷಿ ಸಂಬಂಧಿ ವ್ಯಾಪಾರ, ಕೃಷಿತೆರಿಗೆಗಳು, ಕೃಷಿಮಾರುಕಟ್ಟೆಗಳಾಗಿ ಸಂತೆಗಳು, ಅಳತೆಗಳು, ಕೃಷಿ ಮತ್ತು ಸಾಲಗಳು, ಕೃಷಿ ಮತ್ತು ಪಶುಸಂಗೋಪನೆಯನ್ನು ಕುರಿತು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯವು ಕೃಷಿ ಮತ್ತು ಭೂಮಾಲೀಕತ್ವ ಎಂಬುದಾಗಿದೆ. ಇದರಲ್ಲಿ ಕೃಷಿಯ ಮೂಲಕ ಹುಟ್ಟಿಕೊಂಡ ಪ್ರಭುತ್ವ, ಮತ್ತು ಅಧಿಕಾರಿವರ್ಗ, ಸಾಮಾನ್ಯವರ್ಗಗಳಲ್ಲಿ ಭೂಮಾಲೀಕತ್ವದ ಬೆಳವಣಿಗೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ಜೊತೆಗೆ ಭೂಮಿಯ ಭೂಮಾಲೀಕರು ಯಾರು ಎಂಬುದನ್ನು ಕುರಿತು ಕೃಷಿ ವ್ಯವಸ್ಥೆಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಆರನೆಯ ಅಧ್ಯಾಯವು ಕೃಷಿ, ಸಮಾಜ ಮತ್ತು ಸಂಸ್ಕೃತಿ ಎಂಬುದಾಗಿದೆ. ಇದರಲ್ಲಿ ಕೃಷಿಯ ಮೂಲಕ ದೇವಾಲಯಗಳ ವಿಸ್ತರಣೆ, ಅವುಗಳ ಸ್ಥಿತ್ಯಂತರಗಳನ್ನು ಕುರಿತು ಕೃಷಿ ಸಂಸ್ಕೃತಿಯ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಜೊತೆಗೆ ಕೃಷಿ ವ್ಯವಸ್ಥೆಯ ದೈನಂದಿನ ಬದುಕಿನಲ್ಲಿ

ಜರುಗುವ ಸಾಂಸ್ಕೃತಿಕ ಕೃಷಿ ಆಚರಣೆ, ನಂಬಿಕೆಗಳನ್ನು ಕುರಿತು ಪ್ರಾಚೀನ ಕರ್ನಾಟಕದ ಕನ್ನಡ ಶಾಸನಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು. ಇದರಲ್ಲಿ ಕೃಷಿಕರಿಗೆ ಪರಂಪರೆಯಿಂದ ಸಾಗಿ ಬಂದ ಜ್ಞಾನವು ಹೇಗೆ ಆಧುನಿಕತೆಯ ಬೆನ್ನತ್ತಿ ಅಳಿವಿನಂಚಿಗೆ ಬಂದಿದೆ. ಜೊತೆಗೆ ಪಾರಂಪರಿಕ ಕೃಷಿಯ ಪುನಶ್ಚೇತನದ ಹಂಬಲಿಕೆ, ಇಂದಿನ ಕೃಷಿ ಸತ್ವಹೀನತೆಯನ್ನು ಅನುಭವಿಸುತ್ತಿರುವುದಕ್ಕೆ ಕಾರಣಗಳೇನು, ಪರಿಣಾಮಗಳೇನು, ಫಲಿತಗಳೇನು ಎಂಬುದನ್ನು ಪ್ರಾಚೀನ ಕರ್ನಾಟಕದ ಕನ್ನಡ ಶಾಸನಗಳ ಅಧ್ಯಯನದ ಫಲಿತಗಳೊಂದಿಗೆ ತೌಲನೀಕರಿಸಲಾಗಿದೆ.

**ವಿಧಾನ**

ಪ್ರಸ್ತುತ ಅಧ್ಯಯನದಲ್ಲಿ ಕನ್ನಡ 'ಶಾಸನಗಳಲ್ಲಿ ಕೃಷಿ'(ಕ್ರಿ.ಪೂ.೩ರಿಂದ ಕ್ರಿ.ಶ. ೧೪ನೆಯ ಶತಮಾನದವರೆಗೆ) ಎಂಬ ವಿಷಯವನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ. ಈ ಪ್ರಬಂಧದಲ್ಲಿ ಏಳು ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ, ಅವುಗಳನ್ನು ಚಾರಿತ್ರಿಕ ಹಾಗೂ ಸಾಂಸ್ಕೃತಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ರಚಿಸಲಾಗಿದೆ. ಕೃಷಿ ಭಾರತ ದೇಶದ ಜನರ ಜೀವನದ ಜೀವಧಾರೆಗಳಲ್ಲೊಂದಾಗಿದ್ದು, ಇದರ ಒಂದು ಭಾಗವಾದ ಕರ್ನಾಟಕ ರಾಜ್ಯವೂ ಸಹ ಕೃಷಿಯನ್ನೇ ಅವಲಂಬಿಸಿದೆ. ಇಂತಹ ಕೃಷಿ ವ್ಯವಸ್ಥೆಯ ಆಯಾಮಗಳು, ಭೂಮಿ, ಬೆಳೆಗಳು ಇದರಿಂದ ವ್ಯಾಪಾರ ಮೊದಲಾದವುಗಳಿಂದ ಸಮಾಜದಲ್ಲಾದ ಸ್ಥಿತ್ಯಂತರಗಳು, ಭೂಮಾಲೀಕತ್ವ, ಧಾರ್ಮಿಕತೆ, ಸಾಂಸ್ಕೃತಿಕ ಆಚರಣೆಗಳು ಮೊದಲಾದವುಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಈ ಅಧ್ಯಯನವನ್ನು ಚಾರಿತ್ರಿಕ ಅಧ್ಯಯನದ ದೃಷ್ಟಿಕೋನದಲ್ಲಿ ವಿಶ್ಲೇಷಿಸಲಾಗಿದೆ.

ಈ ಅಧ್ಯಯನವನ್ನು ಈ ಕ್ಷೇತ್ರದಲ್ಲಿ ಪರಿಣಿತಿ ಪಡೆದ ವಿವಿಧ ವಿದ್ವಾಂಸರ ಸಲಹೆ ಸೂಚನೆಗಳೊಂದಿಗೆ, ಮಾರ್ಗದರ್ಶಕರ ಮಾರ್ಗದರ್ಶನದೊಂದಿಗೆ, ವಿವಿಧ ಗ್ರಂಥಾಲಯಗಳಿಗೆ ಭೇಟಿನೀಡಿ ಅಧ್ಯಯನದಿಂದ ದೊರೆಯುವ ಮಾಹಿತಿ, ಕ್ಷೇತ್ರಕಾರ್ಯದಿಂದ ದೊರೆಯುವ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

**ಈವರೆಗಿನ ಅಧ್ಯಯನಗಳ ಸಮೀಕ್ಷೆ**

ಕನ್ನಡ ಶಾಸನಗಳಲ್ಲಿ ಕೃಷಿ ವ್ಯವಸ್ಥೆಯ ಅಧ್ಯಯನಕ್ಕೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳು ವಿರಳ. ಶಾಸನಗಳನ್ನೆ ಮೂಲ ಆಕರಗಳನ್ನಾಗಿಸಿಕೊಂಡು ಅಧ್ಯಯನಗಳು ಹೆಚ್ಚು ನಡೆಯಬೇಕಿದೆ. ಈವರೆಗೆ ಪ್ರಾಚೀನ ಕೃಷಿಗೆ ಸಂಬಂಧಿಸಿದ ಅಧ್ಯಯನಗಳು ಆರ್ಥಿಕತೆಯ ಒಂದು ಭಾಗವಾಗಿ ಒಂದೊಂದು ಅಧ್ಯಾಯಗಳ ರೂಪದಲ್ಲಿ ಕಂಡುಬರುತ್ತವೆ. ಜೊತೆಗೆ ಬಿಡಿ ಬಿಡಿ ಲೇಖನಗಳಲ್ಲಿ ಪ್ರಕಟಗೊಂಡಿವೆ. ಅವುಗಳನ್ನಿಲ್ಲಿ ಗಮನಿಸಲಾಗಿದೆ. ಟಿ.ಜಿ. ಚಂದ್ರಶೇಖರಪ್ಪ ಅವರ 'ಸಮಗ್ರ ಭಾರತದ ಇತಿಹಾಸ' ಕೃತಿಯಲ್ಲಿ ರಾಷ್ಟ್ರಕೂಟರ ಭೂಕಂದಾಯದ ಬಗ್ಗೆ ಚರ್ಚಿಸಲಾಗಿದೆ. ಜೊತೆಗೆ ಬಾದಾಮಿ ಚಾಲುಕ್ಯರ ಕಾಲದ ಕೃಷಿ ಬೆಳೆಗಳು, ಅಳತೆ, ತೂಕಗಳು, ತೆರಿಗೆಗಳ ಕುರಿತ ಮಾಹಿತಿ ಇದೆ. ಎ.ಎಸ್. ನರಸಿಂಹಸ್ವಾಮಿಯವರ 'ರಾಷ್ಟ್ರಕೂಟರ ಇತಿಹಾಸ' ಕೃತಿಯಲ್ಲಿ ಶಾಸನಗಳಲ್ಲಿ ಅಡಗಿರುವ ಕೃಷಿಯ ಬಗೆಗಿನ ಸಂಕ್ಷಿಪ್ತ ಪರಿಚಯವಿದೆ. ರಾಜೇಂದ್ರಪ್ಪನವರ 'ಬಾದಾಮಿ ಚಾಲುಕ್ಯರ ಆಳ್ವಿಕೆಯಲ್ಲಿ ಕೃಷಿ' ಎಂಬ ಕೃತಿಯಲ್ಲಿ ಬಾದಾಮಿ ಚಾಲುಕ್ಯರ ರಾಜಮನೆತನದ ಆಳ್ವಿಕೆಯಲ್ಲಿ ಜರುಗಿದ ಕೃಷಿ ವ್ಯವಸ್ಥೆಯ ಕುರಿತು ಬೆಳೆಗಳು, ನೀರಾವರಿ, ತೆರಿಗೆ, ಅಳತೆ, ವ್ಯಾಪಾರ ಮೊದಲಾದವುಗಳನ್ನು ಕುರಿತು ಚರ್ಚಿಸಲಾಗಿದೆ. ಜೆ.ಆರ್. ಕುಪ್ಪುಸ್ವಾಮಿಯವರ Land Ownership The Hoysala

ಕೃತಿಯಲ್ಲಿ ಭೂಮಾಲೀಕತ್ವವನ್ನು ಕುರಿತು ಚರ್ಚಿಸಲಾಗಿದೆ. ಜೆ.ಆರ್. ಕುಪ್ಪುಸ್ವಾಮಿಯವರ Economic condition in Karnataka ಕೃತಿಯಲ್ಲಿ ಆರ್ಥಿಕತೆಗೆ ಸಂಬಂಧಿಸಿದ ತೆರಿಗೆ, ವ್ಯಾಪಾರದ ಕುರಿತು ಚರ್ಚಿಸಲಾಗಿದೆ. ಎಸ್. ಗುರುರಾಜಾಚಾರ್ ಅವರ Economic and Social life in Karnataka ಕೃತಿಯಲ್ಲಿ ಆರ್ಥಿಕತೆಯನ್ನು ಕುರಿತು ವಿಶ್ಲೇಷಿಸಿದ್ದಾರೆ. ಡಾ. ಮೋಹನ್‌ಕೃಷ್ಣ ರೈರವರ 'ಪ್ರಭುತ್ವ ಮತ್ತು ಜನತೆ' ಎಂಬ ಕೃತಿಯಲ್ಲಿ ಕೃಷಿಯ ಆಧಾರದ ಮೇಲೆ ರೂಪಿತಗೊಂಡ ಪ್ರಭುತ್ವ, ಭೂಮಾಲೀಕತ್ವ, ಜನತೆಯ ಬಗೆಗೆ ಇದರಲ್ಲಿ ವಿಶ್ಲೇಷಿಸಲಾಗಿದೆ. ಬಿ.ಆರ್. ಹಿರೇಮಠರ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ಕೃತಿಯಲ್ಲಿ ಕೃಷಿ ಚಟುವಟಿಕೆಗಳು ವ್ಯಾಪಾರದ ಅಭಿವೃದ್ಧಿಗೆ ಕಾರಣವಾದ ಬಗೆ, ವರ್ತಕ ಸಮುದಾಯ, ತೆರಿಗೆ, ಬಡ್ಡಿ, ಸಾಲಗಳು ಮೊದಲಾದವುಗಳ ಕುರಿತು ಚರ್ಚಿಸಲಾಗಿದೆ. ಎನ್.ಜಿ. ಚಂದ್ರಶೇಖರಯ್ಯನವರ 'ಪ್ರಾಚೀನ ಭಾರತದ ಆರ್ಥಿಕ ವ್ಯವಸ್ಥೆ' ಕೃತಿಯಲ್ಲಿ ತೆರಿಗೆಗಳು, ವ್ಯಾಪಾರ, ಮಾರುಕಟ್ಟೆಗಳ ಕುರಿತ ವಿಶ್ಲೇಷಣೆಯಿದೆ. ಶೀಲಕಾಂತ ಪತ್ತಾರರ 'ಬಾದಾಮಿ; ಸಾಂಸ್ಕೃತಿಕ ಅಧ್ಯಯನ' ಕೃತಿಯಲ್ಲಿ ಕೃಷಿ ಬೆಳೆಗಳು, ತೆರಿಗೆ, ಅಳತೆ, ವ್ಯಾಪಾರದ ಕುರಿತ ಉಲ್ಲೇಖವಿದೆ. ವಿಠ್ಠಲ ಪೋತದಾರರ 'ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಕೆಲವು ತೆರಿಗೆಗಳು : ಒಂದು ಅಧ್ಯಯನ' ಕೃತಿಯಲ್ಲಿ ಕರ್ನಾಟಕದಲ್ಲಿ ಕೃಷಿ ಮೇಲೆ ವಿಧಿಸಿದ್ದ ಕೆಲವು ತೆರಿಗೆಗಳ ಬಗೆಗೆ ವಿಶ್ಲೇಷಿಸಿದೆ. ಡಾ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕೃತಿಯಲ್ಲಿ ವ್ಯವಸಾಯ, ನೀರಾವರಿ, ಬೆಳೆಗಳು, ತೆರಿಗೆಗಳು, ವ್ಯಾಪಾರ, ಅಳತೆಗಳ ಬಗೆಗಿನ ಉಲ್ಲೇಖಿತ ಶಾಸನಗಳ ಸಂಕ್ಷಿಪ್ತ ಮಾಹಿತಿ ಕಂಡುಬರುತ್ತದೆ. ಜೊತೆಗೆ ಕೃಷಿಯ ಕುರಿತಾದ ಲೇಖನಗಳೂ ಸಹ ಪ್ರಕಟಗೊಂಡಿರುವುದನ್ನು ಗಮನಿಸಬಹುದಾಗಿದೆ. ವಿ. ಶೋಭಾರವರ 'ಕರ್ನಾಟಕದಲ್ಲಿ ಆರಂಭಿಕ ಕೃಷಿಯ ವಿಕಾಸದಲ್ಲಿ ತಂತ್ರಗಾರಿಕೆ ಒಂದು ಅಧ್ಯಯನ' ಈ ಲೇಖನದಲ್ಲಿ ಕೃಷಿ ಹುಟ್ಟಿ ವಿಕಾಸ ಹೊಂದಿರುವುದರ ಸಂಕ್ಷಿಪ್ತ ಪರಿಚಯವನ್ನು ಪುರಾತತ್ವದ ಹಿನ್ನಲೆಯಲ್ಲಿ ಚರ್ಚಿಸಿದ್ದಾರೆ.

ಬಿ. ಷೇಕ್‌ಅಲಿ ಸಂಪಾದಿತ 'ಕರ್ನಾಟಕ ಚರಿತ್ರೆ. ಸಂಪುಟ ೩'ರಲ್ಲಿ ಡಾ.ಕೆ.ಎಸ್.ಶಿವಣ್ಣರವರ 'ಹೊಯ್ಸಳ ರಾಜ್ಯಾಡಳಿತ ಮತ್ತು ಆರ್ಥಿಕತೆ' ಎಂಬ ಲೇಖನ ಪ್ರಕಟವಾಗಿದ್ದು, ಇದರಲ್ಲಿ ತೆರಿಗೆ, ವ್ಯಾಪಾರ, ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಒದಗಿಸಲಾಗಿದೆ. ಇವರ ಇನ್ನೊಂದು ಲೇಖನವಾದ ಹೊಯ್ಸಳ ಯುಗದಲ್ಲಿ ನಗರಕೇಂದ್ರಗಳ ಹುಟ್ಟು-ಬೆಳವಣಿಗೆಗಳ ಶಕ್ತಿಗಳಾಗಿ ವಾಣಿಜ್ಯ ಸಂಸ್ಕೃತಿ ಮತ್ತು ರಾಜತಂತ್ರ' ಲೇಖನದಲ್ಲಿ ಕೃಷಿ ಉತ್ಪನ್ನದ ಹೆಚ್ಚಳವು ವ್ಯಾಪಾರದ ಮೂಲಕ ಹೇಗೆ ನಗರಗಳ ಬೆಳವಣಿಗೆಗೆ ಕಾರಣವಾಯಿತು ಎಂಬುದನ್ನು ಚರ್ಚಿಸಿದ್ದಾರೆ. ಬಿ.ಆರ್.ಗೋಪಾಲ್‌ರವರ 'The Chalukyas of Kalyana and The kalachuris' ಕೃತಿಯಲ್ಲಿ ಆರ್ಥಿಕತೆಯ ಅಂಶಗಳಾದ ತೆರಿಗೆ, ನೀರಾವರಿಯನ್ನು ಕುರಿತು ಚರ್ಚಿಸಲಾಗಿದೆ. ಶೀಲಾಕಾಂತ ಪತ್ತಾರರ 'ಬಾದಾಮಿ ಚಳುಕ್ಯರ ಕಾಲದ ಆರ್ಥಿಕ ವ್ಯವಸ್ಥೆ' ಲೇಖನದಲ್ಲಿ ತೆರಿಗೆ ವ್ಯಾಪಾರದ ಕುರಿತು ಸಂಕ್ಷಿಪ್ತ ಮಾಹಿತಿ ಇದೆ. ಜೆ.ಎಸ್. ದೀಕ್ಷಿತ್‌ರ 'ಅಯ್ಯಾವೊಳೆ ಐನೂರ್ವ ವರ್ತಕ ಸಂಘದ ಇತಿಹಾಸ' ಲೇಖನದಲ್ಲಿ ವರ್ತಕ ಸಮುದಾಯದ ಬಗೆಗಿನ ಮಾಹಿತಿ ಇದೆ. ಆರ್.ಎಸ್. ಪಂಚಮುಖಿ ಸಂಪಾದಿತ 'ಕರ್ನಾಟಕ ಇತಿಹಾಸ ಸಂಪುಟ ೧'ರಲ್ಲಿ ಕೃಷಿಯ ಮಹತ್ವ, ಆರ್ಥಿಕತೆಯ ಬೆಳವಣಿಗೆಯನ್ನು ಕುರಿತು ಚರ್ಚಿಸಲಾಗಿದೆ.

ಮೃತ್ಯಂಜಯ ಹೊರಕೇರಿಯವರು 'ಬಾದಾಮಿ ಚಾಲುಕ್ಯರ ಸಂಕ್ಷಿಪ್ತ ಇತಿಹಾಸ' ಕೃತಿಯಲ್ಲಿ ಬಾದಾಮಿ ಚಾಲುಕ್ಯರ ಇತಿಹಾಸದೊಂದಿಗೆ ಆರ್ಥಿಕತೆಯನ್ನು ವಿವರಿಸಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ

ಇಲಾಖೆ ಬೆಂಗಳೂರು ಪ್ರಕಟಿಸಿದ 'ಕರ್ನಾಟಕ ಪರಂಪರೆ ಸಂಪುಟ-೧'ರಲ್ಲಿ 'ಕಲ್ಯಾಣಿ ಚಾಲುಕ್ಯರ ಸಾಮಾಜಿಕ ಜೀವನ ಮತ್ತು ಆರ್ಥಿಕ ಪರಿಸ್ಥಿತಿ' ಲೇಖನದ ಮೂಲ ಕರ್ತೃ ಎಸ್.ಸಿ.ನಂದಿಮಠ. ಇದನ್ನು ಕನ್ನಡದಲ್ಲಿ ಸಿ.ಮಹದೇವ ಅವರು ಅನುವಾದಿಸಿದ್ದಾರೆ. ಇದರಲ್ಲಿ ಬೆಳೆಗಳು, ಭೂಕಂದಾಯ, ಅಳತೆ, ದೇವಾಲಯಗಳ ದಾನದ ಕುರಿತ ವಿವರವಿದೆ. 'ಬಾದಾಮಿ ಚಾಲುಕ್ಯರ ಸಾಮಾಜಿಕ ಜೀವನ ಮತ್ತು ಆರ್ಥಿಕ ಪರಿಸ್ಥತಿ' ಎಂಬ ಲೇಖನದ ಮೂಲ ಲೇಖಕರು ಶ್ರೀಮತಿ ಜ್ಯೋತ್ಸ್ನಾ ಬರುಡೆಯವರಾಗಿದ್ದು, ಕನ್ನಡಕ್ಕೆ ಎಸ್.ಆರ್, ಮಳಗಿಯವರು ಅನುವಾದಿಸಿದ್ದಾರೆ. ಈ ಲೇಖನದಲ್ಲಿ ನೀರಾವರಿ, ಅಳತೆ, ಭೂಮಿಯ ಸಂಕ್ಷಿಪ್ತ ವಿಶ್ಲೇಷಣೆ ಇದೆ. 'ಹೊಯ್ಸಳರ ಸಾಮಾಜಿಕ ಜೀವನ ಮತ್ತು ಆರ್ಥಿಕ ಪರಿಸ್ಥಿತಿ' ಲೇಖನದ ಮೂಲ ಲೇಖಕರು ಡಿ.ಎಚ್. ಕೊಪ್ಪರ್ ಅವರು ಆಗಿದ್ದು, ಕನ್ನಡಕ್ಕೆ ಎಚ್.ವಿ. ಶ್ರೀನಿವಾಸ್ ಶರ್ಮ ಅವರು ಅನುವಾದಿಸಿದ್ದಾರೆ. ಈ ಲೇಖನದಲ್ಲಿ ನೀರಾವರಿ, ಧಾನ್ಯ, ವ್ಯಾಪಾರ, ಕೆರೆಗಳ ಕುರಿತ ವಿಶ್ಲೇಷಣೆ ನೀಡಿದ್ದಾರೆ.

ಈ ಮೇಲೆ ಕಾಣಿಸಿದ ಸಂಶೋಧನಾ ಕೃತಿಗಳನ್ನು, ಲೇಖನಗಳನ್ನು ಗಮನಿಸಲಾಗಿದ್ದು, ಅಧ್ಯಯನದ ಸಂದರ್ಭದಲ್ಲಿ ದೊರೆಯುವ ಪ್ರಾಚೀನ ಕರ್ನಾಟಕದ ಕೃಷಿ ಸಂಬಂಧಿತ ಸಂಶೋಧನೆಯ ಮಾಹಿತಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೇಲೆ ತಿಳಿಸಿದ ಎಲ್ಲಾ ಸಂಶೋಧನಾ ಕೃತಿಗಳು ಮತ್ತು ಲೇಖನಗಳು ಆರ್ಥಿಕತೆ, ತೆರಿಗೆ, ಅಳತೆಗಳು, ಮಾರುಕಟ್ಟೆಗಳು, ಬೆಳೆಗಳ ಕುರಿತಾದ ಬಿಡಿ, ಬಿಡಿ ಅಂಶಗಳನ್ನು ಒಳಗೊಂಡಿವೆ. ಪ್ರಸ್ತುತ ಸಂದರ್ಭದಲ್ಲಿ ಕೈಗೊಂಡ 'ಕನ್ನಡ ಶಾಸನಗಳಲ್ಲಿ ಕೃಷಿ' ಎಂಬ ವಸ್ತುವಿಷಯದ ಅಧ್ಯಯನದಲ್ಲಿ ಕನ್ನಡ ಶಾಸನಗಳನ್ನೆ ಮೂಲ ಆಕರಗಳನ್ನಾಗಿಸಿಕೊಂಡು ಕೃಷಿ ವ್ಯವಸ್ಥೆಯನ್ನು ವಿಶ್ಲೇಷಣೆಗೆ ಒಳಪಡಿಸುವ ಮೂಲಕ ಅಧ್ಯಯನ ಮಾಡಲಾಗಿದೆ.

# ಅಧ್ಯಾಯ ಎರಡು

## ಕೃಷಿಯ ಹುಟ್ಟು ಮತ್ತು ಬೆಳವಣಿಗೆ

೨.೧. ಕೃಷಿಯ ಹುಟ್ಟು, ವಿಸ್ತರಣೆ ಮತ್ತು ಬೆಳವಣಿಗೆ

೨.೨. ಕೃಷಿ ಮತ್ತು ಭೂಮಿಯ ವಿಧಗಳು

೨.೩. ಒಣ ಬೇಸಾಯ ಮತ್ತು ನೀರಾವರಿ ಬೇಸಾಯ

೨.೪. ನೀರಾವರಿ ಮತ್ತು ಕೆರೆ, ಕಟ್ಟೆ, ಕಾಲುವೆ, ಬಾವಿ, ಏತಬಾವಿಗಳು

೨.೫. ಕೃಷಿ ಉಪಕರಣಗಳು

## ಅಧ್ಯಾಯ : ಎರಡು

# ಕೃಷಿಯ ಹುಟ್ಟು ಮತ್ತು ಬೆಳವಣಿಗೆ

### ೨.೧. ಕೃಷಿಯ ಹುಟ್ಟು, ವಿಸ್ತರಣೆ ಮತ್ತು ಬೆಳವಣಿಗೆ

ಮಾನವ ನಾಗರೀಕನಾಗಿ ರೂಪುಗೊಳ್ಳುವಲ್ಲಿ ಕೃಷಿಯು ಪ್ರಮುಖ ಪಾತ್ರ ವಹಿಸಿದೆ. ಇದು ಪ್ರಕೃತಿಯಲ್ಲಿ ದಿಢೀರನೆ ಆದ ಬದಲಾವಣೆಯಲ್ಲ. ನಿಧಾನಗತಿಯಲ್ಲಿ ಬೆಳೆದು ಬಂದ ಪ್ರಕ್ರಿಯೆಯಾಗಿದೆ. ಕೃಷಿ ಚರಿತ್ರೆಯಲ್ಲಿ ಕೃಷಿಯು ನಿರ್ದಿಷ್ಟವಾಗಿ ಇಂತಹದ್ದೇ ಕಾಲದಲ್ಲಿ ಹುಟ್ಟಿತು ಎಂದು ಹೇಳುವುದು ಚರ್ಚಾರ್ಹ ಸಂಗತಿ. ಆದರೂ ದೊರೆಯುವ ಮಾಹಿತಿಗಳ ಆಧಾರದ ಮೇಲೆ ಗುರುತಿಸಬಹುದಾಗಿದೆ. ಮಣ್ಣು ಅಥವಾ ಭೂಮಿಯನ್ನು ಹದಗೊಳಿಸಿ ಬೀಜವನ್ನು ಬಿತ್ತಿ ಬೆಳೆಯುವುದಕ್ಕೆ ಕೃಷಿ ಎಂದು ಕರೆಯಲಾಗುತ್ತದೆ.

### ಕೃಷಿ ಪದದ ಅರ್ಥ

ಡಿ.ವಿ. ಗುಂಡಪ್ಪನವರು ಕೃಷಿಯ ಅರ್ಥವನ್ನು ಸಂಸ್ಕೃತಿಯ ಅರ್ಥಕ್ಕೆ ಸಮಾನವಾಗಿ ಬಳಸಿ, ಸಂಸ್ಕೃತಿಯು ಕೃಷಿಯಷ್ಟು ಪ್ರಾಚೀನವೆನ್ನುವಂತೆ ತಿಳಿಸುತ್ತಾರೆ. Culture ಪದದ ಮೂಲ ಪದ Cult ಆಗಿದ್ದು, ಇದು ಸೇವೆಮಾಡು, ಕೃಷಿಮಾಡು ಆರಾಧಿಸು ಎಂಬ ಅರ್ಥವನ್ನು ಕೊಡುತ್ತದೆ. ಆರಾಧಿಸು ಎಂದರೆ ಒಂದು ಕಡೆ ದೈವಭಕ್ತಿ. ಮತ್ತೊಂದು ಕಡೆ 'ಭೂದೇವಿಯ ಆರಾಧನೆ' ಈ ಪದದಿಂದ Agriculture ಎಂಬ ಪದ ಬಂದಿತೆಂದು ಹೇಳಲಾಗಿದೆ. Agriculture ಎಂದರೆ ಭೂಮಿಯನ್ನು ಉತ್ತಿಬಿತ್ತಿ, ನೀರು, ಗೊಬ್ಬರ ಹಾಕಿ ಹಸನುಮಾಡುವುದಾಗಿದೆ.[೧] ಕಿಟಲ್ ಕೋಶದಲ್ಲಿ Krishi, Agriculture Husbandry ಎಂದು ಅರ್ಥೈಸಲಾಗಿದೆ.[೨] REU.W. REEVE–ಕೋಶದಲ್ಲಿ ಕೃಷಿಯನ್ನು Krishi Husbandry Agriculture ಎಂದು ತಿಳಿಸಿದೆ.[೩] ಕನ್ನಡ ನಿಘಂಟಿನಲ್ಲಿ ಸಾಗುವಳಿ, ಬೇಸಾಯ, ವ್ಯವಸಾಯ, ಆರಂಭ[೪] ಎಂಬ ಅರ್ಥಗಳಿವೆ. ನಿಘಂಟುಗಳು ತಿಳಿಸುವ ಅರ್ಥಗಳ ಜೊತೆಗೆ ಒಕ್ಕಲುತನ, ಕಮತ ಮೊದಲಾದ ಹೆಸರುಗಳಿಂದಲೂ ಕೃಷಿಯನ್ನು ಕರೆಯಲಾಗುತ್ತದೆ.

ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ ಬೇಟೆಗಾರ ಗ್ರಾಮದ ಅವಶೇಷಗಳು ಸೋವಿಯತ್ ದೇಶದ ಮೆಝಿನ್, ಇಸ್ರೇಲ್‌ನ ಮಲ್ಲಹ ಹಾಗೂ ಟರ್ಕಿಯ ಸುಬರ್ದೆಗಳಲ್ಲಿ ದೊರೆತಿವೆ.[೫] ಆದರೆ ಅವು ತೀರಾ ಅಲ್ಪ ಆಧಾರಗಳಾಗಿವೆ. ಈ ಕಾಲಘಟ್ಟದ 'ಮೊದಲ ಭಾಗದಲ್ಲಿ ಮನುಷ್ಯನು ಆಹಾರ ಸಂಗ್ರಹಣೆ ಹಾಗೂ ಬೇಟೆಗಳಿಂದ ಜೀವಿಸುತ್ತಿದ್ದನು.[೬] ಇದಕ್ಕಾಗಿ ಅವನು ಒಂದು ಕಲ್ಲನ್ನು ಮತ್ತೊಂದು ಕಲ್ಲಿಗೆ ಉಜ್ಜಿ ಅಲಗುಗಳುಳ್ಳ ಅಂಚಿನ ಕಲ್ಲನ್ನು ಆಯುಧಗಳನ್ನಾಗಿ ಬಳಸುತ್ತಿದ್ದನು. ಆದರೆ ಅವು ಅಷ್ಟು ಚೂಪಾಗಿರಲಿಲ್ಲ. 'ಸು. ೧೦.೦೦೦ ವರ್ಷಗಳ ಹಿಂದೆ ನವ ಶಿಲಾಯುಗದ ಆರಂಭ ಕಾಲದಲ್ಲಿ ಮಾನವನು ಕಲ್ಲಿನ ಅಲಗುಳ್ಳ ಆಯುಧ ಅಥವಾ ಕೈಗೊಡಲಿ(ಹ್ಯಾಂಡ್ ಆಕ್ಸ್)ಯನ್ನು ಮಸೆದು ಚೂಪುಗೊಳಿಸಲು ಕಲಿತನು.'[೭] ಈ ವೇಳೆಗೆ ಮಾನವನು ತನ್ನ ಜೀವನೋಪಾಯಕ್ಕಾಗಿ ಒಂದೆಡೆ ನೆಲೆ ನಿಲ್ಲಲು ಆರಂಭಿಸಿದನು. ಹೀಗೆ ನೆಲೆ ನಿಂತ ಮಾನವನು 'ಪ್ರಾಣಿಗಳನ್ನು ಪಳಗಿಸಿದ. ಅದರೊಂದಿಗೆ ಅಲ್ಪ ಪ್ರಮಾಣದಲ್ಲಿ ಕೃಷಿಯನ್ನು ಆರಂಭಿಸಿದನು. ಪ್ರಾಣಿಗಳನ್ನು ಪಳಗಿಸುವಿಕೆ ಮತ್ತು ಕೃಷಿಯ ಆರಂಭ ನವಶಿಲಾಯುಗದ ಕಾಲಘಟ್ಟದಲ್ಲಿ ಕಂಡುಬಂದಿತು.[೮] ಕ್ರಿ.ಪೂ. ೯೦೦೦ ಸೂಕ್ಷ್ಮ ಶಿಲಾಯುಗದ ವೇಳೆಗೆ ಬೇಟೆ, ಮೀನುಗಾರಿಕೆ, ಆಹಾರ ಸಂಗ್ರಹಣೆಗಳನ್ನು ರೂಢಿಸಿಕೊಂಡನು.[೯]

ಇದರ ಜೊತೆಗೆ ನವಶಿಲಾಯುಗದ ಮಾನವನು ಪಶುಪಾಲನೆಯನ್ನು ರೂಢಿಸಿಕೊಂಡನು. 'ಜಗತ್ತಿನ ಕೆಲವೆಡೆ ನವಶಿಲಾಯುಗ(ನಿಯೋಲಿಥಿಕ್ ಏಜ್) ೧೦ಸಾವಿರ ವರ್ಷಗಳ ಹಿಂದೆ ಕಂಡುಬಂದರೂ, ಭಾರತದಲ್ಲಿ ೭ ಅಥವಾ ೮ಸಾವಿರ ವರ್ಷಗಳ ಹಿಂದೆ. ದಕ್ಷಿಣ ಭಾರತದಲ್ಲಿ ವ್ಯವಸ್ಥಿತ ಕೃಷಿಯ ಆರಂಭ ಸುಮಾರು ನಾಲ್ಕು ಸಾವಿರ ವರ್ಷಗಳ ಹಿಂದೆ.[೧೦] ರಾಜಸ್ಥಾನದ ಬಗೋರ್‌ನಲ್ಲಿ ನಡೆದ ಉತ್ಖನನದಿಂದ ಜನರು ಬೇಟೆ, ಪಶುಪಾಲನೆಗಳಿಂದ ಜೀವನ ನಡೆಸುತ್ತಿದ್ದರು ಎನ್ನಲಾಗಿದೆ. ನವಶಿಲಾಯುಗದ ಮೆಹರಘಡ ಅವಧಿ ೧ರಲ್ಲಿ ಕೊಡಲಿ, ಅಲಗು ಮೊದಲಾದ ಆಯುಧಗಳು ದೊರೆತಿವೆ. ಇವುಗಳ ಬಳಕೆಯಿಂದ ಭೂಮಿಯ ಉಳುಮೆ ಸುಲಭವಾಗುತ್ತದೆ ಎಂದು ಪುರಾತತ್ವ ಶಾಸ್ತ್ರಜ್ಞರಾದ ವಿ.ಗೋರ್ಡಾನ್ ಚೈಲ್ಡ್ ವಾದಿಸುತ್ತಾರೆ.[೧೧] **'ಎನ್‌ಸೈಕ್ಲೋಪಿಡಿಯಾ ಆಫ್ ಬ್ರಿಟಾನಿಕಾ** ೧೯೬೩ರ ಪ್ರಕಾರ ಕೃಷಿಯ ಆರಂಭ ೧೧,೦೦೦ ದಿಂದ ೯,೦೦೦ ವರ್ಷಗಳ ಹಿಂದೆ, ಈ ವೇಳೆಗೆ ಪ್ಯಾಲೆಸ್ಟೈನ್‌ನ 'ನಟುಫಿಯನ್' ಎಂಬ ಜನಾಂಗದವರು ಹರಿತವಾದ ಕಲ್ಲಿನ ಧಾರೆಯುಳ್ಳ ಕುಡುಗೋಲನ್ನು ಹೊಂದಿದ್ದು ಕಾಣಿಸುತ್ತದೆ.[೧೨] ಇದನ್ನು ಗಮನಿಸಿದರೆ ಈ ಅವಧಿಯಲ್ಲಿ ಅಥವಾ ಇದಕ್ಕೂ ಪೂರ್ವದಲ್ಲಿಯೇ ಕೃಷಿ ಆರಂಭವಾಗಿರುವುದು ಕಂಡುಬರುತ್ತದೆ. 'ಈ ಅವಧಿಯಲ್ಲಿ ಜನರು ಕಾಡಿನ ಎತ್ತುಗಳನ್ನು ಪಳಗಿಸುತ್ತಿರು.[೧೩] ಕ್ರಿ.ಪೂ. ೯೦೦೦ದಲ್ಲೇ 'ಉತ್ತರ ಥಾಯ್‌ಲ್ಯಾಂಡ್‌ನ 'ಸ್ಪಿರಿಟ್‌ಕೇವ್' ಎಂಬ ನಿವೇಶನದಲ್ಲಿ ಆಗಲೇ ಮನೆವಾರ್ತೆಗೆ ಸೇರಿದ್ದ(Domesticated) ಫಸಿಯಾಲಸ್ ಜಾತಿಯ(Phaseolu) ಹುರುಳಿ ಕಾಳಿನ ಕೋಡು, ಬಟಾಣಿ(Pea), ಸೋರೇಕಾಯಿ(ಬಾಟ್ಲ್‌ಗೋರ್ಡ್), ಟ್ರಾಪಾ ಎಂದು ಪರಿಚಿತವಾದ ಒಂದು ನೀರುಗಾಯಿ(ಚೆಸ್ಟ್‌ನಟ್) ಮುಂತಾದವುಗಳು ಬೆಳೆದಿರುವುದು ಕಂಡುಬಂದಿದೆ.[೧೪] ಇದಕ್ಕೂ ತೀರಾ ಪ್ರಾಚೀನ ದಾಖಲೆಯೊಂದು ದೊರೆತಿದ್ದು, ಅದು 'ಕ್ರಿ.ಪೂ. ೩೦.೦೦೦ಸಾವಿರ ವರ್ಷಗಳ ಹಿಂದಿನ cape province, south Africaದ ಒಂದು ಗುಹಾ ಚಿತ್ರವಾಗಿದ್ದು, ಅದರಲ್ಲಿ ಮೂರು ಚಿತ್ರಗಳನ್ನು ಬಿಡಿಸಲಾಗಿದೆ. ಅವುಗಳಲ್ಲಿ ಒಂದು ಚಿತ್ರವು ಗಂಡಸರು ಮೀನಿನ ಬೇಟೆಯಾಡುತ್ತಿದ್ದರೆ, ಇನ್ನೊಂದು ಚಿತ್ರದಲ್ಲಿ ನಾಯಿಗಳಿದ್ದು, ಈ ಚಿತ್ರದಲ್ಲಿ ಗಂಡಸರು ಬೇಟೆಯಾಡಿದ ಪ್ರಾಣಿಗಳನ್ನು ಹೊತ್ತು ತರುತ್ತಿರುವ ಚಿತ್ರವಿದೆ. ಇನ್ನೊಂದು ಚಿತ್ರದಲ್ಲಿ ಹೆಂಗಸೊಬ್ಬಳು ಚೂಪಾದ ಕಟ್ಟಿಗೆಯ ಸಹಾಯದಿಂದ ಗೆಡ್ಡೆಯೊಂದನ್ನು ಅಗೆಯುತ್ತಿರುವಂತೆ ಚಿತ್ರಿಸಲಾಗಿದೆ.'[೧೫] ಪುರುಷರು ಬೇಟೆಯಾಡಲು ಹೋದ ಸಂದರ್ಭದಲ್ಲಿ ಮಹಿಳೆಯರು ನೆಲವನ್ನು ಶೋಧಿಸಿರುವುದು ಕಂಡುಬರುತ್ತದೆ. 'ಆಸ್ಟ್ರೇಲಿಯಾದಲ್ಲಿಯೂ ಗಂಡಸರು ಬೇಟೆಗೆ ಹೋದಾಗ ಹೆಂಗಸರು ಬೇರುಗಳಿಗಾಗಿ ತನ್ನ ಗುಡಾರದ ಸುತ್ತ ನೆಲ ಅಗಿಯುವುದು, ಮರಗಳಿಂದ ಹಣ್ಣು, ಕಾಯಿಗಳನ್ನು ಕೀಳುವುದು, ಜೇನು, ಅಣಬೆ, ಬೀಜಗಳು, ಕಾಳುಗಳನ್ನು ಸಂಗ್ರಹಿಸುವ ಕೆಲಸವನ್ನು ಮಾಡುತ್ತಿದ್ದಳಂತೆ.[೧೬] ಇದು ಕೃಷಿಯ ಆರಂಭದ ಸೂಚನೆಯ ಗುರುತಿಸುವಿಕೆ ಮತ್ತು ಆಹಾರ ಸಂಗ್ರಹಣೆಯ ಹಂತವನ್ನು ತಿಳಿಸುತ್ತದೆ. ೧೯೬೩ **'ಎನ್‌ಸೈಕ್ಲೋಪಿಡಿಯಾ ಆಫ್ ಬ್ರಿಟಾನಿಕಾ'**ದಲ್ಲಿ ಹೇಳಿರುವಂತೆ 'ಇರಾಕ್‌ನ ತಾಸಿದರ್‌ನಲ್ಲಿ ಕಾಡು ಜಾತಿಯ ಕುರಿಗಳ ಮಂದೆಯನ್ನು ಸಾಕಿದ್ದು ಕಂಡುಬರುತ್ತದೆ. ಬಲೂಚಿಸ್ಥಾನ ಮತ್ತು ಪಶ್ಚಿಮ ಸಿಂಧ್‌ನಲ್ಲಿ ಕ್ರಿ. ಪೂ. ೬೭೦೦ದಲ್ಲಿ ಕಾಡು ಮೇಕೆ ಪಳಗಿಸಿದ್ದಾರೆ.[೧೭] ಇರಾಕ್ ಮತ್ತು ಇರಾನ್ ಗಡಿಯ ಅಲಿಗೋಶ್ ಎಂಬಲ್ಲಿ ಎಯ್ನ್‌ಕಾರ್ನ್ ಎಂಬ ವರ್ಗದ ಗೋಧಿ(Triticum monococum), ಎಮ್ಮರ್‌ಗೋಧಿ(Triticum turgidum), ಕಾಡು ಜಾತಿಯ ಬಾರ್ಲಿ(Hordeum Spontaneum)ಗಳನ್ನು ಕ್ರಿ.ಪೂ.೭೦೦೦ದ ಸುಮಾರಿಗೆ ಬೆಳೆಯುತ್ತಿದ್ದರು. ಅಮೇರಿಕಾ ಖಂಡದಲ್ಲಿ ಕುಂಬಳಕಾಯಿ(Cucurbita), ಹಿರೇ ಜಾತಿಯ ತರಕಾರಿಗಳು(Lagenaria) ಈಶಾನ್ಯ ಮೆಕ್ಸಿಕೊ ಪರಿಸರದಲ್ಲಿ ಕ್ರಿ.ಪೂ. ೭೦೦೦ದಲ್ಲಿ ಆಗಲೇ

ಮನೆವಾರ್ತೆಯ ಬೆಳೆಗಳಿದ್ದುದು ಕಂಡುಬಂದಿದೆ. ಇದೇ ವೇಳೆಗೆ ಅಮೇರಿಕಾದ ತೆಹುಕಾನ್ ಕಣಿವೆಯಲ್ಲಿ ಹುರುಳಿ ಜಾತಿಯ ಕೋಡು 'ಬೀನ್ಸ್' ಬೆಳೆಯುತ್ತಿದ್ದರು. ಅದೇ ಖಂಡದ ಸಂಯುಕ್ತ ಸಂಸ್ಥಾನದ ಪಶ್ಚಿಮ ಭಾಗದಲ್ಲಿ ಸು. ಕ್ರಿ.ಪೂ. ೮೫೦೦ಕ್ಕೆ ಸರಿಹೊಂದುವ ಬೇಟೆಗೆ ಬಳಸುತ್ತಿದ್ದ ನಾಯಿಯ ಮೂಳೆ ದೊರೆತಿದೆ.[೧೮] ಇದನ್ನು ಗಮನಿಸಿದಾಗ ಕ್ರಿ.ಪೂ. ೭೦೦೦ದ ವೇಳೆಗಾಗಲೇ ಕೃಷಿ ಆರಂಭಗೊಂಡಿರುವುದು ಮತ್ತು ಪ್ರಾಣಿಗಳನ್ನು ಪಳಗಿಸುತ್ತಿದ್ದುದು ಸ್ಪಷ್ಟವಾಗುತ್ತದೆ. ಬೆಳೆ ಬೆಳೆದಿರುವ ಉಲ್ಲೇಖದ ಈ ದಾಖಲೆಯಿಂದ ಇದಕ್ಕೂ ಪೂರ್ವದಲ್ಲೇ ಕೃಷಿ ಆರಂಭವಾಗಿರುವಂತೆ ತಿಳಿದುಬರುತ್ತದೆ. 'ಕ್ರಿ.ಪೂ ೭ನೆಯ ಸಹಸ್ರಮಾನದಲ್ಲಿ(ಇಂದಿಗೆ ೮-೯ಸಾವಿರ ವರ್ಷಗಳ ಹಿಂದೆ) ಮಧ್ಯ ಪ್ರಾಚ್ಯದಲ್ಲಿ ತೀರ ವಿಕಸಿತ ಕೃಷಿಯನ್ನು ನಡೆಸುತ್ತಿದ್ದ ಗ್ರಾಮಗಳ ನಿವೇಶನಗಳು ಸಾಕಷ್ಟು ಸಿಕ್ಕಿವೆ. ಇಲ್ಲಿ ಕೃಷಿಯು ವೈವಿಧ್ಯಮಯವಾಗಿದ್ದು, ಇಲ್ಲಿ ಉಪಲಬ್ಧ ಸಂಪನ್ಮೂಲಗಳು ಹೆಚ್ಚು ಉತ್ಪಾದಕವಾಗಿ ಹಾಗೂ ಸಮರ್ಥವಾಗಿ ಬಳಸಿರುವುದು ಕಂಡುಬರುತ್ತದೆ. ಇರಾಕ್‌ನ ಜಾರ್ಮೊದಲ್ಲಿ 'ಏಯ್ನ್‌ಕಾರ್ನ್' ಜಾತಿಯ ಗೋಧಿಯನ್ನು ಬೆಳೆಯುತ್ತಿದ್ದ ಮತ್ತು ಹಂದಿಯನ್ನು ಸಾಕುತ್ತಿದ್ದ ಸಾಕ್ಷ್ಯ ಕ್ರಿ.ಪೂ. ೬೭೫೬ ರಷ್ಟು ಹಳೆಯದು. ಗ್ರೀಸ್‌ನ ಆಗ್ರಿಸ್ಸಾ ಮತ್ತು ನಿಯಾನಿಕೊ ಮೀಡಿಯ(Neanikomedia)ಗಳು ಏಯ್ನ್‌ಕಾರ್ನ ಹಾಗೂ ಎಮ್ಮರ್ ಜಾತಿಯ ಗೋಧಿ ಮತ್ತು ಲೆಂಟಿಲ್ ಧಾನ್ಯಗಳ ಬೆಳೆಯ ಜೊತೆ ಪಳಗಿಸಿದ ಸಾಕು ಪ್ರಾಣಿಗಳನ್ನು ಕ್ರಿ.ಪೂ ೬೦೦೦ದಷ್ಟು ಹಿಂದೆ ಹೊಂದಿದ್ದವು. ಸಮೀಪದ ಕ್ರೀಟ್ ದ್ವೀಪದ ನಾಸ್ಸಸ್(Knossus)ನಲ್ಲಿ ರೊಟ್ಟಿಗೆ ಹೆಚ್ಚಾಗಿ ಬಳಸುವ ಗೋಧಿಯ ಜೊತೆಗೆ ಎಮರ್ ಮತ್ತು ಬಾರ್ಲಿಗಳ ಬೆಳೆ ಆಗಲೇ ನಡೆದಿತ್ತು.[೧೯] ಕ್ರಿ.ಪೂ ೭೦೦೦ರಿಂದ ಕ್ರಿ.ಪೂ. ೫೦೦೦ವರ್ಷಗಳ(ಕಾರ್ಬನ್-೧೪ ಕಾಲಮಾನ ಸೂಚಿಸುವಂತೆ ಮೆಹರಘಡ ೧ರಲ್ಲಿ ಗೋದಾಮುಗಳಿರುವ ಸಾಧ್ಯತೆ ಇದೆ.[೨೦] ಇಲ್ಲಿ ಬೀಜಗಳು ದೊರೆತಿರುವುದರಿಂದ ಕೃಷಿಯು ಅಸ್ತಿತ್ವದಲ್ಲಿತ್ತು ಎಂದು ಖಚಿತವಾಗುತ್ತದೆ. ಮೆಹರಘಡ ೧ರಲ್ಲಿ ಆರು ಸಾಲುಗಳ ತೆರೆದ ಬಾರ್ಲಿ, ಬಾರ್ಲಿಯ ಉಪಸಂಕುಲಗಳು, ಎಲಿಕಾರ್ನ್, ಎಮರ್ ಮೊದಲಾದ ಗೋಧಿಯ ಉಪಸಂಕುಲಗಳು ದೊರೆತಿವೆ.[೨೧] ಧಾನ್ಯಗಳು ದೊರೆತಿರುವುದರಿಂದ ಈ ವೇಳೆಗೆ ಕೃಷಿ ಹುಟ್ಟಿರುವ ಸಾಧ್ಯತೆಗಳಿವೆ. ಈ ವ್ಯವಸಾಯವು ಪಶ್ಚಿಮ ಏಷ್ಯಾದಿಂದ ಹರಡಿರಬಹುದು[೨೨] ಎನ್ನಲಾಗಿದೆ. ಈ ಅವಧಿಗಾಗಲೇ ಮೇಕೆ, ಡುಬ್ಬದ ಎತ್ತುಗಳನ್ನು, ಹಸುಗಳನ್ನು ಕಾಡಿನಿಂದ ತಂದು ಪಳಗಿಸಲಾಗುತ್ತಿತ್ತು.[೨೩] ಕಾಡಿನ ಈ ಪ್ರಾಣಿಗಳನ್ನು ಪಳಗಿಸುವ ವೇಳೆಗೆ ಕೃಷಿಯು ಸಾಕಷ್ಟು ಬೆಳವಣಿಗೆಯನ್ನು ಹೊಂದಿರುವ ಸಾಧ್ಯತೆಗಳಿವೆ. ಕಾಡಿನ ಪ್ರಾಣಿಗಳನ್ನು ಹೇಗೆ ಪಳಗಿಸುತ್ತಿದ್ದರು ಎಂಬುದು ತಿಳಿದುಬರುವುದಿಲ್ಲ. ಆದರೆ ಬೇಟೆಗೆ ಹೋದಾಗ ದೊಡ್ಡ ಪ್ರಾಣಿಗಳನ್ನು ಕೊಂದು ಮರಿಗಳನ್ನು ತಂದಿರುವ ಸಾಧ್ಯತೆಗಳಿವೆ. ಈ ಪ್ರಾಣಿಗಳನ್ನು ಮಾಂಸಹಾರಕ್ಕಾಗಿ, ಭೂಮಿಯ ಉಳುಮೆಗಾಗಿ, ವಸ್ತುಗಳ ಸಾಗಣೆಗಾಗಿ ಬಳಸಿಕೊಂಡಿರುವ ಸಾಧ್ಯತೆ ಇದೆ. ಕ್ರಿ.ಪೂ. ೫೦೦೦ದಿಂದ ಕ್ರಿ.ಪೂ. ೪೦೦೦ ಸಾವಿರದ ವರೆಗೆ ಮೆಹರಘಡ ಕಾಲಮಾನ-೨ರ ವೇಳೆಗೆ ಧಾನ್ಯ ಸಂಗ್ರಹಣೆಯ ಕಾರ್ಯ ಆರಂಭವಾಯಿತು.[೨೪] ಇದರಿಂದಾಗಿ ಕೃಷಿ ಅಭಿವೃದ್ಧಿಯನ್ನು ಸಾಧಿಸಿರಬಹುದಾಗಿದೆ ಎಂದು ತಿಳಿದುಬರುತ್ತದೆ. ಆಹಾರ ಸಂಗ್ರಹಣೆಗೆಂದು ಮಾಡುವ ಗೋದಾಮುಗಳ ಗಾತ್ರ ದೊಡ್ಡದಾಗಿರುವುದು ಸಹ ಕೃಷಿಯ ವಿಸ್ತರಣೆಯನ್ನು ತಿಳಿಸುತ್ತದೆ. 'ಕುಡುಗೋಲಿನ ಅಲಗ'ನ್ನು ಶಿಲಾಜಲ(ಬಿಟುಮನ್)ದಲ್ಲಿ ಇಟ್ಟು ಬಳಸುವುದು ನಮ್ಮ ಉಪಖಂಡದಲ್ಲಿ ಕೊಯ್ಲಿಗಾಗಿಯೇ ನಿರ್ದಿಷ್ಟ ಉಪಕರಣದ ಬಳಕೆಯ ಮೊದಲ ಸಾಕ್ಷಿಯಾಗಿದೆ.[೨೫] 'ಮೆಹರಘಡದಲ್ಲಿ ಸುಟ್ಟ ಹತ್ತಿ ಬೀಜಗಳು ದೊರೆತಿವೆ. ಇವು ಹತ್ತಿ ಬಟ್ಟೆಯ ಬಗೆಗೆ ದೊರೆತ ಅತಿ ಪುರಾತನ ಸಾಕ್ಷಿಯಾಗಿದ್ದು, ಕ್ರಿ.ಪೂ. ೪೦೦೦ದಲ್ಲಿ ದೊರೆತಿದೆ. ಇದು ವಿಶ್ವದ ಕೃಷಿ ಇತಿಹಾಸದ ಪ್ರಮುಖ ಘಟನೆಯಾಗಿದೆ.[೨೬] ಭಾರತದಲ್ಲಿ ನವ ಶಿಲಾಯುಗವು ಕ್ರಿ.ಪೂ. ೬೦೦೦ರಿಂದ ಆರಂಭವಾಯಿತು.[೨೭] ಇಲ್ಲಿ ಗೋಧಿ, ಅಕ್ಕಿ, ಬಾರ್ಲಿಯಂತಹ ಬೆಳೆಗಳನ್ನು ಬೆಳೆದರು. ಕೃಷಿಯು ನವ

ಶಿಲಾಯುಗದ ವೇಳೆಗೆ ಆಹಾರ ಸಂಗ್ರಹಣೆಯೊಂದಿಗೆ ಅಭಿವೃದ್ಧಿಯನ್ನು ಸಾಧಿಸಿತು. ಭಾರತದ ಮೆಹರ್‌ಘಡ್‌ನಲ್ಲಿ ಕ್ರಿ.ಪೂ. ೬೦೦೦ದಲ್ಲಿ ಕೃಷಿ ಕಾರ್ಯ ಆರಂಭಗೊಂಡಿತ್ತು.[೨೮] ಕ್ರಿ.ಪೂ. ೬೦೦೦ದ ಸುಮಾರಿಗೆ ಮೆಹರ್‌ಘರ್ ಎಂಬ ವಾಯುವ್ಯ ಭಾರತದ ನೆಲೆಯಲ್ಲಿ ಸುಮಾರು ೨೩೦ ಹೆಕ್ಟೆರ್ ಕ್ಷೇತ್ರದಲ್ಲಿ ಕೃಷಿ ಕಾರ್ಯ ನಡೆದುದನ್ನು ಜಾರೀಗ್(Jarrige) ಎಂಬ ಫ್ರೆಂಚ್ ಪುರಾತತ್ವಜ್ಞ ಪತ್ತೆ ಹಚ್ಚಿದ್ದಾನೆ. ಈ ಅವಧಿಗೆ ಭಾರತದಲ್ಲಿ ಚೀನಾ ಮತ್ತು ಈಜಿಪ್ಟ್‌ಗಳಿಗಿಂತಲೂ ಹೆಚ್ಚಿನ ಪ್ರದೇಶದಲ್ಲಿ ಹಬ್ಬಿತ್ತು.[೨೯] 'ಮೆಹರ್‌ಘಡದಲ್ಲಿ ಕ್ರಿ.ಪೂ. ೭೦೦೦ದವರೆಗೆ ಕಂಡುಬಂದ ನವಶಿಲಾಯುಗದ ಕೃಷಿಯು ಸಿಂಧೂ ಬಯಲಿನಾಚೆ, ಭಾರತದ ಯಾವುದೇ ಭಾಗದಲ್ಲಿ ಕ್ರಿ.ಪೂ ೪೦೦೦ದವರೆಗೆ ಕಾಣಿಸಿಕೊಳ್ಳುವುದಿಲ್ಲ.[೩೦] 'ಸಿಂಧೂ ಬಯಲಿನಲ್ಲಿ ಕ್ರಿ.ಪೂ. ೫೫೧೦ದಿಂದ ೨೨೩೦ ರವರೆಗೆ ಇಂದಿಗಿಂತಲೂ ಹೆಚ್ಚು ಒದ್ದೆ ಹಂತವಿತ್ತು. ಜೊತೆಗೆ ಇಂದಿಗಿಂತ ಅಧಿಕ ಆಹಾರ ಉತ್ಪಾದನೆ ಮಾಡುತ್ತಿದ್ದರು. ಸಿಂಧೂ ಸಂಸ್ಕೃತಿಯ ಕಾಲದಲ್ಲಿ ನೇಗಿಲು ಪತ್ತೆಯಾಗಿದ್ದು, ಬನವಾಲಿ ಮತ್ತು ಜವ್ವೆವಾಲದಲ್ಲಿ ಮಣ್ಣಿನ ನೇಗಿಲ ಮಾದರಿಗಳು ದೊರೆತಿವೆ.[೩೧] ಮಹೆಂಜೋದಾರೋದಲ್ಲಿ ಕ್ರಿ.ಪೂ. ೨೩೦೦ರ ಆವೆಮಣ್ಣಿನ ನೇಗಿಲು ದೊರೆತಿದೆ. ಅದು ಇಂದು ಮುಂಬೈ ಮ್ಯೂಸಿಯಂನಲ್ಲಿದೆ. ಈ ನೇಗಿಲಿಗೆ ಕಬ್ಬಿಣದ ಗುಳ ಇರಲಿಲ್ಲ.[೩೨] ಈಶಾನ್ಯ ಅಫಘಾನಿಸ್ಥಾನದ ಶಾರ್ಟುಘೈನದಲ್ಲಿ ಉಳುಮೆ ಮಾಡಿದ ನೆಲವೊಂದು ದೊರೆತಿದೆ. ಪ್ರಾರಂಭದ ಸಿಂಧೂ ಸಂಸ್ಕೃತಿಯನ್ನು ಗಮನಿಸಿದಾಗ ನವಶಿಲಾಯುದ ಎರಡು ಸಂಸ್ಕೃತಿಗಳು ಕಂಡುಬರುತ್ತವೆ. ಈಶಾನ್ಯದ ಬಲೂಚಿಸ್ತಾನ ಮತ್ತು ವಾಯುವ್ಯ ಗಡಿಯ ಕೇಚಿಬೇಗ್ ಎಂಬ ಪ್ರದೇಶಗಳಲ್ಲಿ ಕುಂಬಾರಿಕೆಯನ್ನು ಗುರುತಿಸಬಹುದು. 'ಪಂಜಾಬಿನಲ್ಲಿ ಇದನ್ನು ಹಾಕ್ಡ ಕುಂಬಾರಿಕೆ ಎಂದು ಕರೆಯಲಾಗುತ್ತದೆ.[೩೩] ಈ ಎರಡು ಪ್ರದೇಶಗಳು ಆರಂಭದ ಸಣ್ಣ ಪ್ರಮಾಣದ ವ್ಯವಸಾಯ ಮತ್ತು ಪಶುಸಂಗೋಪನೆಯ ನೆಲೆಗಳಾಗಿದ್ದವು. ಈ ಕುಂಬಾರಿಕೆಯ ಸಂಸ್ಕೃತಿಯಲ್ಲಿ ಎತ್ತುಗಳು ಮತ್ತು ಬಂಡಿಗಳ ಸಾಕ್ಷ್ಯಗಳು ದೊರೆತಿವೆ. 'ಬಂಡಿಗಾಡಿನ ಜಾಡು ಮತ್ತು ಎತ್ತಿನ ಬೊಂಬೆಗಳು ಪಂಜಾಬಿನ ಜಲೀಲ್‌ಪುರದಲ್ಲಿ ದೊರೆತಿವೆ.[೩೪] ಇದು ವ್ಯವಸಾಯದ ಅಭಿವೃದ್ಧಿಯನ್ನು ತಿಳಿಸುತ್ತದೆ. ಹಾಗೆಯೇ ಎತ್ತುಗಳನ್ನು ಬಳಸಿಕೊಂಡು ನೆಲವನ್ನು ಉಳಿಮೆ ಮಾಡಿ ಬೆಳೆ ಬೆಳೆಯುತ್ತಿದ್ದರೆಂದು ಹೇಳಲಾಗಿದೆ. 'ರಾಜಸ್ತಾನದಲ್ಲಿರುವ ಸಾಂಬಾರ್ ಸರೋವರವೆಂಬ ಉಪ್ಪು ನೀರಿನ ಜಲಾಶಯದಲ್ಲಿ ನಡೆದ ಸಂಶೋಧನೆಯಿಂದ ೭೦೦೦ದಿಂದ ೮೦೦೦ದಲ್ಲಿ ಸಸ್ಯ ಕೃಷಿಯ ಸೂಚನೆಗಳಿವೆ. ಜವೆಗೋಧಿ, ಗೋಧಿಯ ಬೆಳೆಗಳನ್ನು ಕ್ವೆಟ್ಟಾ ಬಯಲಿನ ಕೆಳಗೆ ಮೆಹರ್‌ಘಡದಲ್ಲಿ ಬೆಳೆಯಲಾಗುತ್ತಿತ್ತು.[೩೫] ಇವು ರೆಹಮಾನ್ ಡೆಹ್ರಿ ಮತ್ತು ಕಾಲಿಬಂಗನ್ನಲ್ಲಿಯೂ ಪತ್ತೆಯಾಗಿವೆ. ರಬಿ ಅಥವಾ ಚಳಿಗಾಲ, ಖರೀಫ್ ಅಥವಾ ಬೇಸಿಗೆ ಬೆಳೆಗಳನ್ನು ಬೆಳೆಯುತ್ತಿದ್ದರೆನ್ನಲಾಗಿದೆ. ಬಟಾಣಿ ವರ್ಗದ(ವೆಚಸ್ ಜಾತಿ), ಬಾಲ್ಕೋಟ್‌ನಲ್ಲಿ ರೋಪ್ರಿಯಲ್‌ಖರ್ಜೂರ, ದ್ರಾಕ್ಷಿಯಂತಹ ಬೆಳೆ ಬೆಳೆಯುತ್ತಿದ್ದರು. ಬೆಳೆದ ಬೆಳೆಯನ್ನು ಕತ್ತರಿಸಲು ಸರಳ ಕಲ್ಲಿನ ಅಲಗನ್ನು ಬಳಸುತ್ತಿದ್ದರು. ನೀರಾವರಿಯನ್ನು ಅರಿತಿದ್ದರು ಎಂಬುದಕ್ಕೆ ಸಾಕ್ಷ್ಯಗಳು ದೊರೆತಿವೆ. 'ಕರಾಚಿಯ ಅಲ್ಲಾದಿನೋನಲ್ಲಿ ಮೇಲ್ಮಟ್ಟವನ್ನು ಕಲ್ಲಿನಿಂದ ಕಟ್ಟಲಾಗಿದೆ.[೩೬] ಇದು ಅಂತರ್ಜಲದ ಬಳಕೆಯ ಮಾಹಿತಿಯನ್ನು ಒದಗಿಸುತ್ತದೆ. ಅಲ್ಲದೆ ಅಂತರ್ಜಲವನ್ನು ಕುಡಿಯುವ ನೀರಿಗೆ, ವ್ಯವಸಾಯಕ್ಕೆ ಬಳಸಿ ಹೊಲಗಳಲ್ಲಿ ಬೆಳೆ ಬೆಳೆದಿರುವ ಸಾಧ್ಯತೆಗಳಿವೆ. ಹಿಂಗಾರು ಬೆಳೆಯಾಗಿ ಗೋಧಿ, ಬಾರ್ಲಿ, ದ್ವಿದಳಧಾನ್ಯ, ಬಟಾಣೆ(ಪೀಲ್ಸ್), ಅವರೆ, ಎಣ್ಣೆ ಕಾಳುಗಳಾದ ಅಗಸೆ, ಸಾಸುವೆ ಬೆಳೆಯುತ್ತಿದ್ದರು. ಮುಂಗಾರಿನಲ್ಲಿ ತೃಣಧಾನ್ಯಗಳಾದ ಸಜ್ಜೆ, ರಾಗಿ, ಜೋಳ, ಎಳ್ಳು, ನಾರುನೂಲಹತ್ತಿ ಬೆಳೆಯುತ್ತಿದ್ದರು. ಜಾನುವಾರುಗಳಾದ ಎಮ್ಮೆ, ಕೋಣ, ಆಕಳುಗಳನ್ನು ಸಾಕುತ್ತಿದ್ದರು. 'ಕರಾಚಿ ಬಳಿ ಕೋಣದ ಕೊಂಬುಗಳು ದೊರೆತಿವೆ.[೩೭] ಹೈನುಗಾರಿಕೆಯ ಜೊತೆಗೆ ಪ್ರಾಣಿಗಳು ವಿಸರ್ಜಿಸಿದ ಗೊಬ್ಬರವನ್ನು ಹೊಲಗಳಿಗೆ ಬಳಸಿರುವ ಸಾಧ್ಯತೆಗಳಿವೆ. ಕೃಷಿಯು ವಿಶ್ವದಲ್ಲಿ ಏಕ ಕಾಲಕ್ಕೆ

ಜನರು ಗೋಧಿ, ಬಾರ್ಲಿ, ಬಟಾಣಿ, ಧಾನ್ಯಗಳನ್ನು ಬೆಳೆಯುತ್ತಿದ್ದರು. ಕಾಲಿಬಂಗನ್, ಮಹೆಂಜೋದಾರೊಗಳಲ್ಲಿ ಆಹಾರ ಧಾನ್ಯಗಳನ್ನು ಕಣಜಗಳಲ್ಲಿ ಸಂಗ್ರಹಿಸಿಡುತ್ತಿದ್ದರು ಎನ್ನಲಾಗಿದೆ. ಸಿಂಧು ಜನರು ಹತ್ತಿಯನ್ನು ಬೆಳೆದವರಲ್ಲಿ ಮೊದಲಿಗರಾಗಿದ್ದರು. 'ಗ್ರೀಕರು ಹತ್ತಿಯನ್ನು ಸಿಂಧು ಶಬ್ದದಿಂದ ಉತ್ಪತ್ತಿಗೊಂಡ ಸಿಂದೂನ್ ಎಂಬ ಹೆಸರಿನಿಂದ ಕರೆಯುತ್ತಿದ್ದರು.[೪೭] ಗ್ರೀಕರಿಗೂ ಸಿಂಧೂ ಪ್ರದೇಶದ ಹತ್ತಿಗೂ ಸಂಬಂಧವಿದ್ದಿತೆಂದು ಇದರಿಂದ ತಿಳಿದುಬರುತ್ತದೆ. ಇಲ್ಲಿ ಬಳಸಿದ ಡುಬ್ಬದ ಹೋರಿಗಳು ಮಾಂಸದ ಜೊತೆಗೆ ಕೃಷಿಗೆ ಸಹಾಯಕವಾಗಿರುವ ಸಾಧ್ಯತೆಗಳಿವೆ. ಕಬ್ಬಿಣ ಯುಗವು ಭಾರತದಲ್ಲಿ ಕ್ರಿ.ಪೂ. ೧೨೦೦ರಿಂದ ೪೦೦ರ ಅವಧಿಯಲ್ಲಿ ಕಂಡುಬಂದಿದೆ.[೪೮] ಲೋಹಗಳ ಯುಗದಲ್ಲಿ ಅದರಲ್ಲಿಯೂ ಕಬ್ಬಿಣ ಯಗದಲ್ಲಿ ಕೃಷಿಯು ಹೊಸ ಆಯಾಮವನ್ನು ಕಂಡಿತು. ಕಬ್ಬಿಣದ ಸಾಮಗ್ರಿಗಳನ್ನು ಬಳಸಿ ಸಾಗುವಳಿ ಮಾಡುವ ಭೂಮಿಯನ್ನು ವಿಸ್ತರಿಸಲಾಯಿತು. ಜೊತೆಗೆ ಬೆಳೆಗಳ ಬಿತ್ತನೆ, ಕೊಯ್ಲಿಗೆ ಅನುಕೂಲವಾಗ ತೊಡಗಿತು. ಕ್ರಿ.ಪೂ ೧೦೦೦ದಿಂದ ಗಡುಸಾದ ಕಬ್ಬಿಣದ ಉಪಯೋಗ ಆರಂಭಗೊಂಡಿತು. ಈ ಯುಗದಲ್ಲಿ ಮಾನವನು ಒಂದೆಡೆ ನೆಲೆನಿಲ್ಲಲು ಆರಂಭಿಸಿದನು.

ಕರ್ನಾಟಕ ಸಂದರ್ಭವನ್ನು ಗಮನಿಸುವಾಗ ಕ್ರಿ.ಪೂ. ೨೮೦೦-೧೨೦೦ದ ಅವಧಿಯು ನವಶಿಲಾಯುಗದ ಅವಧಿಯಾಗಿದೆ.[೪೯] ಈ ಜನರ ಆರಂಭದ ಜೀವನವು ಬೇಟೆಯಾಗಿದ್ದು, ಆಹಾರದ ಬಗೆಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಈ ನವ ಶಿಲಾಯುಗದ ಸ್ಪಷ್ಟ ಚಿತ್ರಣ ಕ್ರಿ.ಪೂ. ೨೨೦೦ರಿಂದ ೧೪೦೦ರ ಅವಧಿಯಲ್ಲಿ ಕರ್ನಾಟಕ ಮತ್ತು ಆಂಧ್ರ ಈ ಎರಡು ನೆಲೆಗಳಲ್ಲಿ ಕಂಡುಬರುತ್ತದೆ.[೫೦] ಇಲ್ಲಿ ಜಾನುವಾರುಗಳ ಒಣ ಸಗಣಿ, ಬೂದಿ ದಿಬ್ಬಗಳು ದೊರೆತಿವೆ. ಇದರಿಂದ ಪಶುಪಾಲನೆ ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ. ಬಳ್ಳಾರಿಯ ಕುಪ್ಪಗಲ್ಲು, ಕುಡತಿ, ಯಾದಗಿರಿಯ ಕೊಡೇಕಲ್ಲು, ಬೂದಿಹಾಳಗಳಲ್ಲಿ ಉತ್ಖನನ ನಡೆದಿದೆ. ಆರಂಭದಲ್ಲಿ ನಡೆದ ಉತ್ಖನನದಲ್ಲಿ ಬಳ್ಳಾರಿ ಜಿಲ್ಲೆಯ ತೆಕ್ಕಲುಕೋಟೆಯಲ್ಲಿ ಹುರುಳಿಕಾಳು, ಹಾವೇರಿ ಜಿಲ್ಲೆಯ ಹಳ್ಳೂರಿನಲ್ಲಿ ರಾಗಿ ಕುರುಹುಗಳು ಕಂಡು ಬಂದಿದ್ದು, ಈ ಧಾನ್ಯಗಳು ಆಫ್ರಿಕಾದಿಂದ ಬಂದಿರಬಹುದೆನ್ನಲಾಗಿದೆ. ಕ್ರಿ.ಪೂ. ೧೮೦೦ರಲ್ಲಿ ರಾಗಿ ದೊರೆತಿದ್ದರೂ, ಅದಕ್ಕಿಂತಲೂ ಪೂರ್ವದಲ್ಲಿ ಇಲ್ಲಿ ರಾಗಿ ಬೆಳೆಯುತ್ತಿದ್ದರೆಂದು ರಾಂಧಾವಾ ಅವರು ತಮ್ಮ 'ಎ ಹಿಸ್ಟರಿ ಆಫ್ ಎಗ್ರಿಕಲ್ಚರ್ ಇನ್ ಇಂಡಿಯಾ' ಎಂಬ ಕೃತಿಯಲ್ಲಿ ಹೇಳಿದ್ದಾರೆ. ಯಾದಗಿರಿ ಜಿಲ್ಲೆಯ ಕೊಡೇಕಲ್ಲಿನ ಬೂದಿ ದಿಬ್ಬದಲ್ಲಿ ಎಲಚಿ ಅಥವಾ ಬೋರೆಹಣ್ಣಿನ ಬೀಜಗಳು ದೊರೆತಿವೆ. ಈ ಉತ್ಖನನವು ೧೯೬೦-೭೦ರ ಅವಧಿಯಲ್ಲಿ ನಡೆಯಿತು.[೫೧] ೧೯೯೦ರ ದಶಕದಲ್ಲಿ ನಡೆದ ಉತ್ಖನನದಲ್ಲಿ ಜವೆ, ಅವರೆಗಳು ದೊರೆತಿವೆ. ಈ ಬೆಳೆಗಳನ್ನು ಗಮನಿಸಿದರೆ ಕೃಷಿಯು ಜನರಿಗೆ ಈ ವೇಳೆಗೆ ತಿಳಿದಿರುವಂತೆ ತೋರುತ್ತದೆ.

ಲಂಡನಿನ ಇನ್ಸ್‌ಟ್ಯೂಟ್ ಆಫ್ ಆರ್ಕಿಯಾಲಜಿಯ ಡೋರಿಯಲ್ ಫುಲ್ಲರ್, ಕೇಂಬ್ರಿಜ್ ವಿಶ್ವವಿದ್ಯಾಲಯದ ನಿಕೋಲ್‌ಬೋವಿನ್, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ರವಿಕೋರಿ ಶೆಟ್ಟರ್ ಅವರು ೧೯೯೭ರಲ್ಲಿ ಡೆಕ್ಕನ್ ಪ್ರಿ ಹಿಸ್ಟರಿ ಎಂಬ ಬಹುಶಾಸ್ತ್ರೀಯ ಯೋಜನೆಯನ್ನು ಕೈಗೊಂಡಿದ್ದು, ಈ ಹಿನ್ನೆಲೆಯಲ್ಲಿ ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಕೃಷಿಯ ಉಗಮಕ್ಕೆ ಸಂಬಂಧಿಸಿದ ಸಂಶೋಧನೆ ಇದಾಗಿತ್ತು. ಈ ಹಿನ್ನೆಲೆಯಲ್ಲಿ ಈ ಎರಡು ರಾಜ್ಯಗಳಿಂದ ೧೨ನೆಲೆಗಳಲ್ಲಿ ವ್ಯವಸ್ಥಿತ ರೀತಿಯಲ್ಲಿ, ಧಾನ್ಯಾವಶೇಷಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಯಿತು. ಕರ್ನಾಟಕದ ನೆಲೆಗಳೆಂದರೆ ಸಂಗನಕಲ್ಲು, ಹೀರೆಗುಡ್ಡ, ತೆಕ್ಕಲಕೋಟೆ, ಕುರುಗೋಡು, ಹಳ್ಳೂರುಗಳಲ್ಲಿ ಧಾನ್ಯಗಳನ್ನು ಸಂಗ್ರಹಿಸಿ ಪರೀಕ್ಷೆಗೆ ಒಳಪಡಿಸಲಾಯಿತು. ಕರ್ನಾಟಕದಲ್ಲಿ ಕೃಷಿಯ ಉಗಮಕ್ಕೆ ಸ್ಪಷ್ಟವಾದ ಪುರಾತತ್ವ ಕುರುಹುಗಳು ದೊರೆಯುವುದು. ಕ್ರಿ.ಪೂ. ೨೨೦೦ರಲ್ಲಿ ಪ್ರಥಮ

ಧಾನ್ಯಾವಶೇಷಗಳು ಬಳ್ಳಾರಿ, ಕೊಪ್ಪಳ, ರಾಯಚೂರು ಜಿಲ್ಲೆಗಳಲ್ಲಿ ದೊರೆತಿವೆ. ಉತ್ತರ ಕರ್ನಾಟಕದ ಭಾಗದಲ್ಲಿ ತೃಣ ಮತ್ತು ದ್ವಿದಳ ಧಾನ್ಯಗಳು ದೊರೆತಿವೆ. ಕಾಡುಬರಗು, ಸಣ್ಣ ಅಂಟು ಪುರ್ಲೆ ಹುಲ್ಲು(ನವಣೆ ಜಾತಿ) ಇವು ಸಣ್ಣ ಧಾನ್ಯಗಳಾಗಿವೆ. ಹುರುಳಿಯಂತಹ ದ್ವಿದಳ ಧಾನ್ಯಗಳು ದೊರೆತಿವೆ. ಇದರಿಂದಾಗಿ ಕರ್ನಾಟಕದಲ್ಲಿಯೂ ನವಶಿಲಾಯುಗದ ಕಾಲದಲ್ಲೆ ಕೃಷಿಯು ಆರಂಭಗೊಂಡಿದೆ ಎಂದು ಖಚಿತವಾಗಿ ತಿಳಿಯುತ್ತದೆ.

ನವಶಿಲಾಯುಗದಲ್ಲಿ ಹುಟ್ಟಿದ ಕೃಷಿಯು ಹುಟ್ಟುವಿಕೆಗೆ ಯಾವ ಕಾರಣಗಳನ್ನು ಹೊಂದಿತ್ತು ಎಂಬುದನ್ನು ಗಮನಿಸಿದಾಗ ಮಾನವನು ಆಹಾರಕ್ಕಾಗಿ ಬೇಟೆಯನ್ನಾರಂಭಿಸಿದ್ದನು. ಬೇಟೆಯು ಆಹಾರಕ್ಕಾಗಿಯೇ ನಡೆಯುತ್ತಿದ್ದ ಕ್ರಿಯೆಯಾಗಿತ್ತು. ಆದರೆ ನಂತರ ಮಾನವನು ತನ್ನ ರಕ್ಷಣೆಗಾಗಿ, ಪ್ರಾಣಿಗಳ ಮೇಲೆ ತನ್ನ ಹಿಡಿತ ಮತ್ತು ಸ್ವಾಮ್ಯತೆಯನ್ನು ಸ್ಥಾಪಿಸಲು ಮುಂದಾದನು. ಸರ್ವಕಾಲದಲ್ಲೂ ಬೇಟೆಮಾಡುವುದು ಸಾಧ್ಯವಾಗದ ಸ್ಥಿತಿ ಬಂದೊದಗಿದಾಗ ಕೃಷಿಯ ಬೀಜ ಮೊಳೆಯಿತು. ಕೃಷಿಯು ಹುಟ್ಟಿ ಬೆಳವಣಿಗೆ ಹೊಂದಲು ಈ ಕೆಳಗಿನ ಅಂಶಗಳು ಪ್ರಮುಖ ಕಾರಣವೆನ್ನಬಹುದಾಗಿದೆ.

- ❖ ಪುರುಷರು ಬೇಟೆಗೆ ಹೋದ ಸಂದರ್ಭದಲ್ಲಿ ಮಹಿಳೆಯರು ತಮ್ಮ ಗುಡಿಸಲ ಸುತ್ತ ಗೆಡ್ಡೆ, ಗೆಣಸು, ಬೇರುಗಳ ಅಗೆಯುವಿಕೆಯು ಕೃಷಿಗೆ ಭೂಮಿಕೆಯಾಯಿತು.
- ❖ ಮಾನವನ ಅರಿವು ವಿಸ್ತಾರವಾದಂತೆ, ಪ್ರಾಣಿಗಳನ್ನು ಪಳಗಿಸಿದಂತೆ ಗೆಡ್ಡೆ ಗೆಣಸು, ಬಳ್ಳಿಗಳನ್ನು ತನ್ನ ವಾಸಸ್ಥಳದ ಸುತ್ತಲೂ ಬೆಳೆಸಿದ್ದು, ಕೃಷಿಯ ಬೆಳವಣಿಗೆಗೆ ಕಾರಣವಾಯಿತು.
- ❖ ದನಗಾಯಿ ಅಥವಾ ಪಶುಪಾಲಕರು ತಮ್ಮ ವೃತ್ತಿ ಮಾಡುತ್ತ ಅಲೆದಾಡುತ್ತಿದ್ದರು. ಈ ಸಂದರ್ಭದಲ್ಲಿ ಮಕ್ಕಳ ಪಾಲನೆ ಪೋಷಣೆ ಮಾಡುತ್ತಿದ್ದ ಅವನ ಕುಟುಂಬ ಅಥವಾ ಮಹಿಳೆಯರು ಬಿಡುವಿನ ಅವಧಿಯ ಬೇಸರ, ಹಸಿವಿನ ಇಂಗಿತದ ಅನಿವಾರ್ಯತೆಯಿಂದಾಗಿ, ಪರ್ಯಾಯ ವ್ಯವಸ್ಥೆಯೊಂದನ್ನು ರೂಪಿಸಿಕೊಳ್ಳುವ ಅನಿವಾರ್ಯತೆ ಕೃಷಿಯ ಹುಟ್ಟಿಗೆ ಕಾರಣವಾಯಿತು.
- ❖ ಮಳೆಗಾಲದಲ್ಲಿ ಬೇಟೆಗೆ ಹೋಗಲು ಆಗದಿರುವ ಸಂದರ್ಭಗಳನ್ನು ಮನಗಂಡ ಮಾನವನು ಕೃಷಿ ಪ್ರವೇಶಿಸಿರುವ ಸಾಧ್ಯತೆಗಳಿವೆ.
- ❖ ವರ್ಷದ ಸರ್ವ ಋತುಗಳಲ್ಲೂ ಬೇಟೆಗಳು ದೊರೆಯುವುದು ಅನಿಶ್ಚಿತವಾದ ಪರಿಸ್ಥಿತಿ ನಿರ್ಮಾಣವಾಗಿ, ಬೇಟೆಗಳು ಕೈತಪ್ಪಿ ಹೋದಾಗ, ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಮುಂದಾಗಿ, ಕೃಷಿ ಜೀವನ ಅವನಿಗೆ ಸುರಕ್ಷವೆನಿಸಿ ಕೃಷಿ ಆರಂಭಿಸಿರುವಂತೆ ಕಂಡುಬರುತ್ತದೆ.
- ❖ ಆಹಾರದ ಉತ್ಪಾದನೆಯೊಂದಿಗೆ ಕಾಲದ ಕಲ್ಪನೆಯ ಮಿತಿಗೊಳಪಟ್ಟು ಸಂಗ್ರಹಿಸುವ ವಿಧಾನದಲ್ಲಿ ತೊಡಗಿದನು. ಸಂಗ್ರಹಣೆಯಂತಹ ಕಾರ್ಯಗಳು ಅವನಿಗೆ ಪ್ರಕೃತಿಯಿಂದಲೇ ದೊರೆತವು. ಹಕ್ಕಿಗಳು ಮರಗಳಲ್ಲಿ ಕಾಳು ಕೂಡಿಡುವುದು, ಜೇನುಹುಳು ಮಕರಂದ ಸಂಗ್ರಹಿಸುವುದು ಇತ್ಯಾದಿ ಕ್ರಿಯೆಗಳನ್ನು ಕಂಡು ತಾನು ಇಂತಹ ಕಾರ್ಯದಲ್ಲಿ ತೊಡಗಿರುವ ಸಾಧ್ಯತೆಗಳಿವೆ.

❖ ಭವಿಷ್ಯದ ಮುಂದಾಲೋಚನೆಯ ಅರಿವು, ಮಳೆ, ಶೈತ್ಯ, ಕ್ರೂರ ಮೃಗಗಳಿಂದ ರಕ್ಷಿಸಿಕೊಳ್ಳಲು ಬೇಟೆಗಿಂತ, ಆಹಾರ ಒದಗಿಸುವಿಕೆಗೆ ಹೆಚ್ಚು ಉಪಯುಕ್ತವಾದುದು ಕೃಷಿ ಎಂಬ ಆಲೋಚನೆ.

❖ ಕೃಷಿಯ ಹುಟ್ಟಿಗೆ ಪ್ರಕೃತಿಯೇ ಪ್ರೇರಣೆ. ತನ್ನ ಅಗತ್ಯತೆಗಾಗಿ ಪ್ರಕೃತಿಯನ್ನು ಅವಲೋಕಿಸಿದಾಗ ಅವನ ಅವಲೋಕನೆಯು ಕೃಷಿ ಆವಿಷ್ಕಾರಕ್ಕೆ ನಾಂದಿಯಾಯಿತು. ಪ್ರಕೃತಿಯಲ್ಲಿ ಪಕ್ಷಿ ಹಣ್ಣು ತಿನ್ನುವುದನ್ನು, ಒಂದು ಪ್ರಾಣಿ ಮತ್ತೊಂದು ಪ್ರಾಣಿಯನ್ನು ಕೊಂದು ತಿನ್ನುವುದನ್ನು, ಆಹಾರ ದೊರೆಯದೆ ಇರುವಾಗ ಕೋತಿ ಮರದಿಂದ ಮರಕ್ಕೆ ಹಾರುವುದನ್ನು ಗಮನಿಸಿದ. ತನ್ನ ಅಸ್ತಿತ್ವವನ್ನು ಪ್ರಕೃತಿಯ ಅನುಕರಣೆಯ ಮೂಲಕ ಕಂಡುಕೊಂಡನು. ಪ್ರಕೃತಿಯ ವಿಸ್ಮಯ, ಮಾನವನ ಅರಿವು, ಆಲೋಚನ ಲಹರಿಗಳು ಕೃಷಿಯ ಹುಟ್ಟಿಗೆ ಕಾರಣವಾದವು.

**ಪರಿಣಾಮ**

ಕೃಷಿಯಿಂದಾಗಿ ಮಾನವನು ಮೊದಲು ಮೃಗತ್ವದಿಂದ ಮನುಷ್ಯನಾಗಿ ಪರಿವರ್ತನೆಗೊಂಡನು. ಇದರಿಂದಾಗಿ ಒಂದೆಡೆ ನೆಲೆನಿಲ್ಲುವ ಹಂಬಲ ದೊರೆತಿದ್ದೆ ಕೃಷಿಯ ಮೂಲಕ. ಪಶುಪಾಲಕರೂ ಸಹ ಕೃಷಿಯಿಂದಾಗಿ ನೆಲೆನಿಲ್ಲುವಂತಾಯಿತು.

ಮಾನವನು ಕೃಷಿಗಾಗಿ ಅಗತ್ಯವಾದ ಪ್ರಾಣಿಗಳನ್ನು ಪಳಗಿಸಿ, ದನಕರುಗಳ ಸಂಖ್ಯೆಯನ್ನು ಹೆಚ್ಚಿಸಿದನು. ಇದರಿಂದಾಗಿ ಹೈನುಗಾರಿಕೆ(ಹಾಲು, ಉಣ್ಣೆ, ಚರ್ಮ, ಗೊಬ್ಬರ) ವೃದ್ಧಿಯಾಗಿ ಕೃಷಿಯ ಅಭಿವೃದ್ಧಿಗೆ ಅನುಕೂಲವಾಯಿತು. ಪ್ರಾಣಿಗಳನ್ನು ಹೇಗೆ ಪಳಗಿಸಿದನೋ ತಿಳಿಯದು. ಪಳಗಿಸಿದ ಪ್ರಾಣಿಗಳನ್ನು ಆಹಾರದ ಸಾಗಾಣಿಕೆಗೆ ಬಳಸಿಕೊಂಡನು. ಕೃಷಿಯಿಂದಾಗಿ ಶ್ರಮ ವಿಭಜನೆ ರೂಢಿಸಿಕೊಂಡನು. ಜೊತೆಗೆ ಬೇಟೆಯಿಂದ ಹೊರ ಬರಲು ಸಾಧ್ಯವಾಯಿತಾದರು, ಸಂಪೂರ್ಣವಾಗಿ ಬೇಟೆಯಿಂದ ಇಂದಿಗೂ ಬದಲಾವಣೆ ಆಗದಿರುವುದು ಕಂಡುಬರುತ್ತದೆ. ನಾಗರೀಕತೆಯ ಉಗಮ ಕೃಷಿಕನ ಗುಡಿಸಲಿನಿಂದಲೇ ಆರಂಭವಾಯಿತು. ಇದು ಕ್ರಮೇಣ ನಗರಗಳ ನಾಗರಿಕತೆಗೂ ಕಾರಣವಾಯಿತು. ಆರಂಭದ ಕೃಷಿ, ಬೇಟೆ ಮತ್ತು ಪಶುಪಾಲನೆಯೊಂದಿಗೆ ಸಾಗಿತು, ಆಹಾರ ಸಂಗ್ರಹಣೆಯ ಬೇಟೆ ವಿಧಾನಕ್ಕೆ ಹೊಸ ಕೃಷಿಯೊಂದನ್ನು ಅಳವಡಿಸಿಕೊಂಡನು. ಮೂಲದಲ್ಲಿ ಬೇಟೆಯಾಡುತ್ತಿದ್ದ ಮಾನವನಿಗೆ ತನ್ನದೇ ಆದ ಸ್ವಂತ ನೆಲೆ ಎಂಬುದು ಇರಲಿಲ್ಲ. ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದ. ಮಾನವ ಒಂದೆಡೆ ನೆಲೆನಿಂತಿದ್ದು, ಕೃಷಿಯಿಂದಾದ ಬಹುದೊಡ್ಡ ಬದಲಾವಣೆಯಾಗಿದೆ.

ಮಾಂಸದ ಬದಲಿಗೆ ಧಾನ್ಯಗಳು, ಹಣ್ಣು, ತರಕಾರಿಗಳನ್ನು ತಾವೇ ಬೆಳೆದು ತಿನ್ನಲಾರಂಭಿಸಿದರು. ಪ್ರಾಣಿಗಳಂತೆ ಸಸಿಗಳನ್ನು ಪಳಗಿಸಲಾಯಿತು. ಇದು ನಂತರದ ಸಸ್ಯ ನಾಟಿ ವಿಧಾನಕ್ಕೆ ದಾರಿ ಮಾಡಿಕೊಟ್ಟಿತು. ಕೃಷಿ ಬೆಳೆಗಳ ಧಾನ್ಯದ ಸಂಗ್ರಹಣೆಯ ಕಾರ್ಯವನ್ನು ಸರ್ವ ಕಾಲಗಳ ಹಿತದೃಷ್ಟಿಯಿಂದ ಕೂಡಿಡಲು ಪ್ರಾರಂಭಿಸಲಾಯಿತು. ಕೃಷಿ ಧಾನ್ಯಗಳ ಮಿಗುತಾಯವು ವಸ್ತು ವಿನಿಮಯ ಪದ್ಧತಿಗೆ ಅನುವು ಮಾಡಿಕೊಟ್ಟಿತು. ಇದರಿಂದ ವ್ಯಾಪಾರೀಕರಣ, ನಗರಗಳ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿತು.

ಮಾನವನು ದಿಢೀರನೆ ಕೃಷಿಗೆ ಪ್ರವೇಶ ಪಡೆಯದೆ ಹಂತ ಹಂತವಾಗಿ ಆರಂಭಿಸಿದನು. ಹಸಿ ಮಾಂಸದ ಭಕ್ಷಣೆಯಲ್ಲಿ ತೊಡಗಿದ್ದ ಮಾನವನು ಬೆಂಕಿಯ ಉಪಯೋಗದಿಂದ ಆಹಾರ ಕ್ರಮದಲ್ಲಿ ಬದಲಾವಣೆ ಕಂಡನು. ಆಹಾರದ ಜೊತೆಗೆ ಬೆಂಕಿಯು ಕೃಷಿಯ ವಿಸ್ತರಣೆಗೆ ದಾರಿ ಮಾಡಿಕೊಟ್ಟಿತು. ಇದು ನೇರವಾಗಿ ಮಾನವ ಬೇಟೆಯಾಡುವುದಕ್ಕೆ ಕಡಿವಾಣ ಹಾಕಿತು. ನಾಗರೀಕತೆಯ ಬೆಳವಣಿಗೆಯಲ್ಲಿ ಬೆಂಕಿಯ ಪಾತ್ರ ಪ್ರಮುಖವಾಯಿತು. ಹೆಂಗಸರು ಗುಡಿಸಲ ಬಳಿ ನೆಲವನ್ನು ಶೋಧಿಸುವ ಮೂಲಕ ಕೃಷಿಯು ಆರಂಭವಾಯಿತು. ಆರಂಭವಾದ ಕೃಷಿಯು ನಿಧಾನಗತಿಯಲ್ಲಿ ವಿಸ್ತರಣೆಯಾಗತೊಡಗಿತು. ವಿಸ್ತರಣೆಯ ಜೊತೆ ಜೊತೆಯಲ್ಲಿ ಕೃಷಿಯು ಬೆಳವಣಿಗೆ ಹೊಂದುತ್ತಾ ಸಾಗಿತು. ಕೃಷಿ ವಿಸ್ತರಣೆಯಲ್ಲಿ ಬೀಜಗಳ ಪಾತ್ರ ಪ್ರಮುಖವಾಗಿದ್ದು, ಇವು ಹೇಗೆ ತಯಾರಾದವು ಎಂಬುದರ ಬಗೆಗೆ ಮಾಹಿತಿ ದೊರೆಯುವುದಿಲ್ಲ, ಅವು ತಮ್ಮಷ್ಟಕ್ಕೆ ಕಾಡಿನಲ್ಲಿ ಬೆಳೆದವುಗಳು. 'ಬಿತ್ತನೆಗೊಳ್ಳದ ಬೀಜಗಳು ಅವರ ಬಿಡಾರಕ್ಕೂ, ಜಮೀನಿಗೂ ಮಧ್ಯೆ ಉದುರಿಹೋಗಿ ಬೆಳವಣಿಗೆಯ ಮಹಾನ್ ರಹಸ್ಯ ಸೂಚಿತವಾಗಿರಬಹುದು.[೫೨] ಕೃಷಿ ಬೀಜಗಳನ್ನು ಪಕ್ಷಿಗಳು ಪ್ರಸರಣ ಮಾಡಿರುವ ಸಾಧ್ಯತೆಗಳಿವೆ. ಗಾಳಿ, ಪ್ರವಾಹದ ಮೂಲಕ ಒಂದೆಡೆಯಿಂದ ಮತ್ತೊಂದೆಡೆಗೆ ಹರಿದಿರುವ ಸಾಧ್ಯತೆಗಳಿವೆ. ಜೂಆಂಗ್ ಜನರು ಬೀಜವನ್ನು ಒಟ್ಟಾಗಿ ಮಣ್ಣಿನಲ್ಲಿ ಹಾಕಿಬಿಟ್ಟು ಅದೇ ದಾರಿ ಮಾಡಿಕೊಂಡು ಬರಲಿ ಎನ್ನುತ್ತಿದ್ದರು. ಬೋರ್ನಿಯಾದ ಆದಿವಾಸಿಗಳು ತಾವು ಜಮೀನಿನ ಮೇಲೆ ನಡೆದು ಹೋಗುತ್ತಾ ಚೂಪಾದ ಒಂದು ಕೋಲನ್ನು ನೆಲಕ್ಕೆ ಚುಚ್ಚಿ, ಅಲ್ಲಿ ಆದ ಹಳ್ಳಗಳಲ್ಲಿ ಬೀಜಗಳನ್ನು ಹಾಕುತ್ತಿದ್ದರು.[೫೩] ಬೀಜಗಳೊಂದಿಗೆ ಕೃಷಿಯ ವಿಸ್ತರಣೆಯಲ್ಲಿ ಬೆಂಕಿ, ಆಯುಧಗಳಾದ ಸಲಿಕೆ, ಗುದ್ದಲಿ, ಕುಡುಗೋಲು, ನೇಗಿಲು ಎತ್ತುಗಳು, ಬೀಜಗಳು ಪ್ರಮುಖವಾದವುಗಳು.

ಆಯ್ಕೆ ಮಾಡಿದ ಬಲಿತ ಬೀಜಗಳನ್ನು ಮತ್ತೆ ಮತ್ತೆ ಬಿತ್ತನೆ ಮಾಡುವ ಮೂಲಕವೂ ಕೃಷಿಯ ಬೆಳವಣಿಗೆಯಲ್ಲಿ ನಿರಂತರತೆ ಕಂಡುಬಂದಿರುವ ಸಾಧ್ಯತೆಗಳಿವೆ. ನವ ಶಿಲಾಯಗದಲ್ಲಿ ಆರಂಭವಾದ ಕೃಷಿಯು ನಿಧಾನವಾಗಿ ಸಾಗಿ ಬಂದಿತು. ಆದರೆ ಕಬ್ಬಿಣ ಯುಗದ ಆವಿಷ್ಕಾರದಿಂದಾಗಿ ಕೃಷಿ ವಿಸ್ತರಣೆಗೆ ಒಳಪಟ್ಟಿತು. ನವಶಿಲಾಯುಗದಲ್ಲಿ ವ್ಯವಸಾಯವು ದಟ್ಟವಾದ ಕಾಡಿಲ್ಲದ ಕೆಲವು ಪ್ರದೇಶಗಳಲ್ಲಿ ಸೀಮಿತವಾಗಿತ್ತು. ಮೆಸಪಟೋಮಿಯಾ, ಇರಾಕ್, ಈಜಿಪ್ಟ್, ಸಿಂಧೂ ಬಯಲು, ಇರಾನಿನ ಪ್ರಸ್ಥಭೂಮಿ, ಪ್ಯಾಲೆಸ್ತೇನ್ ಫಲವತ್ತಾದ ಮೆಕ್ಕಲು ಮಣ್ಣಿದ್ದ ಡ್ಯಾನ್ಯೂಬ್ ಕಣಿವೆ ಹಾಗೂ ಚೀನಾದ ಕೆಲವು ಭಾಗಗಳಲ್ಲಿ ಕೃಷಿಯು ಸೀಮಿತವಾಗಿರುದನ್ನು ಕಾಣಬಹುದಿತ್ತು.[೫೪] ಕಬ್ಬಿಣವು ಕಂಚಿನಷ್ಟು ಗಟ್ಟಿಯಾದ ಲೋಹವಲ್ಲದಿದ್ದರೂ ಕಾಡನ್ನು ಕಡಿಯಲು, ಗಟ್ಟಿಯಾದ ಭೂಮಿಯನ್ನು ಉಳುಮೆ ಮಾಡಲು ಸಹಕಾರಿಯಾಯಿತು. ಜನಸಾಮಾನ್ಯರಿಗೆ ದಕ್ಕಿದ ಪ್ರಥಮ ಲೋಹ ಕಬ್ಬಿಣವಾಗಿದೆ. ನಗರಗಳನ್ನು ಕಟ್ಟಿದ ರೈತರು ಕ್ರಿ.ಪೂ. ೮೦೦೦ ದಿಂದ ೭೦೦೦ದಲ್ಲಿ ಟರ್ಕಿಯ ಕಾಟಲ್‌ಹುಯಕ್ ಮತ್ತು ಪ್ಯಾಲೆಸ್ತೇನಿನ ಜೆರಿಕೋ ಪ್ರದೇಶದಲ್ಲಿದ್ದರು. ಆಹಾರದ ಉತ್ಪಾದನೆಯಲ್ಲಿ ಇವರು ಬಳಸುತ್ತಿದ್ದ ತಂತ್ರಜ್ಞಾನವನ್ನು ವ್ಯಾಪಕವಾಗಿ ನೆರೆಯವರು ಬಳಸಲು ಸಾಧ್ಯವಿರಲಿಲ್ಲ. ಕಾರಣ ಕಬ್ಬಿಣವು ಹೇರಳವಾಗಿ ದೊರೆಯುವವರೆಗೆ ಅಂದರೆ ಕ್ರಿ.ಪೂ. ಎರಡನೇ ಮಿಲೇನಿಯಮ್ಮಿನ ಕೊನೆಯವರೆಗೂ, ಕೃಷಿಯು ಆಹಾರ ಸಂಗ್ರಹಣೆ ಮತ್ತು ಪಶುಸಂಗೋಪನೆಯಲ್ಲಿ ಒಂದು ಪೂರಕ ಚಟುವಟಿಕೆಯಾಗಿತ್ತು. ಕಬ್ಬಿಣದ ಉತ್ಪಾದನಾ ಪ್ರಕ್ರಿಯೆ ಇಂದಿನ ಟರ್ಕಿಯಲ್ಲಿರುವ ಹಿಟ್ಟೈಟರ ಏಕಸಾಮ್ಯವಾಗಿತ್ತು.[೫೫] ಇವರು ಕಬ್ಬಿಣದ ಉತ್ಪಾದನೆಯ ವಿಧಾನದ ರಹಸ್ಯವನ್ನು ತುಂಬಾ ಜಾಗೃತವಾಗಿ ಕಾಪಾಡಿಕೊಂಡಿರುವ ಸಾಧ್ಯತೆಗಳಿವೆ. ಕ್ರಿ.ಪೂ ೧೩೫೦ರಲ್ಲಿಯೂ ಕಬ್ಬಿಣವು ತುಂಬಾ ಅಪರೂಪವಾಗಿತ್ತು. ಈಜಿಪ್ಟ್‌ನ ಫ್ಯಾರೋ, ಟುಟುಂಖಾಯನ್ನನನ್ನು ಬಂಗಾರದ ಶವದ

ಪೆಟ್ಟಿಗೆಯಲ್ಲಿಟ್ಟು, ಸಮಾಧಿಯಲ್ಲಿ ತಾಮ್ರ, ಬಂಗಾರ ಕಂಚು, ದಂತ, ಮತ್ತು ಬೆಲೆಬಾಳುವ ವಸ್ತುಗಳನ್ನಿಟ್ಟು ಕುತ್ತಿಗೆಗೆ ಒಂದೇ ಒಂದು ಕಬ್ಬಿಣದ ತಾಯತವನ್ನು ಹಾಕಿದ್ದರು.[೫೬] ಕಬ್ಬಿಣವು ದೊರೆತ ತಕ್ಷಣ ಅದು ಹೇರಳವಾಗಿದೆ ಎಂದಲ್ಲ. ಇಂದಿನಂತೆ ಕಬ್ಬಿಣದ ಉತ್ಪಾದನೆಯು ಅಷ್ಟು ಸುಲಭದಾಯಕವಾಗಿರಲಿಲ್ಲ. ಇಂದಿನ ಬಂಗಾರದಂತೆ ಅಂದಿನ ಕಬ್ಬಿಣ ಬೆಲೆಯುಳ್ಳದ್ದಾಗಿತ್ತು. ಅದರ ಉತ್ಪಾದನೆ ಶ್ರಮದಾಯಕವಾಗಿತ್ತು. ಇದರ ಸಹಾಯದಿಂದ ಕಾಡನ್ನು ಕಡಿಯಲು, ಸಾಗುವಳಿ ಮಾಡಲು ಸಹಾಯವಾಯಿತು. ಪಂಜಾಬ್ ಕೆಳಗಿನ ಸಿಂಧ್, ರಾಜಸ್ಥಾನ್‌ಗಳು ಮರುಳುಗಾಡಾದರೂ ಅಲ್ಲಿನ ಮಣ್ಣು ಫಲವತ್ತಾಗಿ ಕಡಿಮೆ ಮಳೆಗೆ ಬೆಳೆಯಾಗುತ್ತಿತ್ತು. ಗಂಗಾನದಿ ಬಯಲು ಮೆಕ್ಕಲು ಮಣ್ಣಿನಿಂದ ಕೂಡಿದ್ದರೂ ದಟ್ಟವಾದ ಅರಣ್ಯ ಮತ್ತು ಜೌಗುಪ್ರದೇಶದಿಂದ ಕೂಡಿತ್ತು. ಪಶ್ಚಿಮ ಕರಾವಳಿಯ ಘಟ್ಟ ಪ್ರದೇಶ, ಅಸ್ಸಾಮಿನ ಬೆಟ್ಟಗಳು ವ್ಯಾಪಕ ಕಾಡಿನಿಂದ ಆವೃತ್ತವಾಗಿದ್ದವು. ಈ ಪ್ರದೇಶದಲ್ಲಿ ಕಾಡು ಕಡಿದು ಕೃಷಿ ಮಾಡಲಾಯಿತು. ಇಂದು ಸಂಪೂರ್ಣ ಕಾಡು ನಾಶವಾಗಿದೆ. ಇಲ್ಲಿ ವರ್ಷಕ್ಕೆ ಮೂರು ಬೆಳೆಗಳನ್ನು ಬೆಳೆಯಲಾಗುತ್ತಿದೆ.

'ಪ್ರೊ. ಗಾರ್ಡನ್ ಚೈಲ್ಡ್ ಕ್ರಿ.ಪೂ. ೬೦೦೦ದಿಂದೀಚೆಗೆ ಮನುಷ್ಯ ತನ್ನ ಪರಿಸರದ ವಿರುದ್ಧ ಆಕ್ರಮಣಕಾರಿ ಪ್ರವೃತ್ತಿಯನ್ನು ಬೆಳೆಸಿಕೊಂಡನು ಎನ್ನುತ್ತಾರೆ.[೫೭] ಕೃಷಿ ವಿಸ್ತರಣೆ ಹೊಂದಿದಂತೆ ಉಪಯೋಗದೊಂದಿಗೆ ಕಾಡಿನ ನಾಶದಂತಹ ಪ್ರವೃತ್ತಿ ಆರಂಭವಾಯಿತು. ನದಿ ಬಯಲುಗಳ ಫಲವತ್ತಾದ ಭೂಮಿಯ ಉಳುಮೆಯಿಂದಲೂ ಕೃಷಿ ಭೂಮಿಯ ವಿಸ್ತರಣೆಯಾಯಿತು. ನದಿಗಳ ಸಂಚಯನದಿಂದ ಫಲವತ್ತಾದ ಮಣ್ಣು. ಸಮಪ್ರದೇಶದ ಎತ್ತರಕ್ಕೆ ಇದ್ದು ಸಮೃದ್ಧ ಮೇಲು ಪದರದ ಆಳದಲ್ಲಿ ಕೂಡಿರುತ್ತದೆ. ಇಂತಹ ಫಲವತ್ತಾದ ಮಣ್ಣಿನಲ್ಲಿ ವ್ಯವಸಾಯ ಮಾಡಲಾಯಿತು. ಕೆಲವು ಭಾಗಗಳಲ್ಲಿ ಭೂಮಿಯು ಮೃದುವಾಗಿದ್ದು, ಈ ಪ್ರದೇಶದಲ್ಲಿ ಮರದ ನೇಗಿಲನ್ನು ಬಳಸಲಾಗುತ್ತದೆ. ಉಳುಮೆ ಮತ್ತು ಬೆಳೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ಕಂಡುಬರುತ್ತವೆ. ವಾಯುವ್ಯದಲ್ಲಿ ಮಳೆಯಾಧರಿಸಿದ ಗೋಧಿ, ಬಾರ್ಲಿ ಬೆಳೆ ಬೆಳೆಯಲಾಗುತ್ತದೆ. ಗಂಗಾ ಬಯಲು ಮತ್ತು ಕರಾವಳಿಯಲ್ಲಿ ಭತ್ತದ ಬೇಸಾಯ ಕಂಡುಬರುತ್ತದೆ.

ಬೇಸಾಯದಲ್ಲಿ ಸ್ಥಾನಾಂತರ ಬೇಸಾಯ ಅಥವಾ ಸೀಳು ಬೇಸಾಯ, ಸುಡು ಅಥವಾ ಜುಮಿಂಗ್ ಬೇಸಾಯ ಪೈರಿನ ಕಳೆಕೀಳುವ ಬೇಸಾಯ ಎಂದು ನೇಗಿಲು ಬಳಕೆ ಮಾಡುವವರೆಗೂ ಹಲವು ವಿಧಗಳು ಕಂಡುಬರುತ್ತವೆ. ಸೀಮಿತವಾದ ಪ್ರದೇಶದಲ್ಲಿ ಕಾಡನ್ನು ಸುಟ್ಟು, ಕಡಿಯುವ ಮೂಲಕ ಸಾಗುವಳಿಗೆ ಒಳಪಡಿಸುವ ವಿಧಾನ ಜೂಮಿಂಗ್ ವಿಧಾನವಾಗಿದೆ. ಸ್ಥಾನಾಂತರ ಬೇಸಾಯವು ಒಂದು ಕಾಡನ್ನು ಕಡಿದು ಹಸನುಮಾಡಿ ಉಳುಮೆ ಮಾಡುವುದು. ನಂತರ ಅದು ಬೆಳೆಯದ ಸಂದರ್ಭದಲ್ಲಿ ಬೇರೆ ಕಾಡು ಕಡಿದು ಭೂಮಿಯನ್ನು ಹದಗೊಳಿಸಿ ಬಿತ್ತನೆ ಮಾಡುವುದು. ಇದು ತಾತ್ಕಾಲಿಕ ಬೇಸಾಯವಾಗಿದೆ. ಇಂದಿಗೂ ಇದು ಕುಂಮ್ರಿ ಬೇಸಾಯವಾಗಿ ಕಂಡುಬರುತ್ತದೆ. ಪೈರಿನ ಕಳೆ ಕೀಳುವ ಬೇಸಾಯವು ಹೆಸರೇ ಸೂಚಿಸುವಂತೆ ಪೈರಿನಲ್ಲಿ ಬೆಳೆಯುವ ಅನ್ಯ ಜಾತಿಯ ಹುಲ್ಲು ಇತ್ಯಾದಿಯನ್ನು ಕೀಳುವ ಬೇಸಾಯವಾಗಿದೆ. ಶಾಶ್ವತವಾದ ಭೂ ಬೇಸಾಯಕ್ಕೆ ಇಂದಿಗೂ ಕಾಡನ್ನು ಕಡಿದು ಉಳುಮೆ ಮಾಡುವ ಪ್ರಕ್ರಿಯೆ ಬೆಳೆಯುತ್ತಲೇ ಇದೆ. ಕೃಷಿ ಭೂಮಿಯ ವಿಸ್ತರಣೆಯು ಆಹಾರ ಉತ್ಪಾದನೆಯ ಅಗತ್ಯಕ್ಕೆ ಅನುಗುಣವಾಗಿ ವಿಸ್ತರಿಸುತ್ತ ಬೆಳೆದುಬಂದಿದೆ. ಕೃಷಿ ವಿಸ್ತರಣೆಯಾದಂತೆ ಬೇಟೆಗಾರ, ಸಂಗ್ರಹಕರು, ಹಾಗೂ ಸ್ಥಾನಾಂತರ ಬೇಸಾಯಗಾರರು ಒಂದೆಡೆ ನೆಲೆನಿಲ್ಲುವಂತಾಯಿತು. ಆಗ ಬೇಟೆಯ ಮೇಲಿನ ಅವಲಂಬನೆ ಕ್ಷೀಣಿಸತೊಡಗಿತು. ಇದರಿಂದ ವಲಸೆ ಹೋಗದ ಸಮಾಜಕ್ಕೆ ಕೃಷಿ ಅನಿವಾರ್ಯವಾಯಿತು. ಗಂಡಸರು ಕೃಷಿಯನ್ನು ನಿರ್ವಹಿಸಲು ಆರಂಭಿಸಿದ್ದು, ಕೃಷಿಯಲ್ಲಿ ನೇಗಿಲನ್ನು ಬಳಸಿದುದು ಕೃಷಿಯನ್ನು ವಿಸ್ತರಿಸಲು ಸಹಾಯಕವಾಯಿತು.

'ತಾಮ್ರ ಯುಗದ ಸಂಸ್ಕೃತಿಯು ಇಲ್ಲಿಯೇ ಇದ್ದ ಮತ್ತು ಆಗಮಿಸಿದ್ದ ಕೃಷಿಕರು ಮತ್ತು ದನಗಾಯಿಗಳನ್ನು ಸಮ್ಮಿಳಿತಗೊಳಿಸಿರಬಹುದು.[೫೮] ಕೃಷಿಯನ್ನು ವಿಸ್ತರಿಸಲು ಭೂಮಿಯನ್ನು ತೆರವು ಮಾಡಬೇಕಿತ್ತು. ಈ ಹಂತದಲ್ಲಿ ಬೆಂಕಿಯ ಪಾತ್ರ ಪ್ರಮುಖವಾಯಿತು. ಕಾಡನ್ನು ಸುಟ್ಟು, ಕಡಿದು, ಅರಣ್ಯವನ್ನು ತೆರವುಗೊಳಿಸಲಾಯಿತು. ಕಾಡು ಕಡಿಯಲು ಕಬ್ಬಿಣದ ಕೊಡಲಿಯನ್ನು ಬಳಸಲಾಯಿತು. ಇದರಿಂದ ಕೃಷಿ ಭೂಮಿಯ ವಿಸ್ತಾರತೆ ಹೆಚ್ಚಿತು. ಕೃಷಿ ವಿಸ್ತರಣೆಯ ಕಾರ್ಯದಲ್ಲಿ ನೆರವಾದ ನೇಗಿಲನ್ನು ಲಂಗಾಳ ಎಂಬ ಆರ್ಯೇತರ ಮುಂಡಾ ಭಾಷೆಯ ಪದದಿಂದ ಕರೆಯಲಾಗುತ್ತದೆ.[೫೯] ನೇಗಿಲು ಹರಪ್ಪ ಪೂರ್ವದ ಅವಧಿಗೆ ಸೇರಿದ್ದು, 'ನೆಲವನ್ನು ಉಳುಮೆಮಾಡಲು ಆರರಿಂದ ಎಂಟು ಎತ್ತುಗಳಿಂದ ಎಳೆಯಲ್ಪಡುವ ನೇಗಿಲನ್ನು ಬಳಸಲಾಗುತ್ತಿತ್ತು.[೬೦] ಇದು ಕೃಷಿಯ ವಿಸ್ತರಣೆಯನ್ನು ಸೂಚಿಸುವುದಲ್ಲದೆ, ನೇಗಿಲಿನ ಸಾಮರ್ಥ್ಯವನ್ನು ತಿಳಿಸುತ್ತದೆ. "ನೇಗಿಲು ಕತ್ತಿಯ ಮೊನೆಯಂತೆ ಉಳಲಿ, ಹಸುಗಳು, ಕುರಿಗಳು ಹಿಂಬಾಲಿಸಿದಂತೆ ಮುನ್ನಡೆಯುವ ಕಥವನ್ನು ಹಿಂಬಾಲಿಸಲಿ. ಇಂದ್ರನು ಪಾತ್ರವನ್ನು ಹಿಡಿಯಲಿ; ಪುಷನು ಅದನ್ನು ರಕ್ಷಿಸಲಿ; ಬೇಸಿಗೆಯಲ್ಲಿಯು ಹಾಲಿನ ಹೊಳೆ ಹರಿಯಲಿ ಯಶಸ್ವಿಯಾದ ರೀತಿಯಲ್ಲಿ ಉತ್ತಮ ನೇಗಿಲ ಮೊನೆಗಳು ಭೂಮಿಯನ್ನು ಉಳಲಿ, ಯಶಸ್ವಿಯಾದ ರೀತಿಯ ನೇಗಿಲ ಯೋಗಿಗಳು ಪ್ರಾಣಿಗಳನ್ನು ಅನುಸರಿಸಲಿ; ಷನಶಿರ ಮರೆಯಾಗದ ರೀತಿಯಲ್ಲಿ ನೀವಿಬ್ಬರು ಮಾನವನಿಗಾಗಿ ಫಲವತ್ತಾದ ಗಿಡ ಮರಗಳನ್ನು ನೀಡಿರಿ,"[೬೧] ಎಂದು ಅಥರ್ವಣ ವೇದ ಹೇಳುತ್ತದೆ. ಗೋಧಿಯಿಂದ ನಿಧಾನವಾಗಿ ಭತ್ತದ ಬೇಸಾಯ ಆರಂಭವಾಯಿತು. ಕೃಷಿಯಿಂದಾಗಿ ರೂಪಗೊಂಡ ನಗರದ ಜನರಿಗೆ ಕೃಷಿಯು ಆಹಾರವನ್ನು ಒದಗಿಸಬೇಕಾಯಿತು. ಇದು ಕೃಷಿ ಉತ್ಪಾದನೆಯ ಹೆಚ್ಚಳಕ್ಕೆ ದಾರಿಯಾಯಿತು. ಇದು ಕ್ರಮೇಣವಾಗಿ ಆರ್ಥಿಕ ವೈವಿಧ್ಯತೆಯ ತಳಪಾಯಕ್ಕೆ ಚಾಲನೆ ನೀಡಿತು. ಭತ್ತದ ಬೇಸಾಯವು ವರ್ಷಕ್ಕೆ ೩ ಬೆಳೆ ನೀಡುವುದರ ಜೊತೆಗೆ ಅಧಿಕ ಬೆಳೆ ನೀಡುತ್ತಿತ್ತು. ಈ ಪ್ರಕ್ರಿಯೇ ಕೃಷಿ ವಿಸ್ತರಣೆಗೆ ಅನುವುಮಾಡಿಕೊಟ್ಟಿತು. ವೈದಿಕ ಪಠ್ಯಗಳಲ್ಲಿ ಗಂಗಾ ಬಯಲಿನ ನಡುವೆ ಜವುಗು ಭೂಮಿಯನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ ಜಲಾವರಣ ನಾಲೆಗಳ ಮೂಲಕ ನೀರು ಹರಿಸಲಾಗುತ್ತಿತ್ತು ಎನ್ನಲಾಗಿದೆ. 'ಉತ್ತರ ಭಾರತದ ಕಂದಾಯ ಉತ್ಪಾದಿಸುವ ಅರ್ಥ ವ್ಯವಸ್ಥೆಯು ಕೃಷಿ ಆಧಾರಿತವಾದದ್ದು ಹೆಚ್ಚು ಪ್ರವೇಶವನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿತು.[೬೨] ಗಂಗಾ ನದಿ ದಂಡೆಯ ಪ್ರದೇಶದಲ್ಲಿ ಆರ್ಯ ಬುಡಕಟ್ಟುಗಳು ಬಂದು ನೆಲೆಸಿದವು. ಇದರಿಂದ ಅರಣ್ಯವನ್ನು ತೆರವು ಮಾಡಬೇಕಾಯಿತು. ಅವರಿಗೆ ವಾಸಿಸುವ ಸ್ಥಳಗಳಿಗಾಗಿಯಾದರು ಮಾಡಬೇಕಿತ್ತು, ಜೊತೆಗೆ ಈ ಪ್ರದೇಶ ಅರಣ್ಯದಿಂದ ಆವೃತವಾಗಿತ್ತು. ಶತಪತ ಬ್ರಾಹ್ಮಣವು ಬಯಲಿನಲ್ಲಿ ಅರಣ್ಯವಿದ್ದು, ಅರಣ್ಯವನ್ನು ಬೆಂಕಿಯಿಂದ ದಹಿಸುತ್ತಿದ್ದರು ಎಂದು ತಿಳಿಸುತ್ತದೆ. ಋಗ್ವೇದದ 'ಒಂದು ಸೂತ್ರವು ಮಂತ್ರದಿಂದ ಅಗ್ನಿಯು ತನ್ನ ಜ್ವಾಲೆಯನ್ನು ಹೊರಹಾಕಿ ಸರಸ್ವತಿ ಮತ್ತು ಸದಾನಿರಾ ನದಿಗಳ ಮಧ್ಯೆ ಇದ್ದ ಭೂಮಿಯನ್ನು ಸುಡುತ್ತಿದ್ದನು ಎಂದಿದೆ.[೬೩] ನದಿಯ ಪೂರ್ವ ದಿಕ್ಕಿನಲ್ಲಿ ಭೂಮಿಯ ತೀರಾ ಜೌಗು ಮತ್ತು ವ್ಯವಸಾಯದ ಭೂಮಿಯಾಗಿತ್ತು. ಆದ್ದರಿಂದ ಪೂರ್ವದ ಕಡೆಗೆ ಹೋಗುವ ಬ್ರಾಹ್ಮಣರು ಅಗ್ನಿದೇವನನ್ನು ಪ್ರಾರ್ಥಿಸಿ, ಆ ಭಾಗದ ಭೂಮಿಯನ್ನು ಸುಡುವಂತೆ ಪ್ರಾರ್ಥಿಸುತ್ತಿದ್ದರು. ಇದರಿಂದ ಸಾಗುವಳಿಯನ್ನು ಮಾಡುತ್ತಿದ್ದರು. ಕಾಡನ್ನು ಸುಡುವ ಮೂಲಕ ರೈತರು ಅಗ್ನಿಯನ್ನು ಹಿಂಬಾಲಿಸುತ್ತಾ ವ್ಯವಸಾಯ ಆರಂಭಿಸಿದ್ದರು. ವ್ಯವಸಾಯ ಭೂಮಿಯನ್ನು ಹುಡುಕುತ್ತಾ ಉತ್ತರದ ಬಯಲುಗಳಿಗೆ ಹೋಗುವ ಪೂರ್ವದ ಕಡೆಯ ಚಲನೆಗೆ ನೀರಿನ ಕೊರತೆಯು ಕಾರಣವಾಗಿರುವ ಸಾಧ್ಯತೆಗಳಿವೆ. ಇವರು ಯಮುನಾ ನದಿಯನ್ನು ದಾಟಿ ಗಂಗಾ ಬಯಲಿನ ಕಡೆಗೆ ವಲಸೆ ಬಂದರು.

ಋಗ್ವೇದದ ಆರ್ಯರ ವೇಳೆಗೆ ಕೃಷಿಯು ಸಾಕಷ್ಟು ಅಭಿವೃದ್ಧಿ ಸಾಧಿಸಿತ್ತು. ಈ ಅವಧಿಯಲ್ಲಿ ಮರದ ನೇಗಿಲನ್ನು ಉಳುಮೆಗೆ ಬಳಸುವ ಮೂಲಕ ಭೂಮಿ ವಿಸ್ತರಣೆಯಾಯಿತು. ಇಂದಿನ ಕೃಷಿ ವಿಧಾನದಂತೆ ಬಿತ್ತನೆ, ಕೊಯ್ಲು, ಧಾನ್ಯಗಳ ಬೇರ್ಪಡಿಸುವಿಕೆ, ಧಾನ್ಯ ಶುದ್ಧೀಕರಣ, ಸಂಗ್ರಹಣೆಗಳು ರೂಢಿಯಲ್ಲಿದ್ದವು. ಆದರೆ ನೀರಾವರಿಯ ಬಗೆಗೆ ಅವರಿಗೆ ಪರಿಚಯವಿರುವ ಸಾಧ್ಯತೆಗಳಿವೆ. ಆದರೆ ನೀರನ್ನು ಬಳಸಿ ಯಾವ ಬೆಳೆ ಬೆಳೆಯುತ್ತಿದ್ದರೆಂದು ತಿಳಿದುಬಂದಿಲ್ಲ. ಬತ್ತದ ಬೆಳೆ ರೂಢಿಯಲ್ಲಿರುವುದು ತಿಳಿದಿಲ್ಲ. ಆದರೆ 'ಯವ'[೬೪] ಎನ್ನುವ 'ಬಾರ್ಲಿಯಂತಹ ಬೆಳೆಯನ್ನು ಬೆಳೆಯುತ್ತಿದ್ದರು ಎನ್ನಲಾಗಿದೆ. ಹಸುವನ್ನು ಪವಿತ್ರವೆಂದು ಕರೆಯುತ್ತಿದ್ದರು. ಹಸುವು ಫಲವಂತಿಕೆಯ ಸಂಕೇತ. ವ್ಯವಸಾಯಕ್ಕೆ ಅಗತ್ಯವಾಗಿ ಬೇಕಾಗುವ ಎತ್ತುಗಳಿಗೆ ಹಾಗೂ ಹೈನುಗಾರಿಕೆಗೆ ಬಳಸಿರುವ ಸಾಧ್ಯತೆಗಳಿವೆ. ಎತ್ತುಗಳು ಕೃಷಿ ಮತ್ತು ಸಾಗಾಣಿಯ ಪ್ರಮುಖ ಸಾಧನಗಳಾಗಿದ್ದವು.

ನಂತರದ ವೇದಗಳ ಕಾಲದಲ್ಲಿ ಭೂಮಿಯನ್ನು ಉಳುಮೆ ಮಾಡಲು ನೇಗಿಲನ್ನು ಬಳಸುತ್ತಿದ್ದರು. ಆದರೆ ಈ ನೇಗಿಲನ್ನು ಎಳೆಯಲು ಆರು, ಎಂಟು, ಹನ್ನೆರಡು, ಇಪ್ಪತ್ತನಾಲ್ಕು ಎತ್ತುಗಳನ್ನು ಬಳಸುತ್ತಿದ್ದರು ಎಂಬುದು ಅಥರ್ವಣವೇದ, ವಾಜನೇಯಿ, ಮೈತ್ರಾಯಣಿ, ತೈತ್ತರೀಯ ಮತ್ತು ಕಾಠಕ ಸಂಹಿತೆ ತೈತ್ತರೀಯ ಮತ್ತು ಶತಪತ ಬ್ರಾಹ್ಮಣಗಳಿಂದ ತಿಳಿದುಬರುತ್ತದೆ.[೬೫] ವ್ಯವಸಾಯ ಮಾಡಲು ಕಬ್ಬಿಣದ ಬೃಹತ್ ಗಾತ್ರದ ನೇಗಿಲಿನ ಸಹಾಯದಿಂದ ಉಳುಮೆ ಮಾಡಿರುವ ಸಾಧ್ಯತೆಗಳಿವೆ. ಎತ್ತುಗಳ ಮೇಲೆ ಇಂದಿನಂತೆಯೇ ನೊಗವನ್ನು ಹೇರಿ ಎರಡು ಪಕ್ಕದಲ್ಲಿಯೂ ಎಳೆ ಹಗ್ಗ ಕಟ್ಟಿ ತಯಾರು ಮಾಡುತ್ತಿದ್ದರು. ಎತ್ತುಗಳನ್ನು ಮೊನಚು ಕೋಲುಗಳಿಂದ ತಿವಿಯುತ್ತಿದ್ದರು. ನೇಗಿಲ ಮೂಲಕ ಸಾಲು ಹೊಡೆಯುತ್ತಿದ್ದರು. ಭಾರವಾದ ನೇಗಿಲನ್ನು ಎಳೆಯಲು ಎತ್ತುಗಳಿಗೆ ಎಷ್ಟು ಗಾತ್ರದ, ಉದ್ದನೆಯ ನೊಗವನ್ನು ತಯಾರಿಸುತ್ತಿದ್ದರು ಎಂಬುದು ತಿಳಿಯದು. ಕಾರಣ ಭಾರವಾದ ನೇಗಿಲಿನ ಹಿಡಿ ನಯವಾಗಿದ್ದು, ನೇಗಿಲ ತುದಿ ಮೊನಚಾಗಿದ್ದಿತು. ಉಳುವವನಿಗೆ 'ಕೀನಾಶ'[೬೬] ಎಂದು ಕರೆಯುತ್ತಿದ್ದರು. 'ಭೂಮಿಯನ್ನು ಉಳುವ ಬಗೆಗೆ ಪರಿಚಯಿಸಿದ ಕೀರ್ತಿ ಅಥರ್ವಣ ವೇದದ ಪೃಥೀವೈನ್ಯ ಎಂಬುವವನಿಗೆ ಸಲ್ಲುತ್ತದೆ. ವೈದಿಕ ಧರ್ಮದ ವ್ಯಾಪ್ತಿಯಿಂದ ಹೊರಗುಳಿದಿದ್ದ ವ್ರಾತ್ಯರು ಭೂಮಿಯನ್ನು ಉಳುತ್ತಿರಲಿಲ್ಲ ಎಂದು ವರ್ಣಿಸಲಾಗಿತ್ತು.[೬೭] ಕೊಯ್ಲಿಗೆ ಇಂದಿನಂತೆ ಕುಡುಗೋಲು ಬಳಸುತ್ತಿದ್ದರು. ಬಿತ್ತುವ, ಬೆಳೆಯುವ ಎಲ್ಲಾ ಕಾರ್ಯಗಳು ಅಭಿವೃದ್ಧಿ ಹೊಂದಿದ್ದವು. 'ಯವ' ಬೆಳೆಯನ್ನು ಚಳಿಗಾಲದಲ್ಲಿ ಬಿತ್ತಿ ಬೇಸಿಗೆಯಲ್ಲಿ ಕೊಯ್ಲು ಮಾಡುತ್ತಿದ್ದರು. ಇಂದಿಗೂ ಗೋಧಿಯನ್ನು ಚಳಿಗಾಲದಲ್ಲಿ ಬಿತ್ತಿ ಬೇಸಿಗೆಯಲ್ಲಿ ಕೊಯ್ಯಲಾಗುತ್ತದೆ. ಭತ್ತದ ಕೃಷಿಯಲ್ಲಿ ಇಂದಿನಂತೆ ಮಳೆಗಾಲದಲ್ಲಿ ಬಿತ್ತಿ ಚಳಿಗಾಲ(ಶರತ್ಕಾಲ)ದಲ್ಲಿ ಕಟಾವು ಮಾಡುತ್ತಿದ್ದರು. 'ಧಾನ್ಯದ ಬಿತ್ತನೆಯಲ್ಲಿ, ಸಂಗ್ರಹಣೆಯಲ್ಲಿ ಕೀಟಬಾಧೆ ಬರುತ್ತಿತ್ತು. ಅದನ್ನು ನಿವಾರಿಸಲು ಮಾಟ ಮಂತ್ರದಂತಹ ಚಟುವಟಿಕೆಗಳು ರೂಢಿಯಲ್ಲಿದ್ದವು.[೬೮] ಇಂದಿನಂತೆ ಅತಿವೃಷ್ಟಿಗಳು, ಅನಾವೃಷ್ಟಿಗಳು ಕೃಷಿ ಚಟುವಟಿಕೆಯಲ್ಲಿ ಜರುಗುತ್ತಿದ್ದವು. ಈ ಹಾನಿಯನ್ನು ನಿವಾರಿಸಲು ಪರ್ಯಾಯ ವ್ಯವಸ್ಥೆ ಇದ್ದಂತೆ ಕಂಡುಬರುವುದಿಲ್ಲ. ಹಾಗೆಯೇ ಗೋವುಗಳನ್ನು ಸಾಕುವುದು, ಗೋಮಾಳ ರಕ್ಷಣೆ, ಕೊಟ್ಟಿಗೆ ವ್ಯವಸ್ಥೆಗಳಿವೆ. ಇದು ಕೃಷಿಯೊಂದಿಗೆ ಪಶುಪಾಲನೆಯನ್ನು ತಿಳಿಸುತ್ತದೆ.

ಉಪನಿಷತ್ತು ಮತ್ತು ಸೂತ್ರಗಳ ಕಾಲದಲ್ಲಿ ಜನರ ಪ್ರಮುಖ ವೃತ್ತಿ ಕೃಷಿಯಾಗಿತ್ತು. ಇದು ಹಳ್ಳಿಗಳಲ್ಲಿಯೇ ರೂಢಿಯಲ್ಲಿತ್ತು. ಗ್ರಾಮೀಣ ಜೀವನ, ಕೃಷಿಕನ ಜೀವನದ ಬಗೆಗೆ ಹೇಳಲಾಗಿದೆ. ನೇಗಿಲಿಗೆ ಎತ್ತು ಕಟ್ಟುವುದು ಬೆಳೆದು ಬಂದಿತ್ತು. ನೇಗಿಲ ಗೆರೆಯನ್ನು 'ಸೀತಾ' ಎಂದು ಕರೆಯುತ್ತಿದ್ದರು. ಕೃಷಿಯಲ್ಲಿ ಧಾರ್ಮಿಕ ಆಚರಣೆಗಳು ನಂಬಿಕೆಗಳು ಬೆಳೆದು ಬಂದವು. ಇದರಲ್ಲಿ 'ಕ್ಷೇತ್ರಪತಿ ಅಥವಾ ಹೊಲದ ಪ್ರಭುವಿಗೆ ನೈವೇದ್ಯವನ್ನು ಅರ್ಪಿಸಲಾಗುತ್ತಿತ್ತು.[೬೯] ಆಗ್ರಾಯಣ ಯಜ್ಞವು

ಸುಗ್ಗಿಯ ಮೊದಲ ಫಲವನ್ನು ಹಂಚಿಕೊಳ್ಳುವ ಧಾರ್ಮಿಕ ಉತ್ಸವದ ಆಚರಣೆಯಾಗಿತ್ತು.’[೭೦] ಕೊಯ್ಯುವ ಧಾನ್ಯಗಳನ್ನು ಕಣಜದಲ್ಲಿ ತುಂಬುವ ವೇಳೆಯಲ್ಲಿಯೂ ಧಾರ್ಮಿಕ ಆಚರಣೆಗಳು ರೂಢಿಗೆ ಬಂದವು. ಅಕ್ಕಿ, ಜವೆ ಗೋಧಿಗಳನ್ನು ಬೆಳೆಯುತ್ತಿದ್ದರು. ಸ್ನಾತಕನು ಉಳುಮೆ ಮಾಡದೆ ಬೆಳೆದ ಬೆಳೆಗಳನ್ನು ಆಯ್ದು ತಿನ್ನಬೇಕು ಎಂಬ ನಿರ್ದೇಶನವಿತ್ತು.[೭೧] ಇದರಿಂದ ಕೃಷಿಗೊಳಪಡದ ವಿಶಾಲವಾದ ಅರಣ್ಯ ಭೂಮಿಯು ಹತ್ತಿರವಿದ್ದಿರುವ ಸಾಧ್ಯತೆಗಳಿವೆ. ಆ ಭಾಗದಲ್ಲಿ ಕಾಡು ಬೆಳೆಗಳು, ಗೆಡ್ಡೆಗೆಣಸುಗಳು ಬೆಳೆದಿದ್ದು, ಅವುಗಳು ಆಹಾರದ ಭಾಗವಾಗಿದ್ದವೆಂದು ತಿಳಿದುಬರುತ್ತದೆ. ‘ಪ್ರಸ್ಥಪೂರ್ವ ಬೀಜಗಳನ್ನು ಪ್ರಾಸ್ಥಿಕ ಶಬ್ದದಿಂದ ಪಾಣಿನಿಯ ಅಷ್ಟಾಧ್ಯಾಯ ಕೃತಿಯಲ್ಲಿ ವಿವರಿಸಲಾಗಿದೆ.’[೭೨] ಬೀಜಗಳ ಪ್ರಮಾಣದ ಮೂಲಕ ಬಿತ್ತನೆ ಭೂಮಿಯನ್ನು ಅಳತೆ ಮಾಡಲಾಗುತ್ತಿತ್ತು. ಇಂದಿಗೂ ಎಕರೆ ಭೂಮಿಗೆ ಇಂತಿಷ್ಟು ಬೀಜದ ಬಿತ್ತನೆ ಕ್ರಮಗಳು ರೂಢಿಯಲ್ಲಿವೆ. ಪಶುಸಂಗೋಪನೆಯು ಈ ವೇಳೆಗೆ ಸಂಪದ್ಭರಿತವಾಗಿತ್ತು. ಗೋವುಗಳು ಈ ವೇಳೆಗೆ ಆಸ್ತಿಗಳಾಗಿದ್ದವು, ಇದು ಸಂಪತ್ತಿನ ಪ್ರತಿಷ್ಠೆಯ ದ್ಯೂತಕವಾಗಿತ್ತು. ಪಶುಸಂಗೋಪನೆಯು ಕೃಷಿಗೆ ಪೂರಕವಾದುದು ಎರಡು ಕಾರಣಗಳಿಗೆ. ಒಂದು ಪಶುಗಳ ಸಗಣಿ ಹೊಲಗಳಿಗೆ ಗೊಬ್ಬರ ಒದಗಿಸುತ್ತಿತ್ತು, ಮತ್ತೊಂದು ಫಲವಂತಿಕೆಯ ದೃಷ್ಟಿಯಿಂದ, ಅಂದರೆ ವ್ಯವಸಾಯದ ಉಳುಮೆಗೆ ಎತ್ತುಗಳನ್ನು ಒದಗಿಸುವ ಸಲುವಾಗಿ ನೆರವಾಗುತ್ತಿತ್ತು. ಈ ವೇಳೆಗೆ ಭೂಮಿಯ ಒಡೆತನ ಪ್ರಾರಂಭವಾಯಿತು. ಕೃಷಿಯಲ್ಲಿ ಬಳಕೆಯಾದ ಕಬ್ಬಿಣದಿಂದಾಗಿ ಕೃಷಿ ವ್ಯಾಪಕವಾಗಿ ವಿಸ್ತರಿಸಿತು. ಹಾಗೆಯೇ ಭೂಮಿಯ ವಿಶಾಲತೆ, ಫಲವತ್ತತೆಗಳು ಪ್ರಮುಖವಾದುವು. ಕೃಷಿಯ ಉತ್ಪನ್ನದ ಉಳಿತಾಯ ವ್ಯಾಪಾರಕ್ಕೆ ತೆರೆದಿಟ್ಟಿತು.

ಇದು ದೇಶಿ–ಅಂತರ್ ದೇಶಿ ವ್ಯಾಪಾರಕ್ಕೂ ಪ್ರಾಧಾನ್ಯತೆ ನೀಡಿತು. ವ್ಯಾಪಾರದೊಂದಿಗೆ ಶ್ರೇಷ್ಠಿಗಳೆಂಬ ವ್ಯಾಪಾರಿ ವರ್ಗದ ರಚನೆಯಾಯಿತು. ಇವರು ಸಾಲಗಳನ್ನು ನೀಡುತ್ತಿದ್ದರು. ಇವರಿಗೆ ‘ಕುಶೀದಿ’ಯರು ಎಂದು ಕರೆಯಲಾಗುತ್ತಿತ್ತು. ಕ್ರಿ.ಪೂ. ೬ನೆಯ ಶತಮಾನದ ಮಾಹಾಜನಪದದ ವೇಳೆಗೆ ನೊಗ, ನೇಗಿಲುಗಳ ಬಳಕೆಯಾಯಿತು. ಈ ವೇಳೆಗೆ ವ್ಯಾಪಾರಿಸಂಘಗಳು ಉದಯಿಸಿದವು. ವ್ಯಾಪಾರಸ್ಥರಿಗೆ ‘ಶೇಠಿ’ಎಂದು ಕರೆಯಲಾಯಿತು. ವೈದಿಕ ಸಾಹಿತ್ಯಗಳು ವೈಶ್ಯರೆಂದು ಕರೆದವು. ಇವರ ಸಂಪತ್ತಿನ ಕ್ರೂಢೀಕರಣದ ಆರಂಭವು ಸಮಾಜದಲ್ಲಿ ವ್ಯಾಪಾರಸ್ಥರು ಮತ್ತು ಸ್ವತಂತ್ರ ರೈತರು ಎಂಬ ಪಂಗಡಗಳ ರಚನೆಗೆ ಕಾರಣವಾಯಿತು. ಆರ್ಥಿಕತೆಯು ಖಾಸಗಿ ಒಡೆತನ ಮತ್ತು ಖಾಸಗಿ ವ್ಯಾಪಾರ ಎಂಬ ಎರಡು ಕವಲು ದಾರಿಗಳ ರಚನೆಗೆ ಕೃಷಿಯು ದಾರಿ ಮಾಡಿಕೊಟ್ಟಿತು.

ಕ್ರಿ.ಪೂ. ೬ನೆಯ ಶತಮಾನದ ವೇಳೆಗೆ ಕೃಷಿಯ ಅಭಿವೃದ್ಧಿಯು ರಾಜ್ಯಗಳ ಉದಯಕ್ಕೆ ಕಾರಣವಾಯಿತು. ಫಲವತ್ತಾದ ಭೂಮಿಯ ಆಕ್ರಮಣ, ನದಿಗಳ ನಿಯಂತ್ರಣ ಆರಂಭವಾಯಿತು. ಮಗಧ ರಾಜ್ಯದಲ್ಲಿ ಪ್ರತಿ ರೈತರು ಭೂಮಾಲೀಕರಾಗಿದ್ದರು. ಇವರ ಕಾಲದ ಕೃಷಿ ನೀರಾವರಿ, ಕಾಲುವೆ, ಪಡೆಗಳು, ಬೇಲಿ, ಕಂದಾಯ ಸಂಗ್ರಹಣೆಗಳನ್ನು ಬೌದ್ಧ ಗ್ರಂಥಗಳು ಉಲ್ಲೇಖಿಸುತ್ತವೆ.

ಮೌರ್ಯರ ಆಡಳಿತದ ಅವಧಿಯಲ್ಲಿ ಕ್ರಿ.ಪೂ. ೩೨೪ರ ವೇಳೆಗೆ ಮುಖ್ಯವಾಗಿ ಮೂರು ಗುಂಪುಗಳು ಕಂಡುಬರುತ್ತವೆ. ರೈತರು, ದನಗಾಯಿಗಳು, ಬೇಟೆಗಾರರು, ಬಣಜಿಗರು ಹಾಗೂ ಕುಶಲ ಕೆಲಸಗಾರರು ಎಂದು ವರ್ಗೀಕರಿಸಲಾಗಿತ್ತು.[೭೩] ಈ ಮೂರು ವರ್ಗಗಳಿಂದ ರೈತರು ಪ್ರತ್ಯೇಕವಾಗಿದ್ದರು. ಇವರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಇವರು ಯುದ್ಧ ಇನ್ನಿತರ ಸಾರ್ವಜನಿಕ ಸೇವೆಗಳಲ್ಲಿ ಭಾಗಿಯಾಗದ ಕಾರಣ ಕೃಷಿಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿರುವ ಸಾಧ್ಯತೆಗಳಿವೆ. ಭೂಮಿಯು ದಾಳಿಗೆ ಒಳಪಡುತ್ತಿರಲಿಲ್ಲ. ರೈತರಿಗೆ ಅಗತ್ಯವಾದ ವಸ್ತುಗಳು ಅವರಿಗೆ ಮಾರಾಟದಿಂದ ದೊರೆಯುತ್ತಿದ್ದವು. ‘ಬಲಿ’ ಎಂಬ ತೆರಿಗೆಯನ್ನು ರಾಜ್ಯದ

ಬೊಕ್ಕಸಕ್ಕೆ ನೀಡುತ್ತಿದ್ದರು.[೨೪] ಧಾನ್ಯ ಮತ್ತು ಆಹಾರಗಳನ್ನು ದೇಶದಲ್ಲಿ ಕ್ಷಾಮ ಬಂದಾಗ ಹಂಚಬೇಕೆಂದು ಅರ್ಥಶಾಸ್ತ್ರವು ತಿಳಿಸುತ್ತದೆ. ರೈತರು ನೆಡುತ್ತಿದ್ದ ಬೀಜಗಳನ್ನು ನಾಶಪಡಿಸುವ ಪ್ರಾಣಿ ಪಕ್ಷಿಗಳನ್ನು ಕಾಯಲು ಬೆಟ್ಟಗುಟ್ಟಗಳಲ್ಲಿ ದನಗಾಯಿ ಮತ್ತು ಬೇಟೆಗಾರರು ಇರುತ್ತಿದ್ದರು. ಇಂದಿಗೂ 'ಜಂಗುಳಿ ದನ' ಕಾಯುವ ಪದ್ಧತಿ ರೂಢಿಯಲ್ಲಿದೆ. ಇದನ್ನು ದನಗಾಯಿಗಳೇ ನಿರ್ವಹಿಸುತ್ತಿದ್ದು, ಬೆಳೆ ಕಾವಲು ಮತ್ತು ಪಶುಕಾವಲಿನ ಜವಾಬ್ದಾರಿ ಇಂದಿಗೂ ಅವರಿಗೆ ಸೇರಿದೆ. ಅವರಿಗೆ ಇಂತಿಷ್ಟು ಹಣವನ್ನೊ, ಧಾನ್ಯವನ್ನೊ ಕೊಡುವ ಪದ್ಧತಿ ರೂಢಿಯಲ್ಲಿದೆ. ಮೌರ್ಯರ ಕಾಲದಲ್ಲಿ ಅರಣ್ಯ ಪ್ರದೇಶದ ಸಂಖ್ಯೆಯೇ ಹೆಚ್ಚಾಗಿ ಕಂಡುಬರುತ್ತದೆ. ಅಶೋಕನ ೧೩ನೆಯ ಶಿಲಾಶಾಸನದಲ್ಲಿ ಅರಣ್ಯವಾಸಿಗಳು ರಾಜನಿಗೆ ಸವಾಲೊಡ್ಡುತ್ತಿದ್ದುದರ ಬಗೆಗೆ ತಿಳಿಸುತ್ತದೆ.[೨೫] ಕಾಡಿನ ಉತ್ಪನ್ನಗಳಿಂದ ಕೃಷಿಗೆ ಅಗತ್ಯವಾದ ನೇಗಿಲು ಮೊದಲಾದ ಉಪಕರಣಗಳನ್ನು ಬಳಸಿಕೊಂಡಿರುವ ಸಾಧ್ಯತೆಗಳಿವೆ. ಅಶೋಕನ ಕಾಲದಲ್ಲಿ ಕಾಡು ಕಡಿಯುವ, ಪ್ರಾಣಿಗಳನ್ನು ಕೊಲ್ಲುವ ಪದ್ಧತಿ ರೂಢಿಯಲ್ಲಿತ್ತು. ಇದರಿಂದ 'ಅಶೋಕನು ವಿನಾಕಾರಣ ಕಾಡು ಕಡಿಯುವುದರ ಮೇಲೆ ನಿಷೇಧ ಹೇರಿದನೆಂದು ೫ನೆಯ ಸ್ತಂಭಶಾಸನವು ತಿಳಿಸುತ್ತದೆ.[೨೬]

ಅರ್ಥಶಾಸ್ತ್ರದ ಪ್ರಕಾರ ಹೊಸ ಜನಪದಗಳ ರಚನೆಗೆ ೧೦೦ ರಿಂದ ೫೦೦ ಶೂದ್ರ ಕೃಷಿಕ ಸಮುದಾಯಗಳನ್ನು ನೆಲೆಗೊಳಿಸಲಾಯಿತು. ಇವರಿಗೆ ಬೀಜ, ಪಶುಗಳು ಹಾಗೂ ಹಣದ ರೂಪದಲ್ಲಿ ಸಾಲ ನೀಡಲಾಗುತ್ತಿತ್ತು. ಅವರ ಭೂಮಿಯ ಮೇಲಿನ ಹಕ್ಕು ಅವರ ಜೀವಿತ ಕಾಲಕ್ಕೆ ಸೀಮಿತವಾಗಿದ್ದು, ಈ ಭೂಮಿಯಲ್ಲಿ ಕೃಷಿ ಮಾಡಲೇಬೇಕೆಂಬ ಷರತ್ತುಗಳಿತ್ತು. ಹೀಗೆ ನೆಲೆಗೊಂಡವರು ಮತ್ತು ನೆಲೆ ಕಳೆದುಕೊಂಡ ಅರಣ್ಯವಾಸಿಗಳ ನಡುವೆ ದ್ವೇಷ ಬೆಳೆಯಿತು.[೨೭] ಇದನ್ನು ಗಮನಿಸಿದರೆ ಕೃಷಿಗೆ ನೀಡಿದ ಪ್ರೋತ್ಸಾಹ, ವಿಸ್ತರಣೆ, ಅಭಿವೃದ್ಧಿಗಳ ಕಡೆಗೆ ಸರ್ಕಾರದ ಪ್ರಯತ್ನವಿರುವುದು ತಿಳಿದುಬರುತ್ತದೆ. ಇಲ್ಲಿಯ ಕೆಲವು ಕೃಷಿಕ ಸಮುದಾಯಗಳು ಅಲೆಮಾರಿಗಳಂತಿದ್ದು, ಇದರಿಂದಲೇ ನೆಲೆಗೊಳ್ಳುವಿಕೆಯ ಪ್ರಯತ್ನಗಳು ನಡೆದಿರುವ ಸಾಧ್ಯತೆಗಳಿವೆ.

ಕೃಷಿಯಲ್ಲಿ ಎತ್ತುಗಳು ಮತ್ತು ನೇಗಿಲುಗಳ ಬಳಕೆ ಕಂಡುಬರುತ್ತದೆ. ಬೆಳೆಗಳ ಬಗೆಗೆ ಮಾಹಿತಿಯು ಅರ್ಥಶಾಸ್ತ್ರದಿಂದ ದೊರೆಯುತ್ತದೆ. ಆ ವೇಳೆಗೆ ಕಬ್ಬಿಣವು ಬಳಕೆಯಾಗುತ್ತಿತ್ತು. ಇದಕ್ಕೆ ಉತ್ತರ ಪ್ರದೇಶದ ಪಶ್ಚಿಮ ಭಾಗದಲ್ಲಿನ ಅತ್ರಂಜಿಖೆರಾ ಎಂಬಲ್ಲಿ ನಡೆದ ಉತ್ಖನನದಲ್ಲಿ ಮರದ ಚೌಕಟ್ಟಿಗೆ ಕಬ್ಬಿಣದ ಅಲಗನ್ನು ತೊಡಿಸಿದ ನೇಗಿಲು ಪತ್ತೆಯಾಗಿದೆ.[೨೮] ಇದರಿಂದಾಗಿ ಕಟ್ಟಿಗೆ(ಮರ) ಮತ್ತು ಕಬ್ಬಿಣಗಳೆರಡನ್ನು ಬಳಸಿ ಕೃಷಿ ಭೂಮಿಯನ್ನು ಉಳುಮೆ ಮಾಡುತ್ತಿದ್ದರು ಎನ್ನಲಾಗಿದೆ. ಕೃಷಿಕರಿಗೆ ಸಹಕಾರಿಯಾಗಿ ಕಮ್ಮಾರ, ಬಡಗಿಗಳಂತಹ ಕುಶಲ ಕರ್ಮಿಗಳು ಕಾರ್ಯನಿರ್ವಹಿಸುತ್ತಿದ್ದರು. ಹೀಗೆ ಹಂತ ಹಂತವಾಗಿ ಹೆಚ್ಚುವ ಜನಸಂಖ್ಯೆ ಮತ್ತು ಅವಶ್ಯಕತೆಗೆ ಅನುಸಾರವಾಗಿ ಕೃಷಿ ವಿಸ್ತರಣೆಯಾಗುತ್ತಾ ಸಾಗಿದೆ.

ಆರಂಭದ ಕೃಷಿಯು ಆಹಾರೋತ್ಪಾದನೆಯ ಉದೇಶವನ್ನು ಹೊಂದಿತ್ತೇ ವಿನಃ ಆರ್ಥಿಕ ಲಾಭಗಳಿಕೆಯ ಉದ್ದೇಶವನ್ನು ಹೊಂದಿರಲಿಲ್ಲ. ಅದು ಮಾನವನ ಜೀವನಾಧಾರದ ಒಂದು ಮುಖ್ಯ ಭಾಗವಾಗಿತ್ತು. ಕೃಷಿ ಭೂಮಿ ವಿಸ್ತರಣೆಯಾದಂತೆ ಆ ಭೂಮಿಯಲ್ಲಿ ಬೆಳೆ ಬೆಳೆಯಲಾಗುತ್ತಿತ್ತು. ಪ್ರಮುಖವಾಗಿ ವಿಸ್ತರಣೆಗೆ ಒಳಪಡುವ ಭೂಮಿಯು ಕೃಷಿ ಯೋಗ್ಯ ಭೂಮಿಯಾಗಿರುತ್ತಿತ್ತು. ಕೆಲವೊಮ್ಮೆ ಕೃಷಿ ಯೋಗ್ಯವಲ್ಲದಿದ್ದರೂ ಅದನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಲಾಗುತ್ತಿತ್ತು. ಇಂತಹ ಪ್ರಕ್ರಿಯೆ 'ಕ್ರಿ.ಶ. ೮ರಿಂದ ೧೪ನೆಯ ಶತಮಾನಗಳ ನಡುವಣ ಅವಧಿಯಲ್ಲಿ ಇತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ'[೨೯] ಪ್ರಾಚೀನ ಕಾಲವೆಂದು ಗುರುತಿಸುವ ಈ

ಅವಧಿಯಲ್ಲಿ ಮಾತ್ರವಲ್ಲದೆ ಅನಂತರದ ಅಂದರೆ ಕ್ರಿ.ಶ. ೧೪ನೆಯ ಶತಮಾನದ ನಂತರ ಈ ರೀತಿಯ ಪ್ರಕ್ರಿಯೆ ಮುಂದುವರೆದಿರುವುದು ಈ ಕುರಿತ ಉಲ್ಲೇಖಿತ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೦ನೆಯ ಶತಮಾನದ ಜಯಸಿಂಹನ ತಳಂಗೆರೆ ಶಾಸನವು ಕೃಷಿ ಯೋಗ್ಯ ಭೂಮಿಯಾಗಿ ಪರಿವರ್ತಿಸಿರುವ ಬಗೆಗೆ ಹೀಗೆ ಉಲ್ಲೇಖಿಸಿದೆ.

ಊರ ಕಡೆಯ ತೊಱೆಯ ತಡಿಯ ಕರಿಯ ಕಲ್ಲಮೋಱದಿಂ
ಪುತ್ತೂರ ಪೊಲೆಯರಿಪ್ಪ ಕೇರಿಯೋವಟ ನೀರ ಭೂಮಿಯಂ
ಸಾರಭೂರಹಂಗಳೋಳಿಯೊಳಗೆ ನೆಱ
ದ ಕೆಱೆಯನಂಭೋರುಹಾಕ್ಷಿ ತನ್ನಧನದಿನೊಪ್ಪೆ ಮಾಡಿಸಿಟ್ದಿದಂ
ನಿನ್ತಾರುಮೊಲ್ಲದ ಕಲ್ಕಾಡ ಬೆಟ್ಟಂ ಸವತಳಂ ಮಾಡಿಯೋಡಿಲ ಮನೆಯ ನನ್ದನ
ವನವುಮಂ ಮಾಡಿಸಿ ಕೆಱೆಯಂ ಕಟ್ಟಸಿ ತೊಱೆಯ ಸೆಱೆಯಿಟ್ಟೊವಟ ನೆಲ
ನಂ ಪಿರಿದುಮಾಯಾಸದಿಂ ಸುಕ್ಷೇತ್ರಂ ಮಾಡಿಸಿದುದು ಮುನ್ನ ಮೂಡೆ
ಯಿಕ್ಕುವೊವಟುಪ್ಪು ನೆಲದಾ ಭೂಮಿಯನೊಳಕೊಣ್ಣಗಟನಗಟಿಸಿ[೮೦]

ಈ ಮೇಲಿನ ಶಾಸನದ ಪಾಠವು ತಿಳಿಸುವಂತೆ ಮೋಚಬ್ಬರಸಿಯು ಕರಿಯ ಕಲ್ಲಿನ ಭೂಮಿಯನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದಳು. ಅಲ್ಲದೆ ಕೃಷಿಗೆ ಅನುಕೂಲವಾಗುವಂತೆ ಕೆರೆಯನ್ನು ನಿರ್ಮಿಸಿದಳೆಂದು ಶಾಸನವು ಹೇಳುತ್ತದೆ. ಸಾಮಾನ್ಯವಾಗಿ ತೊರೆಯ ಸಮೀಪದ ಭೂಮಿಯನ್ನು ವಿಸ್ತರಿಸಿರುವುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಹೊಸದಾಗಿ ಕೆರೆಯನ್ನು ನಿರ್ಮಿಸಿದಾಗ ಆ ಕೆರೆಯ ಸುತ್ತಲಿನ ಅಚ್ಚುಕಟ್ಟಾದ ಪ್ರದೇಶದ ಕಾಡನ್ನು ಕಡಿದು ಉಳುಮೆ ಮಾಡಿ ಹೊಸದಾಗಿ ಪೈರು ತೆಗೆಯಲಾಗುತ್ತಿತ್ತು. ಕ್ರಿ.ಶ. ೧೦೨೧ರ ಶಾಸನವು ಕಾಡು ಕಡಿದು ಹೊಸ ಭೂಮಿಯಿಂದ ಬೆಳೆ ತೆಗೆಯುವುದರ ಕುರಿತು ತಿಳಿಸುತ್ತದೆ. 'ಯಾಜ್ದಾನಿ ಅವರು ಸಂಪಾದಿಸಿದ 'ದಿ ಅರ್ಲೀ ಹಿಸ್ಟರಿ ಆಫ್ ದಿ ಡೆಕ್ಕಾನ್' ಗ್ರಂಥದಲ್ಲಿ ಕಾಕತೀಯ ಅರಸ ಪ್ರತಾಪರುದ್ರ ಕೃಷಿಯೇತರ ಭೂಮಿಯನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸಿದನೆಂದಿದೆ.[೮೧] ಕೂಡಲೂರು ಗ್ರಾಮದ ಕ್ರಿ.ಶ. ೧೧೨೨-೨೮ರ ಶಾಸನದಲ್ಲಿ ಹರಿಹರ ದೇವರ ಪೂಜೆಪುನಸ್ಕಾರಕ್ಕೆಂದು 'ಕಲಿದುಗುಸಂದಾಗಿ ಕಾಡಕಡಿದು ಹೊಸಭೂಮಿ ಕೊಡಂಗದ ಮೊಗೆಯಂ'[೮೨] ಎಂದಿದೆ.

ಕ್ರಿ.ಶ. ೧೧೧೫ರ ಬಿಜಾಪುರ ಜಿಲ್ಲೆಯ ನಿಡೋಣಿಯ ಬರ್ಮಣನ ಶಾಸನವು 'ಗಿಡಗಡಿದುರ್ತು ಬಿತ್ತಿ' ಎಂದು ಉಲ್ಲೇಖಿಸುತ್ತದೆ.[೮೩] ಕ್ರಿ.ಶ. ೧೧೭೩ರ ಹಾಸನ ಜಿಲ್ಲೆಯ ಶಾಸನವು ಹೀಗೆ ಹೇಳುತ್ತದೆ. 'ಪರನ್ರಿಪರಂತಡಂ ಸದಿದು ಬೇಲಿಯನಿಕ್ಕಿ ಪಟುಪ್ರತಾಪಮುರ್ಬಿರೆ ತಳಕಾಡ ನೀಡುಗಡಿದು ಅಳುಕುಱ ಸುಟ್ಟು ತುರಂಗಮಾಪ್ರಿ ಸಂಚರಣದಿನುರ್ತು ವೀರರಸದೊಳು ಪದನಾದಡೆ ಕೂಡೆ ಬಿತ್ತಿದಂ ಸುರುಚಿರ ಕೀರ್ತಿಯಂ ನೃಪಶಿಖಾಮಣಿ ಸಾಹಸಗಂಗ ಪೊಯ್ಸಳ' ಎಂದಿದೆ.[೮೪] ಹಿರೇಹಳ್ಳಿಯ ಕ್ರಿ.ಶ. ೧೧೮೭ರ ಶಾಸನದಲ್ಲಿ ಚಿಕ್ಕಮಾರೆಯ ಮೊದಲಾದವರು ಸೇರಿ 'ಕಾಡಂ ಕಡಿದು ಕನ್ನೆಗೆಟಿಯಂ ಕಟ್ಟಿಸಿ ವೂರಂ ಮಾಡಿದರು'[೮೫] ಎಂದು ತಿಳಿಸುತ್ತದೆ. ಕೊಂಡಳ್ಳಿ ಅಗ್ರಹಾರದ ಮಹಾಜನರ ಕೋರಿಕೆಯ ಮೇರೆಗೆ ಒಬ್ಬ ಗಾವುಂಡ ತನ್ನ ಸಹೋದರರ ಸಹಾಯದಿಂದ ಕಾಡನ್ನು ಕಡಿದು ಒಂದು ಹೊಸ ಹಳ್ಳಿಯನ್ನು ನಿರ್ಮಿಸಿ ಅಲ್ಲಿ ಎರಡು ಹೊಸ ಕೆರೆಗಳನ್ನು ಕಟ್ಟಿಸಿದ.[೮೬] ಕಾಡನ್ನು ಕಡಿದು ಹಳ್ಳಿಗಳನ್ನು ನಿರ್ಮಿಸಿ ಕೆರೆಗಳನ್ನು ಕಟ್ಟಿಸಿದ ಉಲ್ಲೇಖಗಳನ್ನು ಗಮನಿಸಿದರೆ ಹೊಸ ಜನವಸತಿಯೊಂದಿಗೆ ಕೃಷಿ ಭೂಮಿ ವಿಸ್ತರಣೆಯಾಗುವುದನ್ನು ಸೂಚಿಸುತ್ತವೆ. ಇದರೊಂದಿಗೆ ಕೃಷಿ

ಮತ್ತು ಜಾನುವಾರುಗಳಿಗೆ ಬಳಕೆಯಾಗುವ ಉದ್ದೇಶದಿಂದ ಕೆರೆಗಳನ್ನು ನಿರ್ಮಿಸಿರುವ ಸಾಧ್ಯತೆಗಳಿವೆ. ಹುಲಿಕೆರೆಯ ಕ್ರಿ.ಶ. ೧೧೬೦ರ ಶಾಸನದಲ್ಲಿ ಚಟ್ಟೆಯನು 'ಮಣ್ಣ ಸವನೆನಿಸಿ ಹೊನ್ನಂ ಮಣ್ಣಂ ಗೆಯ್ವವಗೆ ನೆಱೆಯೆ ಕೊಟ್ಟುಂ ಚಟ್ಟಂ ಮಣ್ಣುಂಡು ಹೋದುದೆನಿಸದೆ ತಣ್ಣನೆ ತಣಿಪಿದನಶೇಷಮಂ ಜೀವನದಿಂ'[೮೭] ಎಂದಿದೆ. ಇದರಿಂದ ಭೂಮಿ ವಿಸ್ತರಣೆಯಂತಹ ಕಾರ್ಯಗಳಿಗೆ ಅರಸರು ಮತ್ತು ಇನ್ನಿತರ ಅಧಿಕಾರಿ ವರ್ಗದವರ ಒತ್ತಡ, ಬೆಂಬಲ ಮತ್ತು ಸಹಾಯಗಳು ದೊರೆತಿವೆ. ಅವರು ಸಮರ್ಥರೆನಿಸುವ ವ್ಯಕ್ತಿಗಳನ್ನು ಆಯ್ದು ಈ ಕೆಲಸವನ್ನು ವಹಿಸುತ್ತಿದ್ದು. ಇಂತಹ ಭೂಮಿಯಿಂದ ಯಾವ ವರ್ಷದಿಂದ ತೆರಿಗೆ ನಿಗದಿಯಾಗುತ್ತಿತ್ತು ಮತ್ತು ತೆರಿಗೆಯಿಂದ ವಿನಾಯಿತಿ ದೊರೆಯುತ್ತಿತ್ತು ಎಂಬುದರ ಮಾಹಿತಿ ಶಾಸನಗಳಿಂದ ದೊರೆಯುತ್ತದೆ. ವೀರದೇವನಹಳ್ಳಿಯ ಕ್ರಿ.ಶ. ೧೧೮೬ರ ಶಾಸನದಲ್ಲಿ ವೀರಯ್ಯದಣ್ಣನಾಯಕಂ ತಂನ ನಿಜಸ್ವಾಮಿ ಶ್ರೀ ವೀರ ಬಲ್ಲಾಳ ದೇವರ ರಾಜ್ಯಾಭ್ಯುದಯಾರ್ತ್ಥವಾಗಿ ತಾನೆ ಕಾಡುಕಡಿದು ಮಾಡಿದ ಶ್ರೀ ವೀರಬಲ್ಲಾಳಪುರದೊಳು ರುದ್ರಸಮುದ್ರ, ಗಂಗಾಸಮುದ್ರ, ಅಚ್ಯುತಸಮುದ್ರ, ವೀರಸಮುದ್ರವೆಂಬ ಕೆರೆಗಳಂ ಕಟ್ಟಿಸಿ ಆ ಪುರಕ್ಕೆ ಗದ್ಯಾಣಂ ನಾಲ್ಕಱ ಮೊದಲಂ ಮಾಡಿ ನಾಲ್ಕು ಗದ್ಯಾಣ ನೀಡಿದರು.[೮೮] ಕಾಡು ಕಡಿದು ಈ ರೀತಿ ಕೆರೆ ನಿರ್ಮಿಸಲು ವಿಸ್ತಾರವಾದ ಬಯಲು ಮತ್ತು ಇಳಿಜಾರಿನ ಕೆಳಭಾಗದ ಭೂ ಪ್ರದೇಶದ ಅಗತ್ಯತೆ ಇರುವ ಕಾರಣದ ಅನಿವಾರ್ಯದಿಂದಾಗಿ ಕಾಡು ಕಡಿದಿರುವ ಸಾಧ್ಯತೆಗಳಿವೆ.

ಹೊಸದಾಗಿ ಕೃಷಿ ಭೂಮಿಯನ್ನು ವಿಸ್ತರಿಸುವಾಗ ಮುಳ್ಳು ಮೊದಲಾದ ಗಿಡಗಳನ್ನು ಮೊದಲು ಕಡಿದು ಸ್ವಚ್ಛಗೊಳಿಸಿ ಸುತ್ತಲೂ ಬೇಲಿ ಹಾಕಿ, ಅಲ್ಲಿನ ಮರಗಳನ್ನೆಲ್ಲ ಕಡಿದು ಸುಡುತ್ತಿದ್ದರು. ಈ ರೀತಿ ಸ್ವಚ್ಛವಾದ ಭೂಮಿಯನ್ನು ಉಳುಮೆ ಮಾಡಿ, ನೀರು ಹಾಯಿಸಿ, ಬೀಜವನ್ನು ಬಿತ್ತಿ ಬೆಳೆ ಬೆಳೆಯಲಾಗುತ್ತಿತ್ತು.

**ವಿಸ್ತರಣೆಗೆ ಒಳಪಡುವ ಭೂಮಿ**

- ಕಾಡು ಪೊದೆಗಳಿಂದ ಆವೃತವಾದ ಪ್ರದೇಶ
- ಕಲ್ಲು ಮುಳ್ಳುಗಳಿಂದ ಆವೃತ್ತವಾದ ಪ್ರದೇಶ
- ಬಂಜರು ಭೂಮಿ
- ನೀರು ನಿಲ್ಲುವ ತಗ್ಗು ಪ್ರದೇಶದ ಸುತ್ತಲಿನ ಸ್ವಚ್ಛ ಪ್ರದೇಶ
- ತೊರೆ ಹರಿದು ಮಣ್ಣು ಸೇರಿಸಿದ ಪ್ರದೇಶ
- ನದಿ ಬಯಲುಗಳ ಫಲವತ್ತಾದ ಪ್ರದೇಶ

ಮೇಲಿನ ಶಾಸನಗಳು ತಿಳಿಸುವಂತೆ ಕಾಡು, ಕಲ್ಲು, ಪೊದೆ, ಮುಳ್ಳು ಮೊದಲಾದವುಗಳಿಂದ ಆವೃತ್ತವಾದ ಪ್ರದೇಶವನ್ನು ಕಡಿದು, ಬೆಂಕಿಯಿಂದ ದಹಿಸಿ, ಸಮತಟ್ಟಾಗಿಸಿ ಬದುಗಳನ್ನು ನಿರ್ಮಿಸಿಕೊಂಡು ಕೃಷಿ ಭೂಮಿಯನ್ನು ವ್ಯವಸಾಯಕ್ಕೆ ಅಣಿಗೊಳಿಸಲಾಗುತ್ತಿತ್ತು. ಕೃಷಿ ಭೂಮಿಯನ್ನು ವಿಸ್ತರಿಸುವುದರ ಹಿಂದೆ ಹಲವು ಕಾರಣಗಳಿರುತ್ತಿದ್ದವು. ಒಂದೆಡೆ ಕಾಲದಿಂದ ಕಾಲಕ್ಕೆ ಹೆಚ್ಚುವ ಜನಸಂಖ್ಯೆ. ಜನಸಂಖ್ಯೆಯ ಒತ್ತಡವನ್ನು ಕಡಿಮೆಗೊಳಿಸುವುದು ಒಂದು ಪ್ರಮುಖ ಉದ್ದೇಶವಾಗಿದ್ದು, 'ಹೊಸದಾಗಿ ನಿರ್ಮಾಣಗೊಳ್ಳುವ ಕೃಷಿಯೋಗ್ಯ ಭೂಮಿಯಲ್ಲಿ ಜನರು ವಾಸಮಾಡುವುದು ಸಹಜ. ಇದು ಜನವಸತಿ ನಿರ್ಮಾಣಗೊಳ್ಳುವುದಕ್ಕೆ ಕಾರಣವಾಯಿತು. ಇದರಿಂದಾಗಿ ಜನಸಂಖ್ಯೆಯ ಒತ್ತಡ ಕಡಿಮೆಯಾಗತೊಡಗಿತು.[೮೯] ಇನ್ನೊಂದೆಡೆ ಕೃಷಿಯ ಅಭಿವೃದ್ಧಿ. ಕೃಷಿ ಅಭಿವೃದ್ಧಿ ಹೊಂದಿದಂತೆ ಅದು ಆರ್ಥಿಕ ಉತ್ಪನ್ನದ ವ್ಯಾಪ್ತಿಗೊಳಪಟ್ಟಿತು. ಮೊದಲೇ ಉಳುಮೆಯಾಗುತ್ತಿದ್ದ ಭೂಮಿ ತನ್ನ ಸಾರವನ್ನು

ಕಳೆದು ಕೊಂಡಾಗ ಬೆಳೆ ಬೆಳೆಯಲಾರದ ಸ್ಥಿತಿ ನಿರ್ಮಾಣಗೊಂಡ ಸಂದರ್ಭದಲ್ಲಿಯೂ ಭೂಮಿ ವಿಸ್ತರಣೆಗೆ ಒಳಪಡುತ್ತಿತ್ತು. ತೆರಿಗೆ ಮತ್ತು ಆದಾಯ ಹೆಚ್ಚಳದ ಉದ್ದೇಶದಿಂದ ಭೂಮಿಯನ್ನು ಗೇಣಿಯ ರೂಪದಲ್ಲಿ ನೀಡುವ ಸಲುವಾಗಿ ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಗುತ್ತಿತ್ತು. ಭೂಮಿಯಲ್ಲಿ ಕೃಷಿ ಉತ್ಪನ್ನ ಹೆಚ್ಚಾದಾಗ ಅದನ್ನು ತೆರಿಗೆಯ ವ್ಯಾಪ್ತಿಗೆ ಒಳಪಡಿಸಲಾಗುತ್ತಿತ್ತು. ಆದರೆ ಹೊಸದಾಗಿ ಭೂಮಿಯನ್ನು ಸ್ವಚ್ಛಗೊಳಿಸಿ ಬೆಳೆದ ಇಂತಿಷ್ಟು ವರ್ಷ ತೆರಿಗೆ ಅಥವಾ ಗೇಣಿಯಿಂದ ವಿನಾಯಿತಿ ದೊರೆಯುತ್ತಿತ್ತು. ಅದು ಸಂಪೂರ್ಣ ಕೃಷಿ ಭೂಮಿಯಾಗಿ ಪರಿವರ್ತನೆಗೊಂಡು ಸಮೃದ್ಧವಾಗಿ ಪಸಲು ಬೆಳೆಯುವಾಗ ತೆರಿಗೆ ಅಥವಾ ಗೇಣಿಗೊಳಪಡುತ್ತಿತ್ತು. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಕೋಗಳಿಯ ಕ್ರಿ.ಶ. ೯೯೨ರ ಶಾಸನದಲ್ಲಿ 'ಫಲವಾದ ಮಣ್ಣೆ ಅರುವಣವಿಲ್ಲ' ಕೋಗಟಿಯ ಚತುರಾಘಾಟ್ಟದೊಳಾದ ಮಣ್ಣನೀರ ಸಾಮ್ಯಕ್ಕಂ ದಣ್ಣದೋಸಮಿಲ್ಲ. ಸೆಟ್ಟಿಯರ್ಪ್ಪನ್ನಸಿಗರ್ಗ್ಗಾವುಣ್ಡಗಳ್ಮೊದಲಾಗಿ ಮಾನ್ಯಕಾಱ ಮೂಱು. ಶ್ರಾಹೆಗೆ ಪರಿಯರ ಗದ್ಯಾಣವನ್ತಿಱುವರ್ ಅವರ ಕೀಟೊಕ್ಕಲುಟ್ಟುಬರಿಸಂ ಪಟ್ಟಿಮರ್ಯಾದೆ ಎರಡನೆಯ ಶ್ರಾಹೆಗೆ ಪದಿನಯ್ದರವೆ ಮೂರನೆಯ ಶ್ರಾಹೆಗೆ ಪೂರ್ಬ್ಬಸ್ಥಿತಿಯೊಳ್ಕೊರೆ ಬಸದಿಗೆತ್ತಿಱುವರ್'[೧೦] ಎಂದಿದೆ. ದಾನ ನೀಡಿದ ಭೂಮಿಯನ್ನು ಹೊಸದಾಗಿ ಉಳುಮೆಗೆ ಒಳಪಡಿಸಿದ ಮೊದಲ ವರ್ಷ ತೆರಿಗೆ ಹಾಕುತ್ತಿರಲಿಲ್ಲ. ಮೂರನೆಯ ವರ್ಷ ಅಧಿಕೃತವಾಗಿ ತೆರಿಗೆ ಹಾಕಲಾಗುತ್ತಿತ್ತು. ಹಾಗೆಯೇ ತೆರಿಗೆ ನೀಡದಿದ್ದರೆ ದಂಡ ವಿಧಿಸಲಾಗುತ್ತಿತ್ತು. ದಾನ ನೀಡುವಾಗ ಎಲ್ಲ ಸಮಯದಲ್ಲೂ ಉಳುಮೆಮಾಡಿದ ಭೂಮಿಯನ್ನು ನೀಡುತ್ತಿರಲ್ಲಿಲ್ಲ. ಬದಲಿಗೆ ಈ ರೀತಿ ಉಳುಮೆಯಾಗದ ಭೂಮಿಯನ್ನೂ ಸಹ ನೀಡುತ್ತಿದ್ದರು. ಇಂತಹ ಉಲ್ಲೇಖಗಳು ಹೆಚ್ಚಾಗಿ ೧೦ನೆಯ ಶತಮಾನದಿಂದ ಕಾಣಿಸಿಕೊಳ್ಳುತ್ತವೆ. ಆರ್ಥಿಕ ಮತ್ತು ರಾಜಕೀಯ ಸ್ಥಿತಿಯ ಪ್ರಭಾವಗಳು ಇದಕ್ಕೆ ಪ್ರಮುಖ ಕಾರಣಗಳಾಗಿರುವ ಸಾಧ್ಯತೆಗಳು ಹೆಚ್ಚು.

ಮೌರ್ಯರ ಕಾಲದಲ್ಲಿ ಕೃಷಿ ಭೂಮಿಯನ್ನು 'ಸಿತಾ' ಎಂದು ಕರೆಯಲಾಗುತ್ತಿತ್ತು. ಅಶೋಕನ ಕಾಲದಲ್ಲಿ ಕೃಷಿ ಭೂಮಿಯು ವಿಸ್ತರಣೆಗೆ ಒಳಪಟ್ಟಿತ್ತು. ಇದಕ್ಕೆ ನಿದರ್ಶನವೆಂಬಂತೆ ಅಶೋಕನು ಕಳಿಂಗ ಯುದ್ಧದಲ್ಲಿ ಸೋತು ಶರಣಾಗತರಾದ ಒಂದು ಲಕ್ಷ ಐವತ್ತು ಸಾವಿರ ಸೆರೆ ಸಿಕ್ಕ ಸೈನಿಕರನ್ನು ತಂದು, ಬೀಡು ಭೂಮಿಯಲ್ಲಿ ಕೃಷಿ ಕೆಲಸಗಳನ್ನು ಮಾಡಿಸಿದನೆಂದು ತಿಳಿದುಬರುತ್ತದೆ. ಇವನ ಕಾಲದಲ್ಲಿ ರಾಜ್ಯದ ಆರ್ಥಿಕ ವ್ಯವಸ್ಥೆಯ ಒಂದು ಭಾಗವಾಗಿ ಕೃಷಿಯು ಕಂಡುಬರುತ್ತದೆ. ಇದು ಮೆಗಸ್ತಾನೀಸನ ಬರಹಗಳಿಂದಲೂ ತಿಳಿದುಬರುತ್ತದೆ. ಮೆಗಸ್ತಾನಿಸನು ತನ್ನ ಕೃತಿಯಲ್ಲಿ ರಾಜನು ಭೂಮಿಯ ಒಡೆಯನಾಗಿದ್ದನು ಎಂದಿದ್ದಾನೆ. ಡಿಯೋಡೋರಸ್‌ನು ರೈತರು ರಾಜನಿಂದ ಪಡೆದ ಭೂಮಿಗೆ ಬಾಡಿಗೆಯನ್ನು ಮಾತ್ರವಲ್ಲದೆ ನಾಲ್ಕನೆಯ ಒಂದು ಭಾಗವನ್ನು ಸಲ್ಲಿಸಬೇಕಿತ್ತು ಎಂದು ಹೇಳುತ್ತಾನೆ.[೧೧] ಸ್ಟ್ರಾಬೋ ಎಂಬುವವನು ರೈತರು ಭೂಮಿಯಲ್ಲಿ ಉಳುಮೆಮಾಡಿದ ಕೂಲಿಯಾಗಿ ಬೆಳೆಯ ಕಾಲುಭಾಗವನ್ನು ಪಡೆಯುತ್ತಿದ್ದರು ಎನ್ನುತ್ತಾನೆ. ಅರ್ಥಶಾಸ್ತ್ರವು ರಾಜನಿಗೆ ಷಡ್ಭಾಗ ನೀಡಬೇಕೆಂದಿದೆ.[೧೨] ಅಶೋಕನು ಕೃಷಿಯನ್ನು ವಿಸ್ತರಿಸುವ ಸಲುವಾಗಿ ಕೆಲವು ಭೂಮಿಗೆ ತೆರಿಗೆಯನ್ನು ಮಾನ್ಯ ಮಾಡಿದ್ದನು. ಅಶೋಕನ ರುಮ್ಮಿಂಡೈ ಸ್ತಂಭ ಶಾಸನವು ಬುದ್ಧನ ಜನ್ಮ ಸ್ಥಳದಲ್ಲಿ ಭೂಮಿಯ ಮೇಲೆ ಯಾವುದೇ ತೆರಿಗೆ ವಿಧಿಸಲಾಗಿರಲಿಲ್ಲವೆಂದು, ಬೆಳೆದ ಬೆಳೆಯ ೧/೮ಭಾಗವನ್ನು ರಾಜನಿಗೆ ಕೊಡಬೇಕಿತ್ತೆಂದು ತಿಳಿಸುತ್ತದೆ.[೧೩] ಕೃಷಿ ವಿಸ್ತರಣೆಯೊಂದಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿದಂತೆ ಕಂಡುಬರುತ್ತದೆ. ಇದು ಅರ್ಥಶಾಸ್ತ್ರಕಾರ ಹೇಳುವ ೧/೫ಭಾಗ ನೀರಿನ ತೆರಿಗೆಯಿಂದ[೧೪] ತಿಳಿಯುತ್ತದೆ. ಅಲ್ಲದೆ ಸ್ಟ್ರಾಬೋ, ಮೆಗಸ್ತಾನಿಸರ ಬರಹಗಳಿಂದಲೂ ತಿಳಿದುಬರುತ್ತದೆ. ಅಶೋಕನ ಕಾಲದಲ್ಲಿ ಈ ರೀತಿ ವಿಸ್ತರಣೆಗೊಳಪಟ್ಟ ಕೃಷಿಯು ಶಾತವಾಹನರ ಕಾಲದಲ್ಲಿ

ಮುಂದುವರೆಯಿತು. ಆದರೆ ಇವರ ಕಾಲದಲ್ಲಿ ವ್ಯಾಪಾರಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಲಾಯಿತು. ಇವರ ಕಾಲದಲ್ಲಿ ಹತ್ತಿ, ಸಾಂಬಾರು ಪದಾರ್ಥ ಮೊದಲಾದವುಗಳನ್ನು ಬೇರೆ ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು. ಕದಂಬರ ಕಾಲದಲ್ಲಿ ವ್ಯವಸಾಯ ಪ್ರಧಾನವಾದರೂ, ವಾಣಿಜ್ಯ ಮತ್ತು ಕೈಗಾರಿಕೆಗಳಿಗೆ ಪ್ರಾಧಾನ್ಯತೆಯನ್ನು ನೀಡಲಾಗಿತ್ತು. 'ಮಣ್ಣಿನ ಗುಣಕ್ಕೆ ಅನುಸಾರವಾಗಿ ಜಮೀನನ್ನು ವಿಂಗಡಿಸಲಾಗಿತ್ತು. ಸರ್ವನಮಸ್ಯ, ತ್ರಿಭೋಗ, ತಳವೃತ್ತಿಗಳೆಂಬ ಮೂರು ಬಗೆಯ ಗೇಣಿ ಪದ್ಧತಿಗಳು ಜಾರಿಯಲ್ಲಿದ್ದು, ಇವುಗಳಲ್ಲಿ ರೈತರು ದುಡಿಯುತ್ತಿದ್ದರು.[೬೫] ಇವರ ಕಾಲಕ್ಕಾಗಲೇ ಕೃಷಿಯು ಅಂದಿನ ಜನಸಂಖ್ಯೆಗೆ ಅನುಗುಣವಾಗಿ ಸಾಕಷ್ಟು ಅಭಿವೃದ್ಧಿಯನ್ನು ಹೊಂದುತ್ತಿತ್ತು. ಈ ಅಂಶವು ಬೆಳೆಗಳಿಗೆ ವಿಧಿಸಿದ ತೆರಿಗೆಗಳಿಂದ ಸ್ಪಷ್ಟವಾಗುತ್ತದೆ. ೧/೬ ಭಾಗವನ್ನು ಬೆಳೆದ ಬೆಳೆಯ ಮೇಲೆ ವಿಧಿಸಲಾಗಿತ್ತು. ಗಾಣಿಗರು, ಗಾಣಗಳು, ಎತ್ತುಗಳು, ವೀಳೆದೆಲೆಯ ಮೇಲೆ ಸುಂಕ ವಿಧಿಸಲಾಗಿತ್ತು.[೬೬] ವೀಳೆದೆಲೆಗೆ ಸುಂಕ ವಿಧಿಸಿರುವುದನ್ನು ಗಮನಿಸಿದರೆ ನೀರಾವರಿ ವ್ಯವಸಾಯಕ್ಕೆ ಒತ್ತು ನೀಡಿರುವುದು ಮತ್ತು ನೀರಾವರಿ ಕೃಷಿಯ ಬೆಳವಣಿಗೆಯನ್ನು ಸೂಚಿಸುತ್ತದೆ. ಜೊತೆಗೆ ಭೂಮಿಯ ಅಳತೆಗಳಾದ ನಿವರ್ತನ, ಕಮ್ಮ ಮತ್ತರುಗಳು ಕಂಡುಬರುತ್ತವೆ. ಸೊರಗೆ, ಮಣ, ಸೊಲ್ಲಗ, ಅದ್ದ, ಕೊಳಗ, ಮಾನ ಮೊದಲಾದವುಗಳು ಆಹಾರ ಧಾನ್ಯಗಳನ್ನು ಅಳೆಯುವ ಮಾಪನಗಳಾಗಿದ್ದು, ಇವುಗಳ ಉಲ್ಲೇಖಗಳು ಕಂಡುಬರುತ್ತದೆ.[೬೭] ಇದು ಕೃಷಿಯ ಬೆಳವಣಿಗೆಯ ಅಭಿವೃದ್ಧಿಯನ್ನು ಸಾಧಿಸಿತ್ತಲ್ಲದೆ ಆರ್ಥಿಕತೆಯ ಒಂದು ಭಾಗವೂ ಆದಂತೆ ಕಂಡುಬರುತ್ತದೆ. ಗಂಗರ ಕಾಲದಲ್ಲಿ ಕೃಷಿಕರು ಉಳುಮೆ ಮಾಡುತ್ತಿದ್ದ ಭೂಮಿಗಳು ಸರ್ವಸಾಮಾನ್ಯ, ತ್ರಿಭೋಗ ಮತ್ತು ತಲವೃತ್ತಿಗಳಾಗಿದ್ದವು. ಈ ಮೂರು ಬಗೆಯ ಭೂಮಿಗಳಲ್ಲಿ ಯಾವುದಾದರು ಒಂದು ಬಗೆಯ ಭೂಮಿಯಲ್ಲಿ ಕೃಷಿಕರು ಉಳುಮೆ ಮಾಡುತ್ತಿದ್ದರು. ದೇವದೇಯ ಮತ್ತು ಬ್ರಹ್ಮದೇಯ ದಾನಗಳು ಸರ್ವೇಸಾಮಾನ್ಯವಾಗಿದ್ದವು. ಸರ್ವಸಾಮಾನ್ಯ ಭೂಮಿಯ ಮೇಲಿನ ಹಕ್ಕನ್ನು ಸರ್ಕಾರ ತ್ಯಜಿಸಿತ್ತು. ತ್ರಿಭೋಗದ ಭೂಮಿಯೆಂದರೆ ಬ್ರಾಹ್ಮಣ, ದೇವಾಲಯ, ತಮ್ಮಡಿಗಳಿಗೆ ಅರಸರು ನೀಡಿದ ಭೂಮಿ ದಾನವಾಗಿದೆ. ಯುದ್ಧದಲ್ಲಿ ಹೋರಾಡಿ ಮಡಿದವನಿಗೆ ಬಾಳ್ಗಲ್ಚಾಗಿ ಭೂಮಿಯನ್ನು ಕೊಡಲಾಗುತ್ತಿತ್ತು.[೬೮] ಇವರ ಕಾಲದಲ್ಲಿ ಕಲ್ನಾಡು ಭೂಮಿ ಕಂಡುಬರುತ್ತದೆ. 'ಕಲ್ನಾಡ್' ಎಂದರೆ ಬಂಜರು ಭೂಮಿ ಎಂದು ಬಿ.ಎಲ್. ರೈಸ್‌ರವರು ಅರ್ಥೈಸಿದ್ದಾರೆ. ಆದರೆ ಭೂಮಿಯನ್ನು ದಾನವಾಗಿ ನೀಡುವ ಸಂದರ್ಭದಲ್ಲಿ ಕೆಲವೊಮ್ಮೆ ಬಂಜರು ಭೂಮಿಯನ್ನು ನೀಡಿರುವ ಸಾಧ್ಯತೆಗಳು ಇದ್ದರೂ, ಎಲ್ಲ ಭೂಮಿಯು ಬಂಜರು ಭೂಮಿಯಾಗಿರುತ್ತಿರಲಿಲ್ಲ. ಬದಲಿಗೆ ಬಹುತೇಕ ಹೊಸದಾಗಿ ಉಳುಮೆಗೆ ಒಳಪಡುತ್ತಿದ್ದ ಭೂಮಿಯಾಗಿರುವ ಸಾಧ್ಯತೆಗಳಿವೆ. ಈ ರೀತಿ ಗಂಗರ ಕಾಲದಲ್ಲಿ ಭೂಮಿ ಸಂಬಂಧಿ ಅಂಶಗಳು ಕಂಡುಬರುತ್ತದೆ.

ನೀರಾವರಿಗೆ ಸಂಬಂಧಿಸಿದಂತೆ ಕೆರೆಗಳ ನಿರ್ಮಾಣ ಮತ್ತು ಅದಕ್ಕಾಗಿ ಭೂಮಿಯನ್ನು ಕೆರೆಗೊಡುಗೆಯಾಗಿ ನೀಡುತ್ತಿದ್ದರು. ಜಮೀನಿನಲ್ಲಿ ವರ್ಷಕ್ಕೆ ಎರಡು ಬೆಳೆ, ಕೆಲವೊಮ್ಮೆ ಶರದೃತುವಿನಲ್ಲಿ ಒಂದು ಬೆಳೆಯನ್ನು ಬೆಳೆಯಲಾಗುತ್ತಿತ್ತೆಂದು ಮಾಧವವರ್ಮನ ಶಾಸನವು ತಿಳಿಸುತ್ತದೆ.[೬೯] ಗಂಗರ ಕಾಲದಲ್ಲಿ ಗ್ರಾಮೀಣ ಆರ್ಥಿಕತೆ ಮತ್ತು ಕೃಷಿಯು ಅಷ್ಟಾಗಿ ಅಭಿವೃದ್ಧಿ ಹೊಂದಿರುವುದು ವಿರಳವಾಗಿಯೇ ಕಂಡುಬರುತ್ತದೆ. ಗಂಗರು ಸಾಮಂತ ಅರಸರುಗಳಾಗಿಯೇ ಹೆಚ್ಚು ಆಳ್ವಿಕೆ ನಡೆಸಿರುವುದು ಇದಕ್ಕೆ ಪ್ರಮುಖ ಕಾರಣವಾಗಿರುವ ಸಾಧ್ಯತೆಗಳಿವೆ. ಬಾದಾಮಿ ಚಾಲುಕ್ಯರು ಮೂಲತ: ಕೃಷಿ ಮೂಲದಿಂದಲೆ ಬಂದವರಾಗಿದ್ದು, ಕೃಷಿಯ ವಿಸ್ತರಣೆಗೆ ಹೆಚ್ಚಿನ ಒಲವು ತೋರಿಸಿದರು. ಈ ಹಿನ್ನೆಲೆಯಲ್ಲಿ ಅವರು ಹೆಚ್ಚಾಗಿ ಸಾಗುವಳಿಗೆ ಒಳಪಡದ ಭೂಮಿಯನ್ನು ದಾನವಾಗಿ ನೀಡಿದರು. ಇವರ ಕಾಲದಲ್ಲಿ ಬ್ರಹ್ಮದೇಯ ದಾನಗಳು ಹೆಚ್ಚಾಗಿ ಕಂಡುಬರುತ್ತವೆ. ಇದರ

ಹಿಂದೆ ಕೃಷಿಯನ್ನು ಅಭಿವೃದ್ಧಿ ಪಡಿಸುವ ಮೂಲಕ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಧೋರಣೆಯನ್ನು ಹೊಂದಿತ್ತು. ಈ ಹಿನ್ನಲೆಯಲ್ಲಿ ಇಡೀ ಹಳ್ಳಿಗಳನ್ನೆ ಇವರ ಕಾಲದಲ್ಲಿ ದಾನ ನೀಡಿದರು. ಈ ಅಂಶಗಳು 'ವಿನಿಯಾದಿತ್ಯನ ಸೊರಬ, ಕಾರುವನೆರೂರು, ಚೊಳಚಗುಡ್ಡ ಕೀರ್ತಿವರ್ಮನ ವಕ್ಕಲೇರಿ, ಕೆಂದೂರು ಶಾಸನಗಳಿಂದ ತಿಳಿದುಬರುತ್ತದೆ.[೧೦೦] ರಾಷ್ಟ್ರಕೂಟರ ಕಾಲದಲ್ಲಿ ಕೃಷಿ ಅಭಿವೃದ್ಧಿ ಮತ್ತು ಬೆಳವಣಿಗೆಯ ಮೇಲ್ಮುಕ ಚಲನೆ ಕಂಡುಬರುತ್ತದೆ. ಆದರೆ ಕಲ್ಯಾಣಿ ಚಾಲುಕ್ಯರ ಕಾಲದಷ್ಟು ಪ್ರಮಾಣದಲ್ಲಿ ಕಂಡುಬರುವುದಿಲ್ಲ. ಇವರ ಕಾಲದಲ್ಲಿ ಉದ್ರಂಗ ಮತ್ತು ಉಪರಿಕರ ಇವುಗಳಿಗೆ ಸಮಾನವಾಗಿ ಭಾಗಕರ ಮತ್ತು ಭೋಗಕರ ತೆರಿಗೆಗಳು ಕಂಡುಬರುತ್ತವೆ. ಇವು ಭೂಕಂದಾಯ ಮತ್ತು ಭೂಮಿಯ ಬೆಳೆಗಳಾದ ವೀಳ್ಯೆದೆಲೆ, ಹಣ್ಣು, ತರಕಾರಿ ಮೊದಲಾದ ಬೆಳೆಗಳ ಸುಂಕಗಳು ಭೋಗಕರಗಳಾಗಿವೆ.[೧೦೧] ಭೂಕಂದಾಯ ಮತ್ತು ಬೆಳೆಗಳಿಗೆ ವಿಧಿಸುವ ಸುಂಕಗಳು ರಾಜ್ಯದ ಆಯವ್ಯಯಗಳನ್ನು ಅವಲಂಭಿಸಿತ್ತು. ಕೆಲವು ಭೂಮಿಯ ಮೇಲೆ ಶಾಶ್ವತವಾಗಿ ತೆರಿಗೆ ವಿಧಿಸುತ್ತಿರಲಿಲ್ಲ. ಧಾನ್ಯದ ರೂಪದಲ್ಲಿ ತೆರಿಗೆಯನ್ನು ವಸೂಲು ಮಾಡುವ ಪದ್ಧತಿ ರೂಢಿಯಲ್ಲಿತ್ತು. ಬಂಜರು ಮೊದಲಾದ ಭೂಮಿಗಳ ಮೇಲಿನ ಹಕ್ಕು ಸರ್ಕಾರಕ್ಕೆ ಸಂಬಂಧಿಸಿತ್ತು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಕೃಷಿಯ ದಿಕ್ಕು ಬದಲಾಯಿತು. ಅದರೊಂದಿಗೆ ಕೃಷಿಯ ಪರ್ವವೇ ಆರಂಭವಾಯಿತು. ಆಡಳಿತ ವಿಕೇಂದ್ರೀಕರಣ ವ್ಯವಸ್ಥೆಯಿಂದಾಗಿ ಆರ್ಥಿಕತೆಯು ಗ್ರಾಮೀಣ ಪ್ರದೇಶದ ಕಡೆಗೆ ತಿರುಗಿದ್ದರಿಂದ ಅನಿವಾರ್ಯವಾಗಿ ಗ್ರಾಮೀಣ ಕಸುಬಾದ ಕೃಷಿಯ ಕಡೆಗೆ ಮುಖ ಮಾಡಿತು. ಈ ಹಿನ್ನೆಲೆಯಲ್ಲಿ ಕೆರೆಗಳ ನಿರ್ಮಾಣ, ಸಂತೆಗಳ ನಿರ್ಮಾಣಗಳು ಚುರುಕುಗೊಂಡವು. ಹೀಗೆ ಸಾಗಿಬಂದ ಕೃಷಿ ಹೊಯ್ಸಳರ ಅವಧಿಗೆ ಮತ್ತಷ್ಟು ವಿಸ್ತರಣೆಗೊಂಡಿತು. ಕೃಷಿಯನ್ನು ಅಭಿವೃದ್ಧಿಪಡಿಸಲು ಹೊಯ್ಸಳರು ಭೂಮಿ ವಿಸ್ತರಣೆಯ ಕಡೆಗೆ ಹೆಚ್ಚು ಒತ್ತು ನೀಡದೆ, ನೀರಾವರಿಯನ್ನು ಬಲಪಡಿಸುವ ನಿಟ್ಟಿನಲ್ಲಿ ಕೆರೆಗಳ ನಿರ್ಮಾಣ, ನಿರ್ವಹಣೆ, ಜೀರ್ಣೋದ್ಧಾರದಂತಹ ಕಾರ್ಯಗಳಲ್ಲಿ ಹೆಚ್ಚು ಕಾರ್ಯಪ್ರವೃತ್ತರಾದರು. ಕೃಷಿಯನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಕೃಷಿಕರನ್ನು ಪ್ರೋತ್ಸಾಹಿಸಲು ತೆರಿಗೆ ವಿನಾಯಿತಿಯಂತಹ ಕೊಡುಗೆಗಳನ್ನು ನೀಡಿದರು.

### ೨.೨. ಕೃಷಿ ಮತ್ತು ಭೂಮಿಯ ವಿಧಗಳು

ಕೃಷಿ ಮತ್ತು ಭೂಮಿಯ ಸಂಬಂಧ ಒಂದು ನಾಣ್ಯದ ಎರಡು ಮುಖಗಳಿಗಿಂತ ಮಿಗಿಲಾದದ್ದು. ಇವುಗಳ ಸಂಬಂಧವನ್ನು ನೀರು ಮತ್ತು ಮೀನಿಗೆ ಹೋಲಿಸುವುದು ಸರಿ ಎನಿಸುತ್ತದೆ. ನೀರನ್ನು ಭೂಮಿಗೆ, ಮೀನನ್ನು ಕೃಷಿಗೆ ಹೋಲಿಸಿದರೆ ನೀರಿನಿಂದ ಬೇರ್ಪಡಿಸಿದ ಮೀನು ಭೂಮಿಯಿಂದ ಬೇರ್ಪಡಿಸಿದ ಕೃಷಿ ಜೀವಂತವಾಗಿರಲು ಸಾಧ್ಯವಿಲ್ಲ. ಪ್ರಾಚೀನ ಕಾಲದಿಂದಲೂ ಪರಂಪರಾನುಗತವಾಗಿ ಭೂಮಿಯ ಬಗೆಗಿನ ದೈವಿಭಾವ ಜನಪದರಲ್ಲಿ ಹೀಗೆ ಕಂಡುಬಂದಿರುತ್ತದೆ.

ಎಳುತಲೆ ಎದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳಿಯೋಳೆ। ಭೂಮಿತಾಯಿ।
ಎದ್ದೊಂದು ಗಳಿಗೆ ನೆನೆವೇನ॥[೧೦೨]

ಇದು ಜನಪದರಿಗೆ ಅದರಲ್ಲೂ ಕೃಷಿ ಸಮುದಾಯದ ಜನರಿಗೆ ತಮಗೆ ಅನ್ನ ನೀಡುವ ಭೂಮಿಯ ಬಗೆಗಿರುವ ದೈವೀ ಭಾವನೆಯನ್ನು ಪ್ರತಿನಿಧಿಸುತ್ತದೆ. ಕೃಷಿ ಮತ್ತು ಕೃಷಿಯ ಉತ್ಪನ್ನವನ್ನು ಅವಲಂಬಿಸಿರುವ ಜನ ಸಮುದಾಯಕ್ಕೆ ಭೂಮಿಯ ಬಗೆಗಿನ ದೃಷ್ಟಿಕೋನವನ್ನು ಇನ್ನೊಂದು ಪದ್ಯ ಹೀಗೆ ಹೇಳುತ್ತದೆ.

ಮಣ್ಣನ್ನು ನಂಬಿನಾ ಮಣ್ಣಿಂದ ಬದುಕೇನ
ಮಣ್ಣೆನಗೆ ಮುಂದೆ ಹೊನ್ನ! ಅಣ್ಣಯ್ಯ!
ಮಣ್ಣೇ ಲೋಕದಲ್ಲಿ ಬೆಲೆಯಾದ್ದು![೧೦೩]

ಇದು ಕೃಷಿ ಸಮುದಾಯಕ್ಕೆ ಇದ್ದ ಭೂಮಿಯ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಕನ್ನಡ ನಾಡಿನ ಭೂಮಿಯು ಸಾಂಸ್ಕೃತಿಕ, ಭೌಗೋಳಿಕ, ಪ್ರಾಕೃತಿಕವಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿ ರಚನೆಗೊಂಡಿದೆ. ಈ ಕಾರಣದಿಂದಾಗಿ ಮಣ್ಣಿನ ಗುಣಗಳು ಮತ್ತು ಅವುಗಳ ವಿಧಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ಕಂಡುಬರುತ್ತವೆ.

ಶಾಸನಗಳಲ್ಲಿ ಭೂಮಿಯ ಬಗೆಗಿನ ಮಾಹಿತಿ ವಿಫಲವಾಗಿ ಲಭ್ಯವಾಗಿದೆ. ದೇವಾಲಯಗಳಿಗೆ, ಬ್ರಾಹ್ಮಣರಿಗೆ, ಕೆರೆ, ಕಟ್ಟೆ, ಬಾವಿ, ವಿದ್ಯಾರ್ಜನೆ, ಛತ್ರ ಮೊದಲಾದವುಗಳಿಗೆ ದಾನ ನೀಡುವಾಗ ಭೂಮಿಯನ್ನು ದಾನ ನೀಡಿರುವುದು ಕಂಡುಬರುತ್ತದೆ. ಆದುದರಿಂದಲೇ ಕರ್ನಾಟಕದಲ್ಲಿ ದೊರೆಯುವ ೨೫೦೦೦ಗಳಿಗಿಂತ ಅಧಿಕ ಶಾಸನಗಳಲ್ಲಿ ಶೇ. ೮೫ ರಿಂದ ೯೦%ರಷ್ಟು ಶಾಸನಗಳು ದಾನ ಶಾಸನಗಳಾಗಿವೆ. ಇವುಗಳಲ್ಲಿ ಬಹುಪಾಲು ಭೂಮಿಯನ್ನು, ಅದರಿಂದ ಬೆಳೆಯುವ ಧಾನ್ಯಗಳನ್ನು, ದಾನ ಬಿಟ್ಟ ವಿವರಗಳು ಶಾಸನಗಳಲ್ಲಿ ಕಂಡುಬರುತ್ತವೆ. ಏಕೆ ಭೂಮಿಯನ್ನು ದಾನವಾಗಿ ನೀಡುತ್ತಿದ್ದರು ಎಂದು ಗಮನಿಸಿದರೆ, ಭೂಮಿಯನ್ನು ದಾನಮಾಡಿದರೆ ಶ್ರೇಯಸ್ಸು ಮತ್ತು ಪುಣ್ಯ ಪ್ರಾಪ್ತಿಯಾವುದೆಂಬ ಧಾರ್ಮಿಕ ಭಾವನೆ ಒಂದು ಕಡೆ, ಮತ್ತೊಂದು ಕಡೆ ಭೂಮಿ ಮತ್ತು ಭೂಮಿಯ ಉತ್ಪನ್ನಗಳು ಆರ್ಥಿಕ ಉತ್ಪಾದನೆಯ ಒಂದು ಭಾಗಗಳಾಗಿರುತ್ತವೆ. ಈ ಕಾರಣದಿಂದ ಭೂ ದಾನಗಳು ಬೆಳೆದುಬಂದಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೧೫೩ರ ಶಾಸನವೊಂದು ತನ್ನ ಗರ್ಭದಿಂದ ಹೊರಟ ಧಾನ್ಯಾದಿಗಳಿಂದ ಜನರನ್ನು ಕಾಪಾಡುವ ಭೂಮಿಯನ್ನು ತಾಯಿಯೆಂದೂ, ಬೆಳೆಗಳನ್ನು ಬೆಳೆಯುವ ರೈತರನ್ನು ಭೂಮಿತಾಯಿಯ ಮಕ್ಕಳೆಂದು ಕರೆದಿದೆ. "ಅನ್ನದಾನ ಸಂಪೂರ್ಣರುಂ ಭೂಮಿಪುತ್ರಕರುಮಪ್ಪ ಚಂದಗೌಡ"[೧೦೪] ಎಂದಿದೆ.

ಭೂಮಿಯನ್ನು ವ್ಯವಸಾಯ ಮಾಡುವ ಅಥವಾ ವ್ಯವಸಾಯಕ್ಕೆ ಒಳಪಟ್ಟ ಭೂಮಿ(ಅಂದರೆ ಕೃಷಿಯೋಗ್ಯ ಭೂಮಿ) ಮತ್ತು ವ್ಯವಸಾಯಕ್ಕೆ ಒಳಪಡದ ಭೂಮಿ(ಕೃಷಿಗೆ ಯೋಗ್ಯವಲ್ಲದ ಭೂಮಿ)ಎಂದು ವಿಂಗಡಿಸಲಾಗಿದೆ. ವ್ಯವಸಾಯಕ್ಕೆ ಒಳಪಟ್ಟ ಕೃಷಿಯೋಗ್ಯ ಭೂಮಿಯನ್ನು 'ಅಜಿತ ಪುರಾಣದಲ್ಲಿ ದೇವಮಾತೃಕ ಮತ್ತು ನದಿ ಮಾತೃಕಗಳೆಂದು ಸ್ಥೂಲವಾಗಿ ವಿಂಗಡಿಸಿದೆ.[೧೦೫] ಶಾಸನಗಳು ದೇವಮಾತೃಕ ಭೂಮಿಯನ್ನು ಬೆದ್ದಲು, ಬೆಟ್ಟಲೆ, ಬೆದೆಮಣ್, ಬೆರ್ದಲೆ ಎಂದು ಕರೆದಿವೆ. ಸಾಗುವಳಿಗೆ ಒಳಪಡುವ ಭೂಮಿಯ ಪ್ರಮಾಣ ಎಷ್ಟಿತ್ತು ಎಂಬುದು ತಿಳಿಯದು. ಮಧ್ಯಕಾಲೀನ ವಿದೇಶಿ ಪ್ರವಾಸಿಗರ ಬರಹಗಳು ಸಾಕಷ್ಟು ಭೂಮಿ ಸಾಗುವಳಿಗೆ ಒಳಪಟ್ಟಿತ್ತೆಂದು ಅಭಿಪ್ರಾಯಪಡುತ್ತಾರೆ ಎಂದು ಅಪ್ಪಾದೊರೈ ಹೇಳುತ್ತಾರೆ.[೧೦೬] ಆದರೆ ಅಂದಿನ ಜನಸಂಖ್ಯೆಗೆ ಅನುಗುಣವಾಗಿ, ಆರ್ಥಿಕ ಉತ್ಪತ್ತಿಯ ಹೆಚ್ಚಳದ ಭಾಗವಾಗಿ ಕೃಷಿ ಭೂಮಿ ಸಾಗುವಳಿಗೆ ಒಳಪಟ್ಟಿರುವ ಸಾಧ್ಯತೆಗಳಿವೆ. ನದೀಮಾತೃಕ ಭೂಮಿಯನ್ನು ಗಟ್ಟಿ, ಗರ್ದೆ, ಗದ್ದೆ, ನೀರ್ಮಣ್ಣು[೧೦೭] ಎಂದು ಕರೆದಿರುವುದು ಕಂಡುಬರುತ್ತದೆ. ಇದಲ್ಲದೆ ಉತ್ತಮ, ಮಧ್ಯಮ, ಅಧಮ ಭೂಮಿ ಎಂತಲೂ, ಬಗಾಯ್ತು, ಖುಷ್ಕಿ, ತರಿ, ಪ್ಲಾಂಟೇಷನ್(ತೋಪುಗಳು) ಭೂಮಿಗಳೆಂದು ವಿಭಾಗಿಸಲಾಗಿದೆ.[೧೦೮]

ಬದಾಮಿ ಚಾಲುಕ್ಯರ ಶಾಸನವೊಂದರಲ್ಲಿ 'ಖಜ್ಜನವಾಗುಲಕಚ್ಚೆಕ್ಷೇತ್ರ' ಎಂದಿದೆ. 'ಖಜ್ಜನ' ಭೂಮಿಯ ಬಗ್ಗೆ ತಿಳಿದಿಲ್ಲ. ವಾಕುಲ ಎಂದರೆ 'ಜವುಳು' ಭೂಮಿ ಎಂದರ್ಥ.[೧೦೯] ಖಜ್ಜನ ಭೂಮಿ ಎಂದರೆ ಉಪ್ಪಿನ ಭೂಮಿ ಇರುವ ಸಾಧ್ಯತೆಗಳಿವೆ. ಇದು ವಿಜಯಭಟ್ಟಾರಿಕೆಯ ಶಾಸನದಲ್ಲಿ

ಉಲ್ಲೇಖಗೊಂಡಿದೆ. ಚಾಲುಕ್ಯ ವಿಜಯಾದಿತ್ಯನ ಬೆಟಪಳ್ಳಿ ಶಾಸನದಲ್ಲಿ ಗಟ್ಟಿ, ಬೆದ್ದಲೆ, ತೋಟದ ನೆಲ, ಬರುಡುನೆಲದ ಉಲ್ಲೇಖ ಕಂಡುಬರುತ್ತದೆ.[೧೧೦]

ಶಾಸನಗಳಲ್ಲಿ ಭೂಮಿಯನ್ನು ಭೂಮಿಯ ಗುಣ ಮತ್ತು ಬಣ್ಣವನ್ನು ಆಧರಿಸಿ ಭೂಮಿಯ ವಿಧಗಳನ್ನು ವರ್ಗೀಕರಿಸಲಾಗಿದೆ. ಶಾಸನಗಳು ಭೂಮಿಯನ್ನು ಕೆಯಿ, ಹೊಲ, ಎಂದೆಲ್ಲ ಕರೆದಿರುವುದು ಕಂಡುಬರುತ್ತದೆ. ದೇವಮಾತೃಕ ಅಥವಾ ಮಳೆಯಾಶ್ರಿತ ಭೂಮಿ ಮತ್ತು ನದಿ ಮಾತೃಕ ಅಥವಾ ನೀರಾವರಿ ಆಶ್ರಿತ ಭೂಮಿಗಳನ್ನು ಶಾಸನಗಳು ಹೀಗೆ ವಿಂಗಡಿಸಿರುವುದು ಕಂಡುಬರುತ್ತದೆ. ಇದು ಆಯಾ ಭೌಗೋಳಿಕ ಪರಿಸರಕ್ಕೆ ತಕ್ಕಂತಿದ್ದು, ಅಂತಹ ಭೂಮಿಯನ್ನು ದಾನ ನೀಡಿರುವುದು, ಅದರಿಂದ ಧಾನ್ಯ ಮತ್ತಿತರ ರೂಪದಲ್ಲಿ ತೆರಿಗೆ ಸಂಗ್ರಹಿಸಿರುವುದು ಕಂಡುಬರುತ್ತದೆ. ಎರೆಭೂಮಿ, ಕೆಂಗಾಡು, ಮಳಲಕೆಯ, ಹರಳಕೆಯಿ, ಹೊಂಗೆಭೂಮಿ, ಕಾಶ್ಮೀರಭೂಮಿ, ಕಂಗುಭೂಮಿ, ಮೊಗೆಭೂಮಿ ಮೊದಲಾದವುಗಳ ಉಲ್ಲೇಖ ಕಂಡುಬರುತ್ತದೆ. ಇವುಗಳಿಗೆ ಸಂಬಂಧಿಸಿದ ಶಾಸನಗಳ ಉಲ್ಲೇಖಗಳನ್ನು ಈ ಕೆಳಗೆ ಗಮನಿಸಬಹುದಾಗಿದೆ.

ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ ಕಟಿನಿಮಣ್ ಎಂದಿದೆ.[೧೧೧] ಕ್ರಿ.ಶ ೮೧೯ರ ಶಾಸನದಲ್ಲಿ ಕಂಗುಭೂಮಿಯ ಉಲ್ಲೇಖವಿದೆ.[೧೧೨] ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಕಿಸುಕಾಡಂ ಮೂಡೆಯು.....ವುಕ್ಕ.....ಎಣ್ಣಳವಿ ಬರಸ ವರಸಕೊನ್ದುಭಾಗಮಿಟ್ಟಿವುದು ಏೞನೆಯ ಬರಿಸಕ ಸಮಭಾಗದೋಳ್‌ನಿಲ್ಕುಕ.....ಭೂಮಿಯಂ ಪಾರ್ವ್ವ[೧೧೩] ಎಂದಿದೆ. ಕಿಸುಕಾಡಿನ ಭೂಮಿಯ ಉತ್ಪತ್ತಿಯಲ್ಲಿ ವರ್ಷಕ್ಕೆ ಒಂದು ಭಾಗದಂತೆಯೂ, ಮಿಕ್ಕಂತೆ ಏಳನೆಯ ವರ್ಷಕ್ಕೆ ಸಮಭಾಗವನ್ನು ಕಿಸುಕಾಡಿನಲ್ಲಿ ಉಳುಮೆ ಮಾಡುವವರು ಸುಂಕ ನೀಡಬೇಕೆಂದು ಹೇಳಲಾಗಿದೆ. ಕ್ರಿ.ಶ. ೯೩೧ರ ಶಾಸನದಲ್ಲಿ ಎರೆಯಕೆಯ್ಯ ಇರ್ಪ್ಪತ್ತಯ್ದು ಕಿಸುಕಾಡು ಇರ್ಪ್ಪತ್ತಯ್ದು ಅನ್ತು ರಾಜಮಾನ ಅಯ್ವತ್ತು ಎಂದು ಉಲ್ಲೇಖಿಸಿದೆ.[೧೧೪] ಕ್ರಿ.ಶ. ೯ನೆಯ ಶತಮಾನದಲ್ಲಿ ಕೆಮ್ಮತ್ತರ್[೧೧೫] ಉಲ್ಲೇಖವಿದೆ. ಕ್ರಿ.ಶ ೯೯೫ರ ಶಾಸನದಲ್ಲಿ 'ಕರಿಯನೆಲ ಕಿಸರಮಂ' ಎಂದಿದೆ.[೧೧೬] ಕ್ರಿ.ಶ.೧೦ನೆಯ ಶತಮಾನದ ಶಾಸನದಲ್ಲಿ "ಉತ್ತ ಬರಿಸಂ ಕರಿಯಕೆಯಿ ಪರಿಹಾರಯಱುವಂಶಂ ಮತ್ತರಿಂಗೆ ಪಾಗಂ ಚಳಾವಮೇಱ ನಾಲ್ಕು ವರಿಸಕ್ಕೆ ಪಣವಿನೊಳ್ಳಿಲ್ವುದು ಕೆಂಡಂಗೆಯ್ಗೆ ನೆಲನಂ"[೧೧೭]... ಕರಿನೆಲವನ್ನು ಉಳುಮೆಮಾಡಿದ ಮೊದಲ ವರ್ಷ ಒಂದು ಮತ್ತರಿಗೆ ಒಂದು ಪಾಗ ಕೊಡಬೇಕು. ೧೨ಮತ್ತರಿಗೆ ಒಂದು ಗದ್ಯಾಣ ಸುಂಕ ನೀಡಬೇಕೆಂದು ಶಾಸನವು ತಿಳಿಸಿದೆ.

ಕ್ರಿ.ಶ. ೧೦೧೪-೧೫ರ ಶಾಸನದಲ್ಲಿ "ಕರಿಯಹಾಳ ಮುಕ್ಕುಪೆಯಲ್ಲಿ ಭಾಗಂ ಪೊಸದಟ್ಟೆನ್ನೆರಡಱ ಭಾಗಂ ವರ್ಷಪ್ರತಿ ಒನ್ದು ಭಾಗಂ ಇಳಿಯುತಂ ಬನ್ದು ಮುಕ್ಕಪ್ಪೆಯೊಳೆಲ್ಲಾ ಕಾಲಕ್ಕುಂ ನಡುವುದುಮಾಗೆ ಕಿಸುಕಾಡು ಅಯ್ದನೆಯ ಭಾಗಂ"[೧೧೮] ಊರೊಡೆಯರು ಗಾವುಂಡರಿಗೆ ನೀಡಿದ ಒಡಂಬಡಿಕೆಯ ಪತ್ರವಿದು. ಕರಿಯಹಾಳ (ಅಂದರೆ ಕಪ್ಪು ಭೂಮಿಯಲ್ಲಿ) ಮುಕ್ಕುಪ್ಪೆಯಲ್ಲಿ ಹೊಸದಾಗಿ ಉಳುವವರು ಹನ್ನೆರಡು ಭಾಗದಲ್ಲಿ ವರ್ಷಕ್ಕೆ ಒಂದು ಭಾಗವು ಇಳಿಸಿಕೊಳ್ಳುವಂತೆ ನಿಗದಿಪಡಿಸುತ್ತಾನೆ. ಈ ಭಾಗದ ಇಳಿಕೆಯು ಕಿಸುಕಾಡ ನಾಡಿನಲ್ಲಿರುವಂತೆ ಆಯ್ದು ಭಾಗಕ್ಕೆ ನಿಗದಿಪಡಿಸಿದಂತೆ ತಿಳಿಯುತ್ತದೆ. ಇದರಿಂದ ಗೇಣಿಗೆ ಪಡೆದು, ಭೂಮಿ ಉಳುವವರು ಭೂಮಿಯ ವಿಧ, ಫಲವತ್ತತೆಯನ್ನು ಆಧರಿಸಿ ಆ ಭೂಮಿಗೆ ಸಂಬಂಧಿಸಿದ ಊರಿನಲ್ಲಿ ನಿಗದಿಪಡಿಸಿದ ಮೊತ್ತವನ್ನು ಧಾನ್ಯ ಅಥವಾ ಹಣದ ರೂಪದಲ್ಲಿ ನೀಡಬೇಕಾಗಿತ್ತು. ಊರುಗಳಲ್ಲಿ ಮೊದಲೆ ಇಂತಹ ಭೂಮಿಗೆ ಇಷ್ಟು ಮೊತ್ತವೆಂದು ನಿಗದಿಪಡಿಸಿರುತ್ತಿದ್ದರು. ಇಂದಿಗೂ ಈ ರೀತಿಯ ವ್ಯವಸ್ಥೆ ರೂಢಿಯಲ್ಲಿದೆ.

ಕ್ರಿ.ಶ. ೧೧೨೧ರ ಶಾಸನದಲ್ಲಿ 'ಉತುಕೃಷ್ಟವಪ್ಪ ಯೆರೆಯಕೆಯಿ'[೧೧೯] ಎಂದಿದೆ. ಕ್ರಿ.ಶ. ೧೧೩೦ರ ಶಾಸನದಲ್ಲಿ ಕರಿಯಭೂಮಿ ಮತ್ತರು ಹನ್ನೆರಡು[೧೨೦] ಎಂದಿದೆ. ಕ್ರಿ.ಶ. ೧೧೩೧ರ ಶಾಸನದಲ್ಲಿ ಕಾಂಸ್ಮೀರ ಭೂಮಿ ಮತ್ತ ೨[೧೨೧] ಎಂದಿದೆ. ಕ್ರಿ.ಶ. ೧೧೪೧ರ ಶಾಸನದಲ್ಲಿ 'ಕಾಶ್ಮೀರಭೂಮಿ ಮತ್ತ'[೧೨೨] ಎಂದಿದೆ. ಕ್ರಿ.ಶ. ೧೦೭೫ರ ಶಾಸನದಲ್ಲಿ ಯರೆಮತ್ತರು ೧ ಕೆಂಗಾಡು ಮತ್ತ ೨[೧೨೩] ಎಂದಿದೆ. ಕ್ರಿ.ಶ ೧೧೭೬ರ ಶಾಸನದಲ್ಲಿ ತಕ್ಕಿಲುಮತರ್ ೧ ಕಿಸುಮತ್ತರ್ ಉಲ್ಲೇಖವಿದೆ.[೧೨೪] ಕ್ರಿ.ಶ. ೧೧೭೭ರ ಶಾಸನದಲ್ಲಿ ಕಿಸುಕಾಡು ಮತ್ತರ್ ೨ ತಕ್ಕಿಲು ಮತ್ತರ್ ೨[೧೨೫] ಎಂದಿದೆ. ಕ್ರಿ.ಶ. ೧೨೯೯ರ ಶಾಸನದಲ್ಲಿ ಕರಿಯಮಾಗಿ ಮತ್ತರು ೩ ಕೆಂಗಾಡು ಮತ್ತರೇಳು ಹಂದೆಯ ಗೆಂಗಾಡು, ನಾಗೆಯಗೆಂಗಾಡು ಮತ್ತರು ಹುಣಿಸೆಯ ಕೆಂಗಾಡು ಕೆಯಿ ಮತ್ತರು ಕನ್ನೆಯಗೆಯಿ ೪[೧೨೬] ಎಂದಿದೆ. ವ್ಯಕ್ತಿಯ ಹೆಸರಿನಲ್ಲಿ, ಸ್ಥಳದ ಹೆಸರಿನಲ್ಲಿ, ಜಮೀನಿನ ಬಳಿಯ ಮರದ ಹೆಸರಿನಲ್ಲಿ ಭೂಮಿಯ ಹೆಸರು ಸೇರಿಸಿರುವುದು ಕಂಡುಬರುತ್ತದೆ. ಸಾದರ ಹಳ್ಳಿಯ ಶಾಸನದಲ್ಲಿ ಕೆಂಗಾಡು ಮತ್ತರು ಉಲ್ಲೇಖವಿದೆ.[೧೨೭] ಕ್ರಿ.ಶ. ೧೦೬೩ರ ಶಾಸನದಲ್ಲಿ ಅತ್ತಿಯ ಮಣ್ಣು ಉಲ್ಲೇಖವಿದೆ.[೧೨೮] ಮರದ ಹೆಸರಿನ ಮಣ್ಣು ಇರುವ ಸಾಧ್ಯತೆಯಿದೆ.

ಕ್ರಿ.ಶ. ೧೨೫೭ರ ಶಾಸನದಲ್ಲಿ 'ಗುಳಿಯಗದ್ದೆ' ಕಂಬ ೩೦ರ ಉಲ್ಲೇಖವಿದೆ.[೧೨೯] ಗಣ್ಣ ಎಂದರೆ ಚಿಕ್ಕ ಚಿಕ್ಕ ಗದ್ದೆ ಭೂಮಿ, ಹಾಳಿ ಎಂದರೆ ದೊಡ್ಡ ದೊಡ್ಡ ಗದ್ದೆ ಭೂಮಿ ಎಂದರ್ಥ. ಕ್ರಿ.ಶ. ೧೩ನೆಯ ಶತಮಾನದ ಶಾಸನ ಮಾವಿನ ಹಾಳಿಯನ್ನು ಉಲ್ಲೇಖಿಸಿದೆ.[೧೩೦] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಗೊರಸಿನ ಹಾಳಿಯ ಮೇಗೆ ೧ ಎಂದಿದೆ.[೧೩೧] ಕ್ರಿ.ಶ. ೧೩ನೆಯ ಶತಮಾನದಲ್ಲಿ ಮಕ್ಕಿಯ ಕಾಳ್ಗಲಗದ್ದೆಯಮೇಗೆ ಹಾಳಮಕ್ಕಿಯ ಮೂಡಗದ್ದೆಯ ಮೇಗೆ ಎಂದಿದೆ.[೧೩೨] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ವೊಸಮಕ್ಕಿಯ ಕಲ್ಲಿ ಕುಳಿಯ ಹಾಳಿಯ ಮೇಲೆ ಅಕ್ಕಿ ಮಾ ಕೋಲುಗದ್ದೆ, ಹತ್ತಿಯ ಹಾಳಿ, ಗೆಂ ಮೆಯಹಾಳಿ.[೧೩೩] ಎಂದಿದೆ. ಕ್ರಿ.ಶ. ೧೨೭೮ರ ಶಾಸನದಲ್ಲಿ 'ಹರಳುಮತ್ತ' ದ ಉಲ್ಲೇಖವಿದೆ.[೧೩೪] ಕ್ರಿ.ಶ. ೧೦೪೦ರ ಶಾಸನದಲ್ಲಿ ಎರೆಯ ನೆಲದ ಉಲ್ಲೇಖವಿದೆ.[೧೩೫] ಕ್ರಿ.ಶ. ೧೧೧೨ರ ಶಾಸನದಲ್ಲಿ ೨೪ಕರಿಯ ಭೂಮಿಯನ್ನು ಮಾಣಿಕೇಶ್ವರದ ಕೋಲಲಿ ಅಳೆದು ಬಿಟ್ಟರೆಂದಿದೆ.[೧೩೬] ಕ್ರಿ.ಶ. ೧೦೬೪ರ ಶಾಸನದಲ್ಲಿ 'ಖರಭೂಮಿ'ಯ ಉಲ್ಲೇಖವಿದೆ.[೧೩೭] ಕ್ರಿ.ಶ. ೧೧೮೪ರ ಶಾಸನದಲ್ಲಿ ಹೊಂಗೆ ಜೋಳದ ಉಲ್ಲೇಖವಿದೆ.[೧೩೮] ಕ್ರಿ.ಶ. ೧೧೨೪ರ ಶಾಸನದಲ್ಲಿ ಕೆಂಗಾಡು ಮತ್ತದೊಂದು ಎಂದಿದೆ.[೧೩೯] ಕ್ರಿ.ಶ. ೧೧೩೯ರ ಶಾಸನದಲ್ಲಿ ಕೆಂಗಾಡು ಮತ್ತರೆರಡು.[೧೪೦] ಎಂದು ಉಲ್ಲೇಖಿಸಿದೆ. ಕ್ರಿ.ಶ. ೧೧೭೫ರ ಶಾಸನದಲ್ಲಿ ಮಳಲಕೆಯ ಕಭ ಬದಕೆಯಿ ಕೊಯಕೆಯಿ ಕಭನೂರು[೧೪೧] ಎಂದಿದೆ. ಕ್ರಿ.ಶ. ೧೯೫ರ ಶಾಸನದಲ್ಲಿ ಎರೆಮತ್ತರಾಜು ಕೆಂಗಾಡು ಮತ್ತರಾಜು[೧೪೨] ಎಂದಿದೆ. ಈ ಭಾಗದಲ್ಲಿ ಎರೆಭೂಮಿ ಮತ್ತು ಕೆಂಪು ಭೂಮಿ ಹೆಚ್ಚಾಗಿ ಕಂಡುಬರುತ್ತದೆ. ಎರಡನೆಯ ಬಲ್ಲಾಳನ ಶಾಸನದಲ್ಲಿ ಮಣಲಕೆಯ ಮತ್ತರೊಂದು, ಹರಳಕೆಯ ಮತ್ತದೊಂದು ಎರೆಯ ಕೆಯಲು ಕಂಬ ಅರುನೂರು ೬೦[೧೪೩]ರ ಉಲ್ಲೇಖವಿದೆ. ಕ್ರಿ.ಶ. ೧೯೯ರ ಶಾಸನದಲ್ಲಿ ಕರಿಯಕೆಯಿ ಕಂಬ ೭೦೦ ಎಂದಿದೆ.[೧೪೪] ಕ್ರಿ.ಶ. ೧೧೧೩ರ ಶಾಸನದಲ್ಲಿ ಎರೆಯ ಭೂಮಿಯ ಉಲ್ಲೇಖವಿದೆ.[೧೪೫] ಕ್ರಿ.ಶ. ೧೧೭೩ರ ಶಾಸನದಲ್ಲಿ ಗುಳಿಯಕೆಯಿ ಕೆಂಕಾಡಿನ ತವಸಿಯಕೆಯ ಎಂದಿದೆ.[೧೪೬] ಕ್ರಿ.ಶ. ೧೨೩೦ರ ಶಾಸನದಲ್ಲಿ ಎರೆಯಗದ್ದೆ, ಎರೆಯ ಕೆಯ್ಯ, ಕಜಿಳ ಎರೆ ಕಂಬ ೭೦೦ ಅರಟಿಗದ್ದೆ ಸಹಿತ ೧೮೦ಮಣಲಕೆಂಯಿ ಕಂಬ ೨೦೫ ಬಿಟ್ಟರೆಂದಿದೆ.[೧೪೭] ಕ್ರಿ.ಶ ೧೧೭೨ರ ಶಾಸನದಲ್ಲಿ ಗದ್ದೆ ಭೂಮಿಯ ವಿಧಗಳನ್ನು ತಿಳಿಸುತ್ತದೆ. ಮಣಲಗದ್ದೆ ಸಲಗೆ ೩ ಹಳುಗಿನ ಗದ್ದೆ ಸಲಗೆ ೨ ಯರೆಯ ಗದ್ದೆ ಸಲಗೆ ೩ ಎಂದಿದೆ.[೧೪೮] ಇಲ್ಲಿ ಭತ್ತ ಅಥವಾ ಕಬ್ಬು ಬೆಳೆದಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೮೯ರ ಶಾಸನದಲ್ಲಿ ಬಯಲಗದ್ದೆ ಉಲ್ಲೇಖವಿದೆ.[೧೪೯] ಕ್ರಿ.ಶ. ೧೩ನೆಯ

ಶತಮಾನದ ಶಾಸನದಲ್ಲಿ ಪೊಕ್ಕೊಳ್ಳಿ ಉಲ್ಲೇಖವಿದೆ. ಇದನ್ನು ಮೂರು ಜನ ಬ್ರಾಹ್ಮಣರಿಗೆ ದಾನ ನೀಡಿದರೆಂದು ಶಾಸನವು ತಿಳಿಸುತ್ತದೆ. ಬಾ.ರಾ. ಗೋಪಾಲ್ ಅವರು ದಾನ ನೀಡಿದ ಭೂಮಿಗಳಲ್ಲಿ ಕೆಲವು ಬಳೋವರಕ್ಷೇತ್ರ, ವಾಸ್ತುಕಕ್ಷೇತ್ರ, ಪುರಾಣಕ್ಷೇತ್ರ, ಮಾಹೇಶ್ವರೀಕ್ಷೇತ್ರ, ಚತುಷ್ಪತ್‌ಕ್ಷೇತ್ರ ಹಾಗೂ ಪುಕ್ಕುಲ್ಲಿಕ್ಷೇತ್ರ ಎಂಬುದಾಗಿ ವಿವರಿಸಲ್ಪಟ್ಟಿದೆ ಎಂದಿದ್ದಾರೆ.[೧೫೦] ಡಿ.ಸಿ ಸರ್ಕಾರ್ ಅವರು ಒಂದು ಪ್ರಕಾರದ ಭೂಮಿ ಎಂದಿದ್ದಾರೆ.[೧೫೧] ಕ್ರಿ.ಶ. ೧೧೦೮ರ ಶಾಸನದಲ್ಲಿ ಸಾಲಕೆಯಿ ಮತ್ತಕೊಂದರ ಉಲ್ಲೇಖವಿದೆ.[೧೫೨] ಕ್ರಿ.ಶ. ೧೨೧೮ರ ಶಾಸನದಲ್ಲಿ ನಂದಾದೀವಿಗೆಗೆ ಎಳ್ಳುಕೆಯಿ ಕಂಬ ೩೦.[೧೫೩] ಎಂದಿದೆ. ಎಳ್ಳಿನ ಭೂಮಿ ಅಂದರೆ ಎಳ್ಳು ಬೆಳೆಯನ್ನು ಬೆಳೆಯುವ ಭೂಮಿ ಎನ್ನಲಾಗಿದೆ. ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ ಸಾಲಕೆಯಿ ಗಳೆಯ ಮತ್ತರೊನ್ದು ಎಂದಿದೆ.[೧೫೪]

ಕ್ರಿ.ಶ. ೧೦೪೪ ಶಾಸನದಲ್ಲಿ 'ಕರಿಯ ಕೆಂಮ್ಮತ್ತ ೧೦೦' ಎಂದಿದೆ.[೧೫೫] ಕ್ರಿ.ಶ. ೧೦೬೮ರ ಶಾಸನದಲ್ಲಿ ಕರಿಯ ಕೆಮ್ಮತ್ತರು೫ ಎಂದಿದೆ.[೧೫೬] ಕ್ರಿ.ಶ. ೧೧೨೦ರ ಶಾಸನದಲ್ಲಿ ಕಿಸುಮತ್ತರು ೩೦ ಕೃಷ್ಣಭೂಮಿ ೩೦ರ ಉಲ್ಲೇಖವಿದೆ.[೧೫೭] ಕ್ರಿ.ಶ. ೧೧೩೪ರ ಶಾಸನದಲ್ಲಿ ಯರೆಭೂಮಿ, ಕೆಂಗಾಡು, ಹುಳಿಯರೆ ಭೂಮಿಗಳ ಉಲ್ಲೇಖವಿದೆ.[೧೫೮] ಕ್ರಿ.ಶ. ೧೧೧೭ರ ಶಾಸನದಲ್ಲಿ ಎರೆಯ ಭೂಮಿ ಉಲ್ಲೇಖವಿದೆ.[೧೫೯] ಕ್ರಿ.ಶ. ೧೧೪೭ ಶಾಸನದಲ್ಲಿ 'ಮೊಗೆಕಮ್ಮ' ಎಂದಿದೆ.[೧೬೦] ಕ್ರಿ.ಶ. ೯೭ರ ಶಾಸನದಲ್ಲಿ ಕಾಳ್ಕೆಯ್ಗೆ ಮಣ್ಣು(ಕಪ್ಪು ಮಣ್ಣು) ಉಲ್ಲೇಖವಿದೆ.[೧೬೧] ಕ್ರಿ.ಶ. ೧೧೬೩ರ ಶಾಸನದಲ್ಲಿ ಮಗೆಮತ್ತರು ೧೪ ಎರೆಮತ್ತರೆಂಟು[೧೬೨] ಎಂದಿದೆ. ಕ್ರಿ.ಶ. ೧೦೪೭ರ ಶಾಸನದಲ್ಲಿ ಕರಿಯಮತ್ತರೆಂಟು ಕಿಸುಮತ್ತರ್೪[೧೬೩] ಎಂದಿದೆ. ಕ್ರಿ.ಶ. ೧೦೮೨ರ ಶಾಸನದಲ್ಲಿ ಬಾವಿಗೆ ಯರೆಯಮತ್ತರು೪ ಹೊಂಗೆ ೪ ಕೆಂಗಾಡು ೪ ಬಿಟ್ಟರೆಂದಿದೆ.[೧೬೪] ಕ್ರಿ.ಶ. ೧೦೮೬ರ ಶಾಸನದಲ್ಲಿ ಕರಿಯನೆಲಮತ್ತ[೧೬೫] ಎಂದಿದೆ. ಕ್ರಿ.ಶ. ೧೦೯ರ ಶಾಸನದಲ್ಲಿ ಹತ್ತಿಯರೆ, ಗುಣಿಗನ ಮತ್ತರ್ ಮಕ್ಕಿ ಗುಣಿಗನ ಮತ್ತರ್ ಹರಳು ಗುಣಿಗನಮತರ್ ಕೆಂಗಾಡು ಗುಣಿಗನ ಮತ್ತರ್, ಕಳಜುಗುಣಿಗನ ಮತ್ತರ್ ಗಟ್ಟಿಗುಣಿಗನ್ ಮತರ್‌ಗಳ ಉಲ್ಲೇಖವಿದೆ.[೧೬೬] ಕ್ರಿ.ಶ. ೧೨೦೯ರ ಶಾಸನದಲ್ಲಿ ಕರಿಯಮಾಗಿ ಮತ್ತರು೩, ಹಂದೆಯ ಕೆಂಗಾಡು ಮತ್ತರು ೩ ಹುಣಿಸೆಯ ಕೆಂಗಾಡು ಎಂದಿದೆ.[೧೬೭] ಕ್ರಿ.ಶ. ೧೨೨೨ರ ಶಾಸನದಲ್ಲಿ ನೀರುಭೂಮಿ, ಕೀಳುಭೂಮಿ ಎಂದಿದೆ.[೧೬೮] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಮಣಲ ಮತ್ತರ ಉಲ್ಲೇಖವಿದೆ.[೧೬೯] ಕ್ರಿ.ಶ. ೧೧೭೪ರ ಶಾಸನದಲ್ಲಿ ತೋಟಗದ್ದೆ ಎರೆ ಮತ್ತರು, ಕೆಂಗಾಡು ಮತ್ತರು[೧೭೦] ಉಲ್ಲೇಖವಿದೆ. ಕ್ರಿ.ಶ. ೧೧೦೭ರ ಶಾಸನದಲ್ಲಿ ಮಣಲಕೆಯ ಉಲ್ಲೇಖವಿದೆ.[೧೭೧] ಕ್ರಿ.ಶ. ೧೦೭೯ರ ಶಾಸನದಲ್ಲಿ ಕೆಂಪುಮಣ್ಣಿನ ಉಲ್ಲೇಖವಿದೆ.[೧೭೨] ಬಾಗಳಿಯ ಸುತ್ತ ಮುತ್ತಲ ಊರಿನ ಹೆಸರಿನ ಹೊಲವಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೦೯ರ ಶಾಸನದಲ್ಲಿ ಕೆಂಗಾಡು ಉಲ್ಲೇಖವಿದೆ.[೧೭೩] ಕ್ರಿ.ಶ. ೧೨೩೧ರ ಶಾಸನದಲ್ಲಿ 'ಎರೆಯಕೆಯಿ' ಮತ್ತರು ಕಂಬ ೩೦೦ ಎಂದಿದೆ.[೧೭೪] ಕೆರೆಯ ಸಮೀಪದ ಭೂಮಿ ಎಂದರ್ಥ. ಕ್ರಿ.ಶ. ೧೧೧೩ರ ಶಾಸನದಲ್ಲಿ ಕರುವಿನಕೆಯಿ, ಹರಳನೆಲದಿಂ ಎರೆಯ ಮತರ್ ಎಂದಿದೆ.[೧೭೫] ಕ್ರಿ.ಶ. ೧೨೪೮ರ ಶಾಸನದಲ್ಲಿ ಮಕ್ಕಿಯಗದ್ದೆಯ[೧೭೬] ಉಲ್ಲೇಖವಿದೆ. ಕ್ರಿ.ಶ. ೧೧೮೧ರ ಶಾಸನದಲ್ಲಿ ತಕ್ಕಿಲ ಗದ್ದೆಯ ಉಲ್ಲೇಖವಿದೆ.[೧೭೭] ಕಣಜ ಹಳ್ಳಿಯ ಶಾಸನವೊಂದರಲ್ಲಿ 'ಸಾರ ಭೂಮಿಕೆಯಿ'ಯ ಉಲ್ಲೇಖವಿದೆ.[೧೭೮] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಮಕ್ಕಿಯ ಗಳ್ದೆ, ಕಡಂಬ ಗದ್ದೆ ಸನ್ಧಿ[೧೭೯] ಎಂದಿದೆ. ಕ್ರಿ.ಶ. ೧೧೨೨ರ ಶಾಸನದಲ್ಲಿ ಎರೆಭೂಮಿಯ ಉಲ್ಲೇಖವಿದೆ.[೧೮೦] ಕ್ರಿ.ಶ. ೧೦೨೨ರ ಶಾಸನದಲ್ಲಿ 'ಕರಿಯ ಕೆಯ್ ಮತ್ತರು' ಎಂದಿದೆ.[೧೮೧] ಕ್ರಿ.ಶ ೧೧೪೯ರ ಶಾಸನದಲ್ಲಿ ಕರಿಯ ಹೊಲದ ಉಲ್ಲೇಖವಿದೆ. ಹಿರಿಯ ಕೋಲ ಹಿಮ್ಮತ್ತರು ಕರಿಯ ಕೆಯ್ಯು ಎಂದಿದೆ.[೧೮೨] ಕ್ರಿ.ಶ. ೧೧೨೬ರ ಶಾಸನದಲ್ಲಿ 'ಕಾಡು ಗಟ್ಟಿ'ಯ ಉಲ್ಲೇಖವಿದೆ.[೧೮೩] ಕ್ರಿ.ಶ. ೧೧೩೦ರ ಶಾಸನದಲ್ಲಿ ಹೊಂಗೆ ಎರೆ ಉಲ್ಲೇಖವಿದೆ.[೧೮೪] ಕ್ರಿ.ಶ. ೧೧೧೪ರ ಶಾಸನದಲ್ಲಿ

ನೀರ್‌ಮಣ್, ಕರಿಯ ನೆಲದ ಉಲ್ಲೇಖವಿದೆ.[೧೮೫] ಕ್ರಿ.ಶ ೧೧೦೬ರ ಶಾಸನದಲ್ಲಿ ಕರಿಯನೆಲದ ಉಲ್ಲೇಖವಿದೆ.[೧೮೬] ಕ್ರಿ.ಶ ೧೧೯೬ರ ಶಾಸನದಲ್ಲಿ ಬಾವಿಯೆರೆಯಿಂ ಕರಿಯನೆಲ ಎಂದಿದೆ.[೧೮೭] ಬಾವಿಯ ಸಮೀಪ ಇರುವುದರಿಂದ ನೀರಾವರಿ ಭೂಮಿಯಾಗಿರುವಂತೆ ತಿಳಿದುಬರುತ್ತದೆ. ಕ್ರಿ.ಶ. ೧೨೧೭ರ ಶಾಸನದಲ್ಲಿ ಕರಭೂಮಿಯ ಉಲ್ಲೇಖವಿದೆ.[೧೮೮] ಕ್ರಿ.ಶ. ೧೧೩೪ರ ಶಾಸನದಲ್ಲಿ ಕರಿಯನೆಲದ ಉಲ್ಲೇಖವಿದೆ.[೧೮೯] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಕರಿಯ ಭೂಮಿಯ ಉಲ್ಲೇಖವಿದೆ.[೧೯೦] ಕ್ರಿ.ಶ. ೧೦೬೬ರ ಶಾಸನದಲ್ಲಿ ಕರಿಯ ಭೂಮಿ ಉಲ್ಲೇಖವಿದೆ.[೧೯೧] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಹರಳಿಹಾಳು ಎಂದಿದೆ.[೧೯೨] ಕ್ರಿ.ಶ. ೧೨೬೦ರ ಶಾಸನದಲ್ಲಿ 'ಹರಳಕೆಯ' ಉಲ್ಲೇಖವಿದೆ.[೧೯೩] ಕ್ರಿ.ಶ ೧೧೮೮ರ ಶಾಸನದಲ್ಲಿ, 'ಹರಳಕೆಯಿ' ಉಲ್ಲೇಖವಿದೆ.[೧೯೪] ಈ ಭೂಮಿಯು ಕಲ್ಲುಭೂಮಿ ಆಗಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೦೬ರ ಶಾಸನದಲ್ಲಿ ಮಣಲುಮತ್ತ ಎಂದಿದೆ.[೧೯೫] ನುಲೇನೂರು ಗ್ರಾಮದಲ್ಲಿ ಮಣಲಗದ್ದೆ, ಎರೆಯಗದ್ದೆ, ಯರೆಯಕೆಯಿ, ಮಣಲಕೆಯಿ ಉಲ್ಲೇಖವಿದೆ.[೧೯೬] ಕ್ರಿ.ಶ. ೧೨೨೦ರ ಶಾಸನದಲ್ಲಿ ಮಣಲಕೆಯಿ, ಆಲದಕೆಯಿ ಉಲ್ಲೇಖವಿದೆ.[೧೯೭] ಕ್ರಿ.ಶ. ೧೨-೧೩ನೆಯ ಶತಮಾನದ ಶಾಸನದಲ್ಲಿ 'ಸವಸಿನಕೆಯಿ' ಉಲ್ಲೇಖವಿದೆ.[೧೯೮] ಕ್ರಿ.ಶ. ೧೧೮೬ರ ಶಾಸನದಲ್ಲಿ ಎರೆಯ ಕಂಬ ೩೭೦ ಮಣಲಗದ್ದೆ ಸಲಗೆ ಎಂದಿದೆ.[೧೯೯] ಇದು ನೀರಾವರಿ ಭೂಮಿಗೆ ಸಂಬಂಧಿಸಿದ ಭೂಮಿ. ಕ್ರಿ.ಶ. ೧೧೮೫ರ ಶಾಸನದಲ್ಲಿ ಎರೆಯಕೆಯ ಉಲ್ಲೆಖವಿದೆ.[೨೦೦] ಕ್ರಿ.ಶ. ೧೧೯೬ರ ಶಾಸನದಲ್ಲಿ ಅತ್ತಿಯ ಮಣಲಗದ್ದೆ ಉಲ್ಲೇಖವಿದೆ.[೨೦೧] ಕ್ರಿ.ಶ. ೧೧೭೪ರ ಶಾಸನದಲ್ಲಿ ಹಳುಗಿನ ಗದ್ದೆ ಉಲ್ಲೇಖವಿದೆ.[೨೦೨] ಕ್ರಿ.ಶ. ೧೧೪೯ರ ಶಾಸನದಲ್ಲಿ 'ಕಾರೆಯಹಾಳಲು' ಬೆದ್ದಲೆ ಮತ್ತ ಎಂದಿದೆ.[೨೦೩] ಕ್ರಿ.ಶ. ೧೧೯೧ರ ಶಾಸನದಲ್ಲಿ ಕಾರಗದ್ದೆಯ, ನೀರ್ವರಿ ಭೂಮಿ ಎರೆಯಕೆಯಿ ಎಂದಿದೆ.[೨೦೪] ನೀರಾವರಿ ಸಂಬಂಧಿ ಭೂಮಿಯಾಗಿದೆ. ಕ್ರಿ.ಶ ೧೩ನೆಯ ಶತಮಾನದ ಶಾಸನದಲ್ಲಿ ಮಕ್ಕಿ ಕೊಳಗದ ಉಲ್ಲೇಖವಿದೆ.[೨೦೫] ಕ್ರಿ.ಶ. ೧೧೫೮ರ ಶಾಸನದಲ್ಲಿ ಎರೆಯಕೆಯ೨ ಮತ್ತರು ಕೆಂಗಾಡುಮ ಎಂದಿದೆ.[೨೦೬] ಕ್ರಿ.ಶ. ೧೨೩೮ರ ಶಾಸನದಲ್ಲಿ ಹರಳಕೆಯಿ ಉಲ್ಲೆಖವಿದೆ.[೨೦೭] ಕ್ರಿ.ಶ. ೧೨೮೮ರ ಶಾಸನದಲ್ಲಿ ಮಣಲಕೆಯಿ ಕರಭೂಮಿಯ ಉಲ್ಲೇಖವಿದೆ.[೨೦೮] ಕ್ರಿ.ಶ. ೧೨೦೭ರ ಶಾಸನದಲ್ಲಿ 'ಕಾನಿಯ ಕೆಯ್ಯ' ಉಲ್ಲೇಖವಿದೆ.[೨೦೯] ಕ್ರಿ.ಶ. ೧೧೮೧ರ ಶಾಸನದಲ್ಲಿ ಹರಳ ಬೆದ್ದಲೆ ಎಂದಿದೆ.[೨೧೦] ಕ್ರಿ.ಶ. ೧೧೧೭ರ ಶಾಸನದಲ್ಲಿ ತೋಟದ ಮಣ್ಣು ಎಂದು ಉಲ್ಲೇಖವಿದೆ.[೨೧೧] ಕ್ರಿ.ಶ. ೧೨ನೆಯ ಶತಮಾನದಲ್ಲಿ ಎರೆ ಮತ್ತರು ಉಲ್ಲೇಖವಿದೆ.[೨೧೨] ಕ್ರಿ.ಶ. ೧೧೭೭ರ ಶಾಸನದಲ್ಲಿ ಎರೆ ಭೂಮಿಯನ್ನು ಉಲ್ಲೇಖಿಸಿದೆ.[೨೧೩] ೬ನೆಯ ವಿಕ್ರಮಾದಿತ್ಯನ ಶಾಸನದಲ್ಲಿ ಎರೆಮತ್ತರು, ಕಿಸುಮತ್ತರು ಉಲ್ಲೇಖವಿದೆ.[೨೧೪] ಕ್ರಿ.ಶ. ೧೧೦೪ರ ಶಾಸನದಲ್ಲಿ ಕರಿಯನೆಲ ೫೪ ಮತ್ತರು, ೪೫೦ ಕಮ್ಮ ಭೂದಾನ ನೀಡಿದ್ದನ್ನು ತಿಳಿಸುತ್ತದೆ.[೨೧೫] ಕ್ರಿ.ಶ. ೧೧೪೫ರ ಶಾಸನದಲ್ಲಿ ೩೦೦ ಮತ್ತರು ಕರಿಯ ಭೂಮಿ ದಾನ ನೀಡಿದ್ದನ್ನು ತಿಳಿಸುತ್ತದೆ.[೨೧೬] ಕ್ರಿ.ಶ. ೧೨೭೧ರ ಶಾಸನದಲ್ಲಿ ಕರಭೂಮಿಯ ಉಲ್ಲೇಖವಿದೆ.[೨೧೭] ಕ್ರಿ.ಶ. ೧೧೦೪-೦೫ರ ಶಾಸನದಲ್ಲಿ ಕರಭೂಮಿ ಉಲ್ಲೇಖವಿದೆ.[೨೧೮] ಕಕ್ಕೂರು ಶಾಸನವೊಂದರಲ್ಲಿ ಹರಳಕೆಯ ಉಲ್ಲೇಖವಿದೆ.[೨೧೯] ಕ್ರಿ.ಶ. ೧೧೧೧ರ ಶಾಸನದಲ್ಲಿ ಕರಿಯಭೂಮಿ, ಮಾಫಣಿ ಭೂಮಿಯ ಉಲ್ಲೇಖವಿದೆ.[೨೨೦] ಕ್ರಿ.ಶ. ೧೧೮೬ರ ಶಾಸನದಲ್ಲಿ ಹಾಳಿಗೂಟದ ಕೆಯ ಎಂದಿದೆ.[೨೨೧] ಚಿಲಮಗೆರೆಯ ಶಾಸನವೊಂದರಲ್ಲಿ ಎರೆಮತ್ತರು ೧ ಕಮ್ಮ ೧೦೦ ಕೆಂಗಾಡು ಕಂಮ ೨೫೦ ಎಂದಿದೆ.[೨೨೨] ಕ್ರಿ.ಶ. ೧೨೬೩ರ ಶಾಸನದಲ್ಲಿ ಹರಳಕೆಯಿ ಎಂದಿದೆ.[೨೨೩] ಕ್ರಿ.ಶ ೧೧೮೮-೮೯ರ ಶಾಸನದಲ್ಲಿ 'ವುಳಿಯ ಭೂಮಿ' ಎಂದಿದೆ.[೨೨೪] ಕ್ರಿ.ಶ ೧೧೫೫ರ ಶಾಸನದಲ್ಲಿ ಮೆಕ್ಕೆ ಭೂಮಿ ಉಲ್ಲೇಖವಿದೆ.[೨೨೫] ಕೆ.ವಿ.ರಮೇಶ್ ಅವರು ತಮ್ಮ ಪುಸ್ತಕ 'A History of South Canare'ದಲ್ಲಿ ಬೆದಕಾರ, ಬೆದೆಗಣಗಿಲು, ಕಳಭೂಮಿಗಳನ್ನು ಉಲ್ಲೇಖಿಸಿದ್ದಾರೆ.[೨೨೬]

ಶಾಸನಗಳು ಮಣಲಕೆಯಿ ಎಂದು ಉಲ್ಲೇಖಿಸಿರುವುದನ್ನು ಗಮನಿಸಲಾಗಿದೆ. ಈ ಭೂಮಿಯನ್ನು ಬಿಳಿನೆಲ, ಬೆಳ್‌ಭೂಮಿ, ಬಿಳಲುಭೂಮಿ ಎಂತಲೂ ಕರೆಯುತ್ತಾರೆ. ಈ ಮರಳು ಭೂಮಿಗೆ ಹಿಂದೆ ಇದ್ದ ಪ್ರಾಮುಖ್ಯತೆ ಇಂದು ಗಣನೀಯವಾಗಿ ಕಡಿಮೆಯಾಗಿದೆ. ಇಂದಿನ ಆಧುನಿಕ ಸಂದರ್ಭದಲ್ಲಿ ಕೃಷಿ ಭೂಮಿಯಲ್ಲಿದ್ದ ಮಾರ್ಪಾಟುಗಳನ್ನಿಲ್ಲಿ ಗುರುತಿಸಬಹುದಾಗಿದೆ. ಮರಳು ಭೂಮಿಯ ವೈಶಿಷ್ಟ್ಯವೆಂದರೆ, ಈ ಭೂಮಿಯಲ್ಲಿಯ ಫಲವತ್ತತೆಯು ಕನಿಷ್ಠ ಮೂರು ವರ್ಷದ ನಂತರ ಕ್ರಮೇಣ ಬರುಡಾಗಲು ಆರಂಭಿಸುತ್ತದೆ. ಇದಕ್ಕೆ ಪ್ರಮುಖ ಕಾರಣ ಈ ಭೂಮಿಯಲ್ಲಿ ಗೆದ್ದಲು ಹಿಡಿಯುವಿಕೆಯ ಪ್ರಮಾಣ ಕಡಿಮೆ ಇರುತ್ತದೆ. ಭೂಮಿ ಗೆದ್ದಲು ಬಾರದಿದ್ದಾಗ ಬೆಳೆ ಬೆಳೆದ ಕೊಯ್ಲಿನ ನಂತರ ಕೂಳೆ, ಒಣಗಿ ಉದುರಿದ ಎಲೆ ಮೊದಲಾದವುಗಳು ಮಣ್ಣಿನಲ್ಲಿ ಕಲೆತು ಕೊಳೆಯುವುದಿಲ್ಲ. ಹೀಗೆ ಕೊಳೆಯದಿದ್ದರೆ ಗೊಬ್ಬರವಾಗಿ ಪರಿವರ್ತನೆಯಾಗುವುದಿಲ್ಲ. ಅದು ಕೊಳೆತು ಗೊಬ್ಬರವಾದರೆ ಭೂಮಿ ಫಲವತ್ತಾಗಲು ಸಹಾಯವಾಗುತ್ತದೆ. ಆದರೆ ಈ ಭೂಮಿಯಲ್ಲಿ ಗೆದ್ದಲು ಹಿಡಿಯದ ಕಾರಣದಿಂದಾಗಿ ಭೂಮಿಯು ದಿನ ಕಳೆದಂತೆ ತನ್ನ ಫಲವತ್ತತೆಯನ್ನು ಕಳೆದುಕೊಳ್ಳುತ್ತದೆ. ಇಂದು ಬದಲಾದ ಕೃಷಿ ಸನ್ನಿವೇಶಗಳು ಸಂಭವಿಸಿವೆ. ಪ್ರಾಚೀನ ಸಂದರ್ಭದಲ್ಲಿ ಪಾರಂಪರಿಕ ಕೃಷಿ ವ್ಯವಸ್ಥೆ ರೂಢಿಯಲ್ಲಿತ್ತು. ಅವರು ಕೃಷಿಯೊಂದಿಗೆ ಪಶುಪಾಲನೆ, ಕುರಿಸಾಕಾಣಿಕೆಯ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಇದರಿಂದ ಬರುವ ಘನ ತ್ಯಾಜ್ಯಗಳನ್ನು ಪ್ರತಿವರ್ಷ ಅಥವಾ ಕನಿಷ್ಠ ಎರಡು ವರ್ಷಗಳಿಗೊಮ್ಮೆಯಾದರೂ ಹೊಲಗಳಿಗೆ ಹಾಕುತ್ತಿದ್ದರು. ಆದರೆ ಇಂದು ಪಶುಪಾಲನೆಯೇ ವಿರಳವಾಗಿ, ಆ ಜಾಗವನ್ನು ರಸಾಯನಿಕ ರಸಗೊಬ್ಬರಗಳು ಆಕ್ರಮಿಸಿರುವ ಈ ಹೊತ್ತಿನಲ್ಲಿ ನೆಲವು ತನ್ನ ತೃಷ್ಟಿಗುಣವನ್ನು ವರ್ಷದಿಂದ ವರ್ಷಕ್ಕೆ ಕಳೆದುಕೊಳ್ಳುತ್ತಿದೆ. ಹೇರಳವಾಗಿ ಮಣ್ಣು, ಗೊಬ್ಬರ ಹಾಕಿದ ಮೂರುವರ್ಷ ಚೆನ್ನಾಗಿ ಬೆಳೆದು ನಂತರ ಕಾಲಾನುಕ್ರಮದಲ್ಲಿ ನೆಲ ಬರಡಾಗುವುದರಿಂದ ಈ ಭೂಮಿ ಇಂದು ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿದೆ. ಅಲ್ಲದೆ ಮಳೆ ಹೆಚ್ಚಾದಾಗ ಈ ಭೂಮಿಯು ಜೌಗು ಹಿಡಿಯುತ್ತದೆ. ಮಳೆ ಬಾರದೆ ಮಳೆ ಕಡಿಮೆಯಾದರೂ ಬೇಗನೆ ಪೈರುಗಳು ಒಣಗುವ ಗುಣ ಈ ನೆಲಕ್ಕಿದೆ. ಬೆದ್ದಲು ಭೂಮಿಯಲ್ಲಿ ಮಣಲಗದ್ದೆಯ ಉಲ್ಲೇಖವೂ ಶಾಸನಗಳಲ್ಲಿ ಕಂಡುಬಂದಿದೆ.

ಈ ಭೂಮಿಯಲ್ಲಿ ಮುಂಗಾರು ಮತ್ತು ಹಿಂಗಾರು ಎಂದು ಎರಡು ಬೆಳೆ ಬೆಳೆಯಲಾಗುತ್ತದೆ. ಇವುಗಳನ್ನು ಹದ ಮತ್ತು ಬೆದೆಯರಿತು ಬಿತ್ತಿದರೆ ಮಾತ್ರ ಫಸಲು ಪಡೆಯಲು ಸಾಧ್ಯ. ಇಲ್ಲವಾದರೆ ಮಳೆಗೆ ಸಿಕ್ಕಿ ಫಸಲು ನಾಶವಾಗಿಬಿಡುತ್ತದೆ. ಮುಂಗಾರಿನಲ್ಲಿ ಹತ್ತಿ, ಎಳ್ಳು, ಉದ್ದು, ಹೆಸರು, ಶೇಂಗಾ, ಕಡಿಮೆ ಪ್ರಮಾಣದಲ್ಲಿ ಜೋಳ ಬೆಳೆಯುತ್ತಾರೆ. ಹಿಂಗಾರು ಬೆಳೆಯಾಗಿ ಹುರುಳಿ, ರಾಗಿ, ನವಣೆ, ಸಾವೆ, ಕುಸುಮೆ, ಅಲಸಂದಿ, ಕುರೆಷಣಿ ಬಿತ್ತುವ ಕ್ರಮವಿದೆ. ಸಾವೆಯನ್ನು ಮಗೆ ಮಳೆಗೆ ಬಿತ್ತಿದರೆ ಪೈರು ಹುಲುಸಾಗಿ ಬೆಳೆಯುತ್ತದೆ. ಈ ಭೂಮಿಯಲ್ಲಿ ಎಳ್ಳು ಬೆಳೆದಾಗ ಭೂಮಿ ವಿಷಯುಕ್ತವಾಗುತ್ತದೆ. ಆದ್ದರಿಂದ ಆವರ್ತನ ಬೆಳೆ ಬೆಳೆಯಬೇಕು. ಶಾಸನದಲ್ಲಿ 'ಎಳ್ಳಕೆಯಿ'ಯ ಉಲ್ಲೇಖಗಳು ಕಂಡುಬರುತ್ತವೆ. ಎಳ್ಳು ಬೆಳೆಯಲು ಸೂಕ್ತ ನೆಲವಿದು. ಎಳ್ಳು ಬೆಳೆದುದನ್ನು ಕೀಳುವ ಸಂದರ್ಭದಲ್ಲಿ ಬೇರಿನಿಂದ, ಮಣ್ಣು ಬಿಟ್ಟುಕೊಳ್ಳುವುದರಿಂದ ಈ ಭೂಮಿಯಲ್ಲಿ ಈ ಬೆಳೆ ಬೆಳೆಯುವುದು ಸೂಕ್ತ. ಬೇರೆ ಭೂಮಿಯಲ್ಲಿ ಬೆಳೆದರೆ ಮಣ್ಣು ಬೇರಿಗೆ ಹಂಚಿಕೊಳ್ಳುತ್ತದೆ. ಮತ್ತು ಗಿಡಗಳನ್ನು ಕೀಳುವುದು ಶ್ರಮದಾಯಕ. ಮಣ್ಣು ಬೇರಿಗೆ ಅಂಟಿದರೆ ಧಾನ್ಯವೆಲ್ಲ ಮಣ್ಣು, ಕಲ್ಲು ಮಿಶ್ರಿತವಾಗುತ್ತದೆ. ಈ ಕಾರಣದಿಂದ ಎಳ್ಳು ಬೆಳೆಗೆ ಈ ಭೂಮಿ ಸೂಕ್ತವೆನ್ನಿಸಲಾಗಿದೆ.

**ಕಿಸುಕಾಡು**

ಶಾಸನಗಳಲ್ಲಿ ಕಿಸುಕಾಡು ಅಥವಾ ಕೆಂಗಾಡು ಭೂಮಿಯ ಉಲ್ಲೇಖಗಳು ಬಂದಿರುವುದು ಮೇಲೆ ಉಲ್ಲೇಖಿತ ಶಾಸನಗಳಿಂದ ತಿಳಿದುಬರುತ್ತದೆ. ಇದನ್ನು ಕೆಂಗಲುಭೂಮಿ, ಕಬ್ಬೆಭೂಮಿ, ಕೆಂಪುಭೂಮಿ, ಕೆಮ್ಮತ್ತರು ಎಂದು ಕರೆಯಲಾಗುತ್ತದೆ. ಇದು ಬೆದ್ದಲು ಮತ್ತು ನೀರಾವರಿ ಎರಡರಲ್ಲೂ ಕಂಡುಬರುತ್ತದೆ. ಈ ಭೂಮಿಯಲ್ಲಿ ನೀರಾವರಿ ಬೆಳೆಯನ್ನು ಬೆಳೆಯಲಾಗುತ್ತದೆ. ಹಾಗೆಯೇ ಬೆದ್ದಲು ಬೆಳೆಗಳನ್ನು ಸಹ ಬೆಳೆಯಲಾಗುತ್ತದೆ. ಆಹಾರ ಧಾನ್ಯಗಳಾದ ಜೋಳ, ರಾಗಿ, ನವಣೆ, ಸಾವೆ, ಹುರುಳಿ, ತೊಗರಿ, ಮೆಣಸಿನಕಾಯಿ, ಸಾಸಿವೆ, ದಾಳಿಂಬೆ, ಅಡಕೆ ಮೊದಲಾದ ಬೆಳೆ ಬೆಳೆಯಲು ಈ ನೆಲ ಸೂಕ್ತವಾಗಿದೆ. ಕರ್ನಾಟಕದ ಎಲ್ಲ ಭಾಗಗಳಲ್ಲೂ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ಈ ಭೂಮಿ ಕಂಡುಬರುತ್ತದೆ. ಶಾಸನಗಳಲ್ಲಿರುವ ಉಲ್ಲೇಖಗಳನ್ನು ಗಮನಿಸಿದರೆ ಚಿತ್ರದುರ್ಗ, ಚಿಕ್ಕಮಗಳೂರು, ಶಿವಮೊಗ್ಗ, ದಾವಣಗೆರೆ, ಬಳ್ಳಾರಿ, ರಾಯಚೂರು ಎಲ್ಲಾ ಭಾಗಗಳಲ್ಲೂ ಈ ಭೂಮಿ ಕಂಡುಬರುತ್ತದೆ. ಈ ಮಣ್ಣಿಗೆ ನೀರಿನ ಅಗತ್ಯ ಹೆಚ್ಚಿರುತ್ತದೆ. ಅಲ್ಲದೆ ಇದು ತುಂಬಾ ಗಟ್ಟಿ ಭೂಮಿಯಾಗಿರುತ್ತದೆ.

**ಎರೆಭೂಮಿ**

ಈ ಭೂಮಿಯನ್ನು ಕರಿಯ ಮಣ್ಣಿನ ಭೂಮಿ, ಕಪ್ಪುಭೂಮಿ, ಕೃಷ್ಣಭೂಮಿ ಎಂದೆಲ್ಲ ಕರೆಯಲಾಗಿದೆ. ಇದು ನೀರಾವರಿ ಮತ್ತು ಬೆದ್ದಲು ಭೂಮಿ ಎರಡರಲ್ಲೂ ಕಂಡುಬರುತ್ತದೆ. 'ಎರೆಯಗದ್ದೆ' ಎಂಬ ಉಲ್ಲೇಖ ಶಾಸನದಿಂದ ಕಂಡುಬರುತ್ತದೆ. ಉತ್ತರ ಕರ್ನಾಟಕದ ಬಹುಭಾಗ ಕಪ್ಪುಮಣ್ಣಿನಿಂದ ಕೂಡಿದೆ. ಅದರಲ್ಲೂ ರಾಯಚೂರು, ಬಳ್ಳಾರಿ ಪ್ರದೇಶಗಳಲ್ಲಿ ತುಂಗಭದ್ರ ಮತ್ತು ಕೃಷ್ಣಾನದಿಗಳು ಹರಿಯುವುದರಿಂದ ಈ ನದಿಗಳು ಹರಿದು ಬರುವಾಗ ತನ್ನೊಂದಿಗೆ ಮೆಕ್ಕಲು ಮಣ್ಣನ್ನು ತಂದು ಸೇರಿಸುತ್ತವೆ. ಈ ಕಾರಣದಿಂದಾಗಿ ಇಲ್ಲಿನ ಭೂಮಿಯು ಫಲವತ್ತತೆಯಿಂದ ಕೂಡಿದ ಸಂಪದ್ಭರಿತ ಭೂಮಿಯಾಗಿದೆ. ಜೊತೆಗೆ ಹೆಚ್ಚಿನ ನೀರಾವರಿ ಆಶ್ರಿತ ಭೂಮಿ ಕಂಡುಬರುತ್ತದೆ. ಶಾಸನಗಳು ತಿಳಿಸುವಂತೆ ಈ ಭೂಮಿ ಉತ್ಕೃಷ್ಟವಾಗಿ ಬೆಳೆಯುತ್ತದೆ. ತಂಬಾಕು, ಹತ್ತಿ, ಭತ್ತ, ಕಬ್ಬು, ಜೋಳ, ಕಡಲೆ, ಕೊತ್ತುಂಬರಿ, ಮೆಣಸು ಮೊದಲಾದ ಬೆಳೆಗಳನ್ನು ಬೆಳೆಯಲಾಗುತ್ತದೆ. ಇದರಲ್ಲಿ ತೋಟದ ಬೆಳೆಗಳಾದ ವೀಳೆದೆಲೆ, ಅಡಕೆ, ತೆಂಗು ಮೊದಲಾದ ಬೆಳೆಗಳು, ಹಣ್ಣುಗಳಲ್ಲಿ ಮಾವು, ಬಾಳೆ ಮೊದಲಾದವುಗಳನ್ನು ಬೆಳೆಯಲಾಗುತ್ತದೆ.

**ಹರಳಕೆಯಿ**

ಕಲ್ಲುಗಳಿಂದ ಆವೃತ್ತವಾದ ಭೂಮಿ 'ಕಲ್ನೆಲ' ಎಂದೂ ಸಹ ಕರೆಯುವರು. ಈ ಭೂಮಿಯಲ್ಲಿ ರಾಗಿ, ನವಣೆ, ಹುರುಳಿ, ಪೈ ಜೋಳ ಮೊದಲಾದ ಸಿರಿಧಾನ್ಯಗಳನ್ನು ಬೆಳೆಯಲು ಯೋಗ್ಯವಾಗಿರುತ್ತದೆ. ಇತ್ತೀಚೆಗೆ ದಾಳಿಂಬೆ ಬೆಳೆಯುವುದು ಕಂಡುಬರುತ್ತದೆ. ಈ ಭೂಮಿಯಲ್ಲಿ ಬಿತ್ತನೆಯನ್ನು ಕೂರಿಗೆಯ ಸಹಾಯದಿಂದಲೇ ಮಾಡಬೇಕು. ಸಾಲುಗಳನ್ನು ಆಳಕ್ಕಿಳಿಸಿ ವ್ಯವಸಾಯ ಮಾಡಿದರೆ ಬಿತ್ತನೆ ಮಾಡಿದ ಬೀಜಗಳು ಅಡಿಮೊಳಕೆಯಾಗಿ ಮೇಲೇಳುವುದಿಲ್ಲ. ಕರ್ನಾಟಕದ ಹಲವು ಭಾಗಗಳಲ್ಲಿ ಅಲ್ಲಲ್ಲಿ ಈ ಭೂಮಿ ಕಂಡುಬರುತ್ತದೆ.

**ಗದ್ದೆಗಳು**

ಗದ್ದೆಗಳು ನೀರಾವರಿ ಭೂಮಿಗಳಾಗಿದ್ದು ಗುಳಿಯಗದ್ದೆ, ಗಣ(ಎಂದರೆ ಚಿಕ್ಕ ಚಿಕ್ಕ ಗದ್ದೆಗಳು), ಹಾಳಿಗದ್ದೆ (ದೊಡ್ಡ ಭೂಮಿಯಲ್ಲಿ ಉಳುಮೆ ಮಾಡುವುದಕ್ಕೆ ಹಾಳಿಗದೆ ಎನ್ನುವರು), ಗೊರಸಿನ ಹಾಳಿ, ಮಕ್ಕಿಯ ಕಾಳ್ಗಲಗದ್ದೆ, ವೊಸಮಕ್ಕಿ ಕೋಲುಗದ್ದೆ, ಎರೆಯಗದ್ದೆ ಎಂಬೆಲ್ಲ ಉಲ್ಲೇಖಗಳು ಕಂಡುಬರುತ್ತವೆ. ಇವುಗಳು ಸಾಮಾನ್ಯವಾಗಿ ಮಲೆನಾಡುಗಳಲ್ಲಿ ಚಿಕ್ಕಮಗಳೂರು, ಹಾಸನ, ಮೂಡಿಗೆರೆ, ಹೊಸನಗರ ಭಾಗಗಳಲ್ಲಿ ಕಂಡುಬರುತ್ತವೆ. ಗದ್ದೆ ಭೂಮಿಯಲ್ಲಿ ಹಲವು ವಿಧಗಳಿದ್ದು, ಅವು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಹೊಸಗದ್ದೆ[೨೨೭](ಹೊಸದಾಗಿ ಸಾಗುವಳಿ ಮಾಡಿದ ಗದ್ದೆ ಭೂಮಿಯಾಗಿದೆ), ಹೊಂಡದ ಗದ್ದೆ[೨೨೮](ಸಮತಟ್ಟಾದ ತಗ್ಗು ಪ್ರದೇಶದ ಫಲವತ್ತಾದ ಭೂಮಿಯಾಗಿದೆ), ನಲ್ಲಿ ಗದ್ದೆ[೨೨೯](ನೀರು ಹರಿಯುವ ಗದ್ದೆ ಭೂಮಿ), ಹೊಲ[೨೩೦](ಸಾಗುವಳಿ ಮಾಡುವ ಬೆಳೆ ಬೆಳೆಯುವ ಭೂಮಿಯಾಗಿದೆ), ಶೋತನ ಮಕ್ಕಿ[೨೩೧](ಕಡಿಮೆ ನೀರಾವರಿ ಸೌಲಭ್ಯ ಹೊಂದಿದ ಎತ್ತರದ ಭೂಮಿ), ಸಳೆ ಗದ್ದೆ[೨೩೨](ತೆನೆ ಬಡಿಯುವ ಎತ್ತರದ ಭೂಮಿ), ಸುವಾಳಿ ಗದ್ದೆ[೨೩೩](ಫಲವತ್ತಾದ ಭೂಮಿ), ನಾನಾ ಬೇಣ[೨೩೪] (ಹಲವಾರು ಬಗೆಯ ಬೀಳು ಭೂಮಿ), ನಿಚ್ಚಳಮಕ್ಕಿ[೨೩೫](ನಿಖರವಾದ ಪ್ರದೇಶದಲ್ಲಿ ಧಾನ್ಯ ಬೆಳೆಯುವ ಭೂಮಿ), ಬಂದಗದ್ದೆ[೨೩೬](ಫಲ ಬಿಟ್ಟು ನಿರ್ಬಂಧಿತ ಭೂಮಿ ನಾಲ್ಕು ಕಡೆಯಿಂದ ಮಣ್ಣಿನ ದಿಬ್ಬದ ತಡೆಗೋಡೆಯಿಂದ ಸುತ್ತುವರೆದ ಭೂಮಿ), ಬಾಣ ಗದ್ದೆ[೨೩೭](ಬಿರುಸು ಕಲ್ಲು ಮಿಶ್ರಿತ ಭೂಮಿ), ಬಿಳುಕಲ್ಲಮಕ್ಕಿ[೨೩೮](ಬಿಳಿಕಲ್ಲುಗಳಿಂದ ಕೂಡಿದ ಗಟ್ಟಿ ಭೂಮಿ), ಬೆಟು[೨೩೯](ಎತ್ತರದ ಗುಡ್ಡದ ಭೂಮಿ), ಬೇಣ ಪಾಳು ಅಥವಾ ಗೇರು[೨೪೦](ಹಲಸು ಮಾವು ಬೆಳೆಸುವ ಫಲವತ್ತಾದ ಭೂಮಿ), ಬೇಲೆ[೨೪೧](ಸಮುದ್ರತೀರದ ಬಳಿ ಇರುವ ಭೂಮಿ), ಮಕ್ಕಿ[೨೪೨](ಹುಲುಸಾಗಿ ಬೆಳೆಯುವ ಗದ್ದೆ ಭೂಮಿ), ಮಕ್ಕಿ ಗದ್ದೆ[೨೪೩](ಭತ್ತ ಬೆಳೆಯುವ ಎತ್ತರದ ಭೂಮಿ), ಹಕ್ಕಲು[೨೪೪](ಗೇರು ಮಾವುಗಳನ್ನು ಬೆಳೆಯುವ ಕಲ್ಲು ಎರೆ ಭೂಮಿ), ಹಸ್ತಳ ತೋಟ[೨೪೫](ಊರಿನ ಸಮೀಪದ ಅಥವಾ ನೀರಾವರಿಯಿಂದ ಕೂಡಿದ ತೋಟವಿರುವ ಸಾಧ್ಯತೆಗಳಿವೆ), ಹಿತ್ತಲು[೨೪೬](ಸಣ್ಣತೋಟ ಅಥವಾ ಕೈದೋಟ), ಮುಡೆಗದ್ದೆ[೨೪೭](ನಿರ್ದಿಷ್ಟ ಭೂಮಿಯಲ್ಲಿ ಇಂತಿಷ್ಟು ಭತ್ತ ಬೆಳೆಯುವ ಭೂವಿಸ್ತಾರವನ್ನು ಹೊಂದಿರುತ್ತದೆ), ಆಳುತ್ತ ಹಿತ್ತಿಲಿ[೨೪೮] (ಉಸ್ತುವಾರಿಯಲ್ಲಿರುವ ಭೂಮಿ), ಕಣಿಲಗದ್ದೆ[೨೪೯](ಕಣಿಲೆಯ ಹಿಂದಿನಿಂದ ಆವೃತ್ತವಾಗಿರುವ ಭೂಮಿ ಇರುವ ಸಾಧ್ಯತೆಗಳಿವೆ), ಕಾರಗದ್ದೆ[೨೫೦](ಮಳೆಗಾಲದಲ್ಲಿ ಸಾಗುವಳಿಗೆ ಒಳಪಡಿಸುವ ಭೂಮಿ), ಗದ್ದೆ ಭೂಮಿಯಲ್ಲಿ ಸಾಮಾನ್ಯವಾಗಿ ಹೆಚ್ಚಾಗಿ ಭತ್ತವನ್ನು ಬೆಳೆಯಲಾಗುತ್ತದೆ. ಕಾರಣ ಉನ್ನತವರ್ಗದವರ ಹಾಗೂ ಬಹುಜನರ ಆಹಾರ ವಿಧಾನವಾಗಿ ಕಂಡುಬರುತ್ತದೆ. ಇದು ಶಾಸನಗಳು ಉಲ್ಲೇಖಿಸಿರುವ ಗದ್ದೆಭೂಮಿ ಮತ್ತು ಭತ್ತದ ಬೆಳೆಗಳಿಂದ ತಿಳಿಯುತ್ತದೆ.

ಬೈಲು, ಬಯಲು ಎಂದರೆ ಸಂಪೂರ್ಣ ನೀರಾವರಿ ಪ್ರದೇಶಗಳಾಗಿರುತ್ತವೆ. ಇವು ಸಾಗರ, ಶಿವಮೊಗ್ಗ, ಸೊರಬ, ಹೊಸನಗರ ಮೊದಲಾದ ಮಲೆನಾಡು ಪರಿಸರದಲ್ಲಿ ಕಂಡುಬರುವ ಭೂಮಿಗಳಾಗಿವೆ. 'ಈ ಪ್ರದೇಶದ ಬೈಲು ಭೂಮಿಯಲ್ಲಿ ಮೂರು ಬೆಳೆ ಬೆಳೆಯಲು ಸಾಧ್ಯವಿದೆ. ಮಜಲುಗದ್ದೆಗಳು ಬೈಲುಗದ್ದೆಗಳಿಗಿಂತ ಎತ್ತರದಲ್ಲಿರುತ್ತವೆ. ಈ ಭೂಮಿಯಲ್ಲಿ ಒಂದು ಬೆಳೆ ಮಾತ್ರ ತೆಗೆಯಲು ಸಾಧ್ಯವಿದೆ. ಈ ಪ್ರದೇಶದಲ್ಲಿ 'ಬೆಟ್ಟ'ವೆಂಬ ಭೂಮಿಯಿದ್ದು, ಅದು ಎತ್ತರದ ಪ್ರ್ರದೇಶದಲ್ಲಿರುವ ಕೃಷಿಭೂಮಿಯಾಗಿದೆ. ಈ ಭೂಮಿಯು ಬೆಳೆಯಲು ಮಳೆ ಅವಲಂಬಿಸಿರುತ್ತದೆ.'[೨೫೧] ಇಂದಿಗೂ ಬುಡಕಟ್ಟು ಸಮುದಾಯಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ವಾಸಿಸುವ ಜನರಲ್ಲಿ ಬೆಟ್ಟದ ಭೂಮಿಯಲ್ಲಿ ಉಳುಮೆ ಮಾಡುವುದು ಕಂಡುಬರುತ್ತದೆ. ಇದಲ್ಲದೆ 'ಕುಮೇರು'(ಕುಮ್ರಿ) ಎಂಬ ಇನ್ನೊಂದು ಕೃಷಿ ಪ್ರದೇಶವಿದೆ. ಇದನ್ನು ಕುಮೇರ್ ಕೃಷಿ ಎಂದೇ

ಕರೆಯುತ್ತಾರೆ. ವರ್ಷಕ್ಕೊಂದು ಅಥವಾ ಎರಡು ಸಲ ಈ ಕೃಷಿ ಮಾಡಲಾಗುತ್ತದೆ.[೨೫೨] ಇದು ಇಂದಿಗೂ ಬುಡಕಟ್ಟು, ಬೆಟ್ಟಗುಡ್ಡಗಳಲ್ಲಿ ವಾಸಿಸುವ ಜನರ ಬೇಸಾಯ ಭೂಮಿ ಮತ್ತು ವಿಧಾನವಾಗಿದೆ. ಇಲ್ಲಿ 'ಕುಮುನಿ' ಎಂಬ ಬೆಳೆ ಬೆಳೆದಿರುವ ಸಾಧ್ಯತೆಗಳಿವೆ. ಅಂದರೆ ಈ ಭೂಮಿಗಳು ಕಾಡಿನ ಬೆಟ್ಟಗುಡ್ಡದ ಪ್ರದೇಶದಲ್ಲಿ ಇರುವುದರಿಂದ ಸಹಜವಾಗಿಯೇ ಕಾಡುಪ್ರಾಣಿಗಳ ಹಾವಳಿ ಹೆಚ್ಚಾಗಿರುತ್ತದೆ. ಕಾಡುಪ್ರಾಣಿಗಳು ಬೆಳೆ ಹಾಳುಮಾಡದಂತೆ ಮೊದಲೇ ಸುತ್ತಲು ಬೇಲಿ ಹಾಕಿ, ನಂತರ ನಡುವೆ ಅಥವಾ ಒಂದು ಭಾಗದಲ್ಲಿ ಬೆಳೆಯುವ ವಿಧಾನವಿದು. ಕಾಡು ಬೇಸಾಯ ಪದ್ಧತಿಗಳಲ್ಲಿ ಇದು ಒಂದಾಗಿ ಕಂಡುಬರುತ್ತದೆ.

ಉಳಿದಂತೆ ಹತ್ತಿಎರೆಯು ಹತ್ತಿ ಬೆಳೆಯುವ ಭೂಮಿ, ಎಳ್ಳುಕೆಯಿ(ಎಳ್ಳು ಬೆಳೆಯುವ ಭೂಮಿ), ಆಲದಕೆಯಿ (ಆಲದ ಮರದ ಬಳಿ ಇರುವ ಭೂಮಿಯನ್ನು ಆ ಮರದ ಹೆಸರಿನಿಂದ ಕರೆದಿರುವ ಸಾಧ್ಯತೆಗಳಿವೆ), ಕನ್ನೆಗೆಯಿ (ಇದು ಹೊಸದಾಗಿ ಕೃಷಿ ಮಾಡಲು ಆರಂಭಿಸುವ ಭೂಮಿ ಇರುವ ಸಾಧ್ಯತೆಗಳಿವೆ), ಕಂಗುಭೂಮಿ(ಅಡಕೆ ಬೆಳೆಯುವ ಭೂಮಿ ಇರುವ ಸಾಧ್ಯತೆಗಳಿವೆ), ಹೊಂಗೆ(ಹೊಂಗೆ ಬೆಳೆಯುವ ಭೂಮಿ ಇರುವ ಸಾಧ್ಯತೆಗಳಿವೆ), ಈ ಹೊಂಗೆ ಸೊಪ್ಪನ್ನು ತೋಟಗಳಲ್ಲಿ ಮರ ಅಥವಾ ಗಿಡಗಳಿಗೆ ಗುಣಿಸುತ್ತುಮಾಡಿ ಈ ಎಲೆಗಳನ್ನು ಹಾಕಿ ಮುಚ್ಚಲಾಗುತ್ತಿತ್ತು. ಹೊಂಗೆ ಬೀಜಗಳನ್ನು ಎಣ್ಣೆ ತಯಾರಿಸಲು ಬಳಸುತ್ತಿದ್ದುದರಿಂದ ಈ ಭೂಮಿಯ ಉಲ್ಲೇಖ ಬಂದಿರುವ ಸಾಧ್ಯತೆಗಳಿವೆ.) ಮೊಗೆ ಮತ್ತರು, ತಕ್ಕಿಲು ಮತ್ತರು, ಕಾಶ್ಮೀರಭೂಮಿ(ಕಪ್ಪುಭೂಮಿ ಇರುವ ಸಾಧ್ಯತೆಗಳಿವೆ), ಬಯಲುಭೂಮಿ(ಮಲೆನಾಡುಗಳ ಕಡೆ ಹೊಲಗಳನ್ನು, ಗದ್ದೆಗಳನ್ನು ಬಯ್ಯಲು, ಬಯಲುಗಳೆಂದು ಕರೆಯುವರು). ಇದು ಸಾಗರ ಹೊಸನಗರ ಭಾಗಗಳಲ್ಲಿ ಕಂಡುಬರುತ್ತದೆ. ಕರುವಿನಕೆಯಿ, ಇದರ ಬಗೆಗೆ ತಿಳಿಯದು. ಸವಸಿಯಗೆಯಿ(ಇದರ ಬಗೆಗೆ ಮಾಹಿತಿ ದೊರೆಯದು) ಹಾಗೂ ಕರಭೂಮಿ(ತೆರಿಗೆಗೊಳಪಟ್ಟ ಭೂಮಿ ಇರುವ ಸಾಧ್ಯತೆಗಳಿವೆ) ಶಾಸನದಲ್ಲಿ ಉಲ್ಲೇಖವಾಗಿರುವ ಕೆಲವು ಪದಗಳ ಬಗೆಗೆ ತಿಳಿಯದು ಅವುಗಳನ್ನು ತಿಳಿಯುವ ಅಗತ್ಯತೆಗಳಿವೆ.

**ಕೃಷಿಯೋಗ್ಯವಲ್ಲದ ಭೂಮಿ**

ಶಾಸನಗಳು ಕೃಷಿಗೆ ಯೋಗ್ಯವಲ್ಲದ ಭೂಮಿಯನ್ನು ಯೋಗ್ಯವಾಗಿಸಿದ್ದನ್ನು ತಿಳಿಸುತ್ತವೆ. 'ಕ್ರಿ.ಶ. ೮ನೆಯ ಶತಮಾನದಿಂದ ೧೪ನೆಯ ಶತಮಾನದ ವರೆಗೆ' ಭೂಮಿ ಪರಿವರ್ತನೆಯ ಕಾರ್ಯಗಳು ಜರುಗಿರುವುದು[೨೫೩] ಕಂಡುಬರುತ್ತದೆ. ಆದರೆ ಮೌರ್ಯರ ಕಾಲದಲ್ಲಿ ಕೃಷಿಗೆ ಯೋಗ್ಯವಲ್ಲದ ಭೂಮಿಯ ಬಗೆಗೆ ಅರ್ಥಶಾಸ್ತ್ರಕಾರನು ಹೀಗೆ ಹೇಳುತ್ತಾನೆ. 'ಹಳ್ಳತಿಟ್ಟುಗಳಿಂದ ಮರಳುಕಲ್ಲುಗಳಿಂದ ತುಂಬಿಹೋದ, ಸಾಗುವಳಿಯಾಗಲು ಸಾಧ್ಯವಿಲ್ಲದ ಭೂಮಿಯನ್ನು ಪಶುಗಳ ಮೇವಿಗಾಗಿ ಹುಲ್ಲು, ನೀರುಗಳಿಂದ ಸಮೃದ್ಧ ಪ್ರದೇಶ ಬಿಟ್ಟುಕೊಡಬೇಕು. ಅಂತಹ ಕಾಡನ್ನು ವೇದಾಧ್ಯಾಯನ, ಯಾಗ ನಡೆಸಲು ಬ್ರಾಹ್ಮಣರಿಗೂ ತಪಸ್ವಿಗಳಿಗೂ ಬಿಡಬೇಕು, ಮೃಗ ವನವನ್ನು ರಾಜನ ವಿಹಾರಕ್ಕೆ ಸಜ್ಜುಗೊಳಿಸಬೇಕು ಎಂದಿದ್ದಾನೆ.[೨೫೪] ಕೌಟಿಲ್ಯನ ಕಾಲದಲ್ಲಿ ವಿಶಾಲವಾದ ಅರಣ್ಯ ಸಂಪತ್ತು, ವಿಶಾಲ ಭೂ ಪ್ರದೇಶ ಮತ್ತು ಅಂದಿನ ಜನಸಂಖ್ಯೆಗೆ ಅನುಗುಣವಾಗಿ ಕೃಷಿಭೂಮಿ ಇರುತ್ತಿತ್ತು. ಕ್ರಿ.ಶ. ೧೦ನೆಯ ಶತಮಾನದ ವೇಳೆಗೆ ಹೆಚ್ಚುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಜನವಸತಿ ಮತ್ತು ಆಹಾರೋತ್ಪಾದನೆ, ಆರ್ಥಿಕ ಅಭಿವೃದ್ಧಿ ಸಾಧಿಸುವ ಸಲುವಾಗಿ ಅಂತಹ ಕಲ್ಕಾಡು, ಬೆಟ್ಟದ ಭೂಮಿಗಳನ್ನು ಸಮಮಾಡಿ ಬೆಳೆ ಬೆಳೆಯಲು ಯೋಗ್ಯವಾಗಿಸುವ, ಪರಿವರ್ತನೆಯಂತಹ ಕಾರ್ಯಗಳು ನಡೆಯಲಾರಂಭಿಸಿದವು.

ಸಾಗುವಳಿಗೆ ಒಳಪಡಿಸುವ ಪ್ರಯತ್ನಗಳು ದಕ್ಷಿಣ ಭಾರತದಾದ್ಯಂತ ನಡೆದಂತೆ ಕಂಡುಬರುತ್ತದೆ. ಕರಿಕಾಲ ಎಂಬ ರಾಜನು ಕಾಡನ್ನು ಸವರಿ, ಕೃಷಿಮಾಡಿ ಅಲ್ಲಿ ಜನವಸತಿ ನೆಲೆಸುವಂತೆ ಮಾಡಿದನೆಂದು ತಿಳಿದುಬರುತ್ತದೆ.[೨೫೫] ಕ್ರಿ.ಶ. ೧೧ನೆಯ ಶತಮಾನದ ಜಯಸಿಂಹನ ತಳಂಗೆರೆ ಶಾಸನದಲ್ಲಿ "ನಿನ್ತಾರುಮೊಲ್ಲದ ಕಲ್ಕಾಡ ಬೆಟ್ಟಂ ಸವತಳಂ ಮಾಡಿ" ಎಂದಿದೆ.[೨೫೬] ಕಲ್ಲುಕಾಡುಗಳಿಂದ ಆವೃತ್ತವಾದ ಪ್ರದೇಶವನ್ನು ಕೃಷಿಗೆ ಯೋಗ್ಯ ಭೂಮಿಯಾಗಿ ಪರಿವರ್ತಿಸಿದ್ದನ್ನು ಈ ಶಾಸನವು ತಿಳಿಸಿದೆ. 'ಕ್ರಿಶ ೧೦೭೧ರ ಶಾಸನದಲಿ ಕಾಡುಕಡಿದು ಭೂಮಿಯಿಂದ ಬೆಳೆತೆಗೆದುದನ್ನು ತಿಳಿಸುತ್ತದೆ. 'ಯಜ್ದಾನಿ ಅವರು ಸಂಪಾದಿಸಿದ ದಿ ಅರ್ಲೀ ಹಿಸ್ಟರಿ ಆಫ್ ದಿ ಡೆಕ್ಕಾನ್' ಗ್ರಂಥದಲ್ಲಿ ಕಾಕತೀಯ ಅರಸ ಪ್ರತಾಪರುದ್ರನು ಕೃಷಿಯೇತರ ಭೂಮಿಯನ್ನು ಕೃಷಿ ಭೂಮಿಯಾಗಿ ಪರಿವರ್ತಿಸಿದನು ಎಂದು ಉಲ್ಲೇಖಿಸಿದ್ದಾರೆ.[೨೫೭] ಕ್ರಿ.ಶ ೧೧೨೩ರ ಶಾಸನದಲ್ಲಿ ಪರನ್ರಿಪರಂತದಂ ಸದಿದು ಬೇಲಿಯನಿಕ್ಕಿ ಪಟುಪ್ರತಾಮುರ್ಬಿರೆ ತಳಕಾಡ ನೀಡುಗಡಿದು ಅಳುಕುಜ್ ಸುಟ್ಟು ತುರಂಗಮಾಫ್ರಿ ಸಂಚರಣದಿನುರ್ತು ವೀರರಸದೊಳು ಪದನಾದಡೆ ಕೂಡೆ ಬಿತ್ತಿದಂ' ಎಂದಿದೆ.[೨೫೮] ಕ್ರಿ.ಶ ೧೧೮೨ರ ಶಾಸನದಲ್ಲಿ ಕಾಡು ಕಡಿದು ಕನ್ನೆಗೆರೆಯಂ ಕಟ್ಟಿಸಿ ವೂರಂ ಮಾಡಿದರು.[೨೫೯] ಕಾಡು ಕಡಿದು ಕೆರೆ ನಿರ್ಮಿಸಿ, ಜನವಸತಿಗೆ ಅನುಕೂಲವಾಗುವಂತೆ ಊರನ್ನು ನಿರ್ಮಾಣ ಮಾಡಿದರು ಎಂದು ತಿಳಿದುಬರುತ್ತದೆ. ಇದರಿಂದ ಕೃಷಿಗೆ ಒಳಪಡದ ಭೂಮಿಯನ್ನು ಸಾಗುವಳಿಗೆ ಒಳಪಡಿಸಿರುವುದು ಕಂಡುಬರುತ್ತದೆ.

ಹೀಗೆ ಸಾಗುವಳಿಯಾಗುವ ಮತ್ತು ಸಾಗುವಳಿಗೆ ಒಳಪಡದ ಭೂಮಿಯ ಕುರಿತು ಮಾಹಿತಿಗಳು ಶಾಸನಗಳಿಂದ ತಿಳಿದುಬರುತ್ತವೆ. ಅಂದಿನ ಜನಸಂಖ್ಯೆ, ಆರ್ಥಿಕತೆ, ಜನವಸತಿಯನ್ನು ಆಧರಿಸಿ ಕೃಷಿ ಭೂಮಿಯ ಸಾಗುವಳಿ ಮತ್ತು ವಿಸ್ತರಣೆಯಂತಹ ಕಾರ್ಯಗಳು ಜರುಗುತ್ತಿದ್ದವು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಸಾಗುವಳಿಗೆ ಯೋಗ್ಯವಲ್ಲದ ಯಾವುದೇ ಭೂಮಿಯನ್ನು ಸಾಗುವಳಿಗೆ ಯೋಗ್ಯವಾಗುವಂತೆ ಮಾಡುವುದಕ್ಕಿಂತ ಮುಂಚೆ, ಈ ಭೂ ಪ್ರದೇಶ ಜನವಸತಿಗೆ ಅನುಕೂಲಕರವಾಗಿದೆಯೇ? ಉಳುಮೆಮಾಡಲು ಭೂಮಿ ಫಲವತ್ತಾಗಿದೆಯೇ? ಹಾಗೂ ಕೆರೆ ನಿರ್ಮಾಣಕ್ಕೆ ಅನುಕೂಲಕರವಾಗಿದೆಯೇ? ಎಂಬ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಬರಡು ಭೂಮಿಯನ್ನು ಸಾಗುವಳಿ ಮಾಡುತ್ತಿದ್ದರು. ಪ್ರತಿ ಊರಿನ ನಿರ್ಮಾಣದ ಜೊತೆಗೆ ಕೆರೆಯನ್ನು ನಿರ್ಮಿಸಿ, ಜನರಿಗೆ ಹಾಗೂ ಕೃಷಿಗೆ ನೀರಿನ ಸೌಕರ್ಯ ಮಾಡಿಕೊಡುತ್ತಿದ್ದರು ಎಂಬುದು ಶಾಸನಗಳಿಂದ ತಿಳಿದುಬರುತ್ತದೆ.

**೨.೩. ಒಣಬೇಸಾಯ ಮತ್ತು ನೀರಾವರಿ ಬೇಸಾಯ**

ಕರ್ನಾಟಕದಲ್ಲಿ ಕೃಷಿಯು ಪ್ರಾಚೀನ ಕಾಲದಿಂದ ಇಂದಿನವರೆಗೆ ಒಂದು ಪ್ರಮುಖ ಕಸುಬಾಗಿ ಕಂಡುಬರುತ್ತಿದೆ. ಆದರೆ ಪ್ರಾಚೀನ ಕೃಷಿ ಅಂದಿನ ಜನರ ಜೀವನೋಪಾಯ ಮತ್ತು ಜೀವನ ವಿಧಾನವಾಗಿತ್ತು. ಇದರೊಂದಿಗೆ ಜನರು ತಮ್ಮ ಜೀವನ ನಿರ್ವಹಣೆಗಾಗಿ ಕೃಷಿಯನ್ನು ಅವಲಂಬಿಸಿದ್ದರು. ಭೂಮಿಯಲ್ಲಿ ಉಳುಮೆ ಮಾಡುವ ರೈತರನ್ನು ಶಾಸನಗಳು 'ಒಕ್ಕಲ ಮಕ್ಕಳೆಂದು' ಕರೆದಿವೆ.[೨೬೦] ಕೃಷಿಯನ್ನು ಬೇಸಾಯ, ಆರಂಭ, ಕಮತ, ಸಾಗುವಳಿ, ವ್ಯವಸಾಯ, ಒಕ್ಕಲುತನ ಎಂದೆಲ್ಲ ಕರೆಯಲಾಗುತ್ತದೆ. ಪಂಪನು ತನ್ನ ಆದಿಪುರಾಣ ಕೃತಿಯ ೬೪ನೆಯ ಪದ್ಯದಲ್ಲಿ 'ಬಸವಯೆನ್ನಲದು ಕೃಷಿಯೋಳ್ ಕೃಷಿ ಕುಲೋಚಿತಮಪ್ಪ ಕೃಷಿಯಮಂ' ಎಂದಿದ್ದಾನೆ.[೨೬೧] ಮೌರ್ಯರ ಕಾಲದಲ್ಲಿ ಭೂಮಿಯನ್ನು ಕೃಷಿತ ಅಥವಾ ಕೃಷಿಭೂಮಿ, ಅಕೃಷಿತ(ಪಾಳು ಭೂಮಿ

ಅಥವಾ ಒಳಭೂಮಿ, ಶಾಂದ(ಹಣ್ಣಿನ ತೋಟ, ವನ, ಕಾಡು) ವಿವಿತ(ಚರಾವು) ಎಂದು ವಿಂಗಡಿಸಿರುವುದು ಕಂಡುಬರುತ್ತದೆ.

ವ್ಯವಸಾಯಕ್ಕೆ ಒಳಪಡುವ ಭೂಮಿಯನ್ನು ಅಜಿತ ಪುರಾಣದಲ್ಲಿ ದೇವಮಾತೃಕ, ನದೀಮಾತೃಕ ಎಂದು ಕರೆಯಲಾಗಿದೆ.[೨೬೨] ದೇವಮಾತೃಕ ಭೂಮಿಯನ್ನು ಶಾಸನಗಳು ಬೆದ್ದಲು ಬೆಟ್ದಲೆ, ಬೆರ್ದಲೆ ಎಂದೆಲ್ಲ ಕರೆದಿವೆ. ಇದನ್ನು ಒಣಭೂಮಿ, ಖುಷ್ಕಿ ಭೂಮಿ ಎಂತಲೂ ಕರೆಯಲಾಗುತ್ತದೆ. ನದೀಮಾತೃಕಗಳನ್ನು ಶಾಸನಗಳು ಗಟ್ದೆ, ಗರ್ದೆ, ಗದ್ದೆ, ನಿರ್ಮಣ್ಣು ಭೂಮಿ ಎಂದು ಕರೆದಿವೆ. ಈ ಭೂಮಿಯಲ್ಲಿ ತರಿ ಮತ್ತು ಬಾಗಾಯ್ತ ಭೂಮಿ ಎಂಬ ಎರಡು ವಿಧಗಳು ಕಂಡುಬರುತ್ತವೆ. ನೀರಾವರಿಯನ್ನು ಆಶ್ರಯಿಸಿ ಈ ಭೂಮಿಗಳಲ್ಲಿ ಆಹಾರ ಮತ್ತು ತೋಟದ ಬೆಳೆಗಳನ್ನು ಬೆಳೆಯಲಾಗುತ್ತದೆ.

ಒಣಭೂಮಿ ಬೇಸಾಯವು ಮಳೆಯಾಧಾರಿತ ಅಥವಾ ಮಳೆಯಾಶ್ರಿತ ಕೃಷಿಯನ್ನು ಅವಲಂಬಿಸಿದುದಾಗಿದೆ. ಮಳೆಯನ್ನು ಆಶ್ರಯಿಸಿ ಭೂಮಿಯಲ್ಲಿ ಕೃಷಿ ಮಾಡುವ ವಿಧಾನವನ್ನು ಒಣಬೇಸಾಯ ಪದ್ಧತಿ ಎಂದು ಕರೆಯಲಾಗುತ್ತದೆ. ಶ್ರೀಘನ ಮಠ ಶಿವಯೋಗಿಗಳು ಅಲ್ಪ, ಅನಿಶ್ಚಿತ, ಅಕಾಲಿಕ ಮಳೆಯಾಗುವ ಪ್ರದೇಶಗಳಲ್ಲಿ ಯೋಗ್ಯ, ಉಪಾಯಗಳಿಂದ ಮಣ್ಣು ಹಾಗೂ ಹಸಿ ಸಂಗ್ರಹಿಸಿ ಉತ್ತಮ ಬೆಳೆ ಬೆಳೆಯಲು ಕ್ರಮಬದ್ಧವಾದ ತಾಂತ್ರಿಕ ಪದ್ಧತಿಗಳನ್ನು ಅನುಸರಿಸುವುದೇ ಒಣಬೇಸಾಯ ವಿಧಾನ ಎಂದು ಕರೆದಿದ್ದಾರೆ.[೨೬೩] ಇದಕ್ಕೆ ಜಿರಾಯತ ಕೃಷಿ ಎಂತಲೂ ಕರೆಯಲಾಗಿದೆ. ಮೌರ್ಯಸಾಮ್ರಾಜ್ಯದ ಆದಿಯಾಗಿ ನಂತರದಲ್ಲಿ ಆಳ್ವಿಕೆ ನಡೆಸಿದ ಅನೇಕ ಅರಸು ಮನೆತನಗಳು ಕೃಷಿಗೆ ಪ್ರಾಮುಖ್ಯತೆ ನೀಡಿರುವುದು ಕಂಡುಬರುತ್ತದೆ. ಅಲ್ಲದೆ ಬದಾಮಿ ಚಾಲುಕ್ಯರಂತಹ ಅನೇಕ ರಾಜ ಮನೆತನಗಳು ಕೃಷಿ ಮೂಲದಿಂದಲೇ ಹುಟ್ಟಿ ಬಂದವೆನ್ನಲಾಗಿದೆ. 'ಅಶೋಕನು ಕಳಿಂಗದಿಂದ ಯುದ್ಧ ಕೈದಿಗಳಾಗಿ ಎಳೆತಂದ ೧,೫೦,೦೦೦ ಮಂದಿಯನ್ನು ಕೃಷಿ ಕಾರ್ಯಗಳಲ್ಲಿ ತೊಡಗಿಸಿದ್ದಿರಬೇಕು ಎಂದು ಮೆಗಸ್ತಾನಿಸ್‌ನು ತನ್ನ ಇಂಡಿಕಾ ಕೃತಿಯಲ್ಲಿ ಬರೆದಿದ್ದಾನೆ.[೨೬೪] ಇದರಿಂದ ಅಶೋಕನು ಕೃಷಿಗೆ ನೀಡಿದ ಮಹತ್ವ ತಿಳಿದುಬರುತ್ತದೆ. ಶಾತವಾಹನರ ಕಾಲದಲ್ಲಿ ದಖನ್ನಿನಲ್ಲಿ ಹತ್ತಿ ಬೆಳೆಯುತ್ತಿದ್ದರು. ಆಂಧ್ರವು ಹತ್ತಿ ಬಟ್ಟೆಗಳನ್ನು ತಯಾರಿಸುವಲ್ಲಿ ಪ್ರಸಿದ್ಧವಾಗಿತ್ತು ಎಂದು ವಿದೇಶಿ ಕಥನಗಳು ಹೇಳುತ್ತವೆ.[೨೬೫] ಇದರಿಂದ ಆಳರಸರು ಕೃಷಿಗೆ ನೀಡಿದ ಪ್ರೋತ್ಸಾಹ, ಅಭಿವೃದ್ಧಿಯ ಅಂಶಗಳು ತಿಳಿಯುತ್ತವೆ. ಇವರ ಕಾಲದಲ್ಲಿ ಕೃಷಿ ಆರ್ಥಿಕವಾಗಿಯೂ ಅಭಿವೃದ್ಧಿ ಸಾಧಿಸಿದಂತೆ ತಿಳಿದುಬರುತ್ತದೆ. ಇದಕ್ಕೆ ಅವರು ಹತ್ತಿಬೆಳೆದು ಬಟ್ಟೆ ತಯಾರಿಸುವಷ್ಟು ಪ್ರಸಿದ್ಧಿ ಪಡೆದಿದ್ದರು ಎಂಬುದೇ ಸಾಕ್ಷಿಯಾಗಿದೆ. ಕೌಟಿಲ್ಯನು ತನ್ನ ಕೃತಿಯಲ್ಲಿ "ಯಾವನು ಕೃಷಿ ಬೇಸಾಯವನ್ನು ಮಾಡುವುದಿಲ್ಲವೋ ಅವನಿಂದ ಭೂಮಿಯನ್ನು ಕಿತ್ತುಕೊಂಡು ಬೇರೆಯವರಿಗೆ ನೀಡಬೇಕೆಂದು ಮತ್ತು ರೈತರಿಗೆ ಅಂದರೆ ಸರಿಯಾಗಿ ಕೃಷಿ ಮಾಡುವ ರೈತನಿಗೆ ಯಾವುದೇ ತೊಂದರೆ ನೀಡಬಾರದೆಂದು ಹೇಳಿದ್ದಾನೆ.[೨೬೬] ವಚನಕಾರರು ಸಹ ತಮ್ಮ ಅನುಭವದ ವಾಣಿಯಲ್ಲಿ ಕೃಷಿ ಮತ್ತು ಕೃಷಿ ಮಾಡುವವರನ್ನು ಕುರಿತು ಹೀಗೆ ಹೇಳುತ್ತಾರೆ. ಸಿದ್ಧರಾಮನು ತನ್ನ ವಚನದಲ್ಲಿ ಕೃಷಿಯ ಮಾಡಿ ಉಣ್ಣದೇ ಹಸಿವು ಅರಿವ ಪರಿ ಇನ್ನೆಂತು' ಅಲ್ಲಮನು ಬಿತ್ತಿದ ಬೆಳೆಯದ ತುಂಬಿದ ರಾಶಿಯ ಕಂಡಲ್ಲಿ ಸುಖಿಯಾಗಿ ನಿಂದವರಾರು? ಇದ ಹೇಳಲು ಬಾರದು ಕೇಳಲು ಬಾರದು ಎಂದಿದ್ದಾನೆ. ಸೋಮೇಶ್ವರನು ತನ್ನ ಶತಕದಲ್ಲಿ 'ಬೆಳೆಯೇ ಸರ್ವ ಜೀವನಂ'[೨೬೭] ಈ ಮಾತುಗಳನ್ನು ಗಮನಿಸಿದರೆ ದುಡಿಯದೇ ತಿನ್ನ ಬಯಸುವ ಕೃಷಿವರ್ಗವನ್ನು ಊಹಿಸಿ ಕೊಳ್ಳಲು ಸಾಧ್ಯವಿಲ್ಲವೆಂಬುದು ತಿಳಿಯುತ್ತದೆ. ಮೆಗಸ್ತಾನಿಸ್ ಇದಕ್ಕೆ ಪೂರಕವೆಂಬಂತೆ ತನ್ನ ಗ್ರಂಥದಲ್ಲಿ ಬರೆಯುತ್ತಾನೆ. ಈ ದೇಶದ ಒಕ್ಕಲಿಗರು ಪವಿತ್ರರೂ, ಪರಿಶುದ್ಧರೂ ಆದ ವರ್ಗಕ್ಕೆ ಸೇರಿದ ಜನ

ಎಂದು ಭಾವಿಸಿ ಯುದ್ಧ ಕಾಲದಲ್ಲಿಯೂ ರೈತರ ತಂಟೆಗೆ ಯಾರೂ ಹೋಗುವುದಿಲ್ಲ. ಅವರೂ ಸುರಕ್ಷಿತರಾಗಿರುತ್ತಾರೆ. ಅವರ ಬೆಳೆಯೂ ಸುರಕ್ಷಿತವಾಗಿರುತ್ತದೆ ಎಂದು ಹೇಳಿದ್ದಾನೆ.[೨೬೮] ಇವನ ಬರವಣಿಗೆಯನ್ನು ಗಮನಿಸಿದರೆ ಕೃಷಿ ಸಮೃದ್ಧವಾಗಿತ್ತು. ಕೃಷಿಯ ಪ್ರಾಮುಖ್ಯತೆಯನ್ನು ರಾಜರು ಅರಿತಿದ್ದರೆಂದು ತಿಳಿಯುತ್ತದೆ.

ಶಾಸನಗಳಿಂದ ತಿಳಿದುಬರುವಂತೆ ಭೂದಾನ ಶಾಸನಗಳೇ ಅಧಿಕವಾಗಿ ಕಂಡುಬರುತ್ತವೆ. ಶೀಲಕಾಂತ ಪತ್ತಾರರು ಇದಕ್ಕೆ ಪ್ರಮುಖ ಕಾರಣವೆಂದರೆ ಭೂಮಿಯನ್ನು ಹೆಚ್ಚಾಗಿ ಸಾಗುವಳಿಗೆ ಒಳಪಡಿಸುವ ಉದ್ದೇಶದಿಂದ ಭೂದಾನ ಮಾಡುತ್ತಿದ್ದರೆಂದು ಅಭಿಪ್ರಾಯಪಡುತ್ತಾರೆ.[೨೬೯] ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರದ ಸಮತೋಲನ ಕಾಯ್ದುಕೊಳ್ಳುವ ಉದ್ದೇಶ, ಇದರ ಹೊಣೆಗಾರಿಕೆ ಪ್ರಭುತ್ವದ ಮೇಲಿದ್ದುದು ಒಂದು ಕಾರಣವಿರುವ ಸಾಧ್ಯತೆಗಳಿವೆ. ಭೂಮಿ ಹೆಚ್ಚು ಹೆಚ್ಚು ಸಾಗುವಳಿಯಾದರೆ ಅದರಿಂದ ಬರುವ ಕೃಷಿ ಉತ್ಪಾದನೆಯು ದ್ವಿಗುಣಗೊಳ್ಳುತ್ತದೆ. ಇದರಿಂದ ರಾಜ್ಯದ ಬೊಕ್ಕಸಕ್ಕೆ ತೆರಿಗೆಯ ಮೂಲಕ ಸಂಪತ್ತು ಸಂಗ್ರಹವಾಗುತ್ತದೆ ಎಂಬ ಉದ್ದೇಶಗಳಿಗಾಗಿ ಭೂದಾನ ನೀಡಿರುವ ಸಾಧ್ಯತೆಗಳಿವೆ. ಶಾಸನಗಳನ್ನು ಗಮನಿಸಿದರೆ ನೀರಾವರಿ ಭೂಮಿಗಿಂತ ಬೆದ್ದಲು ಭೂಮಿಯನ್ನು ದಾನವಾಗಿ ನೀಡಿರುವ ಪ್ರಮಾಣದಲ್ಲಿ ಅಧಿಕವಾಗಿ ಕಂಡುಬರುತ್ತದೆ. ಕಾರಣ ನೀರಾವರಿ ಭೂಮಿಯು ಮೌಲ್ಯಯುತವಾಗಿತ್ತು. ಶಾಸನಗಳು ಭೂಮಿದಾನ ನೀಡಿದ್ದನ್ನು, ಭೂಮಿಯ ವಿಧಗಳನ್ನು, ಅದರಲ್ಲಿ ಬೆಳೆಯುವ ಬೆಳೆಗಳನ್ನು ಉಲ್ಲೇಖಿಸಿವೆ. ಇದರ ಹಿನ್ನೆಲೆಯಲ್ಲಿ ಒಣಬೇಸಾಯವು ಹೇಗೆ ನಡೆಯುತ್ತಿತ್ತು. ಯಾವ ಭೂಮಿಯಲ್ಲಿ ನಡೆಯುತ್ತಿತ್ತು. ಅದಕ್ಕನುಗುಣವಾಗಿ ಯಾವ ಬೆಳೆಗಳನ್ನು ಬೆಳೆಯುತ್ತಿದ್ದರೆಂಬುದನ್ನು ಇಲ್ಲಿ ಅಧ್ಯಯನಕ್ಕೊಳಪಡಿಸುವ ಅಗತ್ಯವಿದೆ. ಸರ್ವಜ್ಞನು ತನ್ನ ಒಂದು ತ್ರಿಪದಿಯಲ್ಲಿ ಬೇಸಾಯದ ಪ್ರಾಮುಖ್ಯತೆಯನ್ನು ಹೀಗೆ ಹೇಳುವನು.

ನಲ್ಲೆತ್ತು ಬಲುಭಂಡಿ ಇಲ್ಲದವನಾರಂಬ
ಹುಲ್ಲನೆ ತಿಂದು ಹದಹೋಗಿ ಹೊಲದೊಳು
ಹುಲ್ಲನೆ ಬೆಳೆವ ಸರ್ವಜ್ಞ[೨೭೦]

ಎಂದಿದ್ದಾನೆ. ರೈತ ಬೆಳೆದರೆ ಲೋಕ ಬೆಳಗುತ್ತದೆಂಬ ಆಶಯ ಇಲ್ಲಿದೆ. ಡಿ.ಡಿ.ಕೊಸಾಂಬಿಯವರು "ಒಂದು ನಿರ್ದಿಷ್ಟ ಕಾಲದ ಜನರು" ನೇಗಿಲನ್ನು ಬಳಸಿದರೋ ಇಲ್ಲವೋ ಎನ್ನುವುದನ್ನು ತಿಳಿಯುವುದು ಅವರ ರಾಜರ ಹೆಸರನ್ನು ತಿಳಿದು ಕೊಳ್ಳುವುದಕ್ಕಿಂತ ಮುಖ್ಯ ಎಂದಿದ್ದಾರೆ.[೨೭೧] ಪ್ರಾಚೀನ ಕೃಷಿಯಲ್ಲಿ ಇಂದಿನಂತೆ ಒಣ ಬೇಸಾಯದ ಕೃಷಿಯು ಹೇರಳವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಆದರೆ ಇಂದಿನಂತೆ ಧೃತಿಗೆಟ್ಟಿರಲಿಲ್ಲ. ಇದಕ್ಕೆ ಕಾರಣಗಳನ್ನು ಪ್ರಾಚೀನ ವಿದ್ವಾಂಸರು ದಾಖಲಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೯ನೆಯ ಶತಮಾನದಲ್ಲಿ ಕಾಶ್ಮೀರದ ವಿದ್ವಾಂಸ ಮೇದಾಥಿ ಎಂಬುವವನು 'ಈ ಭೂಮಿಯಲ್ಲಿ ಇರುವ ದ್ವಿಪಾದಿಗಳೂ ಚತುಷ್ಪಾದಿಗಳೂ ಕೃಷಿ ಇಲ್ಲವಾದಲ್ಲಿ ಸಂಕಷ್ಟಕ್ಕೆ ಈಡಾಗುತ್ತವೆ. ಹೀಗಾಗಿ ದೇವರನ್ನು ಸಂತೋಷಗೊಳಿಸಲು ಹಾಗೂ ಜನರನ್ನು ರಕ್ಷಿಸಲು ರಾಜನು ಕೃಷಿಯ ಬಗ್ಗೆ ತೀವ್ರ ಆಸಕ್ತಿ ತೋರಿಸಬೇಕು, ಪುರೋಹಿತರೂ, ಬ್ರಾಹ್ಮಣರೂ, ಮಂತ್ರಿಗಳೂ ಕೃಷಿ ನಿರತರಾಗುವುದು ಹೆಚ್ಚು ಅವಶ್ಯಕ ಎಂದಿದ್ದಾರೆ.[೨೭೨] ಕ್ರಿ.ಶ. ೯ನೆಯ ಶತಮಾನದ ವೇಳೆಗೆ ಆರ್ಥಿಕ ಅಭಿವೃದ್ಧಿಯ ಕಡೆಗೆ ಕೃಷಿಯನ್ನು ಕೊಂಡೊಯ್ಯುವ ಅನಿವಾರ್ಯತೆ ಬಂದೊದಗಿರುವ ಸಾಧ್ಯತೆಗಳಿವೆ ಎಂಬುದು ವಿದ್ವಾಂಸರ ಮಾತಿನಿಂದ ತಿಳಿಯುತ್ತದೆ. ಈ ಅವಧಿಗೆ ಆರ್ಥಿಕತೆಯ ಬಹುಮುಖ್ಯ ಆಕರ

ಕೃಷಿಯಾಗಿದ್ದುದು ಒಂದು ಕಾರಣ. ಅಭಿವೃದ್ಧಿಗೆ ರಾಜ್ಯದ ಕೃಷಿಕ ವರ್ಗದೊಂದಿಗೆ ಇನ್ನಿತರ ವರ್ಗವೂ ಪಾಲ್ಗೊಳ್ಳಬೇಕೆಂಬ ಸಂದೇಶವನ್ನು ರವಾನಿಸುವುದು ಕಂಡುಬರುತ್ತದೆ.

ಕೌಟಿಲ್ಯನು ಕೃಷಿಯನ್ನು ಅದರಲ್ಲೂ ಒಣ ಬೇಸಾಯದ ಕೃಷಿಗೆ ಸಂಬಂಧಿಸಿದಂತೆ ಹೀಗೆ ಹೇಳಿರುವುದು ಕಂಡುಬರುತ್ತದೆ. ಗ್ರಾಮದಲ್ಲಿ ಕ್ರೀಡೆ, ವಿನೋದಗಳಿಗಾಗಿ ಮೀಸಲಿಟ್ಟ ಯಾವುದೇ ಕಟ್ಟಡವಿರಬಾರದು. ಹಣ, ಬಡ್ಡಿ, ದುಡಿಮೆ, ವಸ್ತು, ಧಾನ್ಯ ಅಥವಾ ಅಪಾರ ಪ್ರಮಾಣದಲ್ಲಿ ದ್ರವ್ಯ ವಸ್ತುಗಳನ್ನು ಹೊಂದುವ ಇರಾದೆಯಿಂದ ನಟರು, ನರ್ತಕರು, ಹಾಡುಗಾರರು, ಪರೆಕಾರರು ಬಂದು ಗ್ರಾಮೀಣ ಜನರ ಉದ್ಯಮದಲ್ಲಿ ಅಡೆತಡೆ ಉಂಟು ಮಾಡಬಾರದು. ಅಸಹಾಯಕರಾದ ಹಳ್ಳಿಯ ಜನ ಸದಾ ಭೂಮಿಯ ಮೇಲೆ ಅವಲಂಬಿತರಾಗಿದ್ದು, ಅದರಲ್ಲೇ ಮೈಬಗ್ಗಿಸಿ ದುಡಿಯುವವರಾಗಿರುತ್ತಾರೆ.[೨೬೩] ಈ ಮಾತುಗಳು ಪ್ರಸ್ತುತ ಸಮಕಾಲೀನ ಸಂದರ್ಭಕ್ಕೆ ಅನ್ವಯಿಸುತ್ತವೆ. ಇಂದಿನ ಕೃಷಿ ಸ್ಥಿತ್ಯಂತರಕ್ಕೆ ಕಾರಣವಾದ ಅಂಶಗಳು ಅಂದು ಘಟಿಸಿರುವ ಸಾಧ್ಯತೆಗಳಿವೆ. ಅವುಗಳನ್ನು ಕೌಟಿಲ್ಯ ಅಂದೇ ವ್ಯಕ್ತಪಡಿಸಿದ್ದಾನೆ. ಕೃಷಿಕರು ಕೃಷಿ ಚಟುವಟಿಕೆಗಳಲ್ಲಿ ಸದಾ ಎಚ್ಚರದಿಂದ ಜಾಗೃತರಾಗಿರಬೇಕು. ಆಗ ಮಾತ್ರ ಕೃಷಿಯಲ್ಲಿ ಆಗುವ ಏರುಪೇರುಗಳನ್ನು ಗಮನಿಸಿ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಮನರಂಜನ ಮಾಧ್ಯಮಗಳು ವ್ಯಕ್ತಿಗಳನ್ನು ಕೃಷಿ ಜಾಗೃತಿಯಿಂದ ಆಲಸ್ಯಕ್ಕೆ ಪರಿವರ್ತಿಸುತ್ತವೆ. ಇಂದಿಗೂ ಕೌಟಿಲ್ಯನ ಮಾತುಗಳು ಪ್ರಯೋಗಿಕವಾಗಿ ಅಕ್ಷರಶಃ ಸತ್ಯ ವಾಕ್ಯಗಳಾಗಿವೆ. ಜೊತೆಗೆ ಮನರಂಜನ ಮಾಧ್ಯಮಗಳ ವೀಕ್ಷಣೆ ಪುಕ್ಕಟೆಯಾಗಿರದೆ, ಅವುಗಳನ್ನು ಹಣ ಸಂದಾಯ ಮಾಡಿ ವೀಕ್ಷಿಸಬೇಕಿತ್ತು. ಇಂತಹ ಹವ್ಯಾಸಗಳಿಗೆ ದಾಸರಾದ ವ್ಯಕ್ತಿಗಳು ದ್ರವ್ಯಕ್ಕಾಗಿ ಕೃಷಿ ಗ್ರಾಮಗಳಲ್ಲಿ ಠಕ್ಕತನ ಮಾಡುವ ಮತ್ತು ಜರುಗುವ ಸಂಭವಗಳಿಂದ ಮುಕ್ತಿ ದೊರಕಿಸಲು, ಈ ರೀತಿಯ ಪರ್ಯಾಯ ಜಾಗೃತಿಯ ಅಗತ್ಯತೆ ಇದ್ದಿರುವ ಸಾಧ್ಯತೆಗಳಿವೆ. ಈ ಅಂಶಗಳು ಹೆಚ್ಚಾಗಿ ನೀರಾವರಿ ಬೇಸಾಯದಲ್ಲಿ ನಿರತರಾದ ಕೃಷಿಕರಿಗಿಂತ ಒಣ ಬೇಸಾಯದ ಕೃಷಿ ನಿರತರಲ್ಲಿ ಕಂಡುಬರುವುದು ಹೆಚ್ಚು. ಕಾರಣ ಮಳೆಗಾಲದ ಆರು ತಿಂಗಳುಗಳ ಕಾಲ ಮಾತ್ರ ಕೃಷಿ ಚಟುವಟಿಕೆಗಳು ಜರುಗುತ್ತವೆ. ಉಳಿದ ಆರು ತಿಂಗಳುಗಳ ಕಾಲ ಕೃಷಿಕರು ನಿರುದ್ಯೋಗಿಗಳಾಗಿರುತ್ತಾರೆ. ಈ ಹಿನ್ನೆಲೆಯಲ್ಲಿಯೂ ಮೇಲಿನ ಹೇಳಿಕೆಗಳನ್ನು ಕೌಟಿಲ್ಯನು ಉಲ್ಲೇಖಿಸಿರುವ ಸಾಧ್ಯತೆಗಳಿವೆ.

ಜೊತೆಗೆ ಲೀಲಾ ವಿನೋದಗಳಿಗೆ ದಾಸನಾದ ವ್ಯಕ್ತಿಯಿಂದ ಶ್ರದ್ಧೆ, ಶ್ರಮದ ದುಡಿಮೆ ಸಾಧ್ಯವಿರದ ಕಾರಣ ಈ ಮಾತುಗಳು ಪ್ರಸ್ತುತ ಸಂದರ್ಭದಲ್ಲಿ ಯಾವುದೇ ವ್ಯತ್ಯಾಸಗಳಿಲ್ಲದೆ ಅನ್ವಯಿಸುತ್ತವೆ. ಅಂದಿನ ಮನೋರಂಜನ ಮಾಧ್ಯಮಗಳಿಗಿಂತ ಇಂದಿನ ಮನರಂಜನ ಮಾಧ್ಯಮಗಳು ಕೃಷಿಕರನ್ನು ವಿಸ್ಮೃತಿಗೆ ಶರಣು ಹೊಡೆಸಿವೆ. ಆಧುನಿಕತೆಯ ತಂತ್ರಜ್ಞಾನದ ಪ್ರಭಾವ ಪ್ರೇರಣೆಗಳು ಪಾರಂಪರಿಕ ಕೃಷಿಯನ್ನು ಕಾರ್ಗತ್ತಲಿಗೆ ದೂಡಿವೆ. ಇದರಿಂದ ಕೃಷಿ ಜ್ಞಾನ ವಿಸ್ಮೃತಿಯ ಸುಳಿಯಲ್ಲಿದೆ. ಕೃಷಿ ಭೂಮಿಯ ಮತ್ತು ಅದರಲ್ಲಿ ಬೆಳೆಯುವ ಬೆಳೆಯ ಬಗೆಗಿನ ಪಾರಂಪರಿಕ ಜ್ಞಾನ ಕಣ್ಮರೆಯಾಗುತ್ತಿದೆ. ಜನರು ತಮ್ಮ ಸಂಪೂರ್ಣ ಸಮಯ ಮತ್ತು ಶ್ರಮವನ್ನು ಕೃಷಿಗಳಿಗೆ ಮೀಸಲಿಡದೇ ತಂತ್ರಜ್ಞಾನಕ್ಕೆ ಮೀಸಲಿಟ್ಟಿದ್ದಾರೆ. ಕೌಟಿಲ್ಯನ ಆಶಯದ ಹಿಂದೆ ಈ ಅಪಾಯಕಾರಿ ಅಂಶದಿಂದ ದೂರವಿರಬೇಕೆಂಬ ಸಾಮಾಜಿಕ ಕಳಕಳಿ ಅಂದೇ ವ್ಯಕ್ತವಾಗಿದೆ. ಕೃಷಿಕರು ಇಂದು ಭೂಮಿಯಲ್ಲಾಗಲಿ, ಬೆಳೆಯಲ್ಲಾಗಲಿ ಆಗುವ ಬದಲಾವಣೆಗಳನ್ನು ಕಾಲಕಾಲಕ್ಕೆ ಗಮನಿಸದೆ ಮರೆಗುಳಿತನದಲ್ಲಿ ಲೀನರಾಗಿದ್ದಾರೆ. ಇದರಿಂದಾಗಿ ಮಾನವನು ತನ್ನ ಜೀವಿತಕ್ಕೆ ಮಾರಕವಾಗುವ ಔಷಧಗಳ ಸಿಂಪಡಣೆ ಮೊದಲಾದವುಗಳ ಮೊರೆ ಹೋಗುತ್ತಿದ್ದಾನೆ. ಭೂಮಿಯು ವಿಷಕಾರಿಯಾಗುತ್ತಿದೆ, ಜೊತೆಗೆ ಅದರಿಂದ ಬರುವ ಬೆಳೆಯು ವಿಷಪೂರಿತವಾಗಿ

ಪರಿವರ್ತನೆಗೊಂಡಿದೆ. ಇಂತಹ ಆತಂಕಕಾರಿ ಅಪಾಯದ ಸೂಚನೆಗಳನ್ನು ಕೌಟಿಲ್ಯ ಮನಗಂಡಂತಿದೆ. ಕೃಷಿಕ ಮೈ ಬಗ್ಗಿಸಿ ಶ್ರಮವಹಿಸಿ ದುಡಿದರೆ ಇಂದಿನ ಅಪಾಯಕಾರಿ ರೋಗಗಳಿಂದ ತಪ್ಪಿಸಿ ಸಮಾಜದಲ್ಲಿ ಆರೋಗ್ಯಕರ ವಾತಾವರಣ ನಿರ್ಮಿಣವಾಗಲು ಸಾಧ್ಯವಾಗುತ್ತದೆ.

ಕ್ರಿ.ಶ. ೮೨೫ರ ಶಾಸನದಲ್ಲಿ 'ಬೆದೆನೆಲ್ಮಣ್' ಎಂದು ಉಲ್ಲೇಖಿಸಿದೆ.[೨೭೪] ಬೆದೆ+ನೆಲ್+ಮಣ್ಣು, ನೆಲ್ ಎಂದರೆಭತ್ತ ಬತ್ತ ಬೆಳೆಯುವ ಭೂಮಿ ಎಂದರ್ಥ. ಬೆದ್ದಲು ಭೂಮಿಯಲ್ಲಿಯೂ ಭತ್ತವನ್ನು ಬೆಳೆಯಲಾಗುತ್ತಿತ್ತು. ಅಂದರೆ ಮಳೆಗಾಲದಲ್ಲಿ ಮಳೆಯ ನೀರನ್ನು ತಗ್ಗುಗಳಲ್ಲಿ ಸಂಗ್ರಹಿಸಿ, ಕಟ್ಟೆಗಳನ್ನು ಅಥವಾ ಬದುಗಳನ್ನು ನಿರ್ಮಿಸಿ ತಾತ್ಕಾಲಿಕವಾಗಿ ಭತ್ತ ಬೆಳೆದಿರುವುದು ಕಂಡುಬರುತ್ತದೆ. ಇಂದಿಗೂ ಕೆಂಪಕ್ಕಿ ಅಥವಾ ಕೆರೆಮಲ್ಲಿಗ ಭತ್ತವನ್ನು ಮಳೆಗಾಲದಲ್ಲಿ ಬೆಳೆಯಲಾಗುತ್ತಿದೆ. ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ ಸಾಗುವಳಿ ಭೂಮಿಗೆ ಸಂಬಂಧಿಸಿದ ನಿಬಂಧನೆ ಕಂಡುಬರುತ್ತದೆ.

ಚಾತುರ್ವ್ವಿದ್ಯ ಸಮಯದ ಅಯ್ನೂರ್ವ್ವರು ತಮ್ಮ
ಕೊಣ್ಡ ಭೂಮಿಯತ್ತ್ರ ಎಣ್ಬುನಗರಕ್ಕಂ ಪಾರ್ವ್ವ ಪೊಯ್ದೊಡೆ
ಪ....ಇಱಿದೊಡೆ ಇಪತ್ತ ಒದ್ದು ಗದ್ಯಾಣ...
ಪಾರ್ವ್ವಜ್ಗೆಕೇಣೆ ಇಲ್ಲ....[೨೭೫]

ಪಾರ್ವನಿಗೆ ಅಂದರೆ ಬ್ರಾಹ್ಮಣರು ಉಳುಮೆ ಮಾಡುತ್ತಿರಲಿಲ್ಲ. ಅವರು ಭೂಮಿಯನ್ನು ಗೇಣಿ ಪಡೆಯುತ್ತಿರಲಿಲ್ಲ ಮತ್ತು ಕೊಡಲಾಗುತ್ತಿರಲಿಲ್ಲ. ಇದರಿಂದ ಉಳುಮೆ ಮಾಡುವ ವರ್ಗವೊಂದಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೯ನೆಯ ಶತಮಾನದ ಶಾಸನವು ಭೂಮಿಯಲ್ಲಿ ಬೆಳೆಯುವ ಉತ್ಪತ್ತಿ ಹಂಚಿಕೆಗೆ ಸಂಬಂಧಿಸಿದಂತೆ ಹೀಗೆ ಹೇಳಿದೆ.

ಕಿಸುಕಾಡಂ ಮೂಡೆಯು.....ವುಕ್ಕ...
ಎಣ್ಣಳವಿ ಬರಿಸ ವರಸಕೊನ್ದುಭಾಗ ಮಿಟ್ಕವುದು
ಏೞನೆಯ ಬರಿಸಕೆ ಸವಭಾಗದೊಳ್ ನಿಲ್ಕುಕ
......ಭೂಮಿಯಂ ಪಾರ್ವ್ವ[೨೭೬]

ಕಿಸುಕಾಡು, ಕೆಂಗಾಡು ಅಥವಾ ಕೆಂಪುಭೂಮಿಯಲ್ಲಿ ಉಳುಮೆ ಮಾಡಿದ ಮೊದಲ ವರ್ಷ ಒಂದು ಭಾಗದಂತೆಯೂ ಮಿಕ್ಕಂತೆ ಏಳನೆಯ ವರ್ಷಕ್ಕೆ ಸಮಭಾಗ ನೀಡಬೇಕು ಎಂದಿದೆ. ಅಂದರೆ ಈ ಭೂಮಿಯನ್ನು ಸ್ವಚ್ಛಗೊಳಿಸಿಕೊಂಡು ಮೊದಲ ವರ್ಷ ಭೂಮಿ ಉಳುಮೆ ಮಾಡಿದಂತೆ ಕಂಡುಬರುತ್ತದೆ. ಶಾಸನಗಳು ಎಲ್ಲಿಯು ನೇರವಾಗಿ ಬೇಸಾಯ ವಿಧಾನ ಕುರಿತು ಚರ್ಚಿಸುವುದಿಲ್ಲ. ಬದಲಿಗೆ ತೆರಿಗೆ, ಬೆಳೆಗಳು ಮೊದಲಾದ ಅಂಶಗಳಲ್ಲಿ ಲೀನಗೊಂಡಿರುವುದು ಕಂಡುಬರುತ್ತದೆ. ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ಕರಿಯ ಭೂಮಿಗೆ ನೀಡುವ ತೆರಿಗೆಯ ಬಗೆಗೆ ಹೀಗೆ ಹೇಳುತ್ತದೆ.

ಉತ್ತ ಬರಿಸಂ ಕರಿಯ ಕೆಯಿ ಪರಿಹಾರಮಱುವಂ
ಶಂ ಮತ್ತರಿಂಗೆ ಪಾಗಂ ಚಳಾವ ಮೇಱನಾಲ್ಕು
ವರಿಸಕ್ಕೆ ಪಣವಿನೊಳ್ಕಿಲ್ವುದು ಕೆಡಂಗೆಯ್ಗೆ ನೆಲನುಂ
ನೇಸಱುವುಳ್ಳನ್ನಗಂ ಬೇಡುಂಗೊಳೊಸಗೆ ಉತ್ಸಾಹಂ
ಕಾಣ್ಕೆಯೆಂದಿವು ಮೊದಲಾಗೆ ತೆಱಯಾವ[೨೭೭]

ಕರಿಯ ನೆಲದಲ್ಲಿ ಉಳುವವನು ವರ್ಷಕ್ಕೆ ಒಂದು ಹಾಗವನ್ನು ನೀಡಬೇಕೆಂದು ಹೇಳಿ ೧೨ ಮತ್ತರಿಗೆ ಒಂದು ಗದ್ಯಾಣ ನಿಗದಿಪಡಿಸುತ್ತಾನೆ. ಈ ಆಣೆಯಂತೆ ನಡೆಯದಿದ್ದರೆ ೫ ಹಣ ದಂಡ ಎಂದಿದೆ. ತೆರಿಗೆಯನ್ನು ಸರಿಯಾಗಿ ಪಾವತಿಸದಿದ್ದರೆ ಅಥವಾ ಕೊಡದಿದ್ದರೆ ಅದರ ಮೇಲೆ ದಂಡ ವಿಧಿಸಿರುವುದು ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ. ೧೦೧೪-೧೫ರ ಶಾಸನದಲ್ಲಿ ಬೆದ್ದಲು ಭೂಮಿಯ ತೆರಿಗೆಯನ್ನು ಕುರಿತು ಹೀಗೆ ಹೇಳುತ್ತದೆ.

ಮುಕ್ಕಪ್ಪೆಯ ಭಾಗಂ ಪೊಸದಟಿ ಪ[ಂ]

ನ್ನೆರಡಱ ಭಾಗಂ ವರ್ಷಪ್ರತಿ

ಒನ್ದು ಭಾಗಂ ಇಳಿಯುತುಂ

ಒನ್ದು ಮುಕ್ಕಪ್ಪೆಯೊಳೆಲ್ಲಾ ಕಾಲಕಂ ನಡುವುದು ಮಾಗೆ

ಕಿಸುಕಾಡು ಆಯ್ದನೆಯ ಭಾಗಂ[೨೭೮]

ಕರಿಯಹಾಳು ಮುಕ್ಕುಪೆಯಲ್ಲಿ ಹೊಸದಾಗಿ ಉಳುವವರು ಹನ್ನೆರಡರ ಭಾಗದಲ್ಲಿ ವರ್ಷಕ್ಕೆ ಒಂದು ಭಾಗವು ಇಳಿಸಿಕೊಳ್ಳುವಂತೆ ನಿಗದಿಯಾಗಿತ್ತು. ಈ ಭಾಗದ ಇಳಿಕೆಯು ಕಿಸುಕಾಡ ನಾಡಿನಲ್ಲಿರುವಂತೆ ಐದು ಭಾಗಕ್ಕೆ ನಿಗದಿಪಡಿಸಿದಂತೆ ತಿಳಿಯುತ್ತದೆ.

ಕ್ರಿ.ಶ. ೧೨೦೦ರ ಶಾಸನದಲ್ಲಿ ಅಮೃತೇಶ್ವರ ದೇವರ ನೈವೇದ್ಯಕ್ಕೆ ೬೦೦ ಮತ್ತರು ಕಮ್ಮ ಭೂದಾನ ನೀಡಿದ ಉಲ್ಲೇಖವಿದೆ. 'ಮಾರುಗೊಂಡು ಸಾವಿರ ಕಮ್ಮ' ದಾನ ಮಾಡಿದ ಭೂಮಿಯಲ್ಲಿ ಆ ಭೂಮಿಯನ್ನು ಗುತ್ತಗೆಯ ರೂಪದಲ್ಲಿ ಪಡೆದು ಉಳುಮೆ ಮಾಡುವವರು ದೇವರಿಗೆ ಎರಡು ಸಮಯದ ನೈವೇದ್ಯಕ್ಕೆ ಅಕ್ಕಿ, ತುಪ್ಪ, ಗೋದಿ, ತೋಗರಿ ದಾನ ಮಾಡಬೇಕು ಎಂದಿದೆ.[೨೭೯]

ಭೂಮಾಲೀಕರು ಉಳುವವನಿಗೆ ಭೂಮಿಯನ್ನು ಸಾಗುವಳಿಗೆ ನೀಡಿ ಅವರಿಂದ ಅರ್ಧಭಾಗ ಆದಾಯ ಪಡೆಯುತ್ತಿದ್ದರು. ಇದಕ್ಕೆ ಕೋರು ಎಂದು ಕರೆಯುವರು. ಉಳುಮೆಗೆ ನೀಡಿದ ಭೂಮಿಯಲ್ಲಿ ಇಂತಿಷ್ಟು ಪ್ರಮಾಣ ನೀಡಬೇಕೆಂದು ನಿರ್ಬಂಧ ವಿಧಿಸಿ ಕೊಡುವುದಕ್ಕೆ 'ಮಿಟ್ಟ' ಎಂದು ಕರೆಯಲಾಗುತ್ತದೆ. ಇಂದಿಗೂ ಈ ಪದ್ಧತಿ ಕಂಡುಬರುತ್ತದೆ. ದಶಬಂಧ,(ಪತ್ತೊಂದಿ) ನಿಬಂಧ ಇವುಗಳು ಶಾಸನದಲ್ಲಿ ಉಲ್ಲೇಖಗೊಂಡಿರುವುದು ಕಂಡುಬಂದಿದೆ. ದಶಬಂಧ ಎಂದರೆ ಹತ್ತನೇ ಒಂದು ಭಾಗ. ನಿಬಂಧ ಎಂದರೆ ಆರನೇ ಒಂದು ಭಾಗ ಎಂದು ಅರ್ಥೈಸಲಾಗಿದೆ. ಕ್ರಿ.ಶ. ೪೫೦ರ ಶಾಸನದಲ್ಲಿಯೇ 'ಪತ್ತೊಂನ್ದಿ'ಯ ಉಲ್ಲೇಖ ಕಂಡುಬರುತ್ತದೆ.[೨೮೦] ಕ್ರಿ.ಶ. ೧೧೬೭ರ ಶಾಸನದಲ್ಲಿ ಬೆದ್ದಲೆ ಕಂಮ೨೦೦ ತೋಟದ ಬಳಿಯ ಹರಳಕೆಯ ಕಂಮ ೨೦೦ ದಾನ ನೀಡಿದ ಉಲ್ಲೇಖವಿದೆ.[೨೮೧] ಹರಳಕೆಯ ಭೂಮಿ ಎಂದರೆ ಕಲ್ಲು ಭೂಮಿಗಳಿಂದ ಆವೃತ್ತವಾದ ಭೂಮಿ. ಈ ಭೂಮಿಯು ಎಳ್ಳು, ರಾಗಿ, ನವಣೆ, ಸಾಮೆಯಂತಹ ಕಡಿಮೆ ಖರ್ಚಿನ ಬೆಳೆಗಳನ್ನು ಬೆಳೆಯಲು ಯೋಗ್ಯವಾಗಿರುತ್ತದೆ. ಇಂತಹ ಭೂಮಿಗಳನ್ನು ದಾನ ನೀಡುವ ಪ್ರಮಾಣ ಅಧಿಕವಾಗಿರುತ್ತಿತ್ತು. ಈ ಭೂಮಿಗಳಲ್ಲಿ ಬೆಳೆ ಬರುವ ಪ್ರಮಾಣ ಕಡಿಮೆ ಇರುತ್ತದೆ. ಜೊತೆಗೆ ಲಾಭದಾಯಕ ಬೆಳೆಗಳನ್ನೂ ಈ ಭೂಮಿಯಲ್ಲಿ ಬೆಳೆಯಲು ಸಾಧ್ಯವಾಗುವುದಿಲ್ಲ. ಈ ಕಾರಣಗಳಿಂದಾಗಿ ಆಹಾರಧಾನ್ಯಗಳನ್ನು ಹೆಚ್ಚು ಬೆಳೆಯುವ, ಭೂಮಿಯನ್ನು ಸಾಗುವಳಿಗೆ ಒಳಪಡಿಸುವ ಉದ್ದೇಶದಿಂದ ಈ ಭೂಮಿಯನ್ನು ಹೆಚ್ಚು ವಿಸ್ತೀರ್ಣದಲ್ಲಿ ದಾನ ಮಾಡಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨ನೆಯ ಶತಮಾನದ ಶಾಸನವು ಬೆದಲು ಕಂಬ ೮೦೦ನ್ನು ದಾನ ನೀಡಿದಂತೆ ತಿಳಿಸುತ್ತದೆ.[೨೮೨] ಕ್ರಿ.ಶ. ೧೧೫೯ರ ಶಾಸನದಲ್ಲಿ ಬೆದ್ದಲೆ ಮತ್ತಕೊಂದು ಮೂಡಗರ್ದೆ ಸಲಗೆ ೩ ದೇವರಿಂ ಹಡುವ ಬೆರ್ದ್ದಲೆ ಅರೆವತ್ತಲು ಕಾರೆಯ ಹಾಳಲು

ಬೆದ್ದಲೆ ಎಂದಿದೆ.[೨೮೩] ಕ್ರಿ.ಶ. ೧೧೪೫ರ ಶಾಸನದಲ್ಲಿ ಬೆದ್ದಲೆ ಮತ್ತಕೊಂದು ಮೂಡಗರ್ದೆ ಸಲಗೆ ೩ ದೇವರಿಂದ ಹಡುವ ಬೆರ್ದ್ದಲೆ ಅರೆವತ್ತಲು ಕಾರೆಯಹಾಳಲು ಬೆದ್ದಲೆ ಎಂದಿದೆ.[೨೮೪] ಕಾರೆಯಹಾಳು ಬೆದ್ದಲೆ ಎಂದರೆ ಕಾರೆ ಮುಳ್ಳುಗಳಿಂದ ಕೂಡಿದ ಬೀಳು ನೆಲ ಅಥವಾ ಪಾಳು ನೆಲದ ಭೂಮಿ ಇರುವ ಸಾಧ್ಯತೆ ಇದೆ. ಇದನ್ನು ವ್ಯವಸಾಯಕ್ಕೆ ಅಣಿಗೊಳಿಸುವ ಉದ್ದೇಶದಿಂದ ಈ ಭೂಮಿಯನ್ನು ದೇವಾಲಯಕ್ಕೆ ದಾನ ನೀಡಿರುವುದು ಕಂಡುಬಂದಿದೆ. ಕ್ರಿ.ಶ. ೧೧೫೮ರ ಶಾಸನದಲ್ಲಿ ದೇವರಿಗೆ ಕೆಱೆಯಲಿ ಕೊಳಗ ೧೦ ಗದ್ದೆ, ಬೆದ್ದಲು ಭೂಮಿಗಳ ದಾನನೀಡಿರುವುದನ್ನು ತಿಳಿಸುತ್ತದೆ. ಇದನ್ನು ಮಹಾಜನಂಗಳ ಪುತ್ರ ಬೋಕಗವುಡನು ಪ್ರತಿಪಾಳಿಸಬೇಕೆಂದಿದೆ.[೨೮೫] ದೇವರ ಭೂಮಿಯ ಮೇಲ್ವಿಚಾರಣೆ ಮಹಾಜನರಿಗೆ ಸೇರಿತ್ತು ಎಂಬುದು ಇದರಿಂದ ತಿಳಿದುಬರುತ್ತದೆ. ಕ್ರಿ.ಶ. ೧೧೯೭ರ ಶಾಸನದಲ್ಲಿ ಮಲ್ಲಿಕಾರ್ಜುನ ದೇವರ ನಿತ್ಯಕಾರ್ಯಗಳಿಗೆ ಮತ್ತಿಕೆಱೆಯ ಹಿಂದೆ ಗದ್ದೆ ಸ ೧...ಕಾಡನೆಱೆಯ ಬೆದಲೆ ಕೆ ೫ ಬೆದ್ದಲು ಗದೆ ಭೂಮಿಯನ್ನು ಇಂನ್ತೀ ಭೂಮಿಯನ್ನು ಮಚಜೀಯನಂ ಮಲಜೀಯನಂ ಹಂಚಿಕೊಂಡು ಉಣುತಂ ಇರಲು ಆ ಮಲ್ಲಜೀಯನು ತನ್ನ ಬಾಗೆಯನ್ನು ನಾಗಗೌಡ ನಾಕಿಗೌಡನೊಳಗಾದ ಸಮಸ್ತ ಪ್ರಜೆ ಗೌಉಡಿನ ಮುಂದ.. ಕಜೀಯಂಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟನು.[೨೮೬] ದೇವರಿಗೆ ಭೂಮಿಯನ್ನು ದಾನ ನೀಡಿದಾಗ ಆ ದಾನದ ಭೂಮಿಯನ್ನು ಉಳುಮೆ ಮಾಡುವ ಕೃಷಿಕವರ್ಗವೊಂದು ಇರುತ್ತಿತ್ತು ಎಂಬುದು ಈ ಶಾಸನದಿಂದ ತಿಳಿಯುತ್ತದೆ. ಅಲ್ಲದೆ ಸಾಮಾನ್ಯವಾಗಿ ದೇವಾಲಯಗಳಿಗೆ ದಾನ ಕೊಡುವ ಬೆದ್ದಲು ಭೂಮಿಯು ಕೆಲವೊಮ್ಮೆ ಕಾಡು, ಕಲ್ಲು, ಬೀಳು, ಬೆಟ್ಟ ಮೊದಲಾದವುಗಳಿಂದ ಆವೃತ್ತವಾದ ಅಥವಾ ಹೊಸದಾಗಿ ಉಳುಮೆಗೆ ಒಳಪಡುವ ಭೂಮಿಯಾಗಿರುತ್ತಿತ್ತು. ಇಂತಹ ಭೂಮಿಯನ್ನು ದಾನ ಕೊಡುವ ಮೂಲಕ ಸಾಗುವಳಿಗೆ ಒಳಪಡಿಸಿರುವ ಸಾಧ್ಯತೆಗಳಿವೆ. ದೇವದಾನ, ಬ್ರಾಹ್ಮಣ ದಾನದ ಭೂಮಿಯನ್ನು ಭೂರಹಿತ ಮತ್ತು ಸಣ್ಣಪುಟ್ಟ ಹಿಡುವಳಿದಾರರು ಉಳುಮೆ ಮಾಡುತ್ತಿದ್ದರು. ಇವರಿಗೆ ಆ ಭೂಮಿಯ ಉಳುಮೆ ಸಾಧ್ಯವಾಗದಿದ್ದಾಗ ಬೇರೆಯವರಿಗೆ ಹಸ್ತಾಂತರಿಸುತ್ತಿದ್ದರು. ಇದು ಇಂದಿಗೂ ಕಂಡುಬರುತ್ತಿದೆ. ಸಾಮಾನ್ಯವಾಗಿ ಭೂಮಿಯಲ್ಲಿ ಕಡಿಮೆ ಆದಾಯ ಅಥವಾ ಇಳುವರಿ ಬಾರದ ಸಂದರ್ಭಗಳು ಮತ್ತು ತನ್ನಿಂದ ನಿಭಾಯಿಸಲು ಸಾಧ್ಯವಾಗದ ಸಂದರ್ಭಗಳು ಇದಕ್ಕೆ ಕಾರಣಗಳಿರುವ ಸಾಧ್ಯತೆಗಳಿವೆ. ಈ ಶಾಸನದಲ್ಲಿಯೂ ಮಲ್ಲಜೀಯರು ತನ್ನ ಭಾಗದಲ್ಲಿ ಉತ್ತು ತಿನ್ನುತ್ತಿದ್ದ ಭೂಮಿಯನ್ನು ಕಜೀಯ್ಯಂಗೆ ಹಸ್ತಾಂತರಿಸಿರುವುದು ಕಂಡುಬರುತ್ತದೆ. ಬೇರೆಯವರಿಗೆ ನೀಡುವ ಸಂದರ್ಭದಲ್ಲೂ ನಿಯಮಗಳಿರುತ್ತಿದ್ದವು. ಊರಿನ ಸಮಸ್ತ ಪ್ರಜೆಗಳ ಮುಂದೆ ತನ್ನಿಂದ ಬೇರೆಯವರಿಗೆ ಅಂದರೆ ಈ ಶಾಸನದಲ್ಲಿ ಕಜೀಯ್ಯಂಗೆ ಬಿಟ್ಟುಕೊಡುತ್ತಿದ್ದೇನೆ ಎಂದು ಹೇಳಿರುವುದಿದೆ. ಹಸ್ತಾಂತರಿಸುವಾಗ ಊರಿನ ಸಮಸ್ತ ಹಿರಿಯರೆದುರು ಬೇರೆಯವರಿಗೆ ಕೊಡುವ ವಿಚಾರವನ್ನು ಪ್ರಸ್ತಾಪಿಸಿ, ಅವರ ಮುಂದೆಯೇ ಹಸ್ತಾಂತರಿಸಬೇಕು ಎಂಬುದು ಈ ಶಾಸನದಿಂದ ತಿಳಿಯುತ್ತದೆ. "ಕೃಷಿ ಭೂಮಿಯಾಗಿ ಪರಿವರ್ತಿಸುವ ಭೂಮಿಯನ್ನು ಅದರಲ್ಲೂ ಅಡವಿಯ ಭೂಮಿಯನ್ನು ಬಯಲು ಮಾಡಿ ಕೃಷಿ ಭೂಮಿ ಮಾಡಿ ಉಳುಮೆ ಮಾಡುವುದಕ್ಕೆ 'ಸಹಲಾಟವಿ' ಎಂದು ಕರೆಯಲಾಗುತ್ತದೆ.[೨೮೭]

ಕ್ರಿ.ಶ. ೧೧೮೧ರ ಶಾಸನದಲ್ಲಿ ಹರಳೆ ಬೆದ್ದಲೆ ಕಂಬ ೪೦೦ರ ಉಲ್ಲೇಖವಿದೆ.[೨೮೮] ಕಲ್ಲು ಭೂಮಿಯಿಂದ ಕೂಡಿದ ಬೆದ್ದಲು ಭೂಮಿಯನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ. ಕ್ರಿ.ಶ.೧೦೮೫ರ ಶಾಸನವು ರೈತರು ಅಥವಾ ಒಕ್ಕಲುಗಳನ್ನು ಮೇಳ್ವಾಸಿರ್ಬ್ಬರು ಎಂದು ಕರೆದಿದೆ. ಶಾಸನವು ಇವರನ್ನು ಸಕಳ ಜೀವ ರಕ್ಷಕ ಪರೋಪಕಾರರ್ತ್ಥ ಶರೀರರು ಶ್ರೀ ಮೇಳೇಶ್ವರದೇವ ಪಾದಪಂಕಜ ಭ್ರಮರರು ಚಕ್ರವರ್ತ್ತಿರಾಜ್ಯ ಸಮುದ್ಧರಣ ಭರಣರು ಸಕಳ ಲಕ್ಷ್ಮೀ ನಿಳಯರುಂ

ಕ್ಷೀರದಧಿಷ್ಟಿತ ವಿಸ್ತೀರ್ಣ ಪರಿಪೂರ್ಣ್ಣರುಂ ಸಕ[ಳ]ನ್ಯ ಫಲಭರಿತರುಂ ಸಮಸ್ತ ಪ್ರಾಣಿ ಜಾತಿ ನಿಸ್ತಾರಕರುಂ ವಿನಯವಿನೀತರುಂ ಸತ್ಯರತ್ನಾಕರರುಂ ನೀತಿ ಸಮಸ್ತರುಂ ನುಡಿದೆರಡು ನುಡಿವರಲ್ಲರುಂ ಗುಣ ಸಂಪೂರ್ಣ್ಣರುಂ ವಿನಾಯಕ ವರ ಪ್ರಸಾದರುಂ ಅಭಿಮಾನಧನ ಸ...ಂ ಗಂಭೀರ ಗೌರಭ್ಯರು ವಿಪ್ರವರ ಪ್ರಸಾದರುಂ ಸರಳಜನ ಸುಂತುಷ್ಟರುಂ ಬೇಡಿದ ವಗ್ಗೀವರು...ಸಕಲಧರ್ಮ್ಮ ಧುರಂಧರರುಮಪ್ಪ ಸಮಸ್ತ ಮೇಳ್ಳಾಸಿರ್ಬ್ಬರುಂ ಇವರು ಶ್ರೀ ಮೇಳೇಶ್ವರ ದೇವರಿಗೆ ತಾವು ಕೊಟ್ಟು ಆಯವೆನ್ತೆಂದಡೆ "ಆ ಹಿರಿಯ ಗೊಬ್ಬೂರ ಹಳ್ಳಿಗಳೊಳಗಾಗಿ ಗೊಬ್ಬೂರ ಚತುಸ್ಸೀಮೆಯಿಂದೊಳಗೆ ಜಾತಿವಿಜಾತಿಯೆ...ನೊಗನಿಕ್ಕಿ ಉತ್ತು ಹರಗಿ ಬಿತ್ತಿ ಬೆಳೆದು ಆ ಹಿರಿಯ ಮಹಾಜನಂಗಳಿಗೆಸೂಡುಜೋಳಮಂತೆತ್ತುಗೆಯ್ದು...'ಜಾತಿವಿಜಾತಿಯೆನ್ನದೆಗೆಯ್ದುಕೊಂಡು.....ಕೂಲಿಯ ಲೊಂದೊಂದು ಹಾಗಮಂ.... ಮೇಂಟಿಯಲೊಂದೊಂದು ಕೊಳಗ ಭತ್ತಮಂ ಎಂದು ಶಾಸನವು ಉಲ್ಲೇಖಿಸಿದೆ.[೨೮೯] ಈ ಹೊತ್ತಿಗೆ ರೈತರ ಪ್ರಾಮುಖ್ಯತೆಯನ್ನು ಆಳುವವರ್ಗ ಮನಗಂಡಂತೆ ಕಂಡುಬರುತ್ತದೆ. ಶ್ರಮಿಕ ವರ್ಗವೊಂದನ್ನು ಇಲ್ಲಿ ದಾಖಲಿಸುವುದು ಗಮನಾರ್ಹ ಸಂಗತಿ. ಕೃಷಿಕರಿಗೆ ಒಕ್ಕಲುತನ ಜೀವನ ವಿಧಾನ, ಸರ್ವಜ್ಞ ಕೃಷಿಕನನ್ನು ಕುರಿತು 'ಕೋಟಿವಿದ್ಯೆಗಿಂತ ಮೇಟಿ ವಿದ್ಯೆಲೇಸು' ಎಂದಿರುವುದು ಕೃಷಿಕರಿಗಿರುವ ಅವರ ಜ್ಞಾನ ಮತ್ತು ಅನುಭವದ ಬಗೆಗೆ ತಿಳಿಸುತ್ತದೆ. ಒಕ್ಕಲಿಗನೊಕ್ಕಿದಾಗಲೇ ಜಗತ್ತಿಗೆಲ್ಲ ಅನ್ನ, ಒಕ್ಕಲಿಗನೊಕ್ಕದಿದ್ದರೆ ಬಿಕ್ಕುವುದು ಜಗವೆಲ್ಲ' ಎಂದು ಸರ್ವಜ್ಞ ಹೇಳುತ್ತಾನೆ.[೨೯೦] ಜೇಡರ ದಾಸಿಮಯ್ಯನವರು ತಮ್ಮ ಒಂದು ವಚನದಲ್ಲಿ 'ಇಳೆನಿಮ್ಮ ದಾನ, ಬೆಳೆನಿಮ್ಮ ದಾನ' ಎಂದು ಹೇಳಿರುವ ಮಾತನ್ನು ಇಲ್ಲಿ ರೈತನಿಗೆ ಅನ್ವಯಿಸುವುದು ಸರಿ ಎನಿಸುತ್ತದೆ. ಕುವೆಂಪುರವರು ರೈತನನ್ನು ಅನ್ನದಾತ, ನೇಗಿಲ ಯೋಗಿ ಎಂದು ಕರೆದಿರುವರು. "ನೇಗಿಲ ಕುಳ ದೊಳಗಡಗಿದೆ ಕರ್ಮ ನೇಗಿಲ ಮೇಲೆ ನಿಂತಿದೆ ಧರ್ಮ" ಎಂದಿರುವುದು ಕಂಡುಬರುತ್ತದೆ. ಹಾಗೆಯೇ ನೇಗಿಲಯೋಗಿ ಲೋಕಕ್ಕೆ ಅನ್ನವನ್ನು ನೀಡುತ್ತಾನೆ ಎಂದು ಹೇಳಿರುವ ಇಂದಿನ ಮಾತುಗಳು ಅಂದೇ ಕಂಡುಬಂದಿರುವುದು ತಿಳಿದುಬರುತ್ತದೆ. ಕಷ್ಟಪಟ್ಟು ಬೆವರು ಸುರಿಸುವ ಈ ವರ್ಗವು ಸೂಡು ಜೋಳವನ್ನು ತೆರಿಗೆಯಾಗಿ ನೀಡಿರುವುದು ಕಂಡುಬರುತ್ತದೆ. ಅಂದರೆ ಒಂದು ಚೀಲದಷ್ಟು ಜೋಳವನ್ನು ಕಟ್ಟಿ ಕೊಟ್ಟಿರುವ ಸಾಧ್ಯತೆಗಳಿವೆ.

ಈ ಶಾಸನದಲ್ಲಿ ಗಮನಿಸುವ ಪ್ರಮುಖ ಅಂಶವೆಂದರೆ ಜಾತಿ ವಿಜಾತಿ ಎನ್ನದೆ ಭೂಮಿಯಲ್ಲಿ ಉಳುಮೆ ಮಾಡಬೇಕು ಎಂದಿರುವುದು. ಈ ಅವಧಿಯಲ್ಲಿ ಎಲ್ಲ ಜಾತಿಯವರು ಉಳುಮೆ ಮಾಡಿರುವ ಸಾಧ್ಯತೆಗಳು ತಿಳಿಯುತ್ತವೆ. ವ್ಯವಸಾಯ ಮಾಡುವ ವಿಧಾನವನ್ನು ಶಾಸನವು ಇಲ್ಲಿ ತಿಳಿಸಿರುವುದು ಗಮನಾರ್ಹ. 'ಉತ್ತಿ ಬಿತ್ತಿ ಬೆಳೆದು' ಎಂಬ ಉಲ್ಲೇಖವನ್ನು ಗಮನಿಸಿದರೆ ಭೂಮಿಯನ್ನು ನೇಗಿಲಿನಿಂದ ಉಳುಮೆ ಮಾಡಿ ಬಿತ್ತನೆಗೆ ಅಣಿಗೊಳಿಸಿ, ಬಿತ್ತಿ ಬೆಳೆಯಬೇಕು ಎಂದು ಹೇಳಿರುವುದು ಕಂಡುಬರುತ್ತದೆ. ಸರ್ವಜ್ಞನು ವ್ಯವಸಾಯವನ್ನು ಕುರಿತು ಹೀಗೆ ಹೇಳಿರುವನು;

ಹದಬೆದೆಯಲಾರಂಬ ಕದನದಲ್ಲಿ ಕೈದುವನು
ನದಿಯ ಹಾವಲ್ಲಿ ಹರುಗೋಲ ಮರೆದಾತ
ವಿಧಿಯ ಬೈದೇನು ಸರ್ವಜ್ಞ[೨೯೧]

ಇದೇ ಮಾತುಗಳು ಜನಪದರಲ್ಲಿ ಹೀಗೆ ಕಂಡುಬಂದಿವೆ

ಬೆದೆನೋಡಿ ಬಿತ್ತಣ್ಣ ಹದನೋಡಿ ಹರಗಣ್ಣ
ತುಂಬು ತೆನಿ ನೋಡಿ ಒಕ್ಕಣ್ಣ । ಸುತ್ತೆಲ್ಲ
ಜನಕ ನೀ ನೀಡಿ ನಲಿಯಣ್ಣ[೨೯೨]

ಕೃಷಿಕರಿಗೆ ವ್ಯವಸಾಯದ ಜ್ಞಾನವು ಪರಂಪರಾನುಗತವಾಗಿ ಬಂದ ಅನುಭವ ಆಧರಿತ ಜ್ಞಾನವಾಗಿದೆ. ಬಿತ್ತನೆ ಮಾಡುವಾಗ ಭೂಮಿಯ ಹದವರಿತು ಬೆದೆ ನೋಡಿ ಬಿತ್ತಬೇಕು. ಪೈರು ಬಲಿತಾಗ ಸರಿಯಾದ ಸಮಯ ನೋಡಿ ಕೊಯ್ಲು ಮಾಡಿ ಕಾಳುಗಳನ್ನು ಸಂಗ್ರಹಿಸಬೇಕು ಎಂಬುದು ಇದರಿಂದ ತಿಳಿಯುತ್ತದೆ. ಶಾಸನದಲ್ಲಿ 'ಸೂಡುಜೋಳ' ಕೊಟ್ಟಿರುವುದನ್ನು ಗಮನಿಸಿದರೆ ರೈತರು ಹೊಲಗಳಲ್ಲಿ ಜೋಳವನ್ನು ಬೆಳೆಯುತ್ತಿದ್ದರು. ಹಾಗೆಯೇ ಅಂದಿನ ಜನರ ಒಣಭೂಮಿ ಬೇಸಾಯದ ಬೆಳೆ ಜೋಳವಾಗಿತ್ತು ಎಂಬುದು ತಿಳಿಯುತ್ತದೆ.

ಬಿತ್ತ ಕೂರಿಗೆ ಮುಂದೆ ಎಡಿಗಿಂದೆ

ಬಿತ್ತಾಲೋಗ್ಯಾನೆ ಬಿಳಿಜ್ವಾಳ । ಶರಣಪ್ಪ

ಬಿತ್ತಿ ಕಲಿಸ್ಯಾನೆ ಮಡದೀಗೆ[೨೯೩]

ಎಂಬ ಜನಪದರ ಮಾತುಗಳು ಬಿಳಿ ಜೋಳವನ್ನು ಕೂರಿಗೆಯಿಂದ ಬಿತ್ತುತ್ತಿದ್ದರು ಎಂದು ತಿಳಿಸುತ್ತವೆ. ಕ್ರಿ.ಶ. ೧೦೮೭ರ ಶಾಸನವು 'ಒಕ್ಕಲುದೆರೆ ಪಣ'ನ್ನು ಉಲ್ಲೇಖಿಸಿದೆ.[೨೯೪] ಒಕ್ಕಲಿಗರಿಗೆ ಅಂದರೆ ಕೃಷಿಕರಿಗೆ ಹಾಕಿದ ತೆರಿಗೆಯನ್ನು ಈ ಶಾಸನವು ತಿಳಿಸಿದೆ. ಕ್ರಿ.ಶ.೧೦೩೨ರ ಶಾಸನದಲ್ಲಿ ಕಱೆಯ ಕಾಟಿಂಗಲ್ಲ ಮೂಳ ಪೊಲದೊಳ್ಕೊಟ್ಟ ದತ್ತಿ ಕರಿಯ ನೆಲ ಮತ್ತ ೧.[೨೯೫] ಕರಿಯ ಕಾಟಿಂಗಲ್ಲಿನ ಮೂಲ ಹೊಲದಲ್ಲಿ ೧೦ ಮತ್ತರು ಕರಿಯಭೂಮಿಯನ್ನು ದಾನ ನೀಡಿದನೆಂದು ಶಾಸನವು ತಿಳಿಸಿದೆ.

ಕಜೆಯಭೂಮಿ, ಎರೆಭೂಮಿ, ಹರಳಭೂಮಿ, ಮರಳಭೂಮಿ ಮೊದಲಾದ ಭೂಮಿಗಳಲ್ಲಿ ಒಣಬೇಸಾಯ ಕೃಷಿಯನ್ನು ಮಾಡಲಾಗುತ್ತದೆ. ಇಂತಹ ಭೂಮಿಗಳಲ್ಲಿ ರಾಗಿ, ಜೋಳ, ನವಣೆ, ಉದ್ದು, ಹೆಸರು, ಎಳ್ಳು, ಹತ್ತಿ ಮೊದಲಾದ ಬೆಳೆಗಳನ್ನು ಬೆಳೆಯಲಾಗುತ್ತದೆ. ಕ್ರಿ.ಶ ೧೧೯೯ರ ಶಾಸನದಲ್ಲಿ ಖಂಣ್ಡುಗ ಜೋಟದ ಬೆದಯುಂ' ಎಂದು ಉಲ್ಲೇಖಿಸಿದೆ.[೨೯೬] ಈ ಬೆಳೆಗಳನ್ನು ಮಳೆಯಾಧಾರಿತವಾಗಿಯೇ ಬೆಳೆಯಲಾಗುತ್ತದೆ. ರೈತರು ಈ ಬೆಳೆಗಳನ್ನು ಬೆಳೆಯಲು ಮಳೆರಾಯನನ್ನು ಜಪಿಸುವುದು ಕಂಡುಬರುತ್ತದೆ. ಮಳೆಯು ಕೃಷಿಯೊಂದಿಗೆ ಎಲ್ಲ ಕಾಲದಲ್ಲೂ ಕೆಲವೊಮ್ಮೆ ಜೂಜಾಟವಾಡಿರುವ ಸಾಧ್ಯತೆಗಳಿವೆ. ಋಗ್ವೇದದ ಕಾಲದಲ್ಲಿ ಕಾಲೇ ವರ್ಷಂತು ಪರ್ಜನ್ಯ ಪೃಥಿವೀ ಸಸ್ಯ ಶಾಲೀನೀ–ಕಾಲಕಾಲಕ್ಕೆ ಮಳೆ ಬರಲಿ ಪೃಥ್ವಿಯು ಸಸ್ಯಗಳಿಂದ ತುಂಬಲಿ ಎಂದು ಪ್ರಾರ್ಥಿಸಿರುವುದು ಕಂಡುಬರುತ್ತದೆ.[೨೯೭] ಇದನ್ನು ಗಮನಿಸಿದರೆ ಅಂದೂ ಸಹ ಮಳೆ ಕಾಲಕಾಲಕ್ಕೆ ಸರಿಯಾಗಿ ಬೀಳದಿರುವ ಸಾಧ್ಯತೆಗಳಿವೆ. ಭಗವದ್ಗೀತೆಯಲ್ಲಿಯು ಮಳೆಯ ಪ್ರಾಮುಖ್ಯತೆಯನ್ನು ಕುರಿತು ಹೀಗೆ ಹೇಳಲಾಗಿದೆ. ಯಜ್ಞದಿಂದ ಪರ್ಜನ್ಯ ಮೋಡಗಳಾಗುತ್ತವೆ. ಪರ್ಜನ್ಯದಿಂದ ಮಳೆಯಾಗುತ್ತದೆ. ಮಳೆಯಿಂದ ಅನ್ನ ಸಂಭವಿಸುತ್ತದೆ ಎಂದು ತಿಳಿಸಿದೆ. ಇದು ನಿರಂತರ 'ಚಕ್ರ ಏವಂ ಪ್ರವರ್ತಿತಂ ಚಕ್ರಂ' ಎಂದು ಹೇಳಿರುವುದು ಕಂಡುಬರುತ್ತದೆ.[೨೯೮]

ಬೆಳೆ ಬೆಳೆಯುವಾಗ ಆವರ್ತನ ಬೆಳೆಗಳನ್ನು ಬೆಳೆಯಬೇಕು. ಅಂದರೆ ಬೆಳೆ ಬದಲಿಸಿ ಬೇಸಾಯ ಮಾಡಬೇಕು. ಇಂತಹ ಪಾರಂಪರಿಕ ಜ್ಞಾನದ ಅನುಸಂಧಾನವಾಗುವ ಅಗತ್ಯತೆ ಇಂದಿನ ದಿನಗಳ ಬೇಸಾಯ ವಿಧಾನಗಳಿಗಿದೆ. ಭೂಮಿಗಳು ರಾಸಾಯನಿಕ ಸಿಂಪಡಣೆ ಮತ್ತು ಗೊಬ್ಬರಗಳ ಆಗರಗಳಾಗಿವೆ. ಇದರಿಂದ ಹೊರಬರಲು ಪ್ರಾಚೀನ ಜ್ಞಾನದ ಅನುಸಂಧಾನದ ಅಗತ್ಯವಿದೆ. ಮಳೆಯಬಗೆಗೆ ಕಾಲಕಾಲಕ್ಕೆ ಸುರಿಯುವ ಮಳೆಗಳನ್ನು ತಮ್ಮ ಅನುಭವದಿಂದ ಗ್ರಹಿಸಿ ಜನಪದರು ಈ ರೀತಿ ಹೇಳಿರುವರು. ಧರಣಿ ಮಳೆ ಬಂದರೆ ಧರಣಿಯೆಲ್ಲ ಬೆಳೆ, ಬಂದರೆ ಮಗೆ ಹೋದರೆ ಹೊಗೆ, ಸ್ವಾತಿ ಮಳೆಯಾದ ಮೇಲೆ ಯಾತರ ಮಳೆ, ಸ್ವಾತಿ ಮಳೆಯೋತೆಂದರೂ ಬಿಡಲ್ಲ, ಅನುರಾಧ

ಮಳೆ ಬಂದರೆ ಮನೋರೋಗ ಪರಿಹಾರ, ಹೋಳಿ ಹಬ್ಬಕ್ಕೆ ಓಣಿಯಲ್ಲ ನೀರು, ಹುಬ್ಬೆ ಮಳೆ ಹುಬ್ಬುಬ್ಬಿ ಬಂದರೆ ಗುಬ್ಬಿ ತುಪ್ಪಡ ನೆನೆಯೋಲ್ಲ, ಚಿತ್ತ ಮಳೆಗೆ ಕುರುಡುಚಿತ್ತೆ ಹಿಡಿಯುತ್ತೆ, ಆರಿದ್ರ ಮಳೆ ಬರದಿದ್ದರೆ ದರಿದ್ರ ಕಂಡಂತೆ ಇನ್ನು ಮೊದಲಾದ ಮಳೆಯಾಧರಿತ ಜ್ಞಾನ ಜನಪದರಿಗೆ ಅನುಭವದ ಮೂಲಕ ಪರಂಪರಾನುಗತವಾಗಿ ಬಂದಿರುವುದು ಕಂಡುಬರುತ್ತದೆ. ನಿರಂತರ ಪ್ರಕೃತಿಯೊಂದಿಗಿನ ಒಡನಾಟ, ಸೂಕ್ಷ್ಮ ದೃಷ್ಟಿಕೋನಗಳು ಅವರ ಜೀವನದ ಭಾಗವಾಗಿಯೇ ಇರುತ್ತದೆ.

ಶಾಸನದಲ್ಲಿ ಬರುವ ಶಾಪಾಶಯಗಳು ಬೇಸಾಯದ ಬಗೆಗೆ ಲೋಕದೃಷ್ಟಿಯನ್ನು ಒದಗಿಸುತ್ತವೆ. ಕ್ರಿ.ಶ. ೭೮೫ರ ಶಾಸನದಲ್ಲಿ ಒಕ್ಕಲ್ತನಂ ಕೆಯ್ವೊನಾ ವಿತ್ತಿದಲಿ ವೆಳೆಯಾಗದೆ ಕೆಡುಗೆ ಇದಾನ್ ಕಾದು ಸಲ್ವೋನ್ ಪರಮತೀರ್ಥಂಗಳ ಆಪ್ಪಾರ್, ನೆಲನುಂ ವೆಳಗೆ ಪಾರ್ವರುಂ ಪ್ರಜೆಯುಂತಣಿಗೆ'[೧೯೯] ಎಂದಿದೆ. ಕ್ರಿ.ಶ.೯ನೆಯ ಶತಮಾನದ ಶಾಸನದಲ್ಲಿ ಕುಪ್ಪಂ ಮಣಲಿಯೊಳ್ ಅಯ್ಗುಳ ಬೆದೆಮಂಣ್ನು ಎಂದು ಉಲ್ಲೇಖಿಸಿದೆ.[೨೦೦] ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಒಕ್ಕಲುಳ್ ಪೋತಿರ್ಮ್ಮಕ್ಕಳ್ ಪುಟ್ಟದೆ ಕೆಡುಗೆ ಎಂದಿದೆ.[೨೦೧] ಶಾಸನಗಳಲ್ಲಿ ಬರುವ ಶಾಪಾಶಯಗಳನ್ನು ಗಮನಿಸಿದರೆ ದಾನ ನೀಡಿದ್ದನ್ನು ಒಕ್ಕಲುಗಳು ಕೆಡುಸುತ್ತಿದ್ದರೆ? ಆಗಾದರೆ ಏಕೆ ಕೆಡಿಸುತ್ತಿದ್ದರು ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಕ್ರಿ.ಶ.೧೦ನೆಯ ಶತಮಾನದವರೆಗೂ ಬರುವ ಶಾಸನಗಳ ಶಾಪಾಶಯಗಳು, ಭೂಸಂಬಂಧಿ ಶಾಪಾಶಯಗಳಾಗಿ ಕಂಡುಬರುತ್ತವೆ. ಇವು ಕೃಷಿ ಮತ್ತು ಕೃಷಿ ಭೂಮಿಗೆ ನೀಡಿದ ಪ್ರಾಮುಖ್ಯಯನ್ನು ತಿಳಿಸುತ್ತವೆ. ಶಾಸನದಲ್ಲಿ ದೊರೆಯುವ ಭೂ ದಾನದ ಪ್ರಮಾಣಗಳು ಕೃಷಿಯ ಬೆಳವಣಿಗೆಯನ್ನು ಸೂಚಿಸುತ್ತವೆ. ಈ ಕಾಲಘಟ್ಟವು ಕೃಷಿಯ ಬೆಳವಣಿಗೆಯ ಕಾರಣ ಮತ್ತು ಭೂ ವಿಸ್ತರಣೆಯಾದ ಕಾರಣದಿಂದಾಗಿ ಇಂತಹ ಶಾಪಾಶಯಗಳು ಬಳಕೆಗೆ ಬಂದಿರುವ ಸಾಧ್ಯತೆಗಳಿವೆ. ಶಾಪಾಶಯಗಳು ನೈತಿಕ ಹೊಣೆಗಾರಿಕೆಯನ್ನು ಸಾರುವ ಉದ್ದೇಶವನ್ನು ಹೊಂದಿದ್ದವು. ಅಂದಿನ ಸಮಾಜಕ್ಕೆ ಕೃಷಿ ಜೀವನಾಧಾರವಾಗಿದ್ದು, ಅನ್ಯವೃತ್ತಿಯ ಆಯ್ಕೆಯ ಪ್ರಮಾಣದ ಸಾಧ್ಯತೆಗಳು ಕಡಿಮೆ ಇದ್ದಿರುವ ಸಾಧ್ಯತೆಗಳಿವೆ. ಆರಂಭದಲ್ಲಿ ಬಿತ್ತಿದಲ್ಲಿ ಬೆಳೆಯಾಗದೆ ಕೆಡುಗೆಯಿಂದ ಅನಂತರದಲ್ಲಾದ ಬದಲಾವಣೆಯ ಉಲ್ಲೇಖಗಳು ಭೂದಾನದ ಪ್ರಮಾಣ ಹೆಚ್ಚಾದಂತೆ, ಕೃಷಿ ವಿಸ್ತಾರ ಹೊಂದಿ ಬೆಳವಣಿಗೆಯಾದಂತೆ, ನೈತಿಕ ಹೊಣೆಗಾರಿಕೆಯು ಹೆಚ್ಚಾದಂತೆ ಕಂಡುಬರುತ್ತದೆ. ಕೃಷಿ ಬೆಳವಣಿಗೆ ಮತ್ತು ನೈತಿಕ ಹೊಣೆಗಾರಿಕೆಯ ಭಾಗವಾಗಿ ಕಂಡುಬರುತ್ತದೆ. ಉಳಿದಂತೆ ದಾನ ನೀಡಿದ ಶಾಸನಗಳನ್ನು ಒಕ್ಕಲಿಗರು ಹಾಳು ಮಾಡಿದ ಯಾವುದಾದರು ಘಟನೆ ನಡೆದಿರುವ ಸಾಧ್ಯತೆಗಳಿದ್ದವೆ? ಎಂಬುದೊಂದು ಪ್ರಶ್ನೆ ಬರುತ್ತದೆ. ಭೂಮಿಯನ್ನು ದೇವಾಲಯಗಳಿಗೆ, ಬ್ರಾಹ್ಮಣ ಮೊದಲಾದವರಿಗೆ ದಾನ ನೀಡುತ್ತಿದ್ದರು. ಈ ದಾನದ ಭೂಮಿಯನ್ನು ಗೇಣಿರೂಪದಲ್ಲಿ ಒಕ್ಕಲಿಗ ಸಮುದಾಯವೇ ಉಳುಮೆ ಮಾಡುತ್ತಿದ್ದರು. ಇವರು ಬಹುತೇಕ ಭೂರಹಿತ ಒಕ್ಕಲುಗಳೇ ಆಗಿರುವ ಸಾಧ್ಯತೆಗಳಿವೆ. ಕೃಷಿಯೊಂದಿಗೆ ಮಳೆ ಯಾವಾಗಲೂ ಜೂಜಾಟವಾಡುತ್ತಿರುತ್ತದೆ. ಒಮ್ಮೆ ಅತಿವೃಷ್ಟಿ ಸಂಭವಿಸಿದರೆ, ಮತ್ತೊಮ್ಮೆ ಅನಾವೃಷ್ಟಿ ಸಂಭವಿಸುತ್ತದೆ. ಇಂತಹ ಸಂದರ್ಭದಲ್ಲಿ ಕಾಲಕ್ಕೆ ಸರಿಯಾಗಿ ಭೂಮಿಯ ಉತ್ಪನ್ನದ ಇಂತಿಷ್ಟು ಭಾಗವನ್ನು ಸಲ್ಲಿಸಲು ಸಾಧ್ಯವಾಗದಿರುವ ಸಂಭವಗಳಿವೆ. ಭೂಮಿಯ ಉತ್ಪನ್ನ ಕಾಲಕ್ಕೆ ಸರಿಯಾಗಿ ಪಾವತಿಯಾಗದ ಸಂದರ್ಭದಲ್ಲಿ ಭೂಮಿಯ ಮೇಲ್ವಿಚಾರಣೆ ನಡೆಸುತ್ತಿದ್ದ ಮಹಾಜನರು ಭೂಮಿಯನ್ನು ಅವರಿಂದ ಹಿಂಪಡೆಯುತ್ತಿದ್ದರು. ಆಗ ಒಕ್ಕಲಿಗರು ತಮಗೆ ಜೀವನಾಧಾರವಾಗಿದ್ದ ಭೂಮಿಯನ್ನು ಕಿತ್ತುಕೊಂಡರೆಂಬ ಕಾರಣಕ್ಕೆ ಒಕ್ಕಲಿಗರು ಕೆಡಿಸಿದ ನಿದರ್ಶನಗಳು ಏನಾದರೂ ಜರುಗಿದ ಕಾರಣಕ್ಕೆ, ಒಕ್ಕಲಿಗರನ್ನೇ ಕೇಂದ್ರವಾಗಿಸಿ ಇಂತಹ ನೈತಿಕತೆಯ ಎಚ್ಚರದ ಶಾಸನಗಳನ್ನು ಹಾಕಿಸಿರುವ

ಸಂಭವಗಳಿರುವ ಸಾಧ್ಯತೆಗಳಿವೆ. ಕ್ರಿ.ಶ.೧೦೩೨ರ ಶಾಸನದಲ್ಲಿ 'ಇರ್ಬ್ಬಣ್ಡುಗ ಬೆದೆ ನೀರ್ಮ್ಮಣ್ಣಂ' ಎಂದಿದೆ.[೩೦೨] ಇದನ್ನು ಗಮನಿಸಿದರೆ ಬೆದ್ದಲು ಭೂಮಿಗೆ ಕೆರೆಯ ನೀರನ್ನು ಹಾಯಿಸಿದಂತೆ ಕಂಡುಬರುತ್ತದೆ. ಇಂದಿಗೂ ಇವುಗಳಿಗೆ ತರಿಭೂಮಿಗಳು ಎಂದು ಕರೆಯುತ್ತಾರೆ. ಈ ಭೂಮಿಗಳು ಬೆದ್ದಲು ಭೂಮಿಗಳಾದರೂ ಕೆರೆಯ ನೀರು ಹರಿಯುತ್ತಿದ್ದುದರಿಂದ ನೀರಾವರಿ ಭೂಮಿಗಳೇ ಆಗಿ ಕಂಡುಬರುತ್ತವೆ. ಈ ಭೂಮಿಗಳಲ್ಲೂ ಇತ್ತೀಚೆಗೆ ತೋಟ ಮಾಡಿರುವುದು ಕಂಡುಬರುತ್ತದೆ. ಎಲ್ಲ ತೋಟಗಳಿಗೂ ಕೆರೆ ನೀರನ್ನು ಹಾಯಿಸಿದ ನಂತರ ಈ ಭೂಮಿಗಳಿಗೆ ಉಳಿದ ನೀರನ್ನು ಬಿಡುವುದು ಕಂಡುಬರುತ್ತಿದೆ. ಕ್ರಿ.ಶ. ೧೧ನೆಯ ಶತಮಾನದ ವೇಳೆಗೆ ಒಕ್ಕಲುಗಳಿಗೆ ಹೇಳಿದ ಶಾಪಾಶಯಗಳು ಕೆಱೆಗಳ ಕಡೆಗೆ ತಿರುಗಿದುದು ಕಂಡುಬರುತ್ತದೆ. ಇದು ಕ್ರಿ.ಶ ೯ನೆಯ ಶತಮಾನದಿಂದ ವಿರಳವಾಗಿ ಸಾಗಿಬಂದು ೧೧ನೆಯ ಶತಮಾನದ ವೇಳೆಗೆ ದ್ವಿಗುಣಗೊಳ್ಳುವುದು ಕಂಡುಬರುತ್ತದೆ. ಕ್ರಿ.ಶ. ೧೦೫೩ರ ಶಾಸನದಲ್ಲಿ "ಇದನಟಿದವಂ ಕೆಱೆಯುಂ ಕಟ್ಟೆಯುಂ ಕವಿಲೆಯುಂ ಬಾಣರಾಶಿಯ ನಟಿದ ಪಞ್ಚಮಹಾಪಾತಕನಕ್ಕಂ"ಎಂದಿದೆ.[೩೦೩] ೧೧ನೆಯ ಶತಮಾನದ ವರೆಗೂ ಭೂ ಬೆಳೆವಣಿಗೆಯನ್ನು ಗಮನಿಸಿದರೆ ೧೦ನೆಯ ಶತಮಾನದ ನಂತರ ಅಂದರೆ ಉತ್ಪಾದನೆಯ ಕಡೆಗೆ ಕೃಷಿ ಮುಖ ಮಾಡತೊಡಗಿತು. ಕೃಷಿಯ ಅಭಿವೃದ್ಧಿಯ ಹಿಂದೆ ಆರ್ಥಿಕ ಅಭಿವೃದ್ಧಿಯ ಉದ್ದೇಶವನ್ನು ಆಳುವವವರ್ಗ ಹೊಂದಿತ್ತು. ಆರ್ಥಿಕತೆಗೆ ಕೃಷಿಯನ್ನು ಕೇಂದ್ರವಾಗಿಸಿ ನೀರಾವರಿಗೆ ಹೊತ್ತು ಕೊಟ್ಟ ಕಾರಣದಿಂದಾಗಿ ೧೧ನೆಯ ಶತಮಾನದ ನಂತರ ಕೆರೆಗೆ ಸಂಬಂಧಿಸಿದಂತೆ ಭೂಮಿಯಿಂದ ಕೆರೆಯ ಕಡೆಗೆ ಶಾಪಾಶಯಗಳು ಪರಿವರ್ತನೆಗೊಂಡಿರುವುದು ಕಂಡುಬರುತ್ತದೆ. ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಅಱುಗಣ್ಡುಗ ಬೆದೆನೆಲ್ಮಣ್ಕೊಟ್ಟರು ಎಂದಿದೆ.[೩೦೪] EC. Vol.IIIರ ಸಂಪುಟದ ಮುನ್ನುಡಿಯಲ್ಲಿ ತನ್ನಪರವರಿಯ ಜೋಳದ ಕೆಯ್ಯೆ ಪಱೆಕಮ್ಬಳದೆಡಕೆಯ್ಯಿಸಿ ಎಂಬ ಉಲ್ಲೇಖವನ್ನು ಬೀಳು ಬಿದ್ದಿದ್ದ ತನ್ನ ಜೋಳ ಬೆಳೆಯುವ ಹೊಲವನ್ನು ಫಲವತ್ತಾದ ಭತ್ತದ ಗದ್ದೆಯಾಗಿ ಪರಿವರ್ತಿಸಿ ಎಂದು ಹೇಳಿರುವುದು ಕಂಡುಬರುತ್ತದೆ. ಬೆದೆನೆಲ್ಮಣ್ ದಾನ ನೀಡಿದಾಗ ಈ ರೀತಿಯಾಗಿ ಪರಿವರ್ತಿಸಿ ಕೊಟ್ಟಿರುವ ಸಾಧ್ಯತೆಗಳಿವೆ. ಬೆದ್ದಲು ಭೂಮಿಯಿಂದ ಬರುವ ಬೆಳೆ ಮತ್ತು ಆದಾಯ ಎರಡು ಕಡಿಮೆಯಾಗಿರುವ ಸಾಧ್ಯಯತೆಗಳಿಂದಾಗಿ ಈ ರೀತಿ ನೀರಾವರಿ ಭೂಮಿಯಾಗಿ ಪರಿವರ್ತಿಸಿದಂತಿದೆ. ಈ ಪ್ರಕ್ರಿಯೆ ಎಲ್ಲ ಕಾಲಕ್ಕೂ ಸಂಭವಿಸಿದಂತೆ ಕಂಡುಬರುತ್ತದೆ. ಆದರೆ ವಸ್ತು ಸ್ಥಿತಿ, ಕಾಲಸ್ಥಿತಿ, ಸಂದರ್ಭಸ್ಥಿತಿ ಮತ್ತು ಪರಿಣಾಮಗಳಲ್ಲಿ ರೂಪಾಂತರಗಳು ಕಂಡುಬರುತ್ತವೆ. ಇಂದಿಗೂ ನೀರಾವರಿ ಭೂಮಿಯಾಗಿ ಪರಿವರ್ತಿಸುವ ಕಾರ್ಯಗಳು ಮುಂದುವರಿಯುತ್ತಲೇ ಸಾಗುತ್ತಿವೆ. ಅದರೊಂದಿಗೆ ಅಪಾಯವನ್ನು ತನ್ನಿಂದೆಯೇ ಕಟ್ಟಿಕೊಂಡು ಸಾಗುತ್ತಿವೆ. ಅಂದು ಆರೋಗ್ಯಕರವಾಗಿ ಸಂಭವಿಸಿದರೆ ಇಂದು ಸಮಾಜದಲ್ಲಿ ಅನಾರೋಗ್ಯಕರ ವಾತವರಣ ನಿರ್ಮಿಸಿ, ಪ್ರಕೃತಿಯ ವಿರುದ್ಧ ದಿಕ್ಕಿನಲ್ಲಿ ಸಾಗುತ್ತಿವೆ. ಇಂತಹ ವಿಕೃತಕಾರಿ ಕಾರ್ಯಗಳನ್ನು ಮಾನವರು ಕೈಬಿಡದ ಹೊರತು ಪ್ರಕೃತಿಯ ಉಳಿವು ಸಾಧ್ಯವಾಗುವುದಿಲ್ಲ. ಕ್ರಿ.ಶ. ೧೦೨೦ರ ಶಾಸನದಲ್ಲಿ ಊರ ಒಡೆಯರಿಗೆ ವ್ಯವಸಾಯದ ಮೇಲೆ ತರಿಗೆ ಬಿಟ್ಟಿರುವುದು ಕಂಡುಬರುತ್ತದೆ. 'ಉಳ್ಳಿಯ ಬರಿಸವಟ್ಟೆಯ ಸನ್ತೆಯ ಕ್ರಮಮೆಂತೆಂದೊಡೆ ಉಳ್ಕಿ ಬರಿಸಂ ಮತ್ತರ್ಗ್ಗೆ ಪತ್ತು ವೀಸ। ಮೆರಡನೆಯ ಬರಿಸವೊನ್ದು ಪಣಂ। ಮೂರನೆಯ ಬರಿಸಮೆರಡು ಪಣಂ ಎಂದಿದೆ.[೩೦೫]

ಉಳುಮೆಗೆ ಒಳಪಡಿಸಿದ ಮೊದಲ ವರ್ಷ ಕಡಿಮೆ ತೆರಿಗೆ ವಿಧಿಸಿರುವುದನ್ನು ಗಮನಿಸಿದರೆ ಬೀಳು ಬಿದ್ದಿರುವ ನೆಲವನ್ನು ಕೃಷಿಗೆ ಒಳಪಡಿಸಿದಂತೆ ಕಂಡುಬರುತ್ತದೆ. ನಂತರ ಎರಡನೆಯ ವರ್ಷದಿಂದ ತೆರಿಗೆ ಹೆಚ್ಚಾಗುತ್ತಾ ಹೋಗುವುದನ್ನು ಶಾಸನವು ಇಲ್ಲಿ ತಿಳಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೯೯೭ರ ಶಾಸನದಲ್ಲಿ ಇದೇ ರೀತಿಯ ಶಾಸನ ಕಂಡುಬರುತ್ತದೆ. ವಾಟ್ಟಿಗಾವುಣ್ಡನ ಜೀಯ

ಮಾನಸದಿಂ ಬಳಿಕೆ ಕಾಡಾಯಮಂ ನೋಡಿಯುಂ ಕೀಟಿಹೊಕ್ಕಲ್ ಪಸುಗೆಗೆ ಮುವತ್ತು ಮತ್ತರುಮೊನ್ನು ತೋಂಟಮುಮಾಗೆ ಬಟಿಕ್ಕೆ ಪತ್ತಿ ಮೂವತ್ತೆರಡು ಮನ್ತೆ ಪತ್ತಿಗರವಣಂ ಮೂಱುಗದ್ಯಾಣಂ ಮಟ್ಟಿ ಪೊರಿಸಂ ಬಿಟ್ಟ ಮರ್ಯಾದೆ। ಎಂಟನೆಯ ಶ್ರಾಹೆಗೆ ಪತ್ತಿಗೆ ಮೂಱೂ ಧರಣಂ ಮೂಱನೆಯ ಶ್ರಾಹೆಗೆ ತೆಱೆನಱಿದು ಮೂರು ಗದ್ಯಾಣಮಂ ಪತ್ತಿಗೆ ತಿಱುವರೆಲ್ಲಾ ಕಾಲಕ್ಕಮಿದುವೆ ಮರ್ಯಾದೆ ಪಞ್ಚಿರಸ ವರ್ಜಿತಂ ಸೆಟ್ಟಿಯರ್ಗ್ಗಂ ಪನ್ನಾಸಿಗರ್ಗ್ಗಂ ಗಾವುಣ್ಡಗಳ್ಗಂ ಬಿಟ್ಟಿ ಕೊಟ್ಟಣಂ ಬೀಡು ಬೆಸಂ ಪೊಱಗು। ಫಲವಾದ ಮಣ್ಣೆಯಾಱುವಣಂ ಎಲೆಯಬಳ್ಳಿ ೧೦೦೦ಕ್ಕೆ ಮೂಱು ಗದ್ಯಾಣಮಂ ಕರ್ಬ್ಬಿನ ತೋಂಟ ಮತ್ತರಿಂಗೆ ಗದ್ಯಾಣ ಗಟ್ಟಿ ಮತ್ತರ್ಗ್ಗೆ ಧರಣಂ ಕಾಳ್ಕೆಯ್ಗೆ ಮತ್ತರಿಂಗೆ ಪಣಂ ಫಲವಾದ ಮಣ್ಣೆ ಅರುವಣವಿಲ್ಲ ಎಂದಿದೆ.[೩೦೬] ಬೆಳೆಯ ಮೇಲೆ ಹಾಕುವ ತೆರಿಗೆ ಯಾವ ವರ್ಷಕ್ಕೆ ಎಷ್ಟು ಎಂಬುದನ್ನು ಉಲ್ಲೇಖಿಸಿದೆ. ಹೊಸದಾಗಿ ಭೂಮಿಯನ್ನು ಉಳುಮೆಗೆ ಒಳಪಡಿಸಿದ ವರ್ಷ ತೆರಿಗೆಯಿಂದ ವಿನಾಯಿತಿ ಇರುತ್ತಿತ್ತು. ಮೂರು ವರ್ಷದ ನಂತರ ತೆರಿಗೆ ಹಾಕಿರುವುದು ಕಂಡುಬರುತ್ತದೆ. ತೆರಿಗೆ ಕೊಡದಿದ್ದರೆ ದಂಡವಿಧಿಸಲಾಗುತ್ತಿತ್ತು. ಎಲೆಯ ಬಳ್ಳಿಯನ್ನು ಪ್ರಾಚೀನ ಕಾಲದಲ್ಲಿ ಹೇರಳವಾಗಿ ಬೆಳೆಯುತ್ತಿದ್ದರು. ಇದಕ್ಕೆ ವಿಧಿಸಿದಷ್ಟು ಸುಂಕ ಬೇರೆ ಬೆಳೆಗಳಿಗೆ ಕಡಿಮೆ ಇರುತ್ತಿತ್ತು. ಅದನ್ನು ಶಾಸನದಲ್ಲಿ ಗಮನಿಸಲಾಗಿದೆ. ಎಲೆಯ ಬಳ್ಳಿ ೧೦೦೦ಕ್ಕೆ ೩ ಗದ್ಯಾಣ, ಕಬ್ಬಿನ ತೋಂಟಕ್ಕೆ ಮತ್ತರಿಗೆ ಒಂದು ಗದ್ಯಾಣ, ಗಟ್ಟಿ ಮತ್ತರ್ಗ್ಗೆ ಧರಣಂ ಕಪ್ಪುಮಣ್ಣಿನ ಭೂಮಿಗೆ ಪಣಂ ಎಂದು ಉಲ್ಲೇಖಿಸಿರುವುದು ಕಂಡುಬಂದಿದೆ. ಇದರಿಂದ ಅಧಿಕ ತೆರಿಗೆ ಇದ್ದುದು ಎಲೆ ಬಳ್ಳಿಗೆ ಎಂಬುದು ತಿಳಿಯುತ್ತದೆ. ಪ್ರಾಚೀನ ಮತ್ತು ಇಂದಿನ ಕೃಷಿಗೆ ಹೋಲಿಕೆಗಳಲ್ಲಿ ವೈರುಧ್ಯತೆಗಳ ಅಂತರವನ್ನು ಗಮನಿಸಬಹುದಾಗಿದೆ. ಪ್ರಾಚೀನ ಕೃಷಿಯಲ್ಲಿ ಭೂಮಿಯು ವರ್ಷದಿಂದ ವರ್ಷಕ್ಕೆ ಹೆಚ್ಚು ಬೆಳೆನ್ನು ಬೆಳೆಯುತ್ತಾ ಹೋದಂತೆ ಅಥವಾ ಯಥಾಸ್ಥಿತಿಯನ್ನು ಕಾಯ್ದುಕೊಂಡಂತೆ ಕಂಡುಬರುತ್ತದೆ. ಆದರೆ ಇಂದು ಬೀಳುಭೂಮಿಯನ್ನು ಉಳುಮೆಗೆ ಒಳಪಡಿಸಿದ ವರ್ಷ ಯಥೇಚ್ಛವಾಗಿ ಬೆಳೆದು ವರ್ಷದಿಂದ ವರ್ಷಕ್ಕೆ ಬೆಳೆ ಇಳಿಮುಖವಾಗುತ್ತಾ ತುಷ್ಟಿಗುಣವನ್ನು ಕಳೆದುಕೊಳ್ಳುತ್ತಾ ಬರುತ್ತಿದೆ. ಇದಕ್ಕೆ ಪ್ರಮುಖ ಕಾರಣ ವ್ಯವಸಾಯ ವಿಧಾನ ಮತ್ತು ಉಳುಮೆಗೆ ಬಳಸುವ ಉಪಕರಣಗಳು, ಬೀಜ, ಗೊಬ್ಬರಗಳು ಉಂಟುಮಾಡುವ ಪರಿಣಾಮ ಮತ್ತು ಅವುಗಳಲ್ಲಾದ ಬದಲಾವಣೆಗಳು ಮುನ್ನೆಲೆಗೆ ಬಂದು ನಿಲ್ಲುತ್ತವೆ. ಪಾರಂಪರಿಕ ಪ್ರಾಚೀನ ಕೃಷಿಯಲ್ಲಿ ಸಾಂಪ್ರದಾಯಿಕ ಉಪಕರಣಗಳು, ಸಾವಯವ ಸಗಣಿಗೊಬ್ಬರದ ಬಳಕೆ, ಸ್ವಾವಲಂಬಿ ಬಿತ್ತನೆ ಬೀಜಗಳು ಕೃಷಿಯನ್ನು ದಿನದಿಂದ ದಿನಕ್ಕೆ ಆರೋಗ್ಯಪೂರ್ಣಗೊಳಿಸಿದರೆ, ಇಂದಿನ ಆಧುನಿಕ ಕೃಷಿಯಲ್ಲಿ ವೈಜ್ಞಾನಿಕತೆಯ ಹೆಸರಿನಲ್ಲಿ ಬಳಕೆಯಾಗುವ ಆಧುನೀಕ ಉಪಕರಣಗಳು, ರಾಸಾಯನಿಕ ರಸಗೊಬ್ಬರಗಳು ಕೃಷಿಯ ದಿಕ್ಕನ್ನು ಅಧಃಪತನದ ಹಾದಿಯಲ್ಲಿ ಕೊಂಡೊಯ್ಯುತ್ತಿವೆ.



ಕ್ರಿ.ಶ. ೧೧೨೧ರ ಶಾಸನದಲ್ಲಿ 'ಉತುಕೃಷ್ಟವಪ್ಪಯೆರೆಯಕೆಯಿ' ಎಂದಿದೆ.[೩೦೭] ಕರಿಯಭೂಮಿಯು ಉತ್ತೃಷ್ಟವಾದ ಕಾರಣಕ್ಕೆ ಇತರೆ ಭೂಮಿಗಳಿಗೆ ಹೋಲಿಸಿದರೆ ಈ ಭೂಮಿಯನ್ನು ಪ್ರಮಣದಲ್ಲಿ ಕಡಿಮೆ ಭೂಮಿಯನ್ನು ದಾನ ನೀಡಲಾಗಿರುವುದು ಕಂಡುಬರುತ್ತದೆ.[೩೦೮] ಗದ್ದೆ, ಹೊಲ, ತೋಟಗಳನ್ನು ದಾನ ಮಾಡಿದಾಗ ದಾನವು ವಂಶಪಾರಂಪರ್ಯವಾಗಿ ಮುಂದುವರೆಯುತ್ತಿತ್ತು. ಭೂಮಿಯ ಆದಾಯವನ್ನು ದಾನಪಡೆದವರು ತಾವೇ ಅನುಭವಿಸಿ ಅದರ ಇಂತಿಷ್ಟು ಭಾಗವನ್ನು ಹಣ ಅಥವಾ ಧಾನ್ಯ ಮೊದಲಾದ ರೂಪದಲ್ಲಿ ದೇವಾಲಯದ ಕಾರ್ಯಗಳಿಗೆ ನೀಡುತ್ತಿದ್ದರು. ಇಂದಿಗೂ ಈ ಪದ್ಧತಿ ರೂಢಿಯಲ್ಲಿದೆ. ಪೂಜಾರಿಗಳಿಗೆ ಭೂದಾನ ನೀಡಿದಾಗ ಅವರೇ ದೇವಾಲಯದ ಪೂಜೆ ಮಾಡಬೇಕು. ಇದೂ ಸಹ ವಂಶಪಾರಂಪರ್ಯವಾಗಿ ಮುಂದುವರೆಯುತ್ತಿತ್ತು. ಇದರಲ್ಲಿ ಇಂದು ಬದಲಾವಣೆಗಳು ಕಂಡುಬರುತ್ತಿವೆ. ದೇವಾಲಯಕ್ಕೆ ಬರುವ ಆದಾಯವು

ಸರ್ಕಾರದ ಮುಜರಾಯಿ ಇಲಾಖೆಗೆ ಸಂದಾಯವಾಗುತ್ತಿದೆ. ಆದರೂ ಕೆಲವೊಂದು ಹಳ್ಳಿಗಳ ದೇವಾಲಯಗಳಲ್ಲಿ ದೇವಾಲಯದ ಧಾರ್ಮಿಕಕಾರ್ಯ ಮತ್ತು ಅದಕ್ಕೆ ಸಂಬಂಧಿಸಿದ ಆಸ್ತಿಯು ಪೂಜಾರಿಗಳಲ್ಲಿಯೇ ಕೇಂದ್ರೀಕೃತವಾಗಿದೆ.

ಕ್ರಿ.ಶ. ೧೧೧೫ರ ಶಾಸನದಲ್ಲಿ ಒಕ್ಕಲಿಗ(ಮೇಣ್ಪೆ)ಯ ಬರ್ಮಣನ ಉಲ್ಲೇಖವಿದೆ. ಇವನ ಉಳುಮೆಯ ಕಷ್ಟವನ್ನು ಉಳುಮೆಯ ವಿಧಾನವನ್ನು ಶಾಸನವು ಬಿಚ್ಚಿಟ್ಟಿರುವುದು ಕಂಡುಬರುತ್ತದೆ. ಇವನನ್ನು ಶಾಸನವು ಕುಡಿ ಒಕ್ಕಲಿಗವೆಂದು ಕರೆದಿದೆ(ಇದೊಂದು ಕೃಷಿಕ ಸಮುದಾಯವಾಗಿರುವ ಸಾಧ್ಯತೆಗಳಿವೆ)"ಪಡೆದಪೆವೆಂದು ನೆತ್ತಿಯ ಬೆಮರು ಮಿಡಿಯಿಂದಿಳಿವನ್ತು ದುಕ್ಕದಲು ದುಡಿಯುತಮಿರ್ಪ್ಪರ್......ಗಿಡಗಡಿದುರ್ತ್ತು ಬಿತ್ತಿ ಫಲಮಂ ಪಡೆದುಣ್ಣದೆ ಲಾಬಲೋಬದಿಂ ಮಡಗಿ ಬಳಿಕ್ಕೆ ಗಾವಣಿಗೆ ಗಂಟಿಗೆ ಟೊಪ್ಪರವಿಟ್ಟುಕೊಳ್ವ ನಿಗ್ಗಡಿನ್ರಿಪಜ್ಞತ್ತತೆತ್ತು ಬಜಿದಾಗಿ ಬೆಗಳ್ಗೊಗದಿಂದವಿರ್ಪ್ಪಬೆಳ್ಗುಡಿಯರನೇಕೆ ಪೋಲಿಸುವೆ ಬರ್ಮ್ಮಣನೊಳು ಹಿತಧರ್ಮ ಕಾರ್ಯ್ಯನೊಳ್॥[೨೦೯] ಎಂದಿದೆ.

ಒಣಭೂಮಿಯಲ್ಲಿ ಬೇಸಾಯ ಮಾಡುವ ಸಂದರ್ಭದಲ್ಲಿ ಗಿಡಗಳನ್ನು ಕಡಿದು ಬೇಸಾಯ ಮಾಡಬೇಕು. ಭೂಮಿಯನ್ನು ನೇಗಿಲಿನಿಂದ ಚೆನ್ನಾಗಿ ಉಳಬೇಕು. ಉತ್ತ ನಂತರ ಮಳೆಯನ್ನು ನೋಡಿ, ಹದ ಬೆದೆಯನ್ನು ನೋಡಿ ಬಿತ್ತಬೇಕು. ಒಮ್ಮೊಮ್ಮೆ ಅತಿವೃಷ್ಟಿ, ಮತ್ತೊಮ್ಮೆ ಅನಾವೃಷ್ಟಿ ಹೀಗೆ ಕೃಷಿ ಬದುಕಿನಲ್ಲಿ ಸಂಭವಿಸುತ್ತಲೇ ಇರುತ್ತದೆ. ಜನಪದರು ಅನಾವೃಷ್ಟಿಗೆ ಸಂಬಂಧಿಸಿದಂತೆ ಹೀಗೆ ಹೇಳುವರು.

ಯಾಕೆ ಹೋದವು ಮಳೆಗಳು
ಲೋಕ ಸಾಕಲಾರದಕೆ ಹೋದವು
ಪುಣ್ಯವಿಲ್ಲದ ನಾರಿ ಪುರುಷನ ಬೈದರೆ[೨೧೦]

ಪ್ರಕೃತಿಯಲ್ಲಿ ಮನುಷ್ಯ ವಿಕೃತಕಾರಿ ಚಟುವಟಿಕೆಗಳನ್ನು ನಡೆಸುವುದರಿಂದ ಮಳೆ ಸರಿಯಾಗಿ ಬರುತ್ತಿಲ್ಲವೆಂಬುದು ಇಲ್ಲಿ ಸೂಚ್ಯವಾಗಿ ಧ್ವನಿತವಾಗಿದೆ. ಕೆಲವೊಮ್ಮೆ 'ಹೊಲ ನೋಡದೆ ಕೆಟ್ಟಿತು ಸಾಲ ಕೇಳದೆ ಮುಳುಗಿತೆಂಬಂತೆ' ಆಸಕ್ತಿ ವಹಿಸಿ ಕೃಷಿ ಮಾಡದಿರುವ ಸಂದರ್ಭದಲ್ಲೂ ಬೆಳೆ ಹಾಳಾಗುತ್ತದೆ. ಶಾಸನದಲ್ಲಿ ತಿಳಿಸಿರುವುವಂತೆ ರೈತರು ಬೆಳೆಬರುತ್ತದೆಂದು ಕಷ್ಟಪಟ್ಟು ಬೆವರು ಸುರಿಸಿ ದುಡಿಯುತ್ತಾರೆ. ಇದು ಜನಪದರಲ್ಲಿ ಹೀಗೆ ಉಲ್ಲೇಖಗೊಂಡಿದೆ.

ಮುತ್ತೀನ ಕೂರಿಗೆ ನೆತ್ತಿಮ್ಯಾಲೆ ಹೊತಗೊಂಡ
ಉತ್ತಮರ ಮಗಳ ಕರಕೊಂಡ । ಈರಪ್ಪ
ಮುತ್ತ ಬಿತ್ಯಾರ ಹಿರಿಹೊಲಕ
ಬಿತ್ತ ಕೂರಿಗಿ ಮುಂದೆ ಎಡಿಗಿಂದೆ
ಬಿತ್ತಾಲೋಗ್ಯಾನೆ ಬಿಳಿಜ್ವಾಳ॥[೨೧೧]

ಈ ಮಾತುಗಳು ರೈತರು ನೆತ್ತಿಯ ಮೇಲೆ ಬಿತ್ತುವ ಕೂರಿಗೆ ಮೊದಲಾದವುಗಳನ್ನು ಹೊತ್ತು ಹೊಲಕ್ಕೆ ತೆಗೆದುಕೊಂಡು ಹೋಗಿ ಬಿತ್ತುತ್ತಾರೆ. ಬಿತ್ತುವುದಕ್ಕೂ ಮುನ್ನ ಎತ್ತುಗಳನ್ನು ತಯಾರಿ ಮಾಡಿಕೊಳ್ಳುತ್ತಾರೆ.

ಬಿತ್ತುವ ದಿನ ಬಂತು ಎತ್ತು ತಯ್ಯಾರು ಮಾಡೋ
ಮುತ್ತಿನ ಕೂರಿಗಿ ಹದ ಮಾಡೊ ಎಲೆರೈತ
ಮುತ್ತೈದಿ ಅಕ್ಕಡಿಗೆ ಬರುತಾಳೆ[೩೧೨]

ಎತ್ತುಗಳನ್ನು ಹೊಡಕೊಂಡು ಕೂರಿಗೆ, ಬೀಜಗಳು, ಅಕ್ಕಡಿ ಬೀಜಗಳು ಅಂದರೆ ಬೆಳೆಗಳ ಮಧ್ಯೆ ಬಿತ್ತುವ ತೊಗರಿ, ಅವರೆ, ಅಲಸಂದೆ, ಕುಸುಮೆ, ಹುಚ್ಚೆಳ್ಳು, ಹುರುಳಿ ಮೊದಲಾದವುಗಳನ್ನು ಅಕ್ಕಡಿಯಲ್ಲಿ ಬಿತ್ತುವರು ಇವುಗಳನ್ನು ಆರುಸಾಲು, ನಾಲ್ಕು ಸಾಲು, ಎಂಟು ಸಾಲುಗಳಿಗೆ ಒಂದು ಸಾಲು ಬಿತ್ತುವ ಕ್ರಮವಿದೆ. ಈ ರೀತಿಯಾಗಿ ಕಷ್ಟುಪಟ್ಟು ದುಡಿಯುವ ರೈತರು ಬೆಳೆದ ಬೆಳೆಯನ್ನು ಲಾಭದ ಆಸೆಯಿಂದ ಧಾನ್ಯಗಳನ್ನು ಸಂಗ್ರಹಿಸುತ್ತಾರೆ. ಸಂಗ್ರಹಿಸಿದ ಧಾನ್ಯಗಳು ಗಾವಣಿಗೆ(ಗೆದ್ದಲು ಹಿಡಿಯುವಿಕೆ), ಗಂಟಿಗೆ(ಹುಳುಹಿಡಿದು) ಹಿಡಿಸಿ ಹಾಳು ಮಾಡಿಕೊಳ್ಳುವರು. ಜೊತೆಗೆ ನಿರೀಕ್ಷೆಯಂತೆ ಮೌಲ್ಯಯುತ ಬೆಲೆಯೂ ಇಲ್ಲ, ಬೆಳೆಯೂ ಇಲ್ಲ ಎಂಬಂತೆ ನಷ್ಟಕ್ಕೆ ಗುರಿಯಾಗುತ್ತಾರೆ. ತಾನು ಊಟ ಮಾಡದೆ, ಬೇರೆಯವರಿಗೂ ದಾನ ಮಾಡದೆ ಹಣಕೂಡಿಟ್ಟು ಕುಡಿಯೊಕ್ಕಲಿಗನಾದ ಬರ್ಮ್ಮಣನು ವಿಷ್ಣು ದೇವಾಲಯ ಕಟ್ಟಿಸಿರುವುದು ಕಂಡುಬಂದಿದೆ. ಕೃಷಿಕ ಜನರು ತಾವು ತಿನ್ನದೆ ಸಾಲ ಮಾಡಿಯಾದರೂ ಧರ್ಮಕಾರ್ಯ ಮಾಡುವುದು, ವಿಜೃಂಭಣೆಯ ಸಮಾರಂಭಗಳನ್ನು ಆಚರಿಸುವ ಕಾರ್ಯಗಳನ್ನು ಮಾಡುತ್ತಾರೆ. ಇಂತಹ ಕಾರ್ಯಗಳಿಗೆ ರೈತರು ಇಂದು ಬಲಿಯಾಗುತ್ತಿರುವುದು ಕಂಡುಬರುತ್ತಿದೆ. ಸಾಲಮಾಡಿ ಕಾಶಿಯಾತ್ರೆ ಮೊದಲಾದ ದೇವರ ತೀರ್ಥಕ್ಷೇತ್ರಗಳ 'ಯಾತ್ರೆಗಳನ್ನು ಮಾಡಿ, ಸಾಲದ ಬಡ್ಡಿಗೆ ಜೀತವಾದ' ಎಂಬ ಮಾತು ಕೃಷಿಕರಿಗೆ ಅನ್ವಯಿಸುತ್ತದೆ. ಹಾಸಿಗೆ ಇದ್ದಷ್ಟು ಕಾಲು ಚಾಚಿದರೆ ಮಾತ್ರ ಕೃಷಿಕರು ನೆಮ್ಮದಿಯ ಜೀವನ ನಡೆಸಲು ಸಾಧ್ಯವಾಗುತ್ತದೆ.

ಕ್ರಿ.ಶ. ೧೨೦೨ರ ಶಾಸನದಲ್ಲಿ ಹತ್ತಿ ತೋಂಟಗೆಯ್ಯಿ, ಬೆದ್ದಲು ಕಂಬ ೩೦೦, ರಾಗಿಯಲು ದೇವಗೊಳಗ ೧ ಎಂದು ಉಲ್ಲೇಖಿಸಿದೆ.[೩೧೩] ಬೆದ್ದಲು ಭೂಮಿಯಲ್ಲಿ ಹತ್ತಿ ಮತ್ತು ರಾಗಿಯಂತಹ ಬೆಳೆಗಳನ್ನು ಬೆಳೆಯುತ್ತಿದ್ದರು ಎಂದು ಇದರಿಂದ ತಿಳಿಯುತ್ತದೆ. 'ಕ್ರಿ.ಶ. ೯-೧೦ನೆಯ ಶತಮಾನದ ಶಾಸನದಲ್ಲಿ ಸಾಗುವಳಿಯಾದ ಭೂಮಿಯನ್ನು ದಾನವಾಗಿ ಕೊಡುವಾಗ ಅದರ ಬಿತ್ತನೆಯ ಸಾಮರ್ಥ್ಯವನ್ನು ಉಲ್ಲೇಖಿಸಿದೆ. ದಾನ ಕೊಟ್ಟ ಭೂಮಿಯ ಬಿತ್ತನೆ ಸಾಮರ್ಥ್ಯ ಮೂರು ಖಂಡುಗ ಎಂದಿದೆ. ಇದೇ ಸ್ಥಳದ ಮತ್ತೊಂದು ಶಾಸನದಲ್ಲಿ ಬಿತ್ತನೆ ಸಾಮರ್ಥ್ಯ ಒಂದು ಸಲಗೆ ಎಂದು ಹೇಳಿದೆ. ಆದರೆ ಶೃಂಗೇರಿಯ ಶಾಸನವೊಂದು ಎರಡು ಗ್ರಾಮವನ್ನು ದಾನವಾಗಿ ನೀಡಿ ಅವುಗಳ ಉತ್ಪನ್ನ ೨೨೫. ಸಲಗೆ ಭತ್ತ ಎಂದಿದೆ.[೩೧೪]

ಪ್ರಾಚೀನ ಸಂದರ್ಭದಿಂದ ಇಂದಿನವರೆಗೂ ಕೃಷಿಕ ಸಮುದಾಯಕ್ಕೆ ಅನುಭವದ ಆಧಾರದ ಮೇಲೆ ಇಂದೂ ಸಹ ಎಕರೆಗಿಷ್ಟು ಬಿತ್ತನೆ ಬೀಜ ಹಾಕಬೇಕೆಂಬ ಜ್ಞಾನವಿದೆ. ಒಂದು ಎಕರೆಗೆ ಎಷ್ಟು ಕೂರಿಗೆ ಹೊಡೆಯಬೇಕೆಂಬ ಜ್ಞಾನವೂ ಇರುವುದು ಕಂಡುಬರುತ್ತದೆ. ಒಂದು ಎಕರೆ ಭೂಮಿ ಇಂತಿಷ್ಟು ಪ್ರಮಾಣದಲ್ಲಿಯೇ ಇಳುವರಿ ಕೊಡುತ್ತದೆ ಎಂಬ ಜ್ಞಾನವು ಅವರಿಗೆ ಅನುಭವ ಆಧಾರಿತವಾಗಿಯೇ ಬಂದಿರುವುದು ಕಂಡುಬರುತ್ತದೆ. ಬೀಜವರಿಯ ಉಲ್ಲೇಖ ಶಾಸನಗಳಲ್ಲಿ ದೊರೆತಿದ್ದು, ಇದು ಬಿತ್ತನೆ ಭೂಮಿಯ ಬಗೆಗೆ ತಿಳಿಸುತ್ತದೆ. ಕ್ರಿ.ಶ. ೧೧೮೯ರ ಶಾಸನದಲ್ಲಿ ಬೆಳೆಯ ಕೆಯ್ಯಂಬಿಟ್ಟರು ಎಂದಿದೆ.[೩೧೫] ಬೆಳೆ ಬೆಳೆಯುವ ಭೂಮಿಯನ್ನು ದಾನ ನೀಡಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೮೯ರ ಶಾಸನದಲ್ಲಿ ವ್ಯವಸಾಯದ ಪೊಂಬುಳ್ಚದಱುವತ್ತೊಕ್ಕಲುಂ ವೊಕ್ಕಲಲೊಂದು ಮೂಡ ಹೊಱ ಬಣ್ಣಿಗೆಗೊಳಗಮಂ ಬಿಟ್ಟರು....." ಬೆಂತೇಶ್ವರ ದೇವರಿಗೆ ಬಿಟ್ಟ

ಭೂಮಿಯ ಪ್ರಮಾಣಮೆಂತೆಂದಡೆ ಹೊಂಬೊಳಲ ಕೋಲ ಸಮಕಟ್ಟಿನೊಳಾವೂರ ಹೊಲದ ಮೇರೆಯಂ ಮತ್ತಱೂರು ಎಂದಿದೆ.[೩೧೬]

ಕ್ರಿ.ಶ. ೧೨೯ರ ಶಾಸನದಲ್ಲಿ ಇಮ್ಮಡಿ ಬಲ್ಲಾಳನು ಸೊರಬೂರಿನಿಂದ ಬೆಳ್ವಲದವರೆಗೆ ಭೂಮಿಯನ್ನು ವ್ಯವಸಾಯಕ್ಕೆ ಅನುಕೂಲವಂತೆ ಮಾಡಿದನು. ಸೇಉಣ ಸೈನ್ಯದ ಶೂರಸೈನಿಕರ ಕಳೆಬರಹಗಳಿಂದ ಗೊಬ್ಬರವನ್ನು ಹಾಕಿದನು ಎಂದು ವರ್ಣಿಸಿದೆ.[೩೧೭] ಇದು ವ್ಯವಸಾಯದ ಭೂಮಿಯ ಅಭಿವೃದ್ಧಿಯನ್ನು ಸೂಚಿಸುತ್ತದೆ. ಒಕ್ಕಲಿಗರು ಎಂದರೆ ಕೃಷಿಕರು ಭೂದಾನ ನೀಡಿರುವುದನ್ನು ಗಮನಿಸಿದರೆ ಅವರು ಆರ್ಥಿಕವಾಗಿ ಸಮೃದ್ಧವಾಗಿದ್ದರು. ಅವರಿಗೆ ಕೃಷಿಯಿಂದ ಲಾಭಗಳಿಕೆಯಾಗಿರುವುದು ತಿಳಿಯುತ್ತದೆ.

ಕ್ರಿ.ಶ. ೧೧೭೭-೭೮ರ ಶಾಸನದಲ್ಲಿ ಕಲಿದುಗುಸಂದಾಗಿ ಕಾಡಕಡಿದು ಹೊಸಭೂಮಿ ಕೊಡಂಗದ ಮೊಗೆಯಂ ಕೊಟ್ಟರು ಎಂದಿದೆ.[೩೧೮] ಕಾಡುಕಡಿದು ಹೊಸದಾಗಿ ಭೂಮಿಯಲ್ಲಿ ಉಳುಮೆ ಮಾಡಿರುವುದನ್ನು ಶಾಸನವು ತಿಳಿಸುತ್ತದೆ. ಕ್ರಿ.ಶ.೧೨೮೦ರ ಶಾಸನದಲ್ಲಿ ಹೊಸವ್ರಿತ್ತಿಯ ಉತ್ಪತ್ತಿಯೊಳಗೆ ಆ ಗ್ರಾಮ ಮರಿಯಾದೆಯೊಳಗೆ ಸಿದ್ಧಾಯಗಳ ಕಳೆದುವುಳಿದ ವಸ್ತು ಸಲ್ಲುಸುವುದೆಂದಿದೆ.[೩೧೯] ಹೊಸದಾಗಿ ಭೂಮಿಯನ್ನು ಉಳುಮೆ ಮಾಡಿದಾಗ ಆ ಊರಿನವರು ತಿಳಿಸಿದ ಸಿದ್ಧಾಯವನ್ನು ತಮ್ಮ ಬಳಿ ಇಟ್ಟುಕೊಂಡು ದೇವರ ನೈವೇದ್ಯಕ್ಕೆ ಅಕ್ಕಿ, ತುಪ್ಪ, ಹೆಸರು, ಬೆಲ್ಲ, ಬಾಳೆಯ ಹಣ್ಣು ಮಾಧುರ, ಅಡಕೆ, ಎಲೆ, ತೋಟದ ಫಲಗಳ ವಿನಿಯೋಗಕ್ಕೆ ಬಿಟ್ಟಂತಿದೆ. ಹತ್ತಿಗೆ ವರ್ಷ ೧ಕೆ ಪ ೩ ಸಾಸಿವೆಗೆ, ಬೆಟ್ಟಗುತ್ತ ತೋಟ(ಬೆಟ್ಟಗಳಲ್ಲಿ ಉಳುಮೆ ಮಾಡಿದ ತೋಟದ ಉತ್ಪನ್ನವಿರುವ ಸಾಧ್ಯತೆಗಳಿವೆ). ಇವುಗಳಿಂದ ಬರುವ ಆದಾಯವನ್ನು ದೇವರಿಗೆ ಬಿಡಲಾಯಿತು ಹೀಗೆ ಶಾಸನಗಳು ಅಲ್ಲಲ್ಲಿ ಚದುರಿದ ಮಾಹಿತಿಯನ್ನು ಬೇಸಾಯ ಬಗೆಗೆ ನೀಡಿರುವುದು ಕಂಡುಬರುತ್ತದೆ. ಒಣಬೇಸಾಯವು ಪ್ರಾಚೀನ ಕಾಲದಿಂದ ಇಂದಿನವರೆಗೂ ಲಾಭದಾಯಕ ಕೃಷಿಯಾಗಿ ಕಂಡುಬರುವುದಿಲ್ಲ. ನೀರಾವರಿ ವಾಣಿಜ್ಯ ಬೆಳೆಗಳಿಂದ ಬರುವ ಆದಾಯಕ್ಕೆ ಹೋಲಿಸಿದರೆ ೨೦೦೯-೧೦ರ ವರದಿಯ ಪ್ರಕಾರ ರಾಗಿಯಂತಹ ಬೆಳೆಯಿಂದ ಶೇಕಡಾವಾರು ಉತ್ಪನ್ನದಲ್ಲಿ ೬೮ ಸಾವಿರದಷ್ಟು ಆದಾಯ ಬರುತ್ತಿದೆ. ಜೋಳದ ಉತ್ಪನ್ನದಲ್ಲಿ ೮.೧೦ ಸಾವಿರದಷ್ಟು ಆದಾಯ ಬರುತ್ತಿದೆ. ಕರ್ನಾಟಕದಲ್ಲಿ ಒಣಬೇಸಾಯ ಭೂಮಿ ೧೯೦.೫ ಲಕ್ಷ ಹೆಕ್ಟೇರ್ ಇದೆ. ಇದರಲ್ಲಿ ೫೬%(೧೦೬.೧) ಲಕ್ಷ ಹೆಕ್ಟೇರ್ ಭಾಗದಲ್ಲಿ ಬೆಳೆ ಬೆಳೆಯಲಾಗುತ್ತಿದೆ. ೬೨ ಲಕ್ಷ ಹಿಡುವಳಿಗಳಿವೆ. ಅತಿಸಣ್ಣ ಕೃಷಿ ಹಿಡುವಳಿಗಳು ೬೯%ರಷ್ಟು ಇರುವುದು ಕಂಡುಬರುತ್ತದೆ. ಒಣಬೇಸಾಯದ ಕೃಷಿಕರು ಬಡವರಾಗಿಯೇ ಉಳಿದಿದ್ದಾರೆ. ಇದು ಲಾಭದಾಯಕ ಕೃಷಿಯಾಗಿಲ್ಲ, ಪ್ರಾಚೀನ ಶಾಸನಗಳು ಸಹ ಆಹಾರ ಬೆಳೆಗಳಿಗೆ ವಿಧಿಸಿದ ತೆರಿಗೆಯ ಪ್ರಮಾಣ ಅಲ್ಪವೇ ಆಗಿ ಕಂಡುಬರುತ್ತದೆ. ಒಂದು ಕಡೆ ಈ ಕೃಷಿ ಭೂಮಿಗಳು ಅತಿವೃಷ್ಟಿ ಅನಾವೃಷ್ಟಿಗೆ ಸಿಲುಕುತ್ತವೆ. ಮತ್ತೊಂದೆಡೆ ಬೆಳೆ ಸಮೃದ್ಧವಾಗಿ ಬಂದರೆ ಅವುಗಳಿಗೆ ನ್ಯಾಯಯುತವಾದ ಬೆಲೆ ದೊರೆಯುವುದಿಲ್ಲ. ಇಂದು ಭೂಮಿಗಳೂ ಸಹ ರಾಸಾಯನಿಕಗಳ ಅತಿಯಾದ ಬಳಕೆಯಿಂದಾಗಿ ಬಂಜೆತನ ಅನುಭವಿಸುತ್ತಿವೆ. ಇದರಿಂದ ಸಾಂಪ್ರದಾಯಿಕ ಕೃಷಿಗೆ ಭೂಮಿಯನ್ನು ಪರಿವರ್ತಿಸುವ ಅಗತ್ಯತೆಗಳಿವೆ. ಸರ್ಕಾರಗಳೂ ಸಹ ಭೂಮಿಗೆ ಮತ್ತು ಬೆಳೆಗೆ ಪ್ರೋತ್ಸಾಹ ಧನ ನೀಡುವ ಮೂಲಕ ಅಭಿವೃದ್ಧಿಯ ಪಥದ ಕಡೆಗೆ ಸಾಗಿಸುವ ಅಗತ್ಯವಿದೆ. ಸಾವಯವ ಕೃಷಿಯಿಂದ ಅಭಿವೃದ್ಧಿ ಸಾಧ್ಯವೇ ಎಂಬ ಪ್ರಶ್ನೆಗಳಿವೆ. ಇದಕ್ಕೆ ಪ್ರಾಚೀನ ಕೃಷಿ ಉತ್ತರದಾಯಿಯಾಗುತ್ತದೆ. ಅಂದಿನ ಸುಸ್ಥಿರ ಕೃಷಿಯಂತೆ ಇಂದೂ ಸಹ ಪರಿವರ್ತನೆಗಳು ಸಾಧ್ಯವಾದರೆ ಅಭಿವೃದ್ಧಿಯು ಸಾಧ್ಯವಾಗುತ್ತದೆ ಮಣ್ಣು, ಪರಿಸರ, ಆರೋಗ್ಯ ಎಲ್ಲವೂ ಸಹ ಆರೋಗ್ಯಪೂರ್ಣ ಕೃಷಿಯ ಹಿಂದಿರುವುದು ಕಂಡುಬಂದಿದೆ. ಸಿಕ್ಕಂ ರಾಜ್ಯ

ಮಾದರಿಯ ಸಾವಯವ ಬೇಸಾಯವನ್ನು ಕರ್ನಾಟಕ ರಾಜ್ಯದಲ್ಲಿಯೂ ಅಳವಡಿಸಬೇಕಾದ ಅಗತ್ಯವಿದೆ. ಇಡೀ ಭಾರತದಲ್ಲಿ ಸಿಕ್ಕಿಂ ರಾಜ್ಯ ಸಂಪೂರ್ಣ ಸಾವಯವ ಕೃಷಿಯನ್ನು ಅಳವಡಿಸಿಕೊಂಡಿರುವ ರಾಜ್ಯವಾಗಿದೆ. ಕರ್ನಾಟಕದಲ್ಲಿ ಈ ರೀತಿಯ ಕೃಷಿಯನ್ನು ಅಳವಡಿಸಬೇಕಾಗಿದೆ. ಪ್ರಾಚೀನ ಜ್ಞಾನದ ಹಳೆಯ ಬೇರನ್ನು ಇಂದಿನ ತಂತ್ರಜ್ಞಾನದ ಹೊಸ ಚಿಗುರಿನೊಂದಿಗೆ ಬೆರೆಸಿ ಸಮಗ್ರ ಮತ್ತು ಸಮೃದ್ಧ ಕೃಷಿಯನ್ನು ಅಳವಡಿಸಬೇಕಿದೆ. ಕೃಷಿ ಭೂಮಿಗಳಲ್ಲಿ ವಾಣಿಜ್ಯೋದ್ಯಮ, ಕೈಗಾರಿಕೆಗಳಂತಹ ಸ್ಥಾಪನೆ ಯೋಗ್ಯವಲ್ಲದ, ಅತಿ ಕಡಿಮೆ ಮಳೆ ಬೀಳುವಂತಹ ಪ್ರದೇಶಗಳನ್ನು ಕೈಗಾರಿಕೆಗಳ ಸ್ಥಾಪನೆಗೆ ಆಯ್ಕೆ ಮಾಡಿಕೊಳ್ಳುವುದು ಹೆಚ್ಚು ಸೂಕ್ತ. ಇದರಿಂದ ಸಾಗುವಳಿ ಭೂಮಿಯ ಉಳುಮೆಗೂ ಧಕ್ಕೆ ಇರುವುದಿಲ್ಲ ಕೃಷಿ ಬದುಕೂ ಸಹ ನೆಮ್ಮದಿಯಿಂದ ಸಾಗುತ್ತದೆ. ಭೂರಹಿತ ಕೃಷಿ ಕಾರ್ಮಿಕರಿಗೆ ಈ ಹಿನ್ನೆಲೆಯಲ್ಲಿ ಭೂಮಿ ದೊರಕಿಸಿಕೊಡಲು ಸಾಧ್ಯವಾಗುತ್ತದೆ.

**ನೀರಾವರಿ ಬೇಸಾಯ**

ಕೆರೆ, ಕಟ್ಟೆ, ಬಾವಿಗಳನ್ನು ಆಶ್ರಯಿಸಿ ಮಾಡುವ ವ್ಯವಸಾಯವನ್ನು ನೀರಾವರಿ ಬೇಸಾಯ ಎಂದು ಕರೆಯಲಾಗಿದೆ. ಇದರಲ್ಲಿ ತರಿ ಮತ್ತು ಬಾಗಾಯ್ತು ಎಂಬ ಎರಡು ವಿಧಗಳಿವೆ. ತರಿಭೂಮಿಯಲ್ಲಿ ಭೂಮಿಯ ಫಲವತ್ತತೆಯನ್ನು ಆಧರಿಸಿ ಭೂಕಂದಾಯವನ್ನು ನಿಗದಿಪಡಿಸಲಾಗುತ್ತಿತ್ತು.[೩೦] ಶಾಸನಗಳು ನೀರಾವರಿ ಭೂಮಿಯನ್ನು 'ನೀರ್ಮಣ್ಣು' ಎಂದು ಕರೆದಿವೆ.[೩೧] 'ತರಿ' ಭೂಮಿ ಎಂದರೆ ನೀರನ್ನು ಆಶ್ರಯಿಸಿ ಬೆಳೆಯುವ ಭತ್ತ ಮೊದಲಾದ ಬೆಳಗೆ ಅನ್ವಯಿಸುವ ಭೂಮಿಯಾಗಿದೆ. ಬಾಗಾಯ್ತು ಎಂದರೆ ನೀರಾವರಿ ಆಶ್ರಯದಲ್ಲಿ ಬೆಳೆಯುವ ತೋಟದ ಭೂಮಿ ಎಂದರ್ಥ. ಈ ಭೂಮಿಗಳನ್ನು ದೇವಾಲಯಗಳಿಗೆ ಬ್ರಾಹ್ಮಣರಿಗೆ, ವಿದ್ಯಾದಾನಕ್ಕೆ, ಕೆರೆ, ಬಾವಿ ಮೊದಲಾದವುಗಳಿಗೆ ನೀಡಿರುವುದು ಕಂಡುಬರುತ್ತದೆ. ಕ್ರಿ.ಶ. ೪೫೦ರ ಶಾಸನದಲ್ಲಿ ಭಟ್ಟರ್ಗ್ಗೆಗಟ್ಟಿಒಡ್ಡಲಿ ಆ ಪತ್ತೊಂದಿ ವಿಟ್ಟಾರ್ ಎಂದಿದೆ[೩೨] ಗಟ್ಟಿಯಲ್ಲಿ ೧೦ನೆಯ ಒಂದು ಭಾಗವನ್ನು ಬ್ರಾಹ್ಮಣರಿಗೆ ನೀಡಬೇಕೆಂದಿದೆ. ಕ್ರಿ.ಶ. ೧೦೪೯ರ ಶಾಸನದಲ್ಲಿ ಗೌರ ತಟಾಕವೆಂಬ ಕೆರೆಯ ಬಳಿ ಒಟ್ಟು ೩ ನಿವರ್ತನ ಭತ್ತದ ಗದ್ದೆಯನ್ನು ದಾನ ನೀಡಿದ ಉಲ್ಲೇಖವಿದೆ.[೩೩] ಭತ್ತವನ್ನು ಬೆಳೆಯುವ ಭೂಮಿದಾನದ ಬಗೆಗೆ ಶಾಸನವು ಸ್ಪಷ್ಟವಾಗಿ ಹೇಳುತ್ತದೆ. ಕ್ರಿ.ಶ. ೯೮೭ರ ಶಾಸನದಲ್ಲಿ "ಮಣಲಪೊಟೆಯೊಳ್ಕೊಟ್ಟ ತೋಣ್ಟದ ಕಮ್ಮ ಅಱುವತ್ತು ಆ ತೋಣ್ಟವಕೊಣೆನ್ದರ ಕನ್ನಯ್ಯ ತನ್ನ ಮಕ್ಕಳ್ಮಕ್ಕಳ್ಗರ ಸಲಹಿದುಣ್ಬ ವರ್ಷಂಪ್ರತಿ ವರ್ಷ ಆರನೆಯ ಪೊನ್ನಾಱು ಗದ್ಯಾಣಂ ಧರಣ ಪೊನ್ನ ಆದಿತ್ಯ ದೇವರ್ಗ್ಗೆ ಎಂದಿದೆ. ಈ ಶಾಸನ ತಿಳಿಸುವಂತೆ ಇದರಲ್ಲಿ ಬಂದಿರುವ ತೋಟದಾನವು ವಂಶಪಾರಂಪರ್ಯವಾಗಿ ಮುಂದುವರೆದಿರುವುದು ಕಂಡುಬರುತ್ತದೆ.[೩೪]

ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ದೇವರಿಗೆ ಇರ್ಬ್ಬಣ್ಡುಗ ನೀರ್ಮ್ಮಣ್ಣು ಎಱೆಯಮ್ಮಂ ಕೊಂಡು ಕೊಟ್ಟನೆಂದಿದೆ.[೩೫] ಕ್ರಿ.ಶ. ೯೪ರ ಶಾಸನದಲ್ಲಿ ವಿದ್ಯಾದಾನಕ್ಕೆಂದು ಮೂಱು ಮತ್ತರ್ಕ್ಕಿಸುಕಾಡಿಂಗ ಮರುವಣಮನಿತುಣ್ಬರ್ಪನ್ನೆರಡು ತೋಂಟಕ್ಕ ಕೊಯ್ಲೊಳಯೂಱೆಲೆಯ ಉಣ್ಬರು ಎಂದಿದೆ.[೩೬] ಅಂದರೆ ತೋಟದಲ್ಲಿ ಪೊಂಗೆ ಮತ್ತು ಎಲೆಗಳನ್ನು ಬೆಳೆಯುತ್ತಿದ್ದರು. ಈ ಭೂಮಿಯಲ್ಲಿ ಉಳುಮೆ ಮಾಡುವವರು ಬೆಳೆಯನ್ನು ಕೊಯ್ಯುವ ಸಂದರ್ಭದಲ್ಲಿ ಬರುವ ೫೦೦ ಎಲೆಯಿಂದ ಬರುವ ಆದಾಯವನ್ನು ಊಟ ಮಾಡಬೇಕೆಂದಿದೆ. ಕ್ರಿ.ಶ. ೧೦೭೦ರ ಶಾಸನವು ನಗರೇಶ್ವರ ದೇವರಿಗೆ ಹೂವಿನತೋಟ ಮತ್ತರು ಗದ್ದೆ ಭೂಮಿ ನೀಡಿದ್ದನ್ನು ತಿಳಿಸುತ್ತದೆ.[೩೭] ಕ್ರಿ.ಶ.೧೧೫೩ರ ಶಾಸನದಲ್ಲಿ ಒಂದು ಮತ್ತರು ನೀರಾವರಿ ಭೂಮಿಯನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೩೮] ಕ್ರಿ.ಶ.೧೦೨೧ರ

ಶಾಸನದಲ್ಲಿ ಹೂವಿನತೋಟ ದಾನದ ಬಗೆಗೆ ಹೇಳುತ್ತದೆ. ಇದನ್ನು ಮಹಾಜನರು ಪಾಲಿಸಬೇಕೆಂದಿದೆ.[೩೨೯] ದೇವಾಲಯಗಳಿಗೆ ಭೂದಾನ ನೀಡಿದಾಗ ಅದರ ಮೇಲ್ವಿಚಾರಣೆಯನ್ನು ಮಹಾಜನರು ನೋಡಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ಕ್ರಿ.ಶ.೧೧೫೪ ಶಾಸನದಲ್ಲಿ ಮಲ್ಲಿಕಾರ್ಜುನ ದೇವರಿಗೆ ಗದ್ದೆ ಭೂಮಿ ದಾನ ನೀಡಿದ್ದನ್ನು ತಿಳಿಸುತ್ತದೆ.[೩೩೦] ಕ್ರಿ.ಶ.೧೦೫೩ರ ಶಾಸನದಲ್ಲಿ ೪೭ ಜನ ಬ್ರಾಹ್ಮಣರಿಗೆ ತೋಟದ ಕೆಲವು ಭಾಗ ಭೂಮಿಯನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೩೩೧] ಕ್ರಿ.ಶ. ೧೦೬೧ರ ಶಾಸನದಲ್ಲಿ ೪೭ ಜನ ಬ್ರಾಹ್ಮಣರಿಗೆ ಸುಂಕ ವಿನಾಯಿತಿ ನೀಡಿ ಅಡಕೆ ತೋಟವೊಂದಕ್ಕೆ ಪಣ ೧ ಹಾಗೂ ೧೦೦ ಅಡಕೆ ಮರಗಳನ್ನು ದಾನ ನೀಡಿದ ಉಲ್ಲೇಖವಿದೆ.[೩೩೨] ಬ್ರಾಹ್ಮಣರಿಗೆ ತೆರಿಗೆ ವಿನಾಯಿತಿ ನೀಡಿದ್ದನ್ನು ಅನೇಕ ಶಾಸನಗಳು ತಿಳಿಸಿರುವುದು ಕಂಡುಬರುತ್ತದೆ. ಅದರಲ್ಲಿ ತೋಟದ ಭೂಮಿಗಳಿಗೂ ತೆರಿಗೆ ವಿನಾಯಿತಿ ಇರುವುದು ಕಂಡುಬರುತ್ತದೆ. ಕ್ರಿ.ಶ.೧೦೮೫ರ ಶಾಸನದಲ್ಲಿ ೪೨ ಜನ ಬ್ರಾಹ್ಮಣರಿಗೆ ಮಾರಿಕಬ್ಬೆಯ ಕೆರೆಯ ಕೆಳಗೆ ೪೫೦ ಕಮ್ಮ ಗದ್ದೆ ದಾನ ನೀಡಿದ್ದನ್ನು ತಿಳಿಸುತ್ತದೆ.[೩೩೩] ಬೇರೆ ಕಡೆಯ ಭೂಮಿಗಿಂತ ಕರೆಯ ಕೆಳಗಿನ, ಹಿಂದಿನ, ಮತ್ತು ಮುಂದಿನ ಭೂಮಿಯು ತುಂಬ ಮೌಲ್ಯಯುತವಾಗಿರುತ್ತಿತ್ತು. ಆದ ಕಾರಣ ಬೇರೆಡೆಯ ಭೂಮಿಗಿಂತ ಕಡಿಮೆ ಪ್ರಮಾಣದಲ್ಲಿ ಈ ಭೂಮಿಯ ದಾನ ಕಂಡುಬರುತ್ತದೆ. ಕ್ರಿ.ಶ. ೧೧೯೯ರ ಶಾಸನದಲ್ಲಿ ಬಲ್ಲಾಳೇಶ್ವರ ದೇವರ ನಿತ್ಯಕಾರ್ಯಗಳಿಗೆ ಗದ್ದೆ ಸಲಗೆ ೧೦ ಕೊಳಗ ಬೆದ್ದಲು ಕಂಬ ೨೦೦ ದಾನ ನೀಡಿದ್ದನ್ನು ತಿಳಿಸುತ್ತದೆ.[೩೩೪] ಕ್ರಿ.ಶ. ೧೧೭೩ರ ಶಾಸನದಲ್ಲಿ ಗದ್ದೆಭೂಮಿ ೮೦ ಕಂಬ ಬೆದ್ದಲು ಭೂಮಿ ೩೦೦ ಕಂಬದಾನ ನೀಡಿದ್ದನ್ನು ತಿಳಿಸುತ್ತದೆ.[೩೩೫]

ಈ ಶಾಸನಗಳನ್ನು ಗಮನಿಸಿದರೆ ನೀರಾವರಿ ಭೂಮಿಯು ಮೌಲ್ಯಯುತವಾದುದಾಗಿತ್ತು ಎಂದು ತಿಳಿಯುತ್ತದೆ. ಆ ಕಾರಣದಿಂದಾಗಿ ಬೆದ್ದಲು ಭೂಮಿಯನ್ನು ಹೆಚ್ಚಿನ ಪ್ರಮಾಣದಲ್ಲೂ, ನೀರಾವರಿ ಭೂಮಿಯನ್ನು ಕಡಿಮೆ ಪ್ರಮಾಣದಲ್ಲಿಯೂ ದಾನ ನೀಡಿರುವುದು ಕಂಡುಬಂದಿದೆ. ಜೊತೆಗೆ ಬೆದ್ದಲು ಭೂಮಿಯಲ್ಲಿ ಬೆಳೆದ ಬೆಳೆಗಳಿಗೂ ಮೌಲ್ಯದ ಪ್ರಮಾಣ ಕಡಿಮೆ ಇತ್ತೆಂದು ತೋಟದ ಬೆಳೆಗಳ ಮೌಲ್ಯ ಹೆಚ್ಚಾಗಿತ್ತು ಎಂಬುದು ತಿಳಿದುಬರುತ್ತದೆ. ಕ್ರಿ.ಶ. ೧೧೮೪ರ ಶಾಸನದಲ್ಲಿ ಕೇಣಿಯ ತೋಂಟ ೧ಕ್ಕೆ ಕೇಣಿಕಾಱರು ಕೊಡುವ ಹಾಗವೊಂದು ಯೀ.. ೭೮ ಆಗ್ನೇಯದಲ್ಲಿ ಪೂದೋಂಟಕ್ಕೆ ಕಂಬ ೩೦ ಎಂದಿದೆ.[೩೩೬] ತೋಟಗಳನ್ನು ಕೇಣಿ ಕೊಡಲಾಗುತ್ತಿತ್ತು. ಆ ತೋಟಗಳನ್ನು ಕೇಣಿ ಪಡೆದವರು ಕೊಡಬೇಕಾದ ತೆರಿಗೆಯನ್ನು ಈ ಶಾಸನವು ತಿಳಿಸುತ್ತದೆ. ಕ್ರಿ.ಶ.೧೧೯೯ರ ಶಾಸನದಲ್ಲಿ ತೋಟಗದ್ದೆ ಕಂಬ ೬೦೦, ಹೂದೋಟ ಎಲೆಯ ಹೇಜಿಂಗೆ ವೀಸವೊಂದು ಎಂದಿದೆ.[೩೩೭] ತೋಟದ ಗದ್ದೆ ಎಂದರೆ ನೀರಾವರಿ ಪ್ರದೇಶದಲ್ಲಿ ಬೆಳೆಯುವುದರಿಂದ ತೋಟದ ಗದ್ದೆ, ಮಾವಿನಗದ್ದೆ, ತೋಪು ಈ ರೀತಿಯಾಗಿ ಬಳಸಿರುವುದು ಕಂಡುಬರುತ್ತದೆ. ಗದ್ದೆ ಭೂಮಿಯು ತೋಟದ ಭೂಮಿಯಾಗಿ ಕಂಡುಬರುತ್ತದೆ. ತೋಟದ ಗದ್ದೆಗಳಲ್ಲಿ ನೆಲ್ಲು ಬೇಕಾದರು ಬೆಳೆಯಬಹುದು ಅಥವಾ ಮಾವು, ಕಬ್ಬು ಈ ಬೆಳೆಗಳನ್ನು ಬೇಕಾದರೂ ಬೆಳೆಯಬಹುದು. ಭತ್ತವನ್ನು ನೀರಾವರಿ ಬೆಳೆಯಾಗಿ ಬಯಲು ಮತ್ತು ತೋಟಗಳಲ್ಲಿಯು ಬೆಳೆಯಲಾಗುತ್ತದೆ. ಆದರೆ ನೆಲ್ಲು ಬಿತ್ತುವಾಗ ಸ್ವಲ್ಪ ಶ್ರಮದಾಯಕವಾಗುತ್ತದೆ. ಬಯಲಲ್ಲಿ ಗದ್ದೆಯ ನೆಲ್ಲು ಬೆಳೆಯಲು ಸಾಕಷ್ಟು ನೀರಿನ ಅಗತ್ಯವಿರುತ್ತದೆ. ತೋಟದಲ್ಲಿ ನೆಲ್ಲು ಬೆಳೆದರೆ ತೋಟ ಮತ್ತು ಗದ್ದೆ ಎರಡಕ್ಕೂ ನೀರಾಯಿಸಿದಂತಾಗುತ್ತದೆ. ಇದು ತೋಟಗಳಲ್ಲಿ ಬಹು ಬೆಳೆಯನ್ನು ಬೆಳೆಯುವ ವಿಧಾನಗಳಲ್ಲಿ ಒಂದಾಗಿದೆ. ಈ ವಿಧಾನ ಹೆಚ್ಚಾಗಿ 'ದ್ರವಿಡಮಂಟಂ'ನಲ್ಲಿ ಕಂಡುಬರುತ್ತದೆ.[೩೩೮] "ತೋಟಗಳಲ್ಲಿ ನೆಲ್ಲು ಬಿತ್ತಬೇಕಾದರೆ ಮಳೆಯ ಹಾದಿ ನೋಡುವ ಅಗತ್ಯವಿಲ್ಲ. ಮೊದಲು ಗರಿಕೆ ಇಲ್ಲದ ಭೂಮಿಯಲ್ಲಿ ಗೊಬ್ಬರವನ್ನು ಹಾಕಿ ಎರಡು ಸಾಲು ಮಡಿಕೆಯನ್ನು ಹೊಡೆದು ಕುರಿ ಹಿಂಡು ತರುವುದು,

ಇಲ್ಲವಾದರೆ ಮತ್ತೊಮ್ಮೆ ಗೊಬ್ಬರ ಹಾಕಿ ಮೂರು ಸಾಲು ಚೆನ್ನಾಗಿ ಹರಗಿ ಮೃಗಶಿರ ಮಳೆಯು ಪ್ರಾರಂಭಿಸಿದ ನಾಲ್ಕು ದಿವಸದೊಳಗೆ ಹಸಿಯಾದರೆ ಸರಿ, ಇಲ್ಲವಾದರೆ ಮಳೆಯು ಹೂಡಿದ ನಾಲ್ಕನೆಯ ದಿವಸ ಒಣ ಮಣ್ಣಿನಲ್ಲಿಯಾದರೂ ಎರಡೆತ್ತರವಾಗಿ ಬಿತ್ತಿ, ನೀರು ಹೋಗುವ ಹಾಗೆ ಕಾವಲಿಯನ್ನೂ, ಮಡಿಯನ್ನೂ ಚೆನ್ನಾಗಿ ಮಾಡಿ ಮೊಟ್ಟೆಯಿಂದ ನೀರು ಉಣಿಸಬೇಕು"[೩೩೯] ಹೀಗೆ ಕ್ರಮೇಣ ನೀರು ಬೀಡುತ್ತಾ ಹೋಗಿ ನಂತರ ಅದರಲ್ಲಿ ಗರಿಕೆ, ಜೇಕು(ಗೇಕು) ಮೊದಲಾದ ಕಳೆ ಹುಟ್ಟಿದರೆ ಅದನ್ನು ಆಗಾಗ ತೆಗೆಯುತ್ತಿರಬೇಕು. "ತೋಟದ ಭೂಮಿಯು ವಂಡು ನೆಲವಾದರೆ, ಮಡಯ ಭೂಮಿಯಾದರೆ, ಪ್ರತಿ ಕೂರಿಗೆಗೆ ಎಂಬತ್ತು ಹೇರು ನೆಲ್ಲು ಬೆಳೆಯುತ್ತದೆ"[೩೪೦] ಘನಮಠದ ಶಿವಯೋಗಿಗಳು ತೋಟದ ನೆಲ್ಲನ್ನು ಬಿತ್ತುವ, ಬೆಳೆಯುವ, ಬೆಳೆಯ ಪ್ರಮಾಣ ಇವುಗಳ ಬಗೆಗೆ ಈ ರೀತಿ ಮಾಹಿತಿಯನ್ನು ನೀಡಿರುವುದು ಕಂಡುಬರುತ್ತದೆ. ಕೆಲವೊಮ್ಮೆ ಗೊಬ್ಬರ ಹಾಕುವ ಪ್ರಮಾಣದಲ್ಲಿ ಏರುಪೇರಾದರೆ ಬೆಳೆ ಬರುವ ಪ್ರಮಾಣದಲ್ಲೂ ಬದಲಾವಣೆಗಳು ಕಂಡುಬರುತ್ತವೆ.

ಘನಮಠದ ಶಿವಯೋಗಿಗಳು ನೆಲ್ಲು ಬೀಜದ ಬಗೆಗೆ ಹೀಗೆ ಹೇಳುತ್ತಾರೆ. ಉತ್ತಮ ಪ್ರತಿಯಾದ ಸೂಜಿಯ ಹಾಗೆ ಸಣ್ಣಾದ ಗಂಧವುಳ್ಳ ಗೌರಿ ಸಣ್ಣಕ್ಕಿ ಅಂಬೀಮೋರೆ ಮೊದಲಾದ ಗಂಧಸಾಲಿಯ ನೆಲ್ಲು ಬೀಜವನ್ನು ಕೊಂಕಣದಿಂದಾಗಲಿ, ಮಲಸೀಮೆಯಿಂದಾಗಲಿ, ತೆಲಂಗಾಣದಿಂದಾಗಲಿ, ಯಾತಗೇರಿ ಪ್ರಾಂತ್ಯದಿಂದಾಗಲಿ ತರುವುದು ಬಹು ಉತ್ತಮ. ಪ್ರತಿಯಾದ ಗದ್ದೆಯ ನೆಲ್ಲಿನ ಬೀಜವನ್ನು ತರಿಸಿ ಬಿತ್ತಿದರೆ ಅದರಂತೆ ಅಕ್ಕಿಯಾಗುವುವು. ಪ್ರಯತ್ನ ಮಾಡಿ ತರಿಸಲಾರದೆ ಗಾಂಪ ನೆಲ್ಲಿನ ಬೀಜವನ್ನು ಬಿತ್ತಿ ಅಕ್ಕಿಯನ್ನು ಕೆಡಿಸಿಕೊಳ್ಳ ಬಾರದು ಎಂದು ಹೇಳಿದ್ದಾರೆ.[೩೪೧] ಇನೇ ಸೋಮೇಶ್ವರನಲ್ಲೂ ಗಂಧಸಾಲಿ ಭತ್ತದ ಉಲ್ಲೇಖ ಬಂದಿರುವುದುನ್ನು ಇಲ್ಲಿ ಗಮನಿಸಲಾಗಿದೆ. ಅವನು ತನ್ನ ಕೃತಿ ಮಾನಸೋಲ್ಲಾಸದ ತೃತೀಯ ವಿಶಂತಿ ಪುತ್ರಭೋಗದಲ್ಲಿ ಗಂಧಶಾಲಿ, ಮುಂಡಶಾಲಿ, ಸ್ಥೂಲಶಾಲಿ, ಸೂಕ್ಷ್ಮಶಾಲಿ, ಸಷಷ್ಟಿಕಶಾಲಿ, ರಕ್ತಶಾಲಿ, ಮಹಾಶಾಲಿ, ಕಲಿಂಗಕಗಳನ್ನು ಭೋಜನ ಮಾಡಬೇಕು ಎಂದಿದ್ದಾರೆ.[೩೪೨] ಇದನ್ನು ಗಮನಿಸಿದರೆ ಗಂಧಶಾಲಿ ಭತ್ತವು ಸುಮಧುರವಾದ, ಪರಿಮಳಯುಕ್ತವಾದ ಜಾತಿಯ ಭತ್ತವಾಗಿದ್ದು, ಇದು ಭೋಜನಕ್ಕೆ ತುಂಬಾ ಯೋಗ್ಯವಾಗಿರುವ ಕಾರಣಕ್ಕೆ ಈ ಭತ್ತವನ್ನು ಬೆಳೆಯುವ ಬಗೆಗೆ ಸಲಹೆ ನೀಡಿರುವುದು ಕಂಡುಬಂದಿದೆ. ಜೊತೆಗೆ ಬೆಳೆದ ಭತ್ತವನ್ನೆಲ್ಲ ರೈತರು ತಾವೇ ಭೋಗಿಸಲಾಗದು. ತಮ್ಮ ಆರ್ಥಿಕ ಅಗತ್ಯತೆಗಳಿಗೆ ಅನುಗುಣವಾಗಿ ಮಾರಾಟ ಮಾಡಬೇಕಾಗುತ್ತದೆ. ಬೆಳೆಗೆ ಯೋಗ್ಯ ಬೆಲೆ ಸಿಗಬೇಕಾದರೆ ಉತ್ತಮ ತಳಿಯ ಯೋಗ್ಯ ಬೆಳೆಗಳನ್ನು ಬೆಳೆಯುವುದು ಸೂಕ್ತವಾಗಿರುತ್ತದೆ.

ತೋಟದಲ್ಲಿ ನೆಲ್ಲು ಬೆಳೆಯಲು ಒಂದು ಆತಂಕದ ಸಂಗತಿಯೆಂದರೆ ತೋಟದಲ್ಲಿ ಹೆಚ್ಚಾಗಿ ಗರಿಕೆ ಬೆಳೆಯುತ್ತದೆ. ಇದನ್ನು ಆಗಾಗ ಸ್ವಚ್ಛಗೊಳಿಸಿಕೊಂಡರೆ ಬಹು ಬೆಳೆಯ ಸಂಪೂರ್ಣ ಲಾಭವನ್ನು ಪಡೆಯುವ ಸಾಧ್ಯತೆಗಳು ಹೆಚ್ಚಿರುತ್ತವೆ. ಇದೇ ಶಾಸನದಲ್ಲಿ ತೋಟ ತುಡಿಕೆ ಎಂಬ ಉಲ್ಲೇಖವಿದ್ದು, ತುಡಿಕೆ ಎಂದರೆ ಹೂದೋಟ ಎಂಬ ಅರ್ಥವನ್ನು ಕೊಡುತ್ತದೆ. ಕ್ರಿ.ಶ. ೧೧೦೧ರ ಶಾಸನದಲ್ಲಿ 'ಎರೆಯಗದೆ ಸಲಗೆ'[೩೪೩] ಎಂದಿದೆ. ಎರೆಯ ಭೂಮಿಗಳಲ್ಲಿ ಬೆದ್ದಲು ಭೂಮಿಯಲ್ಲದೆ ನೀರಾವರಿ ಪ್ರದೇಶವನ್ನು ಈ ಭೂಮಿ ಆಕ್ರಮಿಸಿತ್ತೆಂಬುದು ಇದರಿಂದ ತಿಳಿದುಬರುತ್ತದೆ. ಈ ಭೂಮಿಯು ಫಲವದ್ಭರಿತ ಉತ್ಕೃಷ್ಟ ಭೂಮಿಯಾಗಿತ್ತು. ಕ್ರಿ.ಶ.೧೧೩೨ರ ಶಾಸನದಲ್ಲಿ ಮಾವಿನಗದ್ದೆಯ ಉಲ್ಲೇಖವಿದೆ.[೩೪೪] ಗದ್ದೆಗಳಲ್ಲಿ ಭತ್ತವಲ್ಲದೆ ಮಾವು ಬೆಳೆಯನ್ನು ಬೆಳೆಯುತ್ತಿದ್ದರು. ಈ ಕಾಲಕ್ಕೆ ಮಾವು ಆರ್ಥಿಕ ಬೆಳೆಯಾಗಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೧೭೭ರ ಶಾಸನದಲ್ಲಿ ದೇವರಗದ್ದೆಯ ಉಲ್ಲೇಖವಿದೆ.[೩೪೫] ಈ ಭೂಮಿಯು ದೇವಾಲಯಕ್ಕೆ ಸಂಬಂಧಿಸಿದ ಗದ್ದೆ ಭೂಮಿಯಾಗಿರುತ್ತದೆ. ಈ ಭೂಮಿಗೆ ತೆರಿಗೆ ವಿನಾಯಿತಿ ಇರುತ್ತದೆ. ಉಳುಮೆ ಮಾಡುವವರು ಬರುವ ಆದಾಯದಲ್ಲಿ ತಮಗೆ ಸ್ವಲ್ಪ ಭಾಗ ಇಟ್ಟುಕೊಂಡು ಉಳಿದ ಎಲ್ಲ ಭಾಗವನ್ನು ದೇವಾಲಯಗಳಿಗೆ ನೀಡಬೇಕಾಗಿತ್ತು. ಕ್ರಿ.ಶ. ೧೧೮೫ರ ಶಾಸನದಲ್ಲಿ ಮಣಲಗದ್ದೆ ಸ ೧೧೧೦ರ ಉಲ್ಲೇಖವಿದೆ.[೩೪೬] ಮಣಲಗದ್ದೆಯ ಉಲ್ಲೇಖವನ್ನು ಗಮನಿಸಿದರೆ ಮಳಲು ಮಿಶ್ರಿತ ಮಣ್ಣಿನ ಭೂಮಿಯು ನೀರಾವರಿಗೆ ಒಳಪಟ್ಟಿತ್ತು. ಈ ಭೂಮಿಯಲ್ಲಿ ಭತ್ತ ಮೊದಲಾದ ಬೆಳಗಳನ್ನು ಬೆಳೆದಿರುವ ಸಾಧ್ಯತೆಗಳಿವೆ. ಈ ಮಣ್ಣು ಬತ್ತ ಬೆಳೆಯಲು ಸೂಕ್ತವೆನಿಸುತ್ತದೆ. ಕಾರಣ ನಾಟಿ ಮಾಡುವಾಗ ಕೆಸರಲ್ಲಿ ಸಸಿಗಳು ಬೇಗ ಕೆಳಗಿಳಿಯುವುದನ್ನು ಗಮನಿಸಲಾಗಿದೆ. ಅಲ್ಲದೆ ಈ ಭೂಮಿಯಲ್ಲಿ ಅಧಿಕ ಇಳುವಳಿಯೂ ಬರುತ್ತದೆ. ಕ್ರಿ.ಶ. ೧೧೯೬ರ ಶಾಸನದಲ್ಲಿ ಅತ್ತಿಯ ಮಣಲಗದ್ದೆಯ ಉಲ್ಲೇಖ ಕಂಡುಬರುತ್ತದೆ.[೩೪೭] ಮೃದುವಾದ ಭೂಮಿ ಇದಾಗಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೧೯೪ರ ಶಾಸನದಲ್ಲಿ ಗಟ್ಟದ ಕೆಳಗಣ ಸಮಸ್ತ ಬಯಲು, ಮಲ್ಲೇನಕೆಱೆಯ ಕೆಳಗಣ ಸಮಸ್ತ ಬಯಲು ೫೦೦ ಮರದ ಸ್ಥಳದ ತೋಟ ೧ಕ್ಕಂ .ಕಂಬ ೩೪, ೬೦೦ ನೂಱು ಮರದ ಸ್ಥಳದ ತೋಟ ೧ಕ್ಕಂ ಕಂಬ ೪೦ ಶ್ರೀ ಮಧುಸೂಧನದೇವರ ದೇವರಕಾರ್ಯ್ಯಗಳಿಗೆ ಬಿಟ್ಟರು ಎಂದು ತಿಳಿಸುತ್ತದೆ.[೩೪೮] ದಕ್ಷಿಣ ಕರ್ನಾಟಕದ ಕೆಲವು ಮಲೆನಾಡು ಭಾಗಗಳಲ್ಲಿ ನೀರಾವರಿ ಭೂಮಿಯನ್ನು ಬಯಲು, ಬೈಲು ಎಂದು ಕರೆಯಲಾಗುತ್ತದೆ. ಗಟ್ಟದ ಕೆಳಗಿನ ಭೂಮಿಯು ತುಂಬಾ ಮೌಲ್ಯಾಧರಿತ ಭೂಮಿಯಾಗಿರುತ್ತದೆ. ಇಂತಹ ಭೂಮಿಯಲ್ಲಿ ಭತ್ತ, ಅಡಕೆ, ಕಬ್ಬು ಮೆಣಸು, ಏಲಕ್ಕಿಯಂತಹ ವಾಣಿಜ್ಯ ಮತ್ತು ಸಾಂಬಾರ ಪದಾರ್ಥಗಳನ್ನು ಬೆಳೆಯಲಾಗುತ್ತದೆ. ಇಲ್ಲಿ ೫೦೦ ಮರದ ಅಡಕೆ ತೋಟಕ್ಕೆ ೩೪ ಕಂಭ ಮತ್ತು ೬೦೦ ಮರದ ತೋಟದ ಭೂಮಿಗೆ ೪೦ ಕಂಬವನ್ನು ದೇವಾಲಯಕ್ಕೆ ತೋಟದಿಂದ ಬರುವ ಆದಾಯವನ್ನು ನೀಡಬೇಕಾಗಿತ್ತು. ಸಾಗರ, ಸೊರಬ ಮೂಡಗೆರೆ ಮೊದಲಾದ ಭಾಗಗಳಲ್ಲಿ 'ಕಾಡು ಮುರಿ' ಭೂಮಿ ಎಂದು ಕಂಡುಬರುತ್ತದೆ. ಅಂದರೆ ಕಾಡನ್ನು ಸವರಿ ಆ ಸ್ಥಳದಲ್ಲಿ ಅಡಕೆ ಮೊದಲಾದ ತೋಟದ ಬೆಳೆಗಳನ್ನು ಬೆಳೆಯಲಾಗುತ್ತದೆ. ಕ್ರಿ.ಶ. ೧೧೯೦ರ ಶಾಸನದಲ್ಲಿ ಅಡಕೆ ಮರ ೧೮೦೦ ಬೆದ್ದಲೆಕಂಮ್ಮ ೮೦೦ ಎಂದಿದೆ.[೩೪೯] ಘಟ್ಟ ಪ್ರದೇಶಗಳಲ್ಲಿ ತೋಟದ ಬೆಳೆಗಳಷ್ಟನ್ನೇ ಬೆಳೆಯದೆ ಒಣಬೇಸಾಯ ಅಥವಾ ಬೆದ್ದಲು ಭೂಮಿಯ ಬೇಸಾಯವನ್ನೂ ಸಹ ಮಾಡುತ್ತಿದ್ದರೆಂದು ಈ ಶಾಸನದಿಂದ ತಿಳಿಯುತ್ತದೆ. ಕ್ರಿ.ಶ. ೧೧೯೦ರ ಶಾಸನದಲ್ಲಿ ತುಂಬಿನ ಮೊದಲ ತೋಟದ ಸ್ಥಳ ೩೬೦ ತೆಂಡೆಯ ಕಟ್ಟಡ ಹಡುವ ಗೋಡಿಯ ಪರಿವರ್ತನ ವೊಳಗಾಗಿ ಕಂಬ ೧೬೦ ಕಡಿಗಟ್ಟ ಕಂಭ ೩೦ ಮುತ್ತುಗದ ಕಱುವ ಕಂಭ ಎಂದಿದೆ.[೩೫೦] ಕೃಷಿಗೆ ಪರಿವರ್ತನೆ ಮಾಡುವ ಭೂಮಿ ೧೬೦ ಕಣು ಕೂಡಿಗಟ್ಟ ಕಂಬ ೩೦ (ಮರಗಿಡಬಳ್ಳಿಗಳಿಂದ ಆವೃತ್ತವಾದ ಪ್ರದೇಶ) ಮುತ್ತಗದ ಕುಱುವ ಅಂದರೆ ಮುತ್ತುಗದ ಗಿಡಗಳಿಂದ ಆವೃತ್ತವಾದ ಬೆಟ್ಟದ ಭೂಮಿಯನ್ನು ಸಾಗುವಳಿಗೆ ಒಳಪಡಿಸುವ ಸಲುವಾಗಿ ದಾನ ನೀಡಿರುವ ಸಾಧ್ಯತೆಗಳು ಕಂಡುಬರುತ್ತವೆ.

ಕ್ರಿ.ಶ. ೧೧೯೧ರ ಶಾಸನದಲ್ಲಿ ಕೆಱೆಯ ಕೋಡಿಯಿಂದಳಿದ ನಿರ್ವ್ವರಿ ಭೂಮಿ, ಎರೆಯಕೆಯಿ ಎಱಕನ ಕುಂಮರಿಯಲ್ಲಿ ಕಾರಗದ್ದೆ ಸ್ಥಳ ಕಂಬ ನಾಲ್ವತ್ತು ಹೂದೋಟ, ನಾರಣಗಟ್ಟದ ಕೆಱೆಯ ತುಂಬಿನ ಪಂಥದ ನೀರು ಚಿಕ್ಕಕೆಱೆಯ ಗದ್ದೆಗೆ ಹರಿಸಬೇಕೆಂದವ ಶಿವದ್ರೋಹಿ ಮೂವತ್ತಿಛಾಯಿರಕ್ಕೆ ಬಹಿಷ್ಕೃತರು ಎಂದಿದೆ.[೩೫೧] ಅಂದರೆ ಗದ್ದೆಗೆ ಅಥವಾ ಕೆಲವೊಂದು ಪ್ರದೇಶಗಳಿಗೆ ಕೆರೆಯ ನೀರನ್ನು ಹರಿಸಬಾರದೆಂಬ ನಿರ್ಬಂಧ ಮತ್ತು ನಿಯಮಗಳು ಇತ್ತೆಂದು ಇದರಿಂದ ತಿಳಿಯುತ್ತದೆ. ಇದೇ ಶಾಸನಕ್ಕೆ ಸಂಬಂಧಿಸಿದಂತೆ ಇದೇ ಸ್ಥಳದ ಕ್ರಿ.ಶ. ೧೨೭೧ರ ಮತ್ತೊಂದು ಶಾಸನವು ದೇವರ ಚಿಕ್ಕ ಕೆಱೆಯ ಗದ್ದೆಗಾ ಕೆಱೆಯ ನೀರಲ್ಲದೆ ಬೇಱೆ ನಾರಣಗಟ್ಟದ ನೀರಪಂಥವಿಲೆಂದೊಡಂ ಬಿಡಿಸಕೊಟ್ಟ

ಮಹಾಜನಂಗಳು ದೇವರಿಗೆ ವ್ರಿತ್ತಿಗಳೋಪಾದಿಯ ನೀರ ಸಮಯಕ್ಕೆ ವರ್ಷಂ ಪ್ರತಿ ನೆಲೆಯಾಗಿ ಕೊಡುವ ಗ೧ ನಾರಣಗಟ್ಟದ ಕೆಱೆಯ ನೀರನ್ನು ಚಿಕ್ಕಕೆಱೆಯ ಗದ್ದೆಗೆ ಹರಿಸಬಾರದು ಎಂಬ ನಿರ್ಬಂಧವನ್ನು ತಿಳಿಸುತ್ತದೆ. ಕ್ರಿ.ಶ. ೧೨೭೧ರ ಶಾಸನವು ಇದಕ್ಕೆ ಪರಿಹಾರವನ್ನು ಕಂಡುಕೊಂಡಂತೆ ಕಂಡುಬರುತ್ತದೆ. ನಾರಣಗಟ್ಟದ ನೀರನ್ನು ಚಿಕ್ಕಕೆಱೆಯ ಗದ್ದೆಗೆ ಹರಿಸಿ ನೀರಿನ ಪ್ರತಿಯಾಗಿ ನೀರಿನ ಸಮಯಕ್ಕೆ ವರ್ಷಕ್ಕೆ ಗದ್ಯಾಣ ಒಂದನ್ನು ಕೊಡುವ ಪರಿಹಾರವನ್ನು ಮಹಾಜನರು ಮಾಡುತ್ತಾರೆ. ಈ ಎರಡು ಅವಧಿಯ ಮಧ್ಯದಲ್ಲಿ ನೀರಾವರಿಯ ಅಗತ್ಯತೆಯನ್ನು ಮನಗಂಡು ಪರಿಹಾರ ಕಂಡುಕೊಂಡಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಮಕ್ಕಿ ಕೊಳಗದ ಉಲ್ಲೇಖ ಕಂಡುಬರುತ್ತದೆ.[೩೫೨] ಕ್ರಿ.ಶ. ೧೧೬೭ರ ಶಾಸನದಲ್ಲಿ ಕಲ್ಲ ತುಂಬಿನ ಕೆರೆಗೆ ಗದ್ದೆ ಸಲಗೆ ಭೂಮಿ ಬೆದ್ದಲು ೧೦೦ ಕಂಭ ಅಡಕೆಮರ ಯಿಂನೂಱು ಸ್ಥಳ ತೋಂಟ ಕೆಱೆಯೊಳಗಣವೂದೊಂಟವೊಂದುಯಿಪ್ಪತ್ತು ಕಂಭದ ತುಡಿಕೆ ವೊಂದನ್ನು ಶ್ರೀ ಚನ್ನಕೇಶವ ದೇವರ ಶ್ರೀ ಕಾರ್ಯಕ್ಕೆ ದಾನ ಮಾಡಿದಂತಿದೆ.[೩೫೩] ಕಲ್ಲಿನ ತೂಬು, ಕೆರೆಯ ಗದ್ದೆ ಎಂಬ ಉಲ್ಲೇಖವನ್ನು ಗಮನಿಸಿದರೆ ಈ ವೇಳೆಗೆ ನೀರಾವರಿ ಕೃಷಿಯು ಸಾಕಷ್ಟು ವಿಸ್ತರಣೆ ಮತ್ತು ಅಭಿವೃದ್ಧಿಯನ್ನು ಸಾಧಿಸಿತ್ತೆಂಬುದು ತಿಳಿಯುತ್ತದೆ. ಕ್ರಿ.ಶ. ೧೨೭೬ರ ಶಾಸನದಲ್ಲಿ ಎಂಡಿಂಗೆ ಹಾಳಚೆಟ್ಟ ಗೌಡನ ಮಗ ಚೆಂಡಗೌಡನು ಚಂದ್ರಗೌಡ ಹಿಂದಣ ತಂನ ಗೌಡಿಕೆಯ ಬಾಳೆಯ ತೋಟ ಯಿಪತ್ತೈಯ್ದು ಕಂಬವನೂ ಕಂಬ ೧ಕೆ ತತುಕಾಲೋಚಿತ ಕ್ರಯದ್ರಬ್ಯ ಗದ್ಯಾಣ ಮೂಱರ ಮರಿಯಾದೆಯಲಾ ಕಂಬ ಇಪ್ಪತ್ತೈಯ್ದಕಂ ಗದ್ಯಾಣಂ ಎಪ್ಪತ್ತೈಯ್ದನೂ ಆ ಚೌಡಗೌಡಂಗೆ ಕೊಟ್ಟು ಆ ಬಿವಡೆ ಜಟ್ಟಿಯರು ನನ್ನ ಜಟ್ಟಿಯರು ಆ ತೋಟವನು ಕೊಂಡು ತೋಟಕೆ ಗೌಡು ಮರಿಯಾದೆಯಲು ಏನು ಬಂದಡಂ ಆ ಚೌವುಡಗವುಡನೆ ನೋಡಿಕೊಳ್ಳುವುದು.[೩೫೪] ತೋಟವನ್ನು ಮಾರಾಟ ಮಾಡುವವನು ಏನು ಸಮಸ್ಯೆ ಬಂದರೂ ನೋಡಿಕೊಳ್ಳಬೇಕೆಂಬ ಅಂಶಗಳು ಕಂಡುಬರುತ್ತವೆ.

ಕ್ರಿ.ಶ. ೧೨ ಮತ್ತು ೧೩ನೆಯ ಶತಮಾನದ ಶಾಸನವು ಗದ್ದೆಬೆದ್ದಲು ಭೂಮಿಯನ್ನು ದಾನ ನೀಡಿದುದನ್ನು ತಿಳಿಸುತ್ತದೆ. ಅಲ್ಲದೆ ವ್ಯವಸಾಯಕ್ಕೆ ನೀಡಿದ ಗೇಣಿಯ ಭೂಮಿಯ ಕರಾರಿನ ಬಗೆಗೆ ತಿಳಿಸುತ್ತದೆ. ಹೆಗ್ಗಡೆಗಳು ತೋಟವಿಕ್ಕಿ ಕೆಟ್ಟ ಫಲವಾದಡೆ ಕಟ್ಟಳೆ ತಿಱವಿಕೊಂಬೆವು.... ಗದ್ದೆಗಳೊಳ....ಕಿಡಿನೆಲೆ ಉಂಡಿಗೆಯಾಗಿ ಯಿಕ್ಕಿಕೊಂಬೆ....[೩೫೫] ಎಂದಿದೆ. ತೋಟವನ್ನು ಉಳುಮೆಗೆ ಗೇಣಿರೂಪದಲ್ಲಿ ನೀಡಿದಾಗ ಒಂದು ವೇಳೆ ತೋಟದಲ್ಲಿ ಸರಿಯಾಗಿ ಫಲ ಬರದಿದ್ದರೆ ಕರಾರುಗಳನ್ನು ಬದಲಿಸಿದ ಒಪ್ಪಂದ ಕಂಡುಬಂದಿದೆ. ಇಂದಿನಂತೆ ಪ್ರಾಚೀನ ಸಂದರ್ಭದಲ್ಲೂ ಮಳೆ, ಹವಾಮಾನ ವೈಪರೀತ್ಯ ಮೊದಲಾದ ಕಾರಣಗಳಿಂದ ಒಮ್ಮೊಮ್ಮೆ ಫಸಲು ಇಳಿಮುಖವಾಗಿರುವುದು ಕಂಡುಬರುತ್ತದೆ. ಇಂತಹ ಸಂದರ್ಭದಲ್ಲಿ ಭೂ ಮಾಲೀಕರು ಉಳುವ ವರ್ಗಕ್ಕೆ ಸ್ಪಂದಿಸುವ ಅಗತ್ಯವಿರುತ್ತದೆ. ಹೀಗೆ ಉಳುವ ವರ್ಗಕ್ಕೆ ಕರಾರು ಬದಲಿಸುವ ಮೂಲಕ ಸ್ಪಂದಿಸಿರುವುದು ಈ ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ. ೧೦೮೩ರ ಶಾಸನದಲ್ಲಿ ಇರ್ಕ್ಕುಂಡುಗ ಗಟ್ಟಿ, ಇರ್ಮ್ಮತ್ತರು ಬೆಜ್ದಿಲೆಯ ಉಲ್ಲೇಖ ಕಂಡುಬರುತ್ತದೆ.[೩೫೬] ಕ್ರಿ.ಶ. ೧೨೩೪ರ ಶಾಸನದಲ್ಲಿ ಮಾರಗವುಂಡುಗಳು ಕನ್ನೆಗೆಱೆಯ ಕಟ್ಟಿ ಕೋಡಿಯತಿದ್ದಿ ಸಮಸ್ತವನುಂ ಮಾಡಿದಲ್ಲಿಗೆ ಇದನ್ನು ಮೆಚ್ಚಿ ಕೆಱೆಗೊಡುಗೆಯಾಗಿ ಆಯಿದು ಮಾರ್‌ಘಳೆಯಲು ೧೦೦ ಕೊಟ್ಟು[೩೫೭] ಹೊಸದಾಗಿ ಕೆರೆ ನಿರ್ಮಿಸಿ ಕೋಡಿಯನ್ನು ತಿದ್ದಿದ ಮಾರಗವುಂಡುಗಳಿಗೆ ಕೆಱೆಗೊಡುಗೆಯಾಗಿ ನೀಡಿದ ಭೂಮಿಯನ್ನು ಮಾರಗವುಡುಗಳು ತಾವೇ ಮಾಡಿ ಅದರ ಆದಾಯವನ್ನು ತಾವೇ ಅನುಭವಿಸುತ್ತಿದ್ದರು. ಇದರಿಂದ ಬೆಳೆದ ಭತ್ತದ ಕೆಲವು ಭಾಗವನ್ನು ಮಹಾಜನಗಳಿಗೆ ಕೊಡುತ್ತಿದ್ದರೆಂದು ಶಾಸನವು ತಿಳಿಸುತ್ತದೆ.

“ಕ್ರಿ.ಶ. ೧೨೫೭ರ ಶಾಸನದಲ್ಲಿ ಬಸವಂಣನು ಗೊಟ್ಟಿಕೆಱೆಯಲ್ಲಿ ತಾನು ಕಟ್ಟಿಸಿದ ಬ್ರಹ್ಮಸಮುದ್ರವಾದ ಹಿರಿಯ ಕೆಱೆಯ ಕೆಳಗೆ...ಏಕಸ್ಥಳವಾಗಿ ಮೂವತ್ತಯೆರಡು ಮೆಟ್ಟಿನ ಗಳೆಯಲು ಕಂಬ ನಾನೂಱಕಂ ದೇವರ ಪಡಿಯ ಕೊಳಲು ಬೀಜವರಿಯ ಎಂಟು ಸಲಗೆ ಗದ್ದೆಯನ್ನು ತತ್ಕಾಲೋಚಿತ ಕ್ರಮ ದ್ರಬ್ಯವಕೊಟ್ಟು ಕ್ರಯದಾನವಾಗಿಕೊಂಡು” ಬ್ರಾಹ್ಮಣ ಭೋಜನ ಮೊದಲಾದವುಗಳಿಗೆ ಛತ್ರಕ್ಕೆ ಬಿಟ್ಟರೆಂದಿದೆ.[೩೫೮] ದೇವರ ಪಡಿಗೆಂದು ಧಾನ್ಯ ಬೆಳೆಯುವ ಭೂಮಿಯನ್ನು ನೀಡಿದ್ದನ್ನು ತಿಳಿಸಿದೆ. ಇದು ಭತ್ತ ಬೆಳೆಯುವ ಭೂಮಿಯಾಗಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೬೬ರ ಶಾಸನದಲ್ಲಿ ವೃತ್ತಿಕ್ರಿಷ್ಟವಾಗಿ ಮಾಡುವ ಗದ್ದೆಯೊಳಗೆ ನಾಲ್ವತ್ತೆರಡುಮೆಟ್ಟಿನಗಡಿಸಿದಗಳೆಯಲು ಖಂಡುಗಕ್ಕೆ ನಾಲ್ವತ್ತು ಕಂಬದ ಮರಿಯಾದೆಯಲುಗದೆ ಸಲಗೆ ಅಯ್ದನೂ....ಗದ್ದೆಯಲಾದ ಭತ್ತಾಯವೂ ತೋಟವನಿಕ್ಕಿದಡೆ ಆ ತೋಟದ ಫಲವನೂ ಮತ್ತಾವ ಭೀಯವನೂ ಮಾಡದೆ ಇದಕ್ಕೆ ಕೊಡುವುದು.[೩೫೯] ಉತ್ಕೃಷ್ಟವಾದ ಭೂಮಿಯಲ್ಲಿ ವ್ಯವಸಾಯ ನಡೆದರೆ ಅದಕ್ಕೆ ವಿಧಿಸುವ ಸುಂಕದ ಬಗೆಗೆ ಈ ಶಾಸನವು ತಿಳಿಸುತ್ತದೆ. ಖಂಡುಗಕ್ಕೆ ೪೦ ಕಂಬ ನೀಡಿರುವುದು ಕಂಡುಬಂದಿದೆ. ಗದ್ದೆಭೂಮಿಯಿಂದ ಬರುವ ಭತ್ತದ ಆದಾಯ, ತೋಟವನ್ನು ಉಳುಮೆ ಮಾಡಿದಾಗ ಬರುವ ಆದಾಯವೂ ಪಂಚಿಕೇಶ್ವರ ದೇವರಿಗೆ ಸಲುವುದು. ಇದರ ಮೇಲುಸ್ತುವಾರಿ ಮಹಾಜನರಿಗೆ ಸೇರಿರುತ್ತಿತ್ತು.

ಕ್ರಿ.ಶ. ೧೨೫೦ರ ಶಾಸನದಲ್ಲಿ ಕಲ್ಲಯ್ಯನೆಂಬಾನು ದೇವಾಲಯದ ಪೂಜೆಗಾಗಿ ಹೂದೋಟವನ್ನು ಮಾಡಿಸಲು ದೇವಾಲಯದ ಸ್ಥಾನಿಕರಿಂದ ೯೫ ಕಂಬ ಭೂಮಿಯನ್ನು ಕ್ರಯಕ್ಕೆ ಪಡೆದು ದಾನ ನೀಡಿದನು. ಇದರಲ್ಲಿ ಮೂವತ್ತು ಕೊಳಗ ತೋಟಿಗನ ಜೀವಿತಕ್ಕೆ ಸಂದಿತು. ತೋಟಕ್ಕೆ ಮತ್ತು ತೋಟಿಗನ ಮನೆಯ ತೆರಿಗೆಯನ್ನು ಮಾನ್ಯ ಮಾಡಲಾಯಿತು. ಕೆಲವು ತಿಂಗಳ ಅನಂತರ ಈ ದತ್ತಿಯನ್ನು ಸ್ವಲ್ಪ ಮಾರ್ಪಡಿಸಲಾಯಿತು. ತೋಟಿಗನಿಗೆ ಕೊಟ್ಟಿದ್ದ ೩೦ ಕೊಳಗ ಭೂಮಿಯನ್ನು ಈಗ ದೇವರಿಗೆ ಬಿಡಲಾಯಿತು. ಇದಕ್ಕೆ ಪ್ರತಿಯಾಗಿ ಹೊಸದಾಗಿ ೮೦ ಕಂಬ ಭೂಮಿಯನ್ನು ಸ್ಥಾನಿಕರಿಂದ ತತ್ಕಾಲೋಚಿತ ಕ್ರಯಕ್ಕೆ ಪಡೆದು ತೋಟಿಗನ ಜೀವಿತಕ್ಕಾಗಿ ನೀಡಲಾಯಿತು. ಅಲ್ಲದೆ ಹೂದೋಟಕ್ಕೆ ನೀರುಣಿಸಲು ಬಳಸುವ ರಾಟಣಕ್ಕೆ ಹೂಡಿದ ಎತ್ತುಗಳ ಮೇವಿಗಾಗಿ ವರಗುಳಿಯ ವಾರ್ಷಿಕ ಸಿದ್ಧಾಯದಿಂದ ೩ ಗದ್ಯಾಣಗಳನ್ನು ನೀಡಿದರೆಂದಿದೆ.[೩೬೦] ಶಾಸನಗಳು ಉಲ್ಲೇಖಿಸುವಂತೆ ‘ತುಡಿಕೆ’ ಎಂದರೆ ಹೂದೋಟ ಎನ್ನಲಾಗಿದೆ. ಈ ಹೂದೋಟಗಳ ಕೃಷಿಯ ಮುಖ್ಯ ಉದ್ದೇಶ ದೇವಾಲಯಗಳ ಪೂಜೆ ಮೊದಲಾದ ಧಾರ್ಮಿಕ ಕಾರ್ಯಗಳಿಗೆ ಹೂಗಳನ್ನು ಪೂರೈಸುವುದು. ಇವುಗಳನ್ನು ನೋಡಿಕೊಳ್ಳಲು ತೋಟಿಗನೆಂಬುವವನು ಇರುತ್ತಿದ್ದನು. ಇವನು ತೋಟಗಳಿಗೆ ರಾಟಣದ ಮೂಲಕ ನೀರು ಹಾಯಿಸುತ್ತಿದ್ದನು. ಇದಕ್ಕೆ ಪ್ರತಿಯಾಗಿ ಅವನಿಗೆ ‘ತೋಟಿಗ ಸಮಯ’ವೆಂಬ ಸಂಭಾವನೆ ಕೊಡಲಾಗುತ್ತಿತ್ತು.

ರಾಟಣಕ್ಕೆ ಬಳಸುವ ಎತ್ತುಗಳಿಗೂ ಮೇವಿಗಾಗಿ ಭೂದಾನ ಮಾಡಿರುವುದು ಈ ಶಾಸನದಿಂದ ತಿಳಿದುಬಂದಿದೆ. ಕ್ರಿ.ಶ. ೧೨೪೮ರ ಶಾಸನದಲ್ಲಿ ಮಕ್ಕಿಯ ಗದ್ದೆಯ ಉಲ್ಲೇಖವಿದೆ. ಕ್ರಿ.ಶ. ೧೨೯೯ರ ಶಾಸನದಲ್ಲಿ ಅಡಕೆ, ಅರಸಿನ ಮೆಣಸಿನ ಭಾರ ಏಲಕ್ಕಿಯ ಉಲ್ಲೇಖವಿದೆ.[೩೬೧] ತೋಟದ ಭೂಮಿ, ನೀರಾವರಿ ಭೂಮಿಗಳಲ್ಲಿ ಎಲೆ, ಅಡಕೆ, ಅರಸಿನ, ಏಲಕ್ಕಿ, ಮೆಣಸು, ತೆಂಗು, ನಿಂಬೆ ಮೊದಲಾದ ಹಣ್ಣು ಹೂವುಗಳನ್ನು ಬೆಳೆಯಲಾಗುತ್ತಿತ್ತು. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಬೆಯದ ಬತ್ತ ಮಕ್ಕಿಯ ಗಳ್ದೆಗಳ ಉಲ್ಲೇಖವಿದೆ.[೩೬೨] ಕ್ರಿ.ಶ. ೧೨೬೬ರ ಶಾಸನದಲ್ಲಿ ನೀರಾವರಿ ಬೆಳೆಗಳನ್ನು ಬೆಳೆದ ಉಲ್ಲೇಖಗಳು ಮತ್ತು ಹೂದೋಟದ ಬೆಳೆಗಳಾದ ಹೂಗಳ ಉಲ್ಲೇಖ ಕಂಡುಬರುತ್ತದೆ. “ಕಂಮ್ಮರನೀಳೆ ಬಾಳೆವಕುಳಂದಾಳಿಂಬವಶ್ವಾದತಾಳಗೆ ನೇಱಿಲ್ಪನ ಸಾಂಬ್ರವತ್ತಿ ತಿಳಕಂ ಕಂಕೆಲ್ಲ

ಮ(೦)ನ್ನಾಗ ಪಾದರಿ ಪೂಗದ್ರುಮ ಕೌಂಗು ತೆಂಗು ಬದರಿಖರ್ಜ್ಜೂರ ನಾರಂಗ ಕೇಸರಮೆಂದಿಂತಿವಱಿಂದ ರಂಜಿಸುವುದ್ಯಾನಂ ಎಂದಿದೆ. ಅಡಕೆ ತೋಟ, ಕೆರೆಯ ಕೆಳಗಣ ಗದ್ದೆ ಮತ್ತರು ೩ ಗದ್ದೆ ಕಂಬ ೬೦ರ ಉಲ್ಲೇಖ ಈ ಶಾಸನದಲ್ಲಿದೆ.[೩೬೩] ಕೆರೆಯ ಕೆಳಗಿನ ಭೂಮಿಯು ಫಲವತ್ತಾದ ಭೂಮಿಯಾಗಿರುತ್ತದೆ. ಅಲ್ಲಿ ಅಡಕೆ, ಎಲೆ, ಭತ್ತ, ಬಾಳೆ, ಕಬ್ಬು ಬೆಳೆಗಳು ಉತ್ಕೃಷ್ಟವಾಗಿ ಬೆಳೆಯುತ್ತವೆ. ಈ ಕಾರಣದಿಂದ ಈ ಭೂಮಿಯನ್ನು ದಾನ ನೀಡುವಾಗ ಬೇರೆ ಭಾಗದ ಭೂಮಿಗಿಂತ ಕಡಿಮೆ ಪ್ರಮಾಣದಲ್ಲಿ ನೀಡುರುವುದು ಕಂಡುಬರುತ್ತದೆ.

ಕ್ರಿ.ಶ. ೧೧೪೬ರ ಶಾಸನದಲ್ಲಿ ಕೆಱೆಯ ಕೆಳಗಣ ನಿರ್ಮ್ಮಂಣುಳ್ಳ ಗದ್ದೆಯುಮಂ ಮತ್ತರಾರು ದೇವದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.[೩೬೪] ಕ್ರಿ.ಶ.೧೧೧೭ರ ಶಾಸನದಲ್ಲಿ ಊರುಂಬ ಹಿರಿಯಕೆಱೆಯ ಕಿಬ್ಬ ಫಲತ್ತಿಗಾಲ ಗದ್ದೆಕೊಳಗ... ಆ ಹಿರಿಯ ಕೆಱೆಯ ಹಡುವಣ ಕೋಡಿಯಳೆರೆಯ ಕೆಯಿ ಬೆದ್ದಲ್.........ತೋಟದ ಮಣ್ಣು ಹಳ್ಳದ ಗರ್ದ್ದೆಯುಂ ದೇವರಿಗೆ ಬಿಟ್ಟಂತೆ ಹೇಳಿದೆ.[೩೬೫] ಹಳ್ಳದಿಂದ ನೀರಾಯಿಸುವ ಗದ್ದೆ ಭೂಮಿಯ ಉಲ್ಲೇಖವಿದ್ದು, ಹಳ್ಳದ ನೀರಿನಿಂದ ಭೂಮಿಯಲ್ಲಿ ನೀರಾವರಿ ಬೆಳೆಗಳನ್ನು ಬೆಳೆದಿರುವಂತೆ ಕಂಡುಬರುತ್ತದೆ. ಕ್ರಿ.ಶ. ೧೨೮೦ರ ಶಾಸನದಲ್ಲಿ ಸಮಸ್ತ ಪ್ರಜೆ ಗಾವುಂಡಗಳು ಎರಡು ಹಳ್ಳಿಯ ಗದ್ದೆಗಳಿಗೆ ಅರಸಿಯು ಕೆಱೆಯ ನೀರು ಹಾಯಿಸುವಂತಾಗಿ ವೊಡಂಬಡಿಸಿ ತತ್ಕಾಲೋಚಿತ ಕ್ರಯದ್ರವ್ಯವನು ಸಾಕಲ್ಯೇನ ಕೊಟ್ಟು ಧಾರಪೂರ್ವಕವಾಗಿ ಕೊಂಡು ನಾರಾಯಣಪುರದ ಶ್ರೀ ಲಕ್ಷ್ಮೀನಾರಾಯಣ ದೇವರಿಗೆ ನೀಡಿದರು. ಹಾಗೆಯೇ ಗವುಡಗಳಿಗೆ ಇಕ್ಕುವ ಸಿದ್ಧಾಯ ಗ ೧೬ ನಿಕ್ಕಿ ಸಂದು ಬಹಂತಾಗಿ ಸಮಸ್ತ ಪ್ರಜೆಗಳ ಅನುಮತದಿಂದ ಬಿಟ್ಟರೆಂದಿದೆ.[೩೬೬] ಕೆರೆಯ ನೀರನ್ನು ಭೂಮಿಗೆ ಬಳಸಿ ನೀರಾವರಿಗೆ ಒಳಪಡಿಸಿರುವುದು ಇಲ್ಲಿ ಕಂಡುಬರುತ್ತದೆ.

ಕ್ರಿ.ಶ. ೧೧೬೦ರ ಶಾಸನದಲ್ಲಿ ತೊಱೆಯಾಗಿ ಹೋಗೆ ಕೃಪೆಯಿಂ ಕೆಱೆಯಾಗಿರ್ಪ್ಪಂತು ಪಲರುಮಂ ಕಟ್ಟಿದ ಕೆಱೆಗಳೊಳಿದೊಂದು ಕೆಱೆಯೆನೆ ಕೆಱೆಯಂ ಕಿಱುಗೂಸು ಚಟ್ಟೆಯಂ ಕಟ್ಟಿಸಿದಂ ಹಾಗೂ ತಟಾಕ ಮತ್ತು ದೇವಾಲಯವನ್ನು ಕಟ್ಟಿಸಿದನು. ತೊಱೆ(ಹಳ್ಳವಾಗಿ) ಹೋಗುವ ನೀರನ್ನು ತಡೆಯಲು ಚಟ್ಟಯನು ಕೆರೆಯನ್ನು ಕಟ್ಟಿಸಿ ನೀರು ಸಂಗ್ರಹಿಸಿದನು. ಚಟ್ಟಯನು ಮಾಡಿದ ನೀರಾವರಿ ಕೃಷಿಯನ್ನು ಶಾಸನವು ಹೀಗೆ ತಿಳಿಸುತ್ತದೆ.

ಮಣ್ಣ ಸವನೆನಿಸಿ ಹೊನ್ನಂ ಮಣ್ಣಂ ಗೆಯ್ವವಗೆ
ನೆಱೆಯೆ ಕೊಟ್ಟುಂ ಚಟ್ಟಂ ಮಣ್ಣುಂಡು ಹೋದುದೆನಿಸ
ದೆ ತಣ್ಣನೆ ತಣಿಪಿದನಶೇಷಮಂ ಜೀವನದಿಂ
ಪಳಮಂ ಪೊಗಳ್ವಡಳುಂಬಂ ಬೆಳೆವುದು ಮುಂದತ್ತ
ಭುಕ್ತಿಯುಂ ಮುಕ್ತಿಯುಮಂ ಜಳದಿಂ ಚಟ್ಟ ಸಮುದ್ರಂ
ಬೆಳೆವುದು ಪಿಂತಿತ್ತ ಕವ್ವುಮಂ ಕಳವೆಯಮಂ[೩೬೭]

ಎಂದಿದೆ. ಹೊಸಕೆರೆಯನ್ನು ವ್ಯವಸಾಯ ಅಭಿವೃದ್ಧಿಗೆಂದೇ ನಿರ್ಮಿಸಿದ ಚಟ್ಟಯ್ಯನು ಹೊಸದಾಗಿ ಭೂಮಿಯನ್ನು ಸಾಗುವಳಿಗೆ ಒಳಪಡಿಸಿದಂತೆ ಕಂಡುಬರುತ್ತದೆ. ಮಣ್ಣನ್ನು ಸಮಗೊಳಿಸಿ ಮಣ್ಣನ್ನು ಹೊನ್ನೆಂದು ಭಾವಿಸಿ ಉಳುಮೆಗೆ ಒಳಪಡಿಸಿದನು. ಶ್ರದ್ಧೆಯಿಂದ ಕೃಷಿ ಭೂಮಿಯಲ್ಲಿ ಸಾಗುವಳಿಮಾಡಿ, ಭೂಮಿಯನ್ನು ನೀರಾವರಿಗೆ ಒಳಪಡಿಸಿ ಅಲ್ಲಿ ಕಬ್ಬು ಮತ್ತು ಭತ್ತ(ಕಳವೆ)ವನ್ನು ಬೆಳೆದನೆಂದು ಶಾಸನವು ತಿಳಿಸುತ್ತದೆ. ಇಂತಹ ಕೃಷಿಕರು ಭೂಮಿಯ ಬಗೆಗೆ ದೈವೀ ಭಾವನೆಯನ್ನು

ಹೊಂದಿರುತ್ತಾರೆ. ಬೆಳೆಯಿಲ್ಲದ ನೆಲವನ್ನು ಅವರು ಊಹಿಸಿಕೊಳ್ಳಲಾರರು. ಭತ್ತವನ್ನು ಬೆಳೆಯುವಾಗ ಹೀಗೆ ಬೆಳೆಯಬೇಕೆಂದು ಸರ್ವಜ್ಞ ತಿಳಿಸಿದ್ದಾನೆ.

ಉತ್ತೊಮ್ಮೆ ಹರಗುವುದು ಬಿತ್ತೊಮ್ಮೆ ಹರಗುವುದು
ಮತ್ತೊಮ್ಮೆ ಹರಗಿ ಕಳೆದೆಗೆದು ಬೆಳೆದಡೆ
ಬತ್ತದ ಮೊತ್ತ ಸರ್ವಜ್ಞ[೩೬೮]

ಬತ್ತವನ್ನು ಹೇಗೆ ಬೇಸಾಯ ಮಾಡಬೇಕೆಂಬುದನ್ನು ಸರ್ವಜ್ಞ ತಿಳಿಸಿದ್ದಾನೆ. ಸರ್ವಜ್ಞ ಹೇಳಿದಂತೆ ಉಳುಮೆ ಮಾಡಿದರೆ ಭತ್ತದಿಂದ ಲಾಭ ಬರುತ್ತದೆ ಎಂಬುದು ತಿಳಿಯುತ್ತದೆ. ಬೆಳೆಯಿಲ್ಲದ ಭೂಮಿಯನ್ನು ಜನರು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಅದಕ್ಕೆ ಸರ್ವಜ್ಞ ಹೀಗೆ ಹೇಳಿರುವನು.

ಅರಸಿಲ್ಲದ ನಾಡು ವರುಷವಿಲ್ಲದ ಬೆಳೆಯು
ಹರುಷವಿಲ್ಲದಳ ಮನೆವಾರ್ತೆ ನೆಲದಲಿ
ಟ್ಟೊರಸಿದಂತಕ್ಕು ಸರ್ವಜ[೩೬೯]

ಕೃಷಿ ಸಮುದಾಯವು ಬೆಳೆಯಿಲ್ಲದ ಹೊಲವನ್ನು ಎಂದೂ ಊಹಿಸಿಕೊಳ್ಳುವುದಿಲ್ಲ. ಪ್ರತಿವರ್ಷವು ಏನೇ ತೊಂದರೆ ಬಂದರು ಅವರು ಬಿತ್ತನೆ ಕಾರ್ಯವನ್ನು ಬಿಡುವುದಿಲ್ಲ. ಕಾಳಿದಾಸ ರಘುವಂಶದಲ್ಲಿ ಯುದ್ಧಗಳು ಮಳೆಗಾಲದಲ್ಲಿ ನಡೆಯುತ್ತಿರಲಿಲ್ಲ. ಆಗ ಕೃಷಿಕಾರ್ಯ ಸಾಗುತ್ತಿತ್ತು. ಮಳೆಗಾಲ ಮುಗಿದಾಗ ರಾಜರು ದಂಡಯಾತ್ರೆಗೆ ಹೋಗುತ್ತಿದ್ದರು ಎಂದು ತಿಳಿಸಿದ್ದಾನೆ.[೩೭೦] ಉಳುಮೆ ಮಾಡುವ ಕೃಷಿಕರಿಗೆ ಮತ್ತು ಬೆಳೆಗಳಿಗೆ ಯಾವುದೇ ಹಾನಿಯುಂಟಾಗ ಬಾರದೆಂಬ ಕಾರಣದಿಂದ ಮಳೆಗಾಲದ ಸಮಯದಲ್ಲಿ ಯುದ್ಧ ಮಾಡುತ್ತಿರಲಿಲ್ಲವೆಂಬುದು ತಿಳಿದುಬರುತ್ತದೆ. ಕೌಟಿಲ್ಯನು ಸಹ ತನ್ನ ಅರ್ಥಶಾಸ್ತ್ರದಲ್ಲಿ “ಕೃಷಿಕಾರ್ಯದಲ್ಲಿ ಯಾವುದೇ ಅಡಚಣೆಯಾಗದಂತೆ ಕೃಷಿಕರನ್ನು ರಕ್ಷಿಸಬೇಕೆಂದು ತಿಳಿಸಿರುವನು.”[೩೭೧] ನೊಗವನ್ನು ಎತ್ತುಗಳಿಗೆ ಹೊಂದಿಸಿ ನೇಗಿಲನ್ನು ಹೂಡು ಈಗ ಭೂಮಿಯ ಗರ್ಭವು ಬೀಜಗಳ ಬಿತ್ತನೆಗೆ ಪಕ್ವವಾಗಿದೆ ಎಂದು ಋಗ್ವೇದವು ತಿಳಿಸುತ್ತದೆ.[೩೭೨] ಕಾಲುವೆಗಳಿಂದ ಭೂ ಸವಕಳಿಯಾಗುತ್ತಿತ್ತು. ಇದರಿಂದ ಭೂಸವಕಳಿ ಉಂಟಾಗುತ್ತಿತ್ತು ಎಂದು ಋಗ್ವೇದವು ತಿಳಿಸಿದೆ. ಭೂಮಿಯಲ್ಲಿ ನೀರಾವರಿ ಬೇಸಾಯ ಮಾಡುವಾಗ ಬಾವಿಗಳಿಂದ ನೀರನ್ನು ಬಳಸುತ್ತಿದ್ದರು. ನೀರನ್ನು ಎಳೆದು ಹಾಕಲು ಸಾಧನವನ್ನು ಋಗ್ವೇದ ಕಾಲದ ಜನರು ಬಳಸುತ್ತಿದ್ದರು.[೩೭೩] ಕಪಿಲೆಯಂತಹ ನೀರೆತ್ತುವ ಯಂತ್ರಗಳನ್ನು ಅವರು ಬಳಸಿ ನೀರಾವರಿ ಬೇಸಾಯ ನಡೆಸಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೧೮೬ರ ಶಾಸನದಲ್ಲಿ ಕಾಡು ಕಡಿದು ಮಾಡಿದರಾಗಿ ಧ್ರುವವುಂಡಿಗೆ ಕೆಱೆಯಂ ಕಟ್ಟಿದವರ್ಗ್ಗೆ ಹನ್ನೆರಡುವರಿಷ ಮಾನ್ಯವಲ್ಲಿಂ ಮೇಲೆ ಹತ್ತು ಸಲಗೆ ಗದ್ದೆ ಮಾನ್ಯವಂ ಬಿಟ್ಟರೆಂದಿದೆ.[೩೭೪] ಈ ಶಾಸನದಲ್ಲಿ ಕಾಡು ಕಡಿದು ಕೆರೆಯನ್ನು ಕಟ್ಟಿಸಿ ನೀರಾವರಿ ಭೂಮಿಯಲ್ಲಿ ಬೇಸಾಯ ಮಾಡಿರುವಂತೆ ತಿಳಿದುಬರುತ್ತದೆ. ಕ್ರಿ.ಶ. ೧೧೯೫ರ ಶಾಸನದಲ್ಲಿ ಬೀಜ ಬಿತ್ತುವ ಗದ್ದೆಯ ಉಲ್ಲೇಖವಿದೆ.[೩೭೫] ಈ ಶಾಸನವನ್ನು ಗಮನಿಸಿದರೆ ಗದ್ದೆ ಭೂಮಿಯಲ್ಲಿ ಭತ್ತ, ಕಬ್ಬು, ಅಡಕೆ, ಎಲೆ, ತೆಂಗು ಮೊದಲಾದ ಬೆಳೆಗಳಲ್ಲದೆ ಆಹಾರದ ಬೆಳೆಗಳಾದ ಬಿತ್ತುವ ಬೀಜದ ಬೆಳೆಗಳನ್ನು ಸಹ ಬೆಳೆದಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೧೯೬ರ ಶಾಸನದಲ್ಲಿ ಭತ್ತದ ಭೂಮಿ ಮುನೂಱು ದಾನ ನೀಡಿದಂತೆ ತಿಳಿಸುತ್ತದೆ.[೩೭೬] ಶಾಸನಗಳು ಎಲ್ಲಿಯೂ ಯಾವ ಬೆಳೆಯನ್ನು ಯಾವ ಭೂಮಿಯಲ್ಲಿ

ಬೆಳೆದಿದೆ ಎಂದು ತಿಳಿಸುವುದಿಲ್ಲ. ಆದರೆ ಬೆಳೆಯ ಉಲ್ಲೇಖ, ತೆರಿಗೆಯ ಭೂಮಿಯ ಉಲ್ಲೇಖ, ಗದ್ದೆ, ಬೆದ್ದಲು ಭೂಮಿಯ ಉಲ್ಲೇಖಗಳ ಆಧಾರದ ಮೇಲೆ ಇಂತಹ ಬೆಳೆ ಬೆಳೆದಿರಲು ಸಾಧ್ಯವಿದೆ ಎಂದು ಹೇಳಲಾಗಿದೆ. ಈ ಶಾಸನದಲ್ಲಿ ಭತ್ತದ ಭೂಮಿ ಎಂದಿರುವುದರಿಂದ ಇದು ನೀರಾವರಿಗೆ ಸಂಬಂಧಿಸಿದ ಗದ್ದೆಯಲ್ಲಿ ಬೆಳೆದಿರುವ ಸಾಧ್ಯತೆಗಳಿವೆ. ಸಾಗರದ ಶಾಸನವೊಂದರಲ್ಲಿ ಗೋನರಸನು ತರ್ದವಾಡಿ ನಾಡಿಗೆ ಸೇರಿದ ಮೊರಿಟ್ಟಿಯಲ್ಲಿ ಒಂದು ಕೆರೆಯನ್ನು ಕಟ್ಟಿಸಿ, ಬಾವಿಯನ್ನು ತೊಡಿಸಿ, ದೇವಸ್ಥಾನವನ್ನು ಕಟ್ಟಿಸಿ, ತೋಟವನ್ನು ಮಾಡಿಸಿ ಬ್ರಾಹ್ಮಣರಿಗೆ ನೀಡಿದನು. ಸಾಂತಳಿಗೆ ನಾಡು ಅದು ಫಲವತ್ತಾದ ಭೂಮಿಯಿಂದ ಹೇರಳವಾಗಿ ಬೆಳೆದ ಬೆಳೆ, ಹುಲ್ಲು, ನೀರು, ಸೌದೆ ಇವುಗಳಿಂದ ಸಮೃದ್ಧವಾಗಿತ್ತು. ಅಲ್ಲಿ ಹಸಿದುಕೊಂಡು ಇರುವವರೇ ಇರಲಿಲ್ಲ. ಆ ನಾಡಿನಲ್ಲಿ ಹೀಗೆ ವಿದ್ಯಾವಂತ ಬ್ರಾಹ್ಮಣರು ನೆಲೆಸುವಂತೆ ಪ್ರೇರೇಪಿಸುವಷ್ಟು ಯಥೇಚ್ಚವಾಗಿದ್ದವು.[೩೭೭] ಈ ಶಾಸನದಲ್ಲಿ ತಿಳಿಸುವಂತೆ ನೀರಾವರಿಯಿದ್ದ ನಾಡು, ಊರು ಸಮೃದ್ಧವಾಗಿರುತ್ತದೆ ಎಂದು ತಿಳಿಸುತ್ತದೆ. ಪ್ರಾಚೀನ ಕಾಲದ ಭೂಮಿ ಫಲವತ್ತತೆಯ ಆಗರವಾಗಿತ್ತು. ಈ ಭೂಮಿಗಳು ಸಮೃದ್ಧವಾಗಿ ಬೆಳೆ ಬೆಳೆಯುತ್ತಿದ್ದವು. ಅವರು ಸಾವಯವ, ಸಾಂಪ್ರದಾಯಿಕ ಕೃಷಿ ವಿಧಾನವನ್ನು ಅನುಸರಿಸಿದ್ದರು. ಕರ್ನಾಟಕದಲ್ಲಿ ಇಂದು ೧೬.೩ ಲಕ್ಷ ಹೆಕ್ಟೆರ್ ಪ್ರದೇಶದಲ್ಲಿ ಶೇ.೧೫.೫%. ಅಂದರೆ ೯೫.೮೧ ಲಕ್ಷ ಟನ್ ಮೌಲ್ಯದ ಆದಾಯವು ನೀರಾವರಿ ಬೆಳೆಗಳಾದ ತೋಟಗಾರಿಕೆ ಬೆಳೆಗಳಿಂದ ಬರುತ್ತಿದೆ. ಪ್ರಾಚೀನ ಸಂದರ್ಭದಿಂದಲೂ ನೀರಾವರಿ ಕೃಷಿಯನ್ನು ಗಮನಿಸಿದರೆ ತೋಟಗಾರಿಕೆ ಬೆಳೆಗಳು ಲಾಭದಾಯಕವಾಗಿದ್ದವು. ಅದರಲ್ಲೂ ವೀಳ್ಯೆದಲೆಗೆ ಎಲ್ಲ ಬೆಳೆಗಳಿಗಿಂತ ಅಧಿಕ ತೆರಿಗೆ ಹಾಕಿರುವುದು ಕಂಡುಬರುತ್ತದೆ. ಅನಂತರ ಅಡಕೆ, ತೆಂಗು, ಕಂಗು, ಹಣ್ಣುಗಳು, ಭತ್ತ, ಸಾಂಬಾರ ಪದಾರ್ಥಗಳಿಂದ ಅನಾದಿ ಕಾಲದಿಂದಲೂ ಅಧಿಕ ಆದಾಯ ಬರುತ್ತಿತ್ತೆಂಬುದು ಕಂಡುಬಂದಿದೆ. ಇಂದಿನ ಬದಲಾದ ಆಧುನೀಕರಣದ ಹೊತ್ತಿನಲ್ಲಿಯೂ ನೀರಾವರಿ ಉತ್ಪನ್ನಗಳಾದ ವಾಣಿಜ್ಯ ಬೆಳೆಗಳಿಂದ ಅಧಿಕ ಆದಾಯ ಬರುತ್ತಿರುವುದು ಗಮನಾರ್ಹ. ಆದಾಯದ ಹಿಂದೆಯೇ ಇಂದು ಅಪಾಯಗಳು ಅಂಟಿಕೊಂಡೇ ಬರುತ್ತಿರುವುದು ಸಹ ಅಷ್ಟೇ ವಾಸ್ತವ ಸಂಗತಿಯಾಗಿದೆ. ಆಹಾರ ಬೆಳೆಗಳಿಗಿಂತ ಜನರು ವಾಣಿಜ್ಯ ಬೆಳೆಗಳ ಕಡೆಗೆ ಆಕರ್ಷಿತರಾಗುತ್ತಿದ್ದಾರೆ. ಇದಕ್ಕೆ ಪ್ರಮುಖ ಕಾರಣ ಹಣಕಾಸು. ಇದರಿಂದಾಗಿ ಅವರು ಮೌಲ್ಯವರ್ಧಿತ ಬೆಳೆಗಳ ಕಡೆಗೆ ಆಕರ್ಷಿತರಾಗುತ್ತಿದ್ದಾರೆ. ಭೂಮಿಯನ್ನು ಹೆಚ್ಚು ಹೆಚ್ಚು ನೀರಾವರಿಗೆ ಒಳಪಡಿಸುವ ಉದ್ದೇಶದಿಂದ ಅಂತರ್ಜಲವನ್ನು ಬರಿದು ಮಾಡುತ್ತಿದ್ದಾರೆ. ಇರುವ ಕಾಡುಗಳನ್ನು ನೆಲಸಮ ಮಾಡುತ್ತಿದ್ದಾರೆ. ಇಂದು ಅಡಕೆ ಮೊದಲಾದಂತಹ ವಾಣಿಜ್ಯ ಬೆಳೆಗಳು ಯಾಕೆ ಬೇಕು. ಈ ಬೆಳೆಗಳಿಂದ ರೈತನಿಗೆ ಆದಾಯವಾಗುತ್ತಿದೆ ಸರಿ. ಯಾರ ಹೊಟ್ಟೆಯನ್ನು ತುಂಬಿಸುತ್ತಿವೆ. ಯಾರಿಗೆ ಉಪಯೋಗ, ಹರ್ಷದ ಕೂಳಿಗೆ ವರ್ಷದ ಕೂಳು ಕಳೆದುಕೊಳ್ಳಬೇಕೆ ಎಂಬ ಪ್ರಶ್ನೆ ನಮ್ಮೆದುರು ನಿಂತಿದೆ. ಇದರಿಂದಾಗಿ ಪ್ರಕೃತಿ, ಮಾನವ ಸಮುದಾಯ, ಅನ್ನ ನೀಡುವ ಭೂಮಿ ಅಳಿವಿನಂಚಿನಲ್ಲಿವೆ. ಇವುಗಳನ್ನು ಉಳಿಸಿಕೊಳ್ಳುವ ತುರ್ತುಸ್ಥಿತಿ ಇಂದು ಬಂದೊದಗಿದೆ.

**೨.೪. ನೀರಾವರಿ ಮತ್ತು ಕೆರೆ, ಬಾವಿ, ಏತಬಾವಿ**

ಬೇಟೆ ಮತ್ತು ಪಶುಪಾಲನ ಸಂಸ್ಕೃತಿಯೊಂದಿಗೆ ಹುಟ್ಟಿಕೊಂಡದ್ದು ಕೃಷಿ ಸಂಸ್ಕೃತಿಯಾಗಿದೆ. ಈ ಕೃಷಿ ಸಂಸ್ಕೃತಿಯಿಂದಾಗಿ ಮಾನವನು ಒಂದೆಡೆ ನೆಲೆ ನಿಂತು ನಾಗರಿಕನಾದನು. ಕೃಷಿಯ ಬಗೆಗಿನ ಜ್ಞಾನ ಕೃಷಿಕರಿಗೆ ಪರಂಪರಾನುಗತವಾಗಿ ಬಂದದ್ದು, ಪಂಚಭೂತಗಳನ್ನು ಕೃಷಿಗೆ ಬಳಸಿಕೊಂಡು ಜೀವನ ಸಾಗಿಸಿಕೊಂಡು ಬಂದವರಿವರು. ಅಲೆಮಾರಿಯಾಗಿದ್ದ ಆದಿಮಾನವನು ತನ್ನ ಆಹಾರಕ್ಕಾಗಿ ಬೇಟೆಯಾಡುವುದರೊಂದಿಗೆ ಹೊಳೆ, ಹಳ್ಳ(ತೊರೆ) ನದಿ ಮೊದಲಾದ ನೀರಿನ ಆಕರಗಳಲ್ಲಿ ಮೀನು ಹಿಡಿದು ತಿಂದಿರುವ ಸಾಧ್ಯತೆಗಳಿವೆ. ಹಾಗೆಯೇ ಅವನ ಚಟುವಟಿಕೆಗಳ ಕೇಂದ್ರವೂ ಸಹ ನೀರಿನ

ಆಕರಗಳೇ ಆಗಿದ್ದವು. ಹೀಗೆ ಸಾಗಿ ಬಂದ ಮಾನವನು ಕ್ರಿ.ಪೂ. ೭೦೦೦ದ ವೇಳೆಗೆ ತನ್ನ ಅಲೆಮಾರಿ ಜೀವನದಿಂದ ಹೊರಬಂದು ಒಂದೆಡೆ ನೆಲೆನಿಂತನು. "ಈ ಕಾಲಘಟ್ಟವನ್ನು ಪ್ರಾಕ್ತನಕಾರರು 'ಶಿಲಾಯುಗ ಕ್ರಾಂತಿ' ಎಂದು ಕರೆಯುತ್ತಾರೆ.[೩೭೮] ಮಾನವನು ಈ ಅವಧಿಯಿಂದ ನಿರಂತರವಾಗಿ ಪ್ರಕೃತಿಯೊಂದಿಗೆ ಒಡನಾಟವನ್ನು ಇಟ್ಟುಕೊಂಡು ಕೃಷಿ ಬದುಕನ್ನು ಸಾಗಿಸುತ್ತ ಬಂದನು. ಕೃಷಿಯಿಂದಾಗಿ ಬದುಕು ಒಂದೆಡೆಯೇನೋ ನೆಲೆಯೂರಿತು. ಆದರೆ ಕೃಷಿ ಜೀವನದಲ್ಲಿಯು ಸಮಸ್ಯೆಗಳು ಎದುರಾಗಿರುವ ಸಾಧ್ಯತೆಗಳಿವೆ. ಇಂದಿನಂತೆ ಅಂದೂ ಸಹ ಮಳೆ ಕೃಷಿಯೊಂದಿಗೆ ಹಾವು ಏಣಿ ಆಟವಾಡಿರುವ ಸಾಧ್ಯತೆಗಳು ಹೆಚ್ಚಿವೆ. ಈ ಸಮಸ್ಯೆಗಳಿಂದಾಗಿ ಇದಕ್ಕೆ ಪರಿಹಾರವನ್ನು ಕಂಡುಕೊಳ್ಳಲು ಮಾನವನು ಹವಣಿಸಿದನು. ಈ ಹವಣಿಕೆಯ ಹಂಬಲದ ಫಲಶೃತಿಯೇ ನೀರಾವರಿ ವ್ಯವಸ್ಥೆಯಾಗಿದೆ. ಮಾನವನು ಮಳೆಗಾಲದಲ್ಲಿ ಮಳೆ ನೀರಿನಿಂದ ವ್ಯವಸಾಯ ಚಟುವಟಿಕೆ ನಡೆಸಿದನು. ಈ ಅವಧಿಯಲ್ಲಿ ಮಳೆಬಾರದ ಕೆಲವು ಸಂದರ್ಭಗಳು ಎದುರಾಗಿರುವ ಸಾಧ್ಯತೆಗಳಿವೆ. ಇದಕ್ಕೆ ಪರಿಹಾರವಾಗಿ ಮಳೆಬಂದಾಗ ತಗ್ಗು ದಿಣ್ಣೆಗಳಲ್ಲಿ ನೀರು ನಿಂತಿರುತ್ತಿದ್ದವು. ಇವುಗಳನ್ನು ಬೆಳೆಗೆ ಮೊದಲು ಬಳಸಿರುವ ಸಾಧ್ಯತೆಗಳಿವೆ. ಅನಂತರ ಮಳೆಗಾಲದಲ್ಲಿ ಕೃಷಿ ಆರಂಭಿಸಿದ ಮಾನವ ಉಳಿದ ಆರು ತಿಂಗಳು ನಿರುದ್ಯೋಗಿಯಾದನು. ಈ ಬೇಸರದಿಂದಾಗಿಯೂ ನೀರಾವರಿಯ ಆಕರಗಳನ್ನು ಕಂಡುಹಿಡಿದುಕೊಂಡಿರುವ ಸಾಧ್ಯತೆಗಳಿವೆ. ಹೀಗೆ ಕೆರೆ, ಕುಂಟೆ, ಕಟ್ಟೆ, ಹೊಂಡ ಮೊದಲಾದವುಗಳನ್ನು ನಿರ್ಮಿಸಿಕೊಂಡನು. ತನಗೂ ಮತ್ತು ತಾನು ಸಾಕಿದ ಪಶುಗಳಿಗೂ ನೀರಿನ ಸೌಲಭ್ಯ ಕಲ್ಪಿಸಿಕೊಂಡು ಒಂದು ಸ್ಥಿರ ಜೀವನಕ್ಕೆ ಅಡಿಗಲ್ಲು ಹಾಕಿದನು. ಅಲ್ಲದೆ ಕೆರೆಗಳ ನಿರ್ವಹಣೆ, ಸಂರಕ್ಷಣೆ ನೀರು ನಿರ್ವಹಣೆಗಳು ಪ್ರಾಚೀನ ಗ್ರಾಮ ಸಮುದಾಯದ ಸೃಜನಶೀಲತೆಗೆ ಸಾಕ್ಷಿಭೂತವಾಗಿವೆ. ಕರ್ನಾಟಕದಾದ್ಯಂತ ಭೌಗೋಳಿಕ ಪರಿಸರದಲ್ಲಿ ಇಲ್ಲಿನ ನೆಲ, ಜಲ, ಸಂಪತ್ತು ವೈವಿಧ್ಯಮಯವಾಗಿದ್ದು, ಕೆಲವು ಪ್ರದೇಶಗಳಲ್ಲಿ ಹೆಚ್ಚು ಮಳೆಯಾದರೆ ಮತ್ತೆ ಕೆಲವು ಪ್ರದೇಶಗಳು ಅರೆಮಳೆ ಬೀಳುವ ಪ್ರದೇಶಗಳು. ಮತ್ತೆ ಕೆಲವು ಪ್ರದೇಶಗಳು ಅತಿ ಕಡಿಮೆ ಮಳೆ ಬೀಳುವ ಪ್ರದೇಶಗಳು. ಬಿದ್ದ ಮಳೆ ವ್ಯವಸಾಯಕ್ಕೆ ಯೋಗ್ಯವಾಗದೆ ಕೆಲವೊಮ್ಮೆ ಅತಿವೃಷ್ಟಿಯನ್ನು ಮತ್ತೊಮ್ಮೆ ಅನಾವೃಷ್ಟಿಯನ್ನು ತಂದಿಡುತ್ತದೆ. ವ್ಯವಸಾಯಕ್ಕೆ ಅನುಕೂಲವಾಗಲೆಂಬ ಉದ್ದೇಶದಿಂದ ಪ್ರಾಚೀನರು ಕೆರೆ ನಿರ್ಮಾಣದ ಕಾರ್ಯದಲ್ಲಿ ತೊಡಗಿದ್ದರು. ಜೊತೆಗೆ ಹೆಚ್ಚುತ್ತಿರುವ ಜನಸಂಖ್ಯೆ ತೀವ್ರವಾದಂತೆ ಕೃಷಿ ಅಭಿವೃದ್ಧಿ ಹೊಂದುವ ಅನಿವಾರ್ಯ ಸ್ಥಿತಿ ಬಂದೊದಗಿತು. ಜೊತೆಗೆ ಮಾನವನ ಬುದ್ಧಿಶಕ್ತಿ, ವಿಚಾರಶಕ್ತಿ ಹೆಚ್ಚಿದಂತೆ ಸೃಜನಶೀಲ ಚಟುವಟಿಕೆಯಲ್ಲಿ ಮುಂದಾದನು. ಇದರ ಫಲವಾಗಿ ನಿರ್ಮಾಣವಾದ ಆಕರಗಳಲ್ಲಿ ಕೆರೆಗಳು ಸಹ ಬಹುಮುಖ್ಯವಾದವುಗಳಾಗಿವೆ.

ಮಾನವನ ಜೀವನ ನಿರ್ವಹಣೆಯಲ್ಲಿ ನೀರಿನ ಆಕರಗಳು ಮಹತ್ವಪೂರ್ಣವುಳ್ಳವುಗಳು. ಪ್ರಾಚೀನ ಕಾಲದ ಮಾನವ ಪ್ರಕೃತಿಯಲ್ಲಿ ಸಂಭವಿಸುವ ವೈಪರೀತ್ಯಗಳನ್ನು ಗಮನಿಸಿ ಪರ್ಯಾಯ ಯೋಜನೆಯೊಂದನ್ನು ರೂಪಿಸಿಕೊಂಡನು. ತನ್ನ ಅಗತ್ಯತೆಗಳನ್ನು ಪೂರೈಸಿಕೊಳ್ಳಲು ಕೃಷಿಯೂ ಸೇರಿದಂತೆ ತನ್ನ ಇತ್ಯಾದಿ ದಿನನಿತ್ಯದ ಅಗತ್ಯಗಳಿಗಾಗಿ ನೀರನ್ನು ಸಂಗ್ರಹಿಸುವ ಅನಿವಾರ್ಯ ಸ್ಥಿತಿ ಬಂದೊದಗಿತು. ಈ ಹಿನ್ನೆಲೆಯಲ್ಲಿ ಕೆರೆ, ಕಟ್ಟೆ, ಬಾವಿ, ಅಣೆಕಟ್ಟುಗಳ ನಿರ್ಮಾಣ ಆರಂಭವಾಯಿತು.

ಇತಿಹಾಸ ಪೂರ್ವದಲ್ಲಿ ಕೆರೆಗಳನ್ನು ಮೊದಲಿಗೆ ನಿರ್ಮಾಣ ಮಾಡಿದವರು ತಾಮ್ರ ಮತ್ತು ಬೃಹತ್ ಶಿಲಾಯುಗದ ಜನರು. ಪೂನಾದ ಹತ್ತಿರ ಇರುವ ಇನಾಂಗಾಂವ್‌ನಲ್ಲಿ ತಾಮ್ರಯುಗದ ಜನರು ಕಟ್ಟಿದ ಕೆರೆ ಪತ್ತೆಯಾಗಿದೆ. ಇದರ ಕಾಲ ಕ್ರಿ.ಪೂ. ೧೫೦೦ ಆಗಿದ್ದು, ಬೆಟ್ಟದ ಇಳಿಜಾರಿನಲ್ಲಿ ಜಲ ಸಂಗ್ರಹಣ ಕಾರ್ಯ ನಡೆದಿತ್ತು ಎನ್ನಲಾಗಿದೆ.[೩೭೯] ಹೀಗೆ ಇತಿಹಾಸ ಪೂರ್ವದಲ್ಲಿಯೇ ಕೆರೆ ನಿರ್ಮಾಣಗಳ ಕಾರ್ಯ ನಡೆದಿರುವುದು ಕಂಡುಬರುತ್ತದೆ. ಬ್ರಿಟಿಷ್ ವಿಶ್ವಕೋಶದಲ್ಲಿ The earliest

form was probably the earthen embamked reservair or tank as it is called in India ಎಂದು ತಿಳಿಸಿದೆ.[೩೮೦] ಹೀಗೆ ಆಹಾರ ಉತ್ಪಾದನೆಗಾಗಿ ಆದ ಬಹುದೊಡ್ಡ ಆವಿಷ್ಕಾರ ಮತ್ತು ಕ್ರಾಂತಿ ನೀರಾವರಿಯಾಗಿ ಕಂಡುಬರುತ್ತದೆ. ಬೆಟ್ಟದ ಇಳಿಜಾರು ಪ್ರದೇಶಗಳಿಂದ ಬರುವ ನೀರು ಹೊರಗೆ ಹೋಗದಂತೆ ಚಿಕ್ಕದಾಗಿ ಕಟ್ಟೆಗಳನ್ನು ಕಟ್ಟುತ್ತಿದ್ದರು. ಈ ಮೂಲಕ ಮೊದಲು ನೀರಾವರಿಯ ಆಕರಗಳು ಪ್ರಾರಂಭವಾಗಿರುವ ಸಾಧ್ಯತೆಗಳಿವೆ. ಈ ನಿಟ್ಟಿನಲ್ಲಿ ಇಂದು ಸಂಶೋಧನೆಗಳು ನಡೆಯುತ್ತಲೇ ಇರುವುದು ಕಂಡುಬರುತ್ತದೆ. "ಕೆಲವು ಪ್ರಾಕ್ತನಾನ್ವೇಷಣೆಯಿಂದ ದೊರಕಿರುವ ಮಾಹಿತಿಯಿಂದ ಈಜಿಪ್ಟ್ ದೇಶದಲ್ಲಿ ದೊರೆತಿರುವ ರೇಖಾ ಚಿತ್ರಗಳಲ್ಲಿ ಮಾನವನು ನೀರು ಸಂಗ್ರಹಿಸಿ ಬಳಸಿರುವ ಚಿತ್ರವಿದೆ. ಇದರಿಂದಾಗಿ ಆ ದೇಶದಲ್ಲಿಯೇ ಮೊಟ್ಟ ಮೊದಲಿಗೆ ಕೆರೆ-ನೀರಾವರಿ ಪದ್ಧತಿಯನ್ನು ಬಳಕೆಗೆ ತಂದರೆಂದು ಪುರಾತತ್ವಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.[೩೮೧] ದೊರೆತಿರುವ ಕೆಲವು ಕುರುಹುಗಳನ್ನಾಧರಿಸಿ ಭಾರತದಲ್ಲಿ ಆರು ಸಾವಿರ ವರ್ಷಗಳ ಹಿಂದೆಯೇ ಕೃಷಿಜೀವನ ಪ್ರಾರಂಭವಾಯಿತು. ಸಿಂಧೂಸಂಸ್ಕೃತಿಯ ಜನರು ನೀರಾವರಿ ವ್ಯವಸ್ಥೆಗಳನ್ನು ಮಾಡಿಕೊಂಡಿದ್ದರು. ಸಿಂಧೂಕೊಳ್ಳದ ಸಂಸ್ಕೃತಿಯ ಅನೇಕ ನೆಲೆಯಲ್ಲಿ ಇಂತಹ ನೀರಾವರಿಯ ಕುರುಹುಗಳು ಸಿಕ್ಕಿವೆ.[೩೮೨] ಈ ಸಿಂಧೂನದಿಯ ಪುರಾವೆಗಳು 'ರಾಜಸ್ಥಾನದ ಗಂಗಾನಗರ್ ಜಿಲ್ಲೆಯ ಕಾಲಿಬಂಗನ್ ಎಂಬ ಸಿಂಧೂನದಿ ಕೊಳ್ಳ ಸಂಸ್ಕೃತಿಯ ನೆಲೆಯಲ್ಲಿ ನಡೆಸಿದ ಉತ್ಖನನದಲ್ಲಿ ಉತ್ತಿರುವ ಜಮೀನು ದೊರೆತಿದೆ. ಗುಜರಾತಿನ ಧೋಲವೀರಾ ಎಂಬ ಗ್ರಾಮದಲ್ಲಿ ಕೈಗೊಂಡ ಉತ್ಖನನದಿಂದ ಈ ಗ್ರಾಮದಲ್ಲಿ ಅತ್ಯಂತ ಸಮರ್ಪಕವಾದ ನೀರು ಸರಬರಾಜು ಪದ್ಧತಿ ಇತ್ತೆಂದು ತಿಳಿದುಬಂದಿದೆ.

ಈ ಸಂಸ್ಕೃತಿಯು ಸುಮಾರು ನಾಲ್ಕು ಸಾವಿರ ವರ್ಷಗಳಷ್ಟು ಪ್ರಾಚೀನವಾದುದು[೩೮೩] ಎನ್ನಲಾಗಿದೆ. ಬಹುತೇಕ ದಕ್ಷಿಣ ಭಾರತದಲ್ಲಿಯೇ ಹೆಚ್ಚಾಗಿ ಕೆರೆಗಳ ನಿರ್ಮಾಣಗಳು ಕಂಡುಬರುತ್ತವೆ. ಇದಕ್ಕೆ ಪ್ರಮುಖ ಕಾರಣ ಉತ್ತರ ಭಾರತದಲ್ಲಿ ನೀರನ್ನು ಸಂಗ್ರಹಿಸಿಡುವ ಅಗತ್ಯವಿಲ್ಲ. ಅಲ್ಲಿ ಪ್ರಕೃತಿಯೇ ಆ ಕಾರ್ಯವನ್ನು ನಿರ್ವಹಿಸುತ್ತದೆ. ಉತ್ತರ ಭಾರತದಲ್ಲಿ ನದಿಗಳು ಬೇಸಿಗೆಯಲ್ಲಿ ಹಿಮದಿಂದ ತುಂಬಿ ಹರಿಯುತ್ತವೆ. ಮಳೆಗಾಲದಲ್ಲಿ ಮಳೆ ನೀರಿನಿಂದ ತುಂಬಿ ಹರಿಯುತ್ತವೆ. ಈ ಕಾರಣದಿಂದಾಗಿ ಉತ್ತರ ಭಾರತದ ನದಿಗಳು ಜೀವಂತ ನದಿಗಳಾಗಿವೆ. ಆದರೆ ದಕ್ಷಿಣ ಭಾರತದ ನದಿಗಳು ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುತ್ತವೆ. ಬೇಸಿಗೆಯಲ್ಲಿ ಬತ್ತಿ ಹೋಗುತ್ತವೆ. ಈ ಕಾರಣದಿಂದಾಗಿ ದಕ್ಷಿಣ ಭಾರತದಲ್ಲಿ ನೀರು ಸಂಗ್ರಹಣೆಯಂತಹ ಕಾರ್ಯಗಳು ಇಂದಿನವರೆಗೂ ಹೋರಾಟದ ಹಾದಿಯಲ್ಲೇ ಸಾಗುತ್ತಿವೆ. ತಮಿಳುನಾಡಿನಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಕ್ರಿ.ಪೂ. ೮೦೦ ರಿಂದ ಕ್ರಿ.ಶ. ೨೦೦ ಶತಮಾನದ ಅವಧಿಯಲ್ಲಿ ಸ್ವಾಭಾವಿಕವಾಗಿ ಇಳಿಜಾರು ಪ್ರದೇಶಗಳಲ್ಲಿ ಮಳೆ ನೀರು ಸಂಗ್ರಹಿಸಿರುವುದು ಕಂಡುಬರುತ್ತದೆ. ಈ ಮೂಲಕ ದಕ್ಷಿಣ ಭಾರತದಲ್ಲಿ ಮೊದಲು ನೀರಾವರಿ ಕೃಷಿ ಪದ್ಧತಿಯನ್ನು ಪ್ರಾರಂಭಿಸಿದರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೩೮೪] ಆದಿ ಇತಿಹಾಸ ಕಾಲದ ಕೆಲವು ನೆಲೆಗಳು ಉತ್ತರ ಭಾರತದಲ್ಲಿಯೂ ಕಂಡುಬಂದಿವೆ. ಶೃಂಗವೇರ್‌ಪುರ, ಬಿಸನಗರ, ಕುಮ್ರಹಾರ(ಇಂದಿನ ಪಾಟ್ನಾ) ಉಜ್ಜಯಿನಿ, ಮಥುರಾ ಮೊದಲಾದೆಡೆ ನೀರನ್ನು ಸಂಗ್ರಹಿಸಿಟ್ಟುಕೊಳ್ಳಲು ಅನೇಕ ಬಗೆಯ ನಿರ್ಮಾಣಗಳನ್ನು ಮಾಡಿ ಬೇಸಾಯಕ್ಕೆ ನೀರನ್ನು ಬಳಸಿಕೊಳ್ಳುತ್ತಿದ್ದರೆಂದು ಅಲ್ಲಿನ ಉತ್ಖನನದಿಂದ ತಿಳಿದುಬಂದಿದೆ.[೩೮೫] ದಕ್ಷಿಣ ಭಾರತದಲ್ಲಿ ಇಂದಿನ ಆಂಧ್ರಪ್ರದೇಶದ 'ನಾಗಾರ್ಜುನ ಕೊಂಡ'ದಲ್ಲಿ ನಡೆದ ಉತ್ಖನನದಿಂದ ಆದಿ ಇತಿಹಾಸದ ಜನರು ನೀರಾವರಿ ಸೌಲಭ್ಯವನ್ನು ಹೊಂದಿದ್ದರು ಎಂಬುದಕ್ಕೆ ಸಾಕ್ಷಿಯಾಗಿದೆ.[೩೮೬]

ಇತಿಹಾಸಪೂರ್ವ ಕಾಲದ ಅಥರ್ವಣವೇದದಲ್ಲಿ ಅನಾವೃಷ್ಟಿ ಮತ್ತು ಅತಿವೃಷ್ಟಿಯಿಂದ ತಪ್ಪಿಸಿಕೊಳ್ಳಲು ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಂಡಿದ್ದರು.[೩೮೭] ಇದಲ್ಲದೆ ಕೌಶಿಕಸೂತ್ರ,

ವೃಕ್ಷಾಯುರ್ವೇದ, ಬಹುದಾಯನ ಧರ್ಮಸೂತ್ರ, ಧಮ್ಮಪದ, ಮನುಸ್ಮೃತಿ, ಮಹಾಭಾರತದ ಅನುಶಾನಿಕಪರ್ವ, ವಿಷ್ಣುಧರ್ಮೋತ್ತರ ಪುರಾಣ, ದೇವಿಪುರಾಣ, ಪದ್ಮಪುರಾಣ, ಬುದ್ಧಜಾತಕ, ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರನೀತಿಸಾರ, ಅಮರಕೋಶ, ಅಮುಕ್ತಮಾಲ್ಯದ, ಮಯಮತ ಮೊದಲಾದ ಕೃತಿಗಳಲ್ಲಿ ಸಹಜ ಹಾಗೂ ಕೃತಕ ನೀರು ಬಳಕೆ ಹಾಗೂ ನಿರ್ವಹಣೆಗಳ ಕುರಿತ ವಿವರಗಳಿವೆ.[೩೮೮] ಈ ರೀತಿಯ ಕೃತಕ ನೀರಾವರಿಯ ಮೂಲಗಳು ಇದಕ್ಕೂ ಪೂರ್ವದಲ್ಲೇ ವ್ಯವಸ್ಥಿತವಾಗಿ ರಚನೆಗೊಂಡಿರುವುದು ಇದರಿಂದ ತಿಳಿದುಬರುತ್ತದೆ. ಋಗ್ವೇದದಲ್ಲಿ ಬಾವಿಗಳ ನೀರನ್ನು ಎತ್ತುಗಳ ಸಹಾಯದಿಂದ ಎಳೆಸಿ ನೀರಾವರಿ ಬೇಸಾಯ ಮಾಡುತ್ತಿದ್ದರು.[೩೮೯] ಏತ ಹಾಗೂ ಕಪಿಲೆಗಳನ್ನು ಈ ಕಾಲದಲ್ಲಿ ಬಳಸಿರುವುದು ಕಂಡುಬರುತ್ತದೆ. ಇದನ್ನು ಗಮನಿಸಿದರೆ ವ್ಯವಸ್ಥಿತ ನೀರಾವರಿ ಪದ್ಧತಿ ಈ ಅವಧಿಯ ಹಿಂದಿನಿಂದಲೇ ಇತ್ತೆಂಬುದು ತಿಳಿಯುತ್ತದೆ. 'ಅಮರಕೋಶದಲ್ಲಿ ದೇವಮಾತ್ರಕ ಮತ್ತು ನದೀಮಾತೃಕಗಳ ಕುರಿತು ಉಲ್ಲೇಖಿಸಿದೆ.[೩೯೦] ದೇವಮಾತೃಕವು ಮಳೆಯಾಶ್ರಿತ ಸಾಗುವಳಿ ವಿಧಾನ. ನದೀಮಾತೃಕವು ನದಿಯ ನೀರಿನಿಂದ ಸಾಗುವಳಿ ಮಾಡುವ ವಿಧಾನವಾಗಿದೆ.

ಅರ್ಥಶಾಸ್ತ್ರಕಾರನು ಕೆರೆ ನೀರಿಗೆ ಸಂಬಂಧಿಸಿದ ಕಟ್ಟುನಿಟ್ಟಿನ ಕ್ರಮಗಳ ಕುರಿತು ಹೀಗೆ ಹೇಳಿರುವನು. ಕೆರೆ ನೀರಿನ ರಕ್ಷಣೆಗಾಗಿ ತಮ್ಮ ಭೂಮಿಗೆ ಕೆರೆಯ ನೀರೂಡಿಸುವ ತೂಬಿನ ಬಾಗಿಲ ವಿನಾ ಬೇರೆ ತೂಬಿನ ಬಾಗಿಲಿಗೆ ಕೈ ಹಚ್ಚಿದವರಿಗೆ ಆರು ಹಣ ದಂಡ ವಿಧಿಸಬೇಕು. ಇದೇ ರೀತಿ ತೂಬುಗಳ ಬಾಗಿಲಿನಿಂದ ಹರಿಯುವ ನೀರಿಗೆ ತಡೆ ಒಡ್ಡಿದವರಿಗೂ ಅದೇ ದಂಡ ಎಂದು ತಿಳಿಸಿದ್ದಾನೆ.[೩೯೧] ಈ ಮಾತುಗಳನ್ನು ಗಮನಿಸಿದರೆ ಅರ್ಥಶಾಸ್ತ್ರಕಾರನ ಕಾಲಕ್ಕೆ ನೀರಾವರಿ ಸಾಕಷ್ಟು ಅಭಿವೃದ್ಧಿ ಸಾಧಿಸಿತ್ತೆಂದು ತಿಳಿಯುತ್ತದೆ.

ಇಳಿಜಾರು ಪ್ರದೇಶಗಳಲ್ಲಿ ಅಥವಾ ತಗ್ಗು ಪ್ರದೇಶಗಳಲ್ಲಿ ನೀರನ್ನು ಹರಿಯ ಬಿಡದಂತೆ ಸುತ್ತಲೂ ಕಟ್ಟೆ ಕಟ್ಟಿ ನೀರು ಸಂಗ್ರಹಿಸುವ ವಿಧಾನಗಳೇ ಕೆರೆಗಳಾಗಿ ಕಂಡುಬರುತ್ತವೆ. ಭಾರತದಲ್ಲಿ ಮೌರ್ಯರ ಕಾಲದಿಂದ ಅದರಲ್ಲೂ ಅಶೋಕನ ಕಾಲದಿಂದ ಇತಿಹಾಸಯುಗ ಅಧಿಕೃತವಾಗಿ ಆರಂಭವಾಗುತ್ತದೆ. ಇದಕ್ಕೆ ಪ್ರಮುಖ ಕಾರಣ ಅಶೋಕನ ಕಾಲದಿಂದ ಬರವಣಿಗೆ ಲಿಖಿತ ರೂಪವನ್ನು ಪಡೆದದ್ದು. ಚಂದ್ರವಳ್ಳಿ, ಬನವಾಸಿ, ಆದವಾನಿ, ತಾಳಗುಂದ ಶಾಸನಗಳು ಪ್ರಾಚೀನ ಕೆರೆಗಳ ಬಗೆಗೆ ಮಾಹಿತಿ ಒದಗಿಸುತ್ತವೆ. ಕ್ರಿ.ಶ. ೧೦೦೦ದ ಪರಾಶರನ ಕೃಷಿ ಸೂಕ್ತಿ, ಇದರ ಕಾಲ ೧೦೦೦ ಎಂದು ಹೇಳುತ್ತಾರೆ.[೩೯೨] ಕನ್ನಡದ ಲೋಕೋಪಕಾರ ಕ್ರಿ.ಶ. ೧೦೨೫, ಕ್ರಿ.ಶ. ೧೩೦೦ರ ರಟ್ಟಮತಗಳು ಜಲಾಶಯದ ಬಗೆಗೆ ದಾಖಲಿಸುತ್ತವೆ.

ಕ್ರಿ.ಪೂ. ೩೦೦ರ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯು ಅಣೆಕಟ್ಟು ಜಲಾಶಯದ ಬಗೆಗೆ ವಿವರಣೆ ಕಂಡುಬರುತ್ತದೆ.[೩೯೩] ಮಳೆಯ ಮಾಪಕದ ಬಗೆಗೆ ಕೌಟಿಲ್ಯ ತಿಳಿದಿದ್ದನೆನ್ನಲಾಗಿದೆ. "ನಿರ್ದಿಷ್ಟ ಅಳತೆಯ ವಿಶೇಷ ಕುಂಡವನ್ನು ನಿರ್ಮಿಸಬೇಕು, ಅದರ ನಡುವೆ ಆಕಾಶದತ್ತ ಬಾಯಿ ಉಳ್ಳಂತೆ ಒಂದು ಮೊಳ ಅಳತೆಯ ರಂಧ್ರ ಇರಬೇಕು. ಇದೇ ಮಳೆ ನೀರಿನ ಮಾಪಕ ಅಥವಾ ವರ್ಷಮಾನ"[೩೯೪] ಎಂದು ಕೌಟಿಲ್ಯ ಬರೆಯುತ್ತಾನೆ. ಇಡೀ ಸಮಾಜದ ಅಭ್ಯುದಯಕ್ಕೆ ಮೂಲಭೂತ ಪ್ರಾಮುಖ್ಯತೆ ಉಳ್ಳದ್ದು ಕೆರೆಯ ನಿರ್ಮಾಣ ಎನ್ನುವುದು ಕ್ರಿ.ಶ. ೧೧೦೦ರ ಮಿತಾಕ್ಷರಕಾರನಾದ ವಿಜ್ಞಾನೇಶ್ವರನಿಂದ ತಿಳಿದು ಬರುತ್ತದೆ.[೩೯೫] "ಒಂದು ಹೊಳೆಗೆ ಅಡ್ಡಲಾಗಿ ಅಣೆಕಟ್ಟು ನಿರ್ಮಿಸುವುದರಿಂದ ಒಬ್ಬನ ಭೂಮಿ ನಾಶವಾದರೂ ಸರಿಯೇ ಅದು ಉಂಟುಮಾಡುವ ನಾಶ ಅಲ್ಪವಾಗಿದ್ದು, ಅನೇಕರಿಗೆ ಲಾಭದಾಯಕವಾಗುವಂತಿದ್ದರೆ ಆ ಭೂಮಿಯ ಒಡೆಯ ನಿಲ್ಲಿಸಕೂಡದು ಎಂದು ಅರ್ಥಶಾಸ್ತ್ರಕಾರನು ತಿಳಿಸುತ್ತಾನೆ.[೩೯೬] ೨ನೇ ನಾಗವರ್ಮನ ಅಭಿದಾನ ವಸ್ತುಕೋಶ,

ಮಂಗರಾಜನ ೧೫ನೆಯ ಶತಮಾನದ ಪೂರ್ವಾರ್ಧ ಅಭಿನವಾಭಿದಾನಗಳು ಜಲಸಂಗ್ರಹಣೆಯ ಬಗೆಗೆ ಮಾಹಿತಿ ನೀಡುತ್ತವೆ.[೯೭] ಕೃಷ್ಣದೇವರಾಯ ಅಮುಕ್ತಮೌಲ್ಯದಲ್ಲಿ "ರಾಜ್ಯ ಕಿರಿದಾಗಿದ್ದಲ್ಲಿ ಅದರ ಧರ್ಮ ಹಾಗೂ ಅರ್ಥ ಎರಡೂ ಹೆಚ್ಚುವುದು ಕೆರೆಗಳನ್ನು, ನೀರಾವರಿ ಕಾಲುವೆಗಳನ್ನು ನಿರ್ಮಿಸಿದಾಗ ಮಾತ್ರ[೯೮] ಎಂದಿದ್ದಾನೆ.

ಕೆರೆಗಳ ಇತಿಹಾಸಕ್ಕೆ ಒಂದು ಮೂರ್ತ ರೂಪವನ್ನು ಶಾಸನಗಳು ತಂದುಕೊಡುತ್ತವೆ. ಅವುಗಳ ಹಿನ್ನೆಲೆಯಲ್ಲಿ ಕೆರೆಗಳ ಇತಿಹಾಸವನ್ನು ಗಮನಿಸಲಾಗಿದೆ. ಕೆರೆಯ ಇತಿಹಾಸವು 'ಸೌರಾಷ್ಟ್ರದ(ಗುಜರಾತಿನ) ಜುನಾಗಡದ ಸರೋವರದಿಂದ ತಿಳಿಯುತ್ತದೆ. ಇದು ಕ್ರಿ.ಶ. ೧೫೦ರದ್ದಾಗಿದೆ. ಇದು ಶಕ ರುದ್ರದಾಮನ ಶಾಸನದಿಂದ ತಿಳಿದುಬರುತ್ತದೆ. ಇದನ್ನು ಕಟ್ಟಿದವನು ಚಂದ್ರಗುಪ್ತಮೌರ್ಯನ ರಾಜ್ಯಪಾಲ ಪುಷ್ಯಗುಪ್ತ ಅಶೋಕನ ರಾಜ್ಯಪಾಲ ತುಷಾಷ್ಪ ಅದಕ್ಕೆ ಕಾಲುವೆಯನ್ನು ಕಟ್ಟಿಸಿದನು. ಮೌರ್ಯರ ನಂತರ ಸೌರಾಷ್ಟ್ರವನ್ನು ಆಳಿದವರು ಶಕರು. ಶಕವಂಶದ ರುದ್ರದಾಯನ್ ಕಾಲದಲ್ಲಿ ಬಿರುಗಾಳಿ ಬೀಸಿ ಆ ಕೆರೆಯ ಏರಿ ಒಡೆಯಿತು. ಸುದರ್ಶನ ಕೆರೆಯ ನೀರು ಎಲ್ಲವೂ ಒಡಕಿನಲ್ಲಿ ಹರಿದು ಹೋಗಿ ಅಂಗಳ ಬರಿದಾಯಿತು. ಸುದರ್ಶನ ದುರ್ದರ್ಶನವಾಯಿತು ಎಂದು ಶಾಸನ ಕವಿ ತಿಳಿಸಿದ್ದಾನೆ.[೯೯] ರುದ್ರದಾಮನು ಈ ಸರೋವರವನ್ನು ಮೊದಲಿಗಿಂತ ಮೂರುಪಟ್ಟು ಚೆನ್ನಾಗಿ ಬಲಪಡಿಸಿದನು. ಇದನ್ನು ತನ್ನ ಸ್ವಂತ ಹಣದಿಂದ ಮಾಡಿಸಿದನೆಂದು ತಿಳಿದುಬಂದಿದೆ. 'ಈ ಅಣೆಕಟ್ಟಿನ ಇತಿಹಾಸವು ಮೌರ್ಯರಿಂದ ಗುಪ್ತರಕಾಲದವರೆಗೆ ಅಂದರೆ ಕ್ರಿ.ಶ. ೪೫೦ರ ವರೆಗೆ ಹರಡಿಕೊಂಡಿರುವುದು ಕಂಡುಬರುತ್ತದೆ.[೧೦೦] ಗುಪ್ತರ ಕಾಲದಲ್ಲಿ ಈ ಕೆರೆ ಮತ್ತೊಮ್ಮೆ ಒಡೆದಿತು. ಆಗ ಸ್ಕಂದ ಗುಪ್ತನ ಮಾಂಡಲೀಕನಾದ ಚಪಲಿಕನು ಕ್ರಿ.ಶ.ಸು. ೪೫೬-೫೭ರ ವರೆಗೆ ಅಂದರೆ ಎರಡು ತಿಂಗಳವರೆಗೆ ದುರಸ್ತಿ ಮಾಡಿಸಿರುವುದು ಜುನಾಗಡದ ಮತ್ತೊಂದು ಶಾಸನದಿಂದ ತಿಳಿಯುತ್ತದೆ.[೧೦೧] ಈ ಹಿನ್ನೆಲೆಯಲ್ಲಿ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಶಾತವಾಹನರ ಕಾಲದ "ಪುಲುಮಾವಿಯ ಮೇಕೆದೋಣ ಶಾಸನವು(ಮ್ಯಾಕದೋಣಿ ಎಂದು ಸಹ ಕರೆಯುತ್ತಾರೆ) ಮೊಟ್ಟ ಮೊದಲ ಬಾರಿಗೆ ಕರ್ನಾಟಕದ ಕೆರೆಯ ಬಗೆಗೆ ಉಲ್ಲೇಖಿಸುತ್ತದೆ. ಅಂತೆಯೇ ತಾಳಗುಂದದಲ್ಲಿ ಲಭ್ಯವಿರುವ ಶಾಂತಿವರ್ಮನ ಶಾಸನವು ಕಾವೇರಿ ಮತ್ತು ಅದರ ಉಪನದಿಗಳಿಗೆ ಅಣೆಕಟ್ಟು ನಿರ್ಮಿಸಿದುದಾಗಿ ತಿಳಿಸುತ್ತದೆ.[೧೦೨] ಕ್ರಿ.ಶ.೨೫೪ರ ಚಂದ್ರವಳ್ಳಿ ಶಾಸನವು ತಿಳಿಸುವಂತೆ ಚಂದ್ರವಳ್ಳಿ ಕೆರೆಯು ಪ್ರಾಚೀನ ಕೆರೆಯಾಗಿ ಕಂಡುಬರುತ್ತದೆ. ಇದನ್ನು ಕದಂಬ ದೊರೆ ಮಯೂರವರ್ಮನು ಕಟ್ಟಿಸಿದನು. ಇದು ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ಕಂಡುಬಂದಿದೆ. ಶಾಸನದ ಪಾಠ ಹೀಗಿದೆ.

ಕಂದಂಬಾಣಂ ಮಯೂರ ಶಮ್ಮಣಾ ವಿಣಿಮ್ಮಿ ಅಂ
ತಟಾಕಂ ದೂಭ ತ್ರೇಕೂಟ ಅಭೀರ ಪಲ್ಲವಪಾರಿ
ಯಾತ್ರಿಕ ಸಕಸ್ಥಾಪಸಯಿನ್ದಕ ಪುಣಾಟ ಮೋಕರಿ(ಣಾ)[೧೦೩]

ಕದಂಬ ಮಯೂರ ಶರ್ಮನಿಂದ ತಟಾಕವು ನಿರ್ಮಿತವಾಯಿತು ಎಂದು ತಿಳಿಸಿದೆ. ಕ್ರಿ.ಶ.೫ನೆಯ ಶತಮಾನದಿಂದ ೧೦ನೆಯ ಶತಮಾನದವರೆಗೂ ಗಂಗ ಮನೆತನದವರು ಕರ್ನಾಟಕವನ್ನಾಳಿದರು. ಇವರು ಅರಸುಗಳಾಗಿ ಆಳ್ವಿಕೆ ನಡೆಸಿದುದಕ್ಕಿಂತ ಸಾಮಂತ ಅರಸುಗಳಾಗಿದುದೆ ಹೆಚ್ಚು. ಇವರ ಆಳ್ವಿಕೆ ಅವಧಿಯಲ್ಲಿ "ಕೆರೆ, ಮಡವು, ದೋಣೆ, ಗುಂಡು, ಜಲಸಯ ಎಂದು ಗಂಗರ ಕೆಲವು ಶಾಸನಗಳು ತಿಳಿಸಿವೆ. ಅಲ್ಲದೆ ಕೆರೆಯ ಆಕಾರವನ್ನು ಬಾಲಚಂದ್ರಾರ್ಕ ಕೊಳ, ಅರ್ಧಚಂದ್ರಕಾರ ಕೊಳವೆಂದು ಪರಿಚಯಿಸಿವೆ.[೧೦೪]

ಶಾತವಾಹನರ ಕಾಲದ ಬನವಾಸಿಯ ಶಾಸನವು ಚುಟುರಾಜ ವಿಷ್ಣುಕಡ ಚುಟುಕಲಾನಂದ ಶಾತಕರ್ಣಿಯದು. ಈ ಶಾಸನವು ಹೀಗೆ ತಿಳಿಸಿದೆ "ಮಹಾರಾಜನ ಕುಮಾರಿ(ಹೆಸರು ಗೊತ್ತಿಲ್ಲ) ಯುವರಾಜ ಶಿವಸ್ಕಂದ ನಾಗಶ್ರೀಯ ಪೂಜ್ಯಮಾತೆ ಒಂದು ನಾಗವನ್ನು ಕೆತ್ತಿಸಿದಳು. ಒಂದು ಕೆರೆ ಹಾಗೂ ವಿಹಾರವನ್ನು ಕಟ್ಟಿಸಿದಳು. ಅಮಾತ್ಯ ಸ್ಕಂದಪತಿ ಈ ಕಾಮಗಾರಿಯ ಮೇಲ್ವಿಚಾರಕನಾಗಿದ್ದ.[೪೦೫] ಕ್ರಿ.ಶ. ೪೩೦–೪೫೦ ಕಾತುತ್ಸ್ಥವರ್ಮನ ತಾಳಗುಂದ ಶಾಸನದಲ್ಲಿ ಕೆರೆ ನಿರ್ಮಿಸಿದ್ದರ ಉಲ್ಲೇಖವಿದೆ.[೪೦೬] ಕದಂಬ ದೊರೆ 'ರಾಜರವಿವರ್ಮನು ಕ್ರಿ.ಶ. ೪೮೫–೫೧೯ರ ಅವಧಿಲ್ಲಿ ಆಳ್ವಿಕೆ ನಡೆಸಿದನು. ಇವನು ಗುಡ್ನಾಪುರದ ಊರಿನ ಪ್ರವೇಶ ಭಾಗದಲ್ಲಿ ಒಂದು ದೊಡ್ಡ ಕೆರೆಯನ್ನು ನಿರ್ಮಿಸಿದನು.'[೪೦೭] ಈ ಕೆರೆಯು ಇಂದಿಗೂ ಆ ಭಾಗದ ದೊಡ್ಡಕೆರೆಯಾಗಿದೆ. ಹಾಗೆಯೇ ಈ ಕೆರೆ ಇಂದಿಗೂ ಬಳಕೆಯಲ್ಲಿದೆ. ಪ್ರಾಚೀನ ಕೆರೆಯೊಂದು ಬಳಕೆಯಲ್ಲಿರುವುದು ಆ ಕೆರೆ ನಿರ್ಮಾಣದ ಗುಣಮಟ್ಟವನ್ನು ತಿಳಿಸುತ್ತದೆ.

ಗಂಗದೊರೆ ಮಾಧವವರ್ಮನ '೬ನೆಯ ಶತಮಾನದ ಮೇಲುಕೋಟೆಯ ಶಾಸನದಲ್ಲಿ ಕೆಲವು ಕೆರೆಗಳ ಪ್ರಸ್ತಾಪವಿರುವುದು ಕಂಡುಬರುತ್ತದೆ. ಈ ಶಾಸನದಲ್ಲಿರುವ ಭೂದಾನದ ವಿವರಗಳು ಆಗ ಇದ್ದ ನೀರಾವರಿಯ ಬಗೆಗೆ ಸೂಕ್ಷ್ಮ ಮಾಹಿತಿಯನ್ನು ಒದಗಿಸುತ್ತವೆ. ಏಕಕಾಲದಲ್ಲಿ ಎರಡು ಕೆರೆಗಳಿಂದ ಕೆಲವು ಗದ್ದೆಗೆಗಳಿಗೆ ನೀರಾವರಿ ಮತ್ತು ವರ್ಷಕ್ಕೆ ಎರಡು ಬೆಳೆ ಕೊಡುವ ಆರು ಖಂಡುಗ ಭೂಮಿ ಹಾಗೂ ರಕ್ತ ತಟಾಕಕ್ಕೆ(ಕೆಂಪು ಕೆರೆ) ಹತ್ತಿರ ಇದ್ದ ಮಳೆಗಾಲದಲ್ಲಿ ಬೆಳೆ ಕೊಡುವ ಹತ್ತು ಖಂಡುಗಗಳು.'[೪೦೮] ಈ ಶಾಸನವು ನೀರಾವರಿಯ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ನೀರಾವರಿಯ ಆಕರಗಳನ್ನು ನಿರ್ಮಿಸುವ ಉದ್ದೇಶವನ್ನು ಈ ಶಾಸನವು ತಿಳಿಸಿರುವುದು ಕಂಡುಬರುತ್ತದೆ. ಒಂದನೇ ಪುಲಕೇಶಿಯ ಆಲ್ತೆಂ ಶಾಸನವು ನಾಲ್ಕೈದು ನೀರಾವರಿ ತಟಾಕದ ಬಗೆಗೆ ತಿಳಿಸಿದೆ.[೪೦೯] ಬದಾಮಿ ಚಾಲುಕ್ಯ ಕಾಲದ ಕ್ರಿ.ಶ. ೭೦೭ರ ಶಿಗ್ಗಾಂವಿ ಶಾಸನವು ವೆಣ್ಣೆ, ಕುಪೇರ, ಕೋಡಿ, ಪುಲಿವಾರ, ಮಕ್ಕರೆ, ಅರಸಾಳಕೆರೆ ಮೊದಲಾದ ಕೆರೆಗಳನ್ನು ಉಲ್ಲೇಖಿಸಿದೆ.[೪೧೦]

ಬದಾಮಿ ಚಾಲುಕ್ಯರು ಸುಮಾರು ಎರಡು ನೂರು ವರ್ಷಗಳ ಕಾಲ ಕರ್ನಾಟಕವನ್ನು ಆಳುತ್ತಾರೆ. ಆದರೆ ಇವರು ನೀರಾವರಿಗೆ ಅಷ್ಟಾಗಿ ಗಮನಹರಿಸುವುದು ಕಂಡುಬರುವುದಿಲ್ಲ. ಕೆರೆಗಳ ನಿರ್ಮಾಣ ಕಾರ್ಯಗಳು ನಡೆದವು. ಆದರೆ ಪ್ರಮಾಣದಲ್ಲಿ ವಿರಳವಾಗಿ ಕಂಡುಬರುತ್ತವೆ. ಇದಕ್ಕೆ ಕಾರಣವೇನು ಎಂಬುದನ್ನು ಗಮನಿಸಬೇಕು. ಇವರ ಅವಧಿಯಲ್ಲಿ ನೀರಾವರಿಗಿಂತ ಭೂ ವಿಸ್ತರಣೆ ಕಾರ್ಯ ಮತ್ತು ಭೂಮಿಯನ್ನು ಹೆಚ್ಚು ಹೆಚ್ಚು ಉಳುಮೆಗೆ ಒಳಪಡಿಸಿದರು. ಬ್ರಹ್ಮದೇಯ ದಾನಗಳನ್ನು ಹೇರಳವಾಗಿ ನೀಡಿದರು. ಇದರ ಹಿಂದಿನ ಉದ್ದೇಶ ಭೂಮಿಯನ್ನು ಸಾಗುವಳಿಗೆ ಒಳಪಡಿಸುವುದಾಗಿತ್ತು. ಇಲ್ಲಿಯವರೆಗೂ ಕೆರೆಗಳ ಇತಿಹಾಸ ಒಂದು ಭಾಗವಾಗಿ ಕಂಡುಬರುತ್ತದೆ. ಈ ಕಾಲಘಟ್ಟದಲ್ಲಿ ಕೃಷಿಯು ಬೆಳೆಗಳ ಕಡೆಗೆ ಹೆಚ್ಚಿನ ಮಹತ್ವ ನೀಡಿತ್ತು. ಒಂದನೆಯ ಪುಲಿಕೇಶಿಯ ಆಲ್ತೆಂ ಶಾಸನವು ಧನಧಾನ್ಯ ಪರಿಪೂರ್ಣ ಕೃಷಿವಲಯ ಪ್ರಾಯಾಯಂ[೪೧೧] ಎಂದು ಹೇಳಿರುವುದು ಕೃಷಿಗೆ ನೀಡಿದ ಮಹತ್ವವನ್ನು ತಿಳಿಸುತ್ತದೆ. ಕೆರೆಗಳ ಕುರಿತಂತೆ ಕೆಲವು ವಿದ್ವಾಂಸರು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಚೀನಿ ಯಾತ್ರಿಕನಾದ ಹೂಯೆತ್ಸಾಂಗ್ ಇವನು ಪುಲಕೇಶಿಯ ಕಾಲದಲ್ಲಿ ಭಾರತಕ್ಕೆ ಭೇಟಿ ನೀಡಿದ್ದನು. ಇವನು ರಾಜ್ಯದ ಭೂಮಿಯು ಫಲವತ್ತಾಗಿಯೂ ಸಂಪದ್ಭರಿತವಾಗಿಯೂ ಇದ್ದು, ತಪ್ಪದೇ ಆಳರಸರ ವ್ಯವಹಾರಕ್ಕೊಳಪಟ್ಟಿದೆ. ಇದು ಉತ್ತಮ ಬೆಳೆಯನ್ನು ಕೊಡುತ್ತದೆ. ಕೆರೆಕಟ್ಟೆಗಳನ್ನು ಕಟ್ಟಿಸಿ ಬೇಸಾಯಕ್ಕೆ ಉತ್ತೇಜನ ಕೊಡುತ್ತಿದ್ದರು. ಚಾಲುಕ್ಯ ಅರಸು ವಿಜಯಾದಿತ್ಯನು ತನ್ನ ರಾಜ್ಯದ

ಎಲ್ಲೆಡೆಗಳಲ್ಲಿ ಕೆರೆ ನಿರ್ಮಾಣ ಕಾರ್ಯ ಕೈಗೊಂಡನು. ಅವುಗಳಿಗೆ ವಣ್ಣೆ, ತಟಕ, ಕುಪೇರ, ಕೆಂಗಳ ತಟಾಕಗಳು. ಬೆಳಗಳಲ್ಲಿ ಜೋಳ, ಭತ್ತವಂತೂ ಸರಿಯೇ ಸಜ್ಜೆ, ರಾಗಿ ಮೊದಲಾದವುಗಳನ್ನು ಬೆಳೆಯುತ್ತಿದ್ದಿರಬೇಕು ಎಂದಿದ್ದಾನೆ.[೪೧೨] ಇವನ ಮಾತುಗಳು ದೊರೆಯುವ ಶಾಸನಗಳಿಂದಲೂ ತಿಳಿದುಬಂದಿದೆ. ಬೆಳೆಗಳ ಉಲ್ಲೇಖಗಳನ್ನು ಗಮನಿಸಿದರೆ ಪ್ರಾಚೀನ ಕಾಲವೆಂದು ಪರಿಗಣಿಸಿದರೂ ಕಾಲ ಯಾವುದಾದರೂ ಹವಮಾನ ವೈಪರೀತ್ಯಗಳು ಪ್ರಕೃತಿಯಲ್ಲಿ ನಿರಂತರವಾಗಿ ಜರುಗುತ್ತಲೇ ಬಂದಿರುವ ಸಾಧ್ಯತೆಗಳಿವೆ. ಪಾರಂಪರಿಕ ಜ್ಞಾನದ ಹಿನ್ನೆಲೆಯಲ್ಲಿ ಆ ಜನರು ಕಡಿಮೆ ಮಳೆ ಬೀಳುವ ಸಂದರ್ಭಕ್ಕೂ, ಅಂದು ಆಳ್ವಿಕೆ ನಡೆಸಿದ ರಾಜಧಾನಿಯ ಪ್ರದೇಶಗಳಲ್ಲಿ, ಮಳೆ ಬೀಳುವ ಪ್ರಮಾಣ ದಕ್ಷಿಣ ಕರ್ನಾಟಕದ ಮಲೆನಾಡಿಗೆ ಹೋಲಿಸಿದರೆ ಕಡಿಮೆ ಇದ್ದುದು ಕಂಡುಬರುತ್ತದೆ. ಜೊತೆಗೆ ಬದಾಮಿಯ ಈ ಭಾಗದ ಜನರು ಇಂದಿಗೂ ಸಜ್ಜೆರೊಟ್ಟಿಯನ್ನು ಬಳಸುತ್ತಾರೆ. ಈ ಭಾಗದ ಜನಪ್ರಿಯ ಆಹಾರವೂ ಆಗಿ ಕಂಡುಬರುತ್ತದೆ. ಸಜ್ಜೆರಾಗಿಯಂತಹ ಬೆಳೆಗಳನ್ನು ಬೆಳೆಯಲು ಅಧಿಕ ಮಳೆಯ ಅಗತ್ಯವಿರುವುದಿಲ್ಲ. ಕಡಿಮೆ ಮಳೆಯಿಂದಲೂ ಈ ಬೆಳೆಗಳು ಬೆಳೆದು ಫಲ ನೀಡುತ್ತವೆ. ಇಂದಿಗೂ ಸಾಂಸ್ಕೃತಿಕವಾಗಿ ಈ ಆಹಾರ ಪದ್ಧತಿಗಳಲ್ಲಿ ಅಂದು ಬೆಳೆಯುತ್ತಿದ್ದ, ಈಗಲೂ ಬೆಳೆಯುತ್ತಿರುವ ಧಾನ್ಯಗಳು ಕಂಡುಬರುತ್ತವೆ.

ಜೆ.ಎನ್.ಸಮದರ್ ಎಂಬ ವಿದೇಶಿ ವಿದ್ವಾಂಸರು "ಮಗದ ರಾಜ್ಯದ ಕಲ್ಲುಕುಟಿಗನ ಕೌಶಲ ಪರಾಕಾಷ್ಠತೆಯನ್ನು ಮುಟ್ಟಿದೆ. ಅವನು ಮಾಡಿದ ಮಾದರಿಗಳು ಇಪ್ಪತ್ತನೆಯ ಶತಮಾನದ ನೈಪುಣ್ಯವನ್ನು ಮೀರಿಸುತ್ತದೆ. ರಾಜ ಮನೆತನದ ವಾಸ್ತುಶಿಲ್ಪಗಳು, ಸೌಧ ತಜ್ಞರು, ವಿಶಾಲ ಭವ್ಯವಾದ ಭವನಗಳನ್ನು ಯೋಜಿಸಿ ನಿರ್ಮಿಸುವ ಸಾಮರ್ಥ್ಯ ಉಳ್ಳವರಾಗಿದ್ದರು. ಅನುಕೂಲವಾದ ತೂಬುಗಳುಳ್ಳ ಹಾಗೂ ಇನ್ನಿತರ ಅಸಾಧಾರಣ ವಾಸ್ತುಶಿಲ್ಪ ಪ್ರೌಢಿಮೆಯ ಸಾಧನೆಗಳಿಂದ ಬೃಹತ್ ಅಣೆಕಟ್ಟುಗಳನ್ನು ಕಟ್ಟುವವರಾಗಿದ್ದರು. ಮಾನವ ಕೈಗಳಿಂದ ಸಾಧ್ಯವಾಗದ ಭವನ, ಅಣೆಕಟ್ಟು ಅರಮನೆಗಳ ಈ ಕೆಲಸವನ್ನು ಅರೆಮಾನುಷ ವ್ಯಕ್ತಿಗಳು ಮಾತ್ರ ನಿರ್ಮಿಸಿರಬೇಕು.[೪೧೩] ಇವರ ಈ ಹೇಳಿಕೆಯು ಕೆರೆಗಳ ಇತಿಹಾಸವನ್ನು ಮೌರ್ಯರಿಗೂ ಪೂರ್ವಕ್ಕೆ ಒಯ್ಯುತ್ತದೆ. ಹಾಗೆಯೇ ತೂಬುಗಳ ನಿರ್ಮಾಣವು ಅಭಿವೃದ್ಧಿಯ ಅಥವಾ ಮುಂದುವರಿದ ಹಂತವನ್ನು ಸೂಚಿಸುತ್ತದೆ. ಈ ಕಾರಣಕ್ಕಾಗಿ ಕೆರೆಗಳ ನಿರ್ಮಾಣದಲ್ಲಿ ತೂಬಿನ ರಚನೆಯಾಗಲೀ ಕೆರೆಗಳ ನಿರ್ಮಾಣದ ಕಾರ್ಯವಾಗಲೀ ಮಗಧ ಅರಸರ ಆಳ್ವಿಕೆಯ ಕಾಲಕ್ಕಿಂತ ಹಿಂದಕ್ಕೆ ಹೋಗುತ್ತದೆ. ತೂಬಿನ ರಚನೆಯ ಮಾಹಿತಿಯು ಕೆರೆಯ ನೀರನ್ನು ಕೃಷಿಗಾಗಿ ಬಳಸಿದ ಸೂಚನೆಯನ್ನು ನೀಡುತ್ತದೆ. ಕೃಷಿಗಾಗಿ ನೀರನ್ನು ಸಂಗ್ರಹಿಸಬೇಕಾದ ಸಂದರ್ಭದಲ್ಲಿ ಹಂತ ಹಂತವಾಗಿ ಬೆಳೆಗಳಿಗೆ ನೀರು ಹಾಯಿಸುವ ಸಲುವಾಗಿ ತೂಬಿನಂತಹ ತಂತ್ರಜ್ಞಾನವನ್ನು ಕೆರೆಗೆ ಅಳವಡಿಸಿರುವ ಸಾಧ್ಯತೆಗಳಿವೆ. ತೂಬುಗಳ ರಚನೆಯು ಕೃತಕ ನೀರಾವರಿ ವ್ಯವಸಾಯದ ಆರಂಭವನ್ನು ಸೂಚಿಸುತ್ತದೆ. ಇದು ಕೃಷಿ ಚರಿತ್ರೆಯನ್ನು ಕಟ್ಟುವಲ್ಲಿ ಬರವಣಿಗೆಗೆ ಪೂರಕ ಮಾಹಿತಿಯನ್ನು ಒದಗಿಸುತ್ತದೆ.

ಒಂಬತ್ತು ಮತ್ತು ಹತ್ತನೆಯ ಶತಮಾನದಲ್ಲಿ ರಾಷ್ಟ್ರಕೂಟರ ಆಳ್ವಿಕೆಗೆ ಕರ್ನಾಟಕವು ಒಳಪಟ್ಟಿತ್ತು. ಒಂಬತ್ತನೆಯ ಶತಮಾನದ ಮಧ್ಯಭಾಗದಿಂದ ಹತ್ತನೆಯ ಶತಮಾನದ ಅವಧಿಯ ನಂತರದ ಅವಧಿಯಲ್ಲಿಯೂ ಕೆರೆಗಳ ನಿರ್ಮಾಣ ಕಾರ್ಯಗಳು ಬರದಿಂದ ಸಾಗಿದವು. ಶಾಸನಗಳಲ್ಲಿ ಬರುವ ಶಾಪಾಶಯಗಳು ಈ ಅಂಶಗಳಿಗೆ ಕೈಗನ್ನಡಿಗಳಾಗುತ್ತವೆ. ಕ್ರಿ.ಶ. ೬೮೫ರ ಶಾಸನದಲ್ಲಿ ಒಕ್ಕಲ್ತನಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯಾಗದೆ ಕೆಡುಗೆ ಇದಾನ್ ಕಾದು ಸಲ್ವೋನ್ ಪರಮ ಕಲ್ಯಾಣ ತೀರ್ಥಂಗಳ್ ಆಪ್ಪಾರ್ ನೆಲನುಂ ವೆಳೆಗೆ ಪಾರ್ವರುಂ ಪ್ರಜೆಯುಂ ತಣಿಗೆ"[೪೧೪] ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಒಕ್ಕಲುಳ್ ಪೊತಿರ್ಮ್ಮಕ್ಕಳ್ ಪುಟ್ಟದೆ ಕೆಡುಗೆ ಎಂದಿಗೆ[೪೧೫] ಈ ಶಾಸನಗಳು

ಇಂದಿನಂತೆ ಅಂದೂ ಸಹ ಕೃಷಿ ಕ್ಷೇತ್ರ ಅತಿವೃಷ್ಟಿ, ಅನಾವೃಷ್ಟಿಯ ಸಂಕಟಗಳಿಗೆ ಬಲಿಯಾಗಿ ಬರಗಾಲ ಎದುರಿಸಿರುವ ಸಾಧ್ಯತೆಗಳಿವೆ. ಇಂದಿನ 'ಕುಲಿಗಾಗಿ ಕಾಳು ಯೋಜನೆಯಂತೆ' ರಾಜ್ಯದ ಹಿತ, ರಾಜ್ಯದ ಜನರ ಹಿತರಕ್ಷಣೆಯ ಹೊಣೆ ಹೊತ್ತ ರಾಜನು ಬರಗಾಲದ ಸಮಯದಲ್ಲಿ ರಾಜ್ಯದ ಜನರಿಗೆ ಆಹಾರ ಪೂರೈಕೆ ಮಾಡುವ ಹೊಣೆಗಾರಿಕೆ ಅವನದಾಗಿತ್ತು. ಈ ಹಿನ್ನೆಲೆಯಲ್ಲಿ ಕೆರೆ ನಿರ್ಮಾಣದಂತಹ ಕಾರ್ಯದಲ್ಲಿ ತೊಡಗಿರುವ ಸಾಧ್ಯತೆಗಳಿವೆ. ಒಂದು ಕಡೆ ಕೆರೆಗಳ ನಿರ್ಮಾಣ, ಇದರೊಂದಿಗೆ ಪ್ರಜೆಗಳ ಹಸಿವಿಗೆ ಅಪಾರ ಪೂರೈಕೆಯ ನಿವಾರಣೆಯಾಗಿರುವ ಸಾಧ್ಯತೆಗಳಿವೆ. ಮಳೆಯಿಂದಾಗಿ ಸಂಭವಿಸುವ ಸಾಧ್ಯಾಸಾಧ್ಯತೆಗಳನ್ನು ಪರಿಶೀಲಿಸಿದ ರಾಜನು ಅದಕ್ಕೆ ಪರಿಹಾರೋಪಾಯವಾಗಿ ಕೆರೆ ನಿರ್ಮಾಣಗಳಂತಹದ ಕಾರ್ಯಗಳನ್ನು ಮಾಡಿದಂತಿದೆ.

ಪ್ರಾಚೀನ ಜನರು ದೇವಾಲಯಗಳನ್ನು ನಿರ್ಮಿಸುವುದು ಪುಣ್ಯ ಕಾರ್ಯವೆಂದು ತಿಳಿದಿದ್ದರು. ಅದರಂತೆ ಪ್ರಾಣಿ, ಪಕ್ಷಿ ಸಕಲ ಜೀವ ರಾಶಿಗಳಿಗೆ ಕುಡಿಯಲು ಉಪಯುಕ್ತವಾದ ಕೆರೆಗಳನ್ನು ಕಟ್ಟಿಸುವುದು ಪುಣ್ಯವೆಂದು ಭಾವಿಸಿ ಕೆರೆಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿದರು. ಅರಸನಿಂದ ಮೊದಲುಗೊಂಡು ವ್ಯಾಪಾರಿಗಳು, ಸ್ತ್ರೀ ಸಾಮಾನ್ಯರು, ಸ್ತ್ರೀಯರೂ ಸಹ ಕೆರೆ ನಿರ್ಮಾಣದ ಕಾರ್ಯದಲ್ಲಿ ತೊಡಗಿರುವುದು ಕಂಡುಬರುತ್ತದೆ. ಕೆರೆಗಳನ್ನು ನಿರ್ಮಿಸಿ ಕೆರೆಗಳಿಗೆ ಅವರ ಹೆಸರುಗಳನ್ನು ಇಟ್ಟುಕೊಳ್ಳುತ್ತಿದ್ದುದು ಶಾಸನಗಳಲ್ಲಿ ಕಂಡುಬರುತ್ತದೆ. ಮತ್ತೆ ಕೆಲವು ಕೆರೆಗಳನ್ನು ತಾಯಿ ಮೊದಲಾದವರ ಸ್ಮರಣಾರ್ಥವಾಗಿಯೂ ಕಟ್ಟಿರುವುದು ಕಂಡುಬರುತ್ತದೆ. ಕೆರೆಗಳನ್ನು ನಿರ್ಮಿಸುವುದರ ಜೊತೆಗೆ ಅದರ ದುರಸ್ತಿ ಕಾರ್ಯಗಳಿಗಾಗಿ ಭೂದಾನ ನೀಡಿದ ಉಲ್ಲೇಖಗಳಿವೆ. ಕೆಲವೊಮ್ಮೆ ಭೂಮಿ ಇರದವರು ಕ್ರಯಕ್ಕೆ ಕೊಂಡು ಭೂದಾನ ಮಾಡಿರುವುದಿದೆ. ಸಾಮಾನ್ಯವಾಗಿ ಕೆರೆಗಳ ನಿರ್ಮಾಣವು ಊರಿನ ತಗ್ಗು ಪ್ರದೇಶದಲ್ಲಿ ಇರುತ್ತಿತ್ತು. ಕಾರಣ ಕೆರೆಯ ನೀರು ಹೆಚ್ಚಾದಾಗ ಇದರ ಹಾವಳಿಯಿಂದ ಜನವಸತಿಗೆ ಯಾವುದೇ ತೊಂದರೆಯಾಗದಂತೆ ನಿರ್ಮಿಸಿರುವುದು ಕಂಡುಬರುತ್ತದೆ.

ಕೆರೆಯನ್ನು ನಿರ್ಮಿಸುವಾಗ ಕೆರೆಯ ಇಳಿಜಾರು ಪ್ರದೇಶದಲ್ಲಿ ಕೋಡಿಗಳ ನಿರ್ಮಾಣ ಮಾಡಲಾಗುತ್ತಿತ್ತು. ಹೆಚ್ಚಾದ ನೀರು ಜನವಸತಿಗೆ ತೊಂದರೆಯಾಗದಂತೆ ಕೋಡಿಗಳ ಮೂಲಕ ಹರಿದು ಹಳ್ಳಗಳಿಂದ ಮುಂದಿನ ಕೆರೆಗಳಿಗೆ ಹೋಗುವಂತೆ ವ್ಯವಸ್ಥೆ ಮಾಡಲಾಗುತ್ತಿತ್ತು. ಅಷ್ಟು ಸುರಕ್ಷಿತವಾಗಿ ಜಾಗರೂಕತೆಯಿಂದ ಪ್ರಾಚೀನ ಜನರು ಅಂದೇ ತಾಂತ್ರಿಕ ಆಲೋಚನೆಯಿಂದ, ಕೆರೆಗಳನ್ನು ನಿರ್ಮಿಸಿರುವುದು ಇಂದಿಗೂ ಕಂಡುಬರುತ್ತದೆ. ಕೆರೆಗಳ ಉಸ್ತುವಾರಿಯನ್ನು ನೋಡಿಕೊಳ್ಳುವವರು ಇರುತ್ತಿದ್ದರು. ಅವರಿಗೆ ನೀರುಗಂಟಿ ಎಂದು ಕರೆಯಲಾಗುತ್ತದೆ. ಕೆರೆಗಳಿಗೆ ಬಿಡುವ ತೆರಿಗೆಯನ್ನು 'ಬಿತ್ತುವಟ್ಟ'ವೆಂದು ಕರೆಯಲಾಗುತ್ತಿತ್ತು. ಹೀಗೆ ಕೆರೆ ಕುರಿತಾದ ಅಂಶಗಳ ಹಿನ್ನೆಲೆಯಲ್ಲಿ ಶಾಸನಗಳು ಕಂಡುಬರುತ್ತವೆ. ಅವುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ..

ಕ್ರಿ.ಶ. ೪೬೬ರ ಶಾಸನದಲ್ಲಿ ಕಾಗಣಿ ತಟಾಕದ ಉಲ್ಲೇಖವಿದೆ.[೪೧೯] ಕ್ರಿ.ಶ. ೭ನೆಯ ಶತಮಾನದ ಶಾಸನವು ತಟಾಕವನ್ನು ಉಲ್ಲೇಖಿಸಿದೆ.[೪೨೦] ಕ್ರಿ.ಶ. ೪೫೫–೪೭೦ರ ಶಾಸನದಲ್ಲಿ ಕಾವೇರಿ ಮತ್ತು ಕಪಿಲ ನದಿಗಳಿಂದ ಶೋಭಿಸಿದ ಪುಂರಾಷ್ಟ್ರದ ವರ್ಣನೆ ಕಂಡುಬರುತ್ತದೆ. ಕ್ರಿ.ಶ.೯–೧೦ನೆಯ ಶತಮಾನದ ಶಾಸನದಲ್ಲಿ ಕೆಱೆಯನ್ನು ಕಟ್ಟಿ ಬಿತುವಟ್ಟವನ್ನು ನೀಡಿದ ಉಲ್ಲೇಖವಿದೆ.[೪೨೧] ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಕೆಱೆ ನಿರ್ಮಿಸಿರುವ ಉಲ್ಲೇಖವಿದೆ.[೪೨೨] ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಒಕಲಸಾರಗೆ ಮಣ್ಣುಂ ಪಣ್ಣುಂಕ(ಳಾ)....ಕೆಱೆಗಟ್ಟಲ್ಸಲ್ವುದು ಊರೊಳಗೆ(ಒ)ಕ್ಕಮೆಗೊಳ ಭತ್ತಮಂ ಪನ್ನಿರ್ವ್ವರು ಕೊಟ್ಟರ್.[೪೨೩] ಅಂದರೆ ಕೆರೆಕಟ್ಟಿಸಿದವರಿಗೆ ಮಣ್ಣು ಸಲ್ಲುತ್ತದೆ ಎಂದಿದೆ. ಕ್ರಿ.ಶ. ೯–೧೦ನೆಯ ಶತಮಾನದ ಶಾಸನದಲ್ಲಿ ಪೆರ್ಗ್ಗಡೆ ತ್ರಿಭುವನಯ್ಯಂ

ಪೆರ್ಮ್ಮಾಡಿಯ ನೋಲಗಿಸಿ ಸಿವಯ್ಯನ ಕೆಱೆಯ ನಾಳುತಮಿಟ್ದೀಕೆ ಕೆಱೆಯ ಬಿತ್ತುವಾಟಂ ಬಿಟ್ಟರಿದನಾವಾನಾನುಮಟಿಪಿಕೊಣ್ಡಾತನೀ ಕೆಱೆಯುಮಂ ವಾರಣಾಸಿಯಮನಟಿದಂ[೪೨೪] ಎಂದಿದೆ. ಪೆರ್ಗಡೆ ತ್ರಿಭುವನಯ್ಯ ಎಂಬುವವನು ಪೆರ್ಮ್ಮಾಡಿಯನ್ನು ಒಲೈಯಿಸಿ ಸಿವಯ್ಯನ ಕೆರೆಗೆ ಬಿತ್ತುವಾಟಂ ಬಿಟ್ಟರೆಂದಿದೆ. ಇದನ್ನು ಕೆಡಿಸಿದವರಿಗೆ ಕೆರೆಯನ್ನು, ವಾರಣಾಸಿಯನ್ನು ಅಳಿದ ಪಾಪ ಬರುತ್ತದೆ ಎಂದು ತಿಳಿಸಿದೆ. ಕ್ರಿ.ಶ. ೯–೧೦ನೆಯ ಶತಮಾನದ ಶಾಸನದಲ್ಲಿ ದಾನವನ್ನು ಕೆಡಿಸಿದವರಿಗೆ 'ಕೆಱೆಯ ಆರಮೆಯುಯ' ಎಂದಿದೆ.[೪೨೫] ಕ್ರಿ.ಶ. ೯–೧೦ನೆಯ ಶತಮಾನದ ಹೊತ್ತಿಗೆ ಕೆರೆಗಳಿಗೆ ನೀಡಿದ ಪ್ರಾಮುಖ್ಯತೆ ಈ ಶಾಪಾಶಯದಿಂದ ತಿಳಿಯುತ್ತದೆ. ಕ್ರಿ.ಶ.೯–೧೦ನೆಯ ಶತಮಾನದ ಶಾಸನದಲ್ಲಿ ಕೆರೆಗೆ 'ಬಿತ್ತುವಟ್ಟ'ವನ್ನು ಬಿಟ್ಟಂತೆ ತಿಳಿಸುತ್ತದೆ.[೪೨೬] ಕ್ರಿ.ಶ. ೯೬೩ರ ಶಾಸನದಲ್ಲಿ ಏರಿಕೆಱೆ, ಕಾಲುವೆ, ತೋಱಗಳ ಉಲ್ಲೇಖವಿದೆ.[೪೨೭]

ಕ್ರಿ.ಶ. ೧೦ನೆಯ ಶತಮಾನದ ಶಾಸನ ಮತ್ತು ಕ್ರಿ.ಶ.೯೮೬–೮೭ರ ಶಾಸನಗಳು ಕೆಱೆಗೆ ಬಿತ್ತುವಟ್ಟವನ್ನು ಬಿಟ್ಟದ್ದನ್ನು ತಿಳಿಸುತ್ತವೆ.[೪೨೮] ಪುರಿಗಾಲಿಯ ಗಂಗರ ಶಾಸನವೊಂದರಲ್ಲಿ ಕೊಂಗಣಿ ಕೆಱೆ ಕಟ್ಟುವೋರ ಪನ್ನಿರ್ವರು ಎಂದಿದೆ.[೪೨೯] ಗಂಗದೊರೆ ಕೊಂಗಣಿವರ್ಮನ ಹೆಸರಿನಲ್ಲಿ ಕೆರೆ ನಿರ್ಮಿಸಿರುವುದು ಕಂಡುಬಂದಿದೆ. ಕ್ರಿ.ಶ. ೧೦೪೯ರ ಶಾಸನದಲ್ಲಿ ಮಾರಸಿಂಘನು ಗೌರ ತಟಾಕವೆಂಬ ಕೆರೆಕಟ್ಟಿ ಎರಡು ನಿವರ್ತನ ಭತ್ತದ ಗದ್ದೆ ದಾನ ನೀಡಿದನೆಂದು ತಿಳಿದುಬರುತ್ತದೆ.[೪೩೦] ಕ್ರಿ.ಶ.೧೦೪೧ರ ಶಾಸನದಲ್ಲಿ ಮಹಾಜನ ಮೊದಲಾದವರು ರಟ್ಟ ಸಮುದ್ರವೆಂಬ ಕೆರೆಯನ್ನು ತೋಡಿಸಿದರು.[೪೩೧] ದೇವಾಲಯಗಳಿಗೆ ಮತ್ತು ಬ್ರಾಹ್ಮಣರಿಗೆ(ಮಹಾಜನರಿಗೆ) ನೀಡಿದ ಭೂಮಿಯ ಮೇಲ್ವಿಚಾರಣೆ ಬ್ರಾಹ್ಮಣ, ಮಹಾಜನರಿಗೆ ಸೇರಿತ್ತು. ಇವರು ಭೂಮಿಯನ್ನು ಕೃಷಿಕರಿಗೆ ಗೇಣಿರೂಪದಲ್ಲಿ ಉಳುಮೆಗೆ ನೀಡಿ, ಇಂತಿಷ್ಟು ಹಣ ಅಥವಾ ಭೂಮಿಯ ಉತ್ಪನ್ನವಾದ ಧಾನ್ಯಗಳನ್ನು ಪಡೆಯುತ್ತಿದ್ದರು. ಕೆಲವೊಮ್ಮೆ ಬೆದ್ದಲು ಭೂಮಿಯಿಂದ ಸಾಕಷ್ಟು ಅಂದರೆ ನಿರೀಕ್ಷಿಸಿದಷ್ಟು ಆದಾಯ ಬರದಿದ್ದಾಗ, ಭೂಮಿಯನ್ನು ನೀರಾವರಿಗೆ ಒಳಪಡಿಸುವ ಉದ್ದೇಶಗಳಿಂದ ಮಹಾಜನರೂ ಸಹ ಕೆರೆ ನಿರ್ಮಾಣಗಳಂತಹ ಕಾರ್ಯಗಳಲ್ಲಿ ತೊಡಗಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೦೫೩ರ ಶಾಸನದಲ್ಲಿ ಸುಪ್ಪರಸನು ಕೆರೆಗೆ ೨೦ ಮತ್ತರು ಭೂಮಿಯನ್ನು ದಾನ ನೀಡಿದನೆಂದಿದೆ.[೪೩೨] ದಾನ ನೀಡಿದ ಭೂಮಿಯಿಂದ ಬರುವ ಉತ್ಪನ್ನದಿಂದ ಕೆರೆ ನಿರ್ವಹಣೆಗಳಂತಹ ಕಾರ್ಯಗಳು ಜರುಗಲೆಂದು ಕೆರೆಗಳಿಗೆ ಭೂದಾನ ನೀಡಿರುವುದು ಕಂಡುಬರುತ್ತದೆ. ಕ್ರಿ.ಶ. ೧೦೮೭ರ ಶಾಸನದಲ್ಲಿ ಬ್ರಹ್ಮಪುರಿಗೇರಿಯ ೪೨ ಜನ ಬ್ರಾಹ್ಮಣರಿಗೆ ಮಾರಿಕಬ್ಬೆಯ ಕೆರೆಯ ಕೆಳಗೆ ಗದ್ದೆ ದಾನ ನೀಡಿದಂತೆ ತಿಳಿಸುತ್ತದೆ.[೪೩೩] ಕ್ರಿ.ಶ. ೧೦೪೪ ಮತ್ತು ೧೦೬೮ರ ಶಾಸನದಲ್ಲಿ ಭಾವನ ಗಂಧವಾರಣ ದೊಡ್ಡಕೆರೆಯನ್ನು ಕಟ್ಟಿಸಿ ಮತ್ತು ಜಲಾಶಯನ ದೇವರ ತೀರ್ಥಕೊಳವನ್ನು ಮಾಡಿಸಿದನೆಂದು ಶಾಸನವು ತಿಳಿಸುತ್ತದೆ.[೪೩೪] ನೀರಾವರಿಗೆಂದೇ ಪ್ರತ್ಯೇಕ ಕೆರೆ ನಿರ್ಮಿಸಿರುವುದು ತಿಳಿದುಬರುತ್ತದೆ. ಅಲ್ಲದೆ ದೇವರ ತೀರ್ಥಕ್ಕಾಗಿ ಪ್ರತ್ಯೇಕ ಕೊಳ್ಳ ನಿರ್ಮಿಸಿರುವುದು ಈ ಶಾಸನದಲ್ಲಿ ಕಂಡುಬಂದಿದೆ. ಕ್ರಿ.ಶ. ೧೦೬೨ರ ಶಾಸನದಲ್ಲಿ ದಂಡನಾಯಕ ದೇವಪಾಲನು ೩ ಕೆರೆಗಳ ನಿರ್ಮಾಣಕ್ಕಾಗಿ ೧೪ ಮತ್ತರು ಭೂಮಿಯನ್ನು ದಾನ ನೀಡಿದನೆಂದು ತಿಳಿಸುತ್ತದೆ.[೪೩೫] ಕೆರೆಕಟ್ಟುವ ಸಂಗತಿಯು ಸಾಮಾನ್ಯ ವಿಚಾರವಲ್ಲ ಅದನ್ನು ಕಟ್ಟಿಸಲು ಸಾಕಷ್ಟು ಆರ್ಥಿಕ ನೆರವಿನ ಅಗತ್ಯವಿರುತ್ತದೆ. ಈ ಕಾರಣಕ್ಕಾಗಿ ಅದರಲ್ಲೂ ಮೂರು ಕೆರೆಗಳ ನಿರ್ಮಾಣಕ್ಕೆ ೧೪ ಮತ್ತರು ಭೂಮಿಯನ್ನು ದಾನವಾಗಿ ನೀಡಿರುವುದು ಕಂಡುಬರುತ್ತದೆ.

ಕ್ರಿ.ಶ. ೧೧೩೯ರ ಶಾಸನದಲ್ಲಿ ಕನ್ನೆಗೆಱೆ ಎರಡು ಕಟ್ಟಿಸಿ ತಮ್ಮಯ್ಯನ ಪೆಸರಲು ಮಾಚಸಮುದ್ರವೆಂದು ತಮ್ಮವ್ವೆಯ ಪೆಸರಲು ಮಾಕ ಸಮುದ್ರಮೆನ್ದು ಪೆಸರನಿಟ್ಟು ಕೇಸವಾದಿರು ಮಾಡಿಸಿದರು.[೪೩೬] ಈ ಶಾಸನದಲ್ಲಿ ಕೇಸವಾದಿ ಎಂಬುವವನು ಹೊಸದಾಗಿ ಎರಡು ಕೆರೆಗಳನ್ನು ಕಟ್ಟಿಸಿದನು. ಇದಕ್ಕೆ ತನ್ನ ತಂದೆ ತಾಯಿಗಳ ಹೆಸರನ್ನಿಟ್ಟನೆಂದು ಈ ಶಾಸನವು ತಿಳಿಸುತ್ತದೆ. ಸಾಮಾನ್ಯವಾಗಿ ಶಾಸನಗಳು ತಿಳಿಸುವಂತೆ ಕೆಱೆಗಳನ್ನು ಕಟ್ಟಿಸಿದವರು ತಮ್ಮ ಹೆಸರು ಅಥವಾ ತಮಗೆ ಪ್ರೀತ್ಯಾರ್ಥರಾದ ಹೆಸರು, ರಾಜನ ಹೆಸರು, ಊರಿನ ಹೆಸರುಗಳನ್ನಿಟ್ಟಿರುವುದು ಕಂಡುಬರುತ್ತದೆ.

ಬೆಳ್ಳೂರು ಗ್ರಾಮದ ಕ್ರಿ.ಶ. ೧೨೬೮ರ ಶಾಸನದಲ್ಲಿ ಪೆರುಮಾಳೆ ದೇವದಣ್ನಾಯ್ಕರು ಹಿರಿದಹ ಅರ್ತ್ಥವನಿಕ್ಕಿ ಧ್ರುವಜಲವಹಂತಾಗಿ ಕಟ್ಟಿಸಿದರಾಗಿ ಇ ಕೆಱೆಗಳ ಕಟ್ಟೆಕಾಲುವೆಯ ಪಂಥದಲಿಯಿದ್ದಯೆಮ್ಮ ಬೆದ್ದಲುಗಳಂ ಬಿಟ್ಟು ಅದಕ್ಕೆ ಪ್ರತಿಕ್ಷೇತ್ರವನು ಬಿಟ್ಟವಾಗಿ ಯೀ ಬಿದ್ದಲ ಬಿಟ್ಟು ಕೊಂಡೆವು ಇಂತೀ ಗದ್ದೆಯ ಕೆಳಗೆ ಪೂರ್ವದಲ್ಲಿವುಳ್ಳ ಅಚ್ಚುಕಟ್ಟು ಮುಖ್ಯವಾದ ಶಾಸನ ಮರ್ಯಾದೆಯಲುಳ್ಳ ಬೆದ್ದಲೆಗೆವೂ ಮಾಧವದೇವ ಗದ್ದೆಗೆವೂ ನೀರು ಸಂದಿಗೆ ಬಿತ್ತುವಟ್ಟವಾಗಿ ವರ್ಷನಿಬಂಧಿಯಾಗಿ ಖಂಡುಗಕ್ಕೆ ನಾಕ ಹಣವಿನ ಮರ್ಯ್ಯಾದೆಯ ತೆಱುತ್ತ ಬಹೆವು.[೪೩೭]

ಶಾಸನವು ಕಱೆಕಟ್ಟೆ ಕಾಲುವೆ ನಿರ್ಮಾಣ ಮಾಡಿದ ಕುರಿತು ತಿಳಿಸುತ್ತದೆ. ಹಾಗೆಯೇ ಬಿತ್ತುವಟ್ಟವಾಗಿ ಕಱೆಗೆ ಅಚ್ಚುಕಟ್ಟು ಪ್ರದೇಶ ಅಥವಾ ಭೂಮಿಯನ್ನು ಬಿಟ್ಟದ್ದನ್ನು ತಿಳಿಸುತ್ತದೆ. ಕರೆಯ ಅಥವಾ ನೀರು ಸಂಗ್ರಹವಾದ ವಿರುದ್ಧ ದಿಕ್ಕಿನ ಪ್ರದೇಶಕ್ಕೆ ಆಯಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶವೆಂದು ಹೆಸರು.[೪೩೮] ಈ ಪ್ರದೇಶವನ್ನು ಕೆಱೆಯ ನಿರ್ವಹಣೆಗೆ ಬಿಟ್ಟದ್ದನ್ನು ಶಾಸನವು ತಿಳಿಸಿದೆ. ಬಿತ್ತುವಟ್ಟದ ಭೂಮಿಯನ್ನು ದಾನ ನೀಡುವ ಉದ್ದೇಶವನ್ನು ಕ್ರಿ.ಶ. ೧೧೪೮ರ ಶಾಸನವೊಂದು ತಿಳಿಸಿದೆ.[೪೩೯] ಆಗಾಗ್ಗೆ ಕೆರೆಯಲ್ಲಿ ಸೇರಿಕೊಳ್ಳುತ್ತಿದ್ದ ಮಣ್ಣು ಅಥವಾ ಬಂಡನ್ನು ತೆಗೆಯಿಸುವುದೇ ಕೆರೆಗೆ ಮಾಡಬೇಕಾದ ದುರಸ್ತಿಕಾರ್ಯವಾಗಿತ್ತು. ಶಾಸನವು ದುರಸ್ತು ಮಾಡುವ ಕಾರ್ಯವನ್ನು ಪಡಿಸಲಿಸು ಎಂದು ಕರೆದಿದೆ. ಕ್ರಿ.ಶ. ೧೦೭೧ರ ಶಾಸನದಲ್ಲಿ ಹೊಸದಾಗಿ ಕೆರೆಕಟ್ಟಿದಾಗ ಅದರ ಅಚ್ಚುಕಟ್ಟು ಪ್ರದೇಶದ ಕಾಡು ಕಡಿದು ವ್ಯವಸಾಯ ಮಾಡಿ ಬೆಳೆಬೆಳದರೆಂದು ತಿಳಿಸುತ್ತದೆ.[೪೪೦] ಕರೆಗಳನ್ನು ನಿರ್ಮಿಸುವಾಗ ಎರಡು ರೀತಿಯ ಕೆರೆಗಳು ಕಂಡುಬರುತ್ತವೆ. ಒಂದು ನೈಸರ್ಗಿಕವಾಗಿ ಅಥವಾ ಪ್ರಕೃತಿದತ್ತವಾದ ಕೆರೆಗಳು. ಮತ್ತೊಂದು ನದಿ ನೀರಿನಿಂದ ಆಶ್ರಿತವಾದ ಕೆರೆಗಳು. ಈ ಕೆರೆಗಳು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತವೆ. ತುಂಗಭದ್ರ ನೀರನ್ನು ಕೆರೆಗೆ ಬಿಡಲಾಗುತ್ತದೆ. ಪ್ರಕೃತಿದತ್ತವಾದ ಕೆರೆಗಳಿಗೆ ಮಳೆ ಬಂದಾಗ ಮಳೆ ನೀರು ಮತ್ತು ಚಿಕ್ಕಪುಟ್ಟ ಹಳ್ಳಗಳ ನೀರು ಬಂದು ಸೇರಿಕೊಂಡು ತುಂಬುತ್ತದೆ. ಹೀಗೆ ತುಂಬಿದ ನೀರನ್ನು ಮೂರುನಾಲ್ಕು ಕೆರೆಗಳಿಗೆ ಹೋಗುವ ವ್ಯವಸ್ಥೆಯನ್ನು ಪ್ರಕೃತಿಯೇ ನಿರ್ಮಿಸಿಕೊಂಡಿರುವ ಸಾಧ್ಯತೆಗಳಿವೆ. ನೀರು ಹರಿಯುವ ನೆಲೆಯನ್ನು ಕಂಡುಕೊಂಡು ಜನರು ಅದಕ್ಕೆ ಅಡ್ಡಲಾಗಿ ಕೆರೆ ನಿರ್ಮಿಸಿಕೊಂಡಿರುವಂತೆ ಕಂಡುಬರುತ್ತದೆ. ಸಹಜವಾಗಿಯೇ ಜನಪದರಲ್ಲಿ ಗಾದೆ ಮಾತೊಂದಿದೆ. 'ಋಷಿಮೂಲ ನದಿಮೂಲ ಕಂಡವರಾರು' ಎಂದು ಹೇಳುವ ಮಾತು ಇದಕ್ಕೆ ಪೂರಕವೆಂಬಂತಿದೆ.

ಕ್ರಿ.ಶ. ೧೧೭೮ರ ಶಾಸನದಲ್ಲಿ ಮಾಣಿಯಮ್ಮನಕೆಱೆ, ಕಂನ್ನೆಗೆಱೆಯನ್ನು ದುಮೆನಾಯಕರು ಕಟ್ಟಿಸಿದರೆಂದಿದೆ.[೪೪೧] ಹೊಸಕೆಱೆಯನ್ನು ಕಟ್ಟಿಸಿದುದರ ಬಗೆಗೆ ಶಾಸನವು ತಿಳಿಸಿದೆ. ಕ್ರಿ.ಶ. ೧೧೯೫–೯೬ರ ಶಾಸನದಲ್ಲಿ ಪೆರ್ಗಡೆ ಮಲ್ಲಿಯಣ್ಣ ಸ್ವಧರ್ಮದಿಂದ ಕನ್ನೆಗೆಱೆಯನ್ನು ಕಟ್ಟಿಸಿ, ಆ ಕೆಱೆಯನ್ನು ದೇವಾಲಯಕ್ಕೆ ಬಿಟ್ಟನು.[೪೪೨] ಈ ಶಾಸನದಲ್ಲಿ ಕೆಱೆಯನ್ನು ದೇವಾಲಯಕ್ಕೆ ಬಿಟ್ಟರೆಂದು ತಿಳಿಸಿದೆ. ದೇವಾಲಯಕ್ಕೆ ಕೆರೆ ಬಿಟ್ಟಾಗ ದೇವಾಲಯದ ನಿತ್ಯ ಕಾರ್ಯಗಳಿಗೆ ಬಳಸಲು ದೇವಾಲಯದ

ಹೂದೋಟ, ದೇವಾಲಯದ ಭೂಮಿಗಳಿಗೆ ನೀರು ಹಾಯಿಸುವ ಸಲುವಾಗಿ ಕೆರೆಯನ್ನು ದೇವಾಲಯಕ್ಕೆ ಬಿಟ್ಟಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೧೧೭ರ ಶಾಸನದಲ್ಲಿ ಹೆಗ್ಗಡೆ ಮಂಜಯ್ಯನು ಕೆಱೆಕಟ್ಟಿಸಿದನೆಂದು ತಿಳಿಸಿದೆ.[೪೪೩] ಕ್ರಿ.ಶ. ೧೧೪೦ರ ಶಾಸನದಲ್ಲಿ 'ಅನ್ನಂ ಸುವರ್ಣಕೆಱೆಯಂ ಸನ್ನುತ ಎಂದಿದೆ.[೪೪೪] ಅನ್ನ ನೀಡುವ ಚಿನ್ನದ ಕೆರೆ ಎಂದು ಕೆರೆಯನ್ನು ಈ ಶಾಸನದಲ್ಲಿ ಹೊಗಳಿರುವುದು ಕಂಡುಬರುತ್ತದೆ. ಅನ್ನವು ರೈತನಿಗೆ ಚಿನ್ನಕ್ಕಿಂತ ಪವಿತ್ರವೆಂಬ ಮಾತನ್ನು ಮಾರ್ಮಿಕವಾಗಿ ತಿಳಿಸಿದಂತಿದೆ.

ಕ್ರಿ.ಶ. ೧೧೧೭ರ ಶಾಸನದಲ್ಲಿ 'ಊರುಂಬ ಹಿರಿಯಕೆಱೆಯ ಕಿಬ್ಬಪಲತ್ತಿಗಾಲ ಗದ್ದೆ ಕೊಳಗ ಮೂವತ್ತು ಎಂದು ಉಲ್ಲೇಖಿಸಿದೆ.[೪೪೫] ಈ ಶಾಸನದಲ್ಲಿ ಕೆರೆಯ ನೀರಿನಿಂದ ರೈತರು ಬೆಳೆ ಬೆಳೆಯುತ್ತಿದ್ದರು ಎನ್ನುವ ಅರ್ಥದಲ್ಲಿ ಊರುಂಬಕೆಱೆ ಎಂದು ಉಲ್ಲೇಖಿಸಿರುವುದು ಕಂಡುಬಂದಿದೆ. ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ[೪೪೬] ಕೆಱೆಯನ್ನು ದೇವಾಲಯಕ್ಕೆ ಬಿಟ್ಟು, ಕೆರೆಗೊಡುಗೆಯಾಗಿ ಭೂದಾನ ನೀಡಿದ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ ತಿರಿಯಮ್ಮ ಕೆಱೆಗಟ್ಟಿದ ಇದು ದೇವ ಕೆಱೆಗೆ ಸಲ್ವುದು. ಊರ ದನದ ಪಟ್ಟವೂ ಕೆಱೆಗೆ ಸಲ್ವುದು ಗೊಂಡಗೆ ಖ ೧೩ ಇವೆಲ್ಲ ದೇವರ ಕೆಱೆಗೆ ಸಲ್ವುದು ಖ ಬಿತುವಟ್ಟ ಎಂದಿದೆ ಶಾಸನದಲ್ಲಿ ಆಸಂದಿ ತಟಾಕದ ಉಲ್ಲೇಖವಿದೆ.[೪೪೭] ಕ್ರಿ.ಶ. ೧೧೨೯ರ ಶಾಸನದಲ್ಲಿ ಗಂಗದೊರೆ ಬಮ್ಮರಸನು ಅರಗಘಟ್ಟದಲ್ಲಿ ಕೆರೆಯೊಂದನ್ನು ತೋಡಿಸಿದನು. ಅರಘಟ್ಟವು ಅಲ್ಲಿನ ರಾಮೇಶ್ವರ ತೀರ್ಥ ಎಂಬ ತಟಾಕದಿಂದ ಪ್ರಖ್ಯಾತವಾಯಿತು ಎಂದು ತಿಳಿಸಿದೆ.[೪೪೮] ಕ್ರಿ.ಶ. ೧೨೯೯ರ ಶಾಸನದಲ್ಲಿ ಅಲ್ಲಾಳದೇವನು ವಿಷ್ಣು ಸಮುದ್ರದ ನಿರ್ವಹಣೆಗೆ ಇನ್ನೂರು ಗದ್ಯಾಣ ನೀಡಿದನೆಂದಿದೆ.[೪೪೯] ಕೆರೆಯ ನಿರ್ವಹಣೆ ಹಣ ನೀಡಿರುವ ಉಲ್ಲೇಖ ಈ ಶಾಸನದಿಂದ ತಿಳಿದುಬರುತ್ತದೆ. ಕೆರೆಗಳ ನಿರ್ವಹಣೆಯ ಕಾರ್ಯದ ಬಗೆಗೆ ಆಸಕ್ತಿ ತೋರಿಸಿ ಜವಾಬ್ದಾರಿಯಿಂದ ಅದರ ನಿರ್ವಹಣೆಗೆ ದಾನ ನೀಡಿರುವಂತೆ ತೋರುತ್ತದೆ. ಆದರೆ ಇದರ ನಿರ್ವಹಣಕಾರ್ಯ ನೋಡಿಕೊಳ್ಳಲು ಒಂದು ಅಧಿಕಾರಿ ವರ್ಗವಿತ್ತು. ಎಲ್ಲವನ್ನು ರಾಜನೇ ನೋಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲವೆಂಬುದು ಈ ಶಾಸನದಲ್ಲಿ ಸೂಚ್ಯವಾಗಿ ಅಡಗಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೫೭ರ ಶಾಸನದಲ್ಲಿ ಕೆಱೆಮನಗಳಿನೀರಂ ಪಡೆದು ದೇಗುಲವಂ ಮಾಡಿ ಅಱವಟ್ಟಗೆಯಲಂಬಲಿಂಗಂ ನೀರೆಱೆವ ಮಾಣಿಗಂ ಕೆಱೆಗೆ ಪಡಿಸಲಿಸುವುದಕ್ಕೆ ಕೆರೆಯಕೆಳಗೆ ಮಧುಕಿಯ ಕಚ್ಚವಿಗಳೆಯಲು ೫೦ ಕಮ್ಮ ಮೊದಲಾದ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.[೪೫೦] ಕೆಱೆಯ ನೀರನ್ನು ಹೊಲಗದ್ದೆ ತೋಟಗಳಿಗೆ ಬಿಡುವವನನ್ನು 'ಮಾಣಿಗ' ಎಂದು ಕರೆದಿದೆ. ಇವನು ಕೆರೆಗೆ ಸಲ್ಲಿಸುವ ಸೇವೆಗೆ ಇವನಿಗೆ ಭೂದಾನ ನೀಡಿರುವುದು ಕಂಡುಬಂದಿದೆ. ಇಂದು 'ನೀರಗಂಟಿ' ಈ ಕಾರ್ಯವನ್ನು ಮಾಡುತ್ತಿದ್ದು, ರೈತರು ಬೆಳೆದ ಬೆಳೆಯಲ್ಲಿ ಕೆಲವು ಪ್ರಮಾಣವನ್ನು ಆಯವಾಗಿ ಕೊಡುವುದು ರೂಢಿಯಲ್ಲಿದೆ. ಕ್ರಿ.ಶ. ೧೨೫೫ರ ಶಾಸನದಲ್ಲಿ ಕೆಱೆಯ ಕೆಯ್ಯಂ ಕೆಱೆಯ ಕೆಲಸಕ್ಕೆ ಹತ್ತು ಗದ್ಯಾಣಕ್ಕೆ ವರಿಷಂಪ್ರತಿ ಮಾಣಿವೆಸಂಹೋಗೆ ಕೈಯಿಪ್ಪತ್ತು ಮೊದಲಾದುದನ್ನು ಬಿಟ್ಟಂತೆ ತಿಳಿಸಿದೆ.[೪೫೧] ಕ್ರಿ.ಶ. ೧೧-೧೨ನೆಯ ಶತಮಾನದ ಶಾಸನದಲ್ಲಿ ಮಜ್ಜಬ್ಬೆ ಕೆಱೆಯಂ ಕಟ್ಟಿಸಿ ತೋಣ್ಟಮಂ ಸಮೆದು...ಎಂದಿದೆ.[೪೫೨] ಕೆರೆಕಟ್ಟಿಸಿ ತೋಟ ಮಾಡಿಸಿದಳೆಂದು ಶಾಸನವು ತಿಳಿಸಿದೆ. ಕೆರೆಕಟ್ಟುವ ಮೂಲಕ ಭೂಮಿಯನ್ನು ನೀರಾವರಿಗೆ ಒಳಪಡಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೩೪ರ ಶಾಸನದಲ್ಲಿ ನೀರುಂಬ ಕೆಱೆಯ ತೆಂಕಣಕೋಡಿಗೆ ಕುಱುವದ ಗಱ್ದೆಯ ಬಿತ್ತುಸಲಗೆ ನಾಲ್ಕು ಎಂದಿದೆ.[೪೫೩] ಕ್ರಿ.ಶ. ೧೨೨೪ರ ಶಾಸನದಲ್ಲಿ ದಣ್ಣಾಯಕನ ಕೆಱೆಯನ್ನು ಮಹಾಜನಂಗಳ್‍ಗೆ ಸಲ್ಲಿಸಿದುದು ಕಂಡುಬರುತ್ತದೆ.[೪೫೪] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ "ತೆಱನಱಿದು ಬುಗುಡ ಕರ್ಣ್ಣನ ಕೆಱೆಯಂ ಸಮಗಟ್ಟಿ ಕೆಳಗೆ ಮತ್ತೊಂದು

ತುರ್ತೇಱಿಯಲ್ಲದುರ್ವ್ವಿನುಂ ಮುಂದಱಿದು ಪರಿಕ್ರಯವ ಕೊಂಡದಕ್ಕರ್ಪಿಸಿದರ್"ಎಂದಿದೆ.[೪೫೫] ಕೆರೆಯನ್ನು ಜೀರ್ಣೋದ್ಧಾರಮಾಡಿ ಆ ಕೆರೆಯ ಕೆಳಗೆ ಒಂದು ತುರ್ತು ಕೆರೆಯನ್ನು ಕಟ್ಟಿಸಿದುದರ ಬಗೆಗೆ ಶಾಸನವು ತಿಳಿಸಿದೆ. ಕೆರೆಯ ಜೀರ್ಣೋದ್ಧಾರವನ್ನು ಗಮನಿಸಿದರೆ ಈ ಕೆರೆಯು ಹಿಂದೆ ನಿರ್ಮಾಣವಾದುದಾಗಿದೆ. ಈ ಕೆರೆಯನ್ನು ಜೀರ್ಣೋದ್ಧಾರ ಮಾಡಿ ಈ ಕೆರೆಯ ಹಿಂದೆ ಮತ್ತೆ ಕೆರೆಯನ್ನು ಯಾಕೆ ನಿರ್ಮಿಸಿದರೆಂಬುದನ್ನು ಗಮನಿಸಿದರೆ, ದೊಡ್ಡಕೆರೆ ತುಂಬಿದ ನಂತರ ಸಣ್ಣಕೆರೆಗೆ ನೀರು ಬಿಡುವ ಉದ್ದೇಶವಿದೆ. ಈ ಕಾಲಕ್ಕೆ ಅತಿವೃಷ್ಟಿ ಸಂಭವಿಸಿ ಕೆರೆಗಳ ಮಹತ್ವವನ್ನು ಮನಗಂಡ ಕಾರಣಕ್ಕೆ ಕೆರೆ ಹಾಳಾಗಿದ್ದನ್ನು ಜೀರ್ಣೋದ್ಧಾರ ಮಾಡಿ ಅದರ ಹಿಂದೊಂದು ಸಣ್ಣಕೆರೆ ನಿರ್ಮಿಸಿರುವ ಸಾಧ್ಯತೆಗಳಿವೆ. ಜೊತೆಗೆ ದೊಡ್ಡ ಕೆರೆಯ ನೀರು ಹೆಚ್ಚಿದ, ಜನಸಂಖ್ಯೆ ಮತ್ತು ಭೂಮಿ ವಿಸ್ತರಣೆಯಾದಂತೆ ನೀರಿನ ಕೊರತೆ ಕಂಡುಬಂದಿರುವ ಸಾಧ್ಯತೆಗಳಿವೆ. ಕ್ರಿ.ಶ.೧೦೧೮ರ ಶಾಸನದಲ್ಲಿ 'ಕೆಱೆಗೊಡಂಗೆಯ್ದು ಸವಂಧವಂ ಕೊಣ್ಡು ಕೆಱೆಗಳಂ ಪಡಿಸಲಿಸುವರ್' ಎಂದಿದೆ.[೪೫೬] ಕೆರೆಗೆ ನೀಡಿದ ದಸವಂದ(೧/೧೦) ಭಾಗದ ತೆರಿಗೆಯನ್ನು ಬಳಸಿ ಅದರಿಂದ ಕರೆಯ ನಿರ್ವಹಣಾ ಕಾರ್ಯಗಳನ್ನು ಮಾಡಬೇಕೆಂದು ಶಾಸನವು ತಿಳಿಸುತ್ತದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ನಾಗದೇವ ಹೆಗ್ಗಡೆ ನಾಗಸಮುದ್ರವೆಂಬ ಕೆರೆಕಟ್ಟಿಸಿ ತೋಟವನಿಕ್ಕಿಸಿದನೆಂದು ತಿಳಿಸುತ್ತದೆ.[೪೫೭] ಕ್ರಿ.ಶ.೧೧೫೯ರ ಶಾಸನದಲ್ಲಿ ಕೆಱೆಯ ಕೋಡಿಯ ಕೀಳ್ಬಯಲು...ತೆಂಕ ಬಱಹಾಳ ಕೆಱೆಯಚ್ಚುಕಟ್ಟು ಪ್ರದೇಶದ ಉಲ್ಲೇಖವಿದೆ.[೪೫೮] ಕ್ರಿ.ಶ.೧೧೫೯ರ ಶಾಸನದಲ್ಲಿ ಕೆಱೆಯ ಕೋಡಿಯ ಕೀಳ್ಬಯಲು..ತೆಂಕ ಬಱಹಾಳಕೆಱೆಯಚ್ಚುಕಟ್ಟು ಪ್ರದೇಶದ ಉಲ್ಲೇಖವಿದೆ.[೪೫೯] ಕ್ರಿ.ಶ. ೧೧೧೮ರ ಶಾಸನದಲ್ಲಿ ಗಂಗಪಯ್ಯಂಗಳು ಕೆಱೆಯಂ ಕಟ್ಟಿಸಿ ಗಂಗ ಸಮುದ್ರವೆಂಬ ಹೆಸರಿಟ್ಟು ದೇವರ್ಗ್ಗೆ ಬಿಟ್ಟರು ಎಂದಿದೆ.[೪೬೦] ವ್ಯಕ್ತಿ ತಾನು ಕಟ್ಟಿದ ಕೆರೆಗೆ ತನ್ನ ಹೆಸರಿಟ್ಟುಕೊಂಡಿರುವುದು ಕಂಡುಬರುತ್ತದೆ ಕ್ರಿ.ಶ.೧೨೮೧ರ ಮತ್ತು ೧೧೮೦ರ ಶಾಸನಗಳಲ್ಲಿ ನೀರು ಕೂಲಿಯ ಉಲ್ಲೇಖವಿದೆ(ನೀರಿಗೆ ವಿಧಿಸಿದ ಸುಂಕ)[೪೬೧] ಕ್ರಿ.ಶ. ೧೨೮೩ರ ಶಾಸನದಲ್ಲಿ 'ಕುಡಿ ನೀರ ಕೆಱೆಯ' ಉಲ್ಲೇಖವಿದೆ.[೪೬೨] ಕೆರೆಯ ನೀರನ್ನು ಕುಡಿಯುವ ನೀರಿಗಾಗಿ ಬಳಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೫೮ರ ಶಾಸನದಲ್ಲಿ ಸಾಲಿಗಾವೆ ಭೋಗಯ್ಯನು ಪಟಳದಿಂದೆ ಕಟ್ಟಿಳಿದು ಕೆಱೆಯೊಡೆದು ಕೇಶವ ದೇವರ ದೇವಾಲ್ಯವು ವುತ್ಸನ್ನವಾಗಿ ಅಪರ ಕಾಲ ಆರುಮ್ ಮಾಡುವರಿಲ್ಲದಿರುವುದನು ಮಾಯಣ್ಣ ನಾಯಕರು ಮೊದಲಾದ ನಾಯಕನು ಊರ ಕರುಕಂಬವಿಕ್ಕಿಸಿ ಶ್ರೀ ಚನ್ನಕೇಶವ ದೇವರ ಪ್ರತಿಷ್ಠೆ ಮಾಡಿಸಿದರು.[೪೬೩] ಕೆಱಿಯೊಡೆದುದನ್ನು, ದೇವರ ಕಾರ್ಯಗಳು ತುಂಬ ವರ್ಷಗಳು ನಡೆಯದಿರುವುದನ್ನು ನೋಡಿ ಮಾಯಣ್ಣ ನಾಯಕ ಮೊದಲಾದವರು ಮಾಡಿದಂತೆ ಕಂಡುಬರುತ್ತದೆ. ೧೨ನೆಯ ಶತಮಾನದ ವಚನಕಾರ ಸಿದ್ಧರಾಮನು 'ಸೊಲ್ಲಾಪುರದಲ್ಲಿ ಒಂದು ಕೆರೆಯನ್ನು ಕಟ್ಟಿಸಿ ಕೆರೆ ತೊರೆ ದೇಗುಲಂಗಳ ಕಡೆಯಿಂದ ನಿಮ್ಮ ಕಂಡೆ ಎನ್ನುತ್ತಾನೆ. ಅಲ್ಲದೆ

ಕೆರೆಯೊಡೆದ ಬಳಿಕ ತೂಬು ತಡೆಯಬಲ್ಲುದೆ ಅಲ್ಲಮ
ಕೆರೆಯನುಂಡು ತೊರೆಯ ಹೊಗಳುವುದೆ ಅಲ್ಲಮ।[೪೬೪]

ಎಂದಿದ್ದಾನೆ. ಈ ವಚನಕಾರನ ಮಾತಿನ ಇಂಗಿತ ಶಾಸನಕಾರನಲ್ಲಿಯೂ ಬಂದಿರುವ ಸಾಧ್ಯತೆಗಳಿವೆ. ಒಡೆದ ಕೆರೆಯಲ್ಲಿ ನೀರು ಸಂಗ್ರಹವಾಗದಿದ್ದಾಗ, ಅದನ್ನು ನಂಬಿಕೊಂಡ ನೀರಾವರಿ ವ್ಯವಸಾಯದ ಸ್ಥಿತಿ ಸಿದ್ಧರಾಮನ ತೂಬು ತಡೆಯಬಲ್ಲುದೆ ಅಲ್ಲಮ ಎಂಬ ಮಾತಿನಲ್ಲಿ ಅಡಗಿರುವಂತೆ ಕಂಡುಬಂದಿದೆ. ಕೆಱೆಯ ಮಹತ್ವವನ್ನು ಅಲ್ಲಮ ಅರಿತಿರುವಂತಿದೆ. ಕೆರೆಯಿಂದ ಸಕಲಚರಾಚರಗಳಿಗೂ ಲೇಸಾಗುತ್ತದೆ ಎಂಬ ಕಾರಣದಿಂದ ಇಂತಹ ಕಾರ್ಯವನ್ನು ಮಾಡಿ ದೇವರನ್ನು ಕಂಡೆನೆಂದು ಹೇಳಿರುವುದು ಕಂಡಬರುತ್ತದೆ.

ಕ್ರಿ.ಶ. ೧೧೫೬–೫೭ರ ಶಾಸನದಲ್ಲಿ ಕೆಱೆಕಟ್ಟಿಸಿದ್ದನ್ನು ತಿಳಿಸುತ್ತದೆ.[೪೬೫] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಕೆಱೆ ಕಟ್ಟಿಸಿ ಖಂಡುಗ ಗದ್ದೆ ದಾನ ನೀಡಿರುವುದನ್ನು ತಿಳಿಸುತ್ತದೆ.[೪೬೬] ಕ್ರಿ.ಶ. ೧೧೯೬–೯೭ರ ಶಾಸನದಲ್ಲಿ ಬರ್ಮ್ಮಂ ಸಾವನ್ತ ಘಟ್ಟದೆಣೆಯನೆ ತೀವಿದ ಪೆರ್ಗ್ಗಱೆಯ ನಟ್ಕೆಱೆಂ ಕಟ್ಟಿಸಿದಂ ಕಱೆಗಳಂ ಕಟಿಸಿಸಾವನ್ತ ಸಮುದ್ರವಾಗಿ ಕಟ್ಟಿಸಿದಾಕೆಱೆಗವಾಹ ಬ್ರಹ್ಮಸಮುದ್ರವಾಗಿ ಕಟ್ಟಿಸಿದ ಕೆಱೆಗಮಾಹಳ್ಳಿಗಂ ಗದ್ಯಾಣ ಹತ್ತು ಮೊದಲಾಗಿ ಬಿಟ್ಟಂತಿದೆ.[೪೬೭] ಈ ಶಾಸನದಲ್ಲಿ ಬರ್ಮ್ಮನು ಕಟ್ಟಿಸಿದ ಕೆರೆಯನ್ನು ವರ್ಣಿಸಲಾಗಿದೆ. ಈ ಕೆರೆಯು ಸಮುದ್ರದಂತಿದೆ ಅಂದರೆ ಇದು ದೊಡ್ಡಕೆರೆಯಾಗಿದ್ದಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೨೮೦ರ ಶಾಸನದಲ್ಲಿ ಪರಮೇಶ್ವರ ನಾಯಕರು ಆ ಐರವಳಿಯ ಸಮಸ್ತ ಪ್ರಜೆಗಾವುಂಡಗಳ ಕಯ್ಯಲು ಆ ಎರಡು ಹಳ್ಳಿಯ ಗದ್ದೆಗಳಿಗೆ ಅರಸಿಯುಕೆಱೆಯ ನೀರು ಹಾಯಿಸುವಂತೆ ವೊಡಂಬಡಿಸಿ ತಕ್ಕಾಲೋಚಿತ ಕ್ರಯದ್ರವ್ಯವನು ಸಾಕಲ್ಯೇನ ಕೊಟ್ಟು ಬಿಟ್ಟರೆಂದಿದೆ.[೪೬೮] ಕೆಱೆಯ ವಿಸ್ತಾರಕ್ಕನುಗುಣವಾಗಿ ಕೆಱೆಯ ನೀರನ್ನು ಹಾಯಿಸಿರುವುದು ಈ ಶಾಸನದಿಂದ ತಿಳಿದುಬಂದಿದೆ. ಕ್ರಿ.ಶ. ೧೧೮೭ರ ಶಾಸನದಲ್ಲಿ ಕಾಡು ಕಡಿದು ಕನ್ನೆಗೆಱೆಯಂ ಕಟ್ಟಿಸಿ ವೂರಂ ಮಾಡಿದರು ಎಂದಿದೆ.[೪೬೯] ಕಾಡು ಕಡಿದು ಹೊಸದಾಗಿ ಕೆರೆ ಕಟ್ಟಿಸಿದುದರ ಬಗೆಗೆ ಶಾಸನವು ತಿಳಿಸಿದೆ. ಕ್ರಿ.ಶ. ೧೨೪೭ರ ಶಾಸನದಲ್ಲಿ ಚಿಕ್ಕಮಾರೆಯ ಮೊದಲಾದವರು ಕನ್ನೆಗೆಱೆಯಂ ಕಟ್ಟಿಸಿ ವೂರಂ ಮಾಡಿದರು. ಈ ಕೆರೆಗೆ ಕೆಱೆಯ ಕೆಳಗಿನ ಭೂಮಿಯನ್ನು ಮಹಾಜನಂಗಳು ಬಿಟ್ಟರೆಂದು ಶಾಸನವು ತಿಳಿಸಿದೆ.[೪೭೦] ಕೆರೆಕಟ್ಟಿಸುವಾಗ ಸಾಮಾನ್ಯವಾಗಿ ಊರಿನ ಜನರೆಲ್ಲರು ಸರ್ವಾನುಮತವಿರುತ್ತಿತ್ತು. ಎಂಬುದು ಕೆರೆಗೆ ಮಹಾಜನರು ನೀಡಿರುವ ದಾನದಿಂದ ತಿಳಿಯುತ್ತದೆ. ಕ್ರಿ.ಶ. ೧೨೨೧ರ ಶಾಸನದಲ್ಲಿ ಅಶೇಷ ಮಹಾಜನಂಗಳು ಕೆಱೆಗೆ ಪಿರುಮಾಳು ಸಮುದ್ರವೆಂದು ಹೆಸರಂ ಕೊಟ್ಟು ಕೆಱೆಯ ಕೆಳಗೆ ಪ್ರೀತಿದಾನವಾಗಿ ಚಟ್ಟಯ್ಯ ಪಿರುಮಾಳ ದೇವಂಗಳಿಗೆ ನೂಱುವತ್ತು ಕಂಬ ತೋಟದ ಸ್ಥಳವ ದಾನ ನೀಡಿದರೆಂದು ಹೇಳಿದೆ.[೪೭೧] ಕ್ರಿ.ಶ. ೧೧೯೭–೯೮ರ ಶಾಸನದಲ್ಲಿ ತೊಱೆಯನಿತುಂ ಕುಳಿಯನಿತುಂ ಕೆಱೆಯಾದವು ಎಂದಿದೆ.[೪೭೨] ಕ್ರಿ.ಶ. ೧೧೬೦ರ ಶಾಸನದಲ್ಲಿ ತೊಱೆಯಾಗಿ ಹೋಗಿ ಕೃಪೆಯಿಂ ಕೆಱೆಯಾಗಿರ್ಪ್ಪಂತು ಪಲರುಮಂ ಕಟ್ಟಿದ ಕೆಱೆಗಳೊಳಿದೊಂದು ಕೆಱಯೆನೆ ಕೆಱೆಯಂ ಕಿಱುಗೂಸು ಚಟ್ಟೆಯಂ ಕಟ್ಟಿಸಿದಂ ಹಾಗೆಯೇ ತಟಾಕ, ದೇಗುಲವನ್ನು ತನ್ನ ಧನದಿಂದ ಮಾಡಿಸಿದನೆಂದಿದೆ.[೪೭೩] ಚಟ್ಟಯ್ಯನೆಂಬುವವನು ತನ್ನ ಸ್ವಂತ ಹಣದಿಂದ ಕೆರೆಯನ್ನು ಕಟ್ಟಿಸಿದುದರ ಬಗೆಗೆ ಶಾಸನ ತಿಳಿಸಿದೆ. ತೊರೆಯಾಗಿ ಹರಿದು ಹೋಗುವ ನೀರನ್ನು ಕರೆಯಾಗುವಂತೆ, ಹಲವಾರು ಕಟ್ಟಿಸಿದ ಕೆರೆಗಳಲ್ಲಿ ಇದೊಂದು ಕೆರೆ ಎನ್ನುವುದಕ್ಕಿಂತ ಈ ಕೆರೆ ವಿಶೇಷವಾದುದು ಎನ್ನುವ ಅರ್ಥದಲ್ಲಿ ತಾನು ಕಟ್ಟಿದ ಕೆರೆಯ ಬಗೆಗೆ ಚಟ್ಟಯ್ಯ ಹೊಗಳಿಕೊಂಡಿರುವುದು ಶಾಸನದಲ್ಲಿ ಕಂಡುಬಂದಿದೆ.

ಕ್ರಿ.ಶ. ೧೧೫೭ರ ಶಾಸನದಲ್ಲಿ ಕಾಮಾಡಿಸೆಟ್ಟಿಯ ಕೆಱೆಯನೀರೊತ್ತಿಂದ ತಾ ಕಟ್ಟಿಸಿದ ಕೆಱೆ ಮುಟ್ಟ ಬಿಲ್ಲೇಶ್ವರ ದೇವರ್ಗ್ಗೆ ಬಿಟ್ಟ ಭೂಮಿ ಎಂದಿದೆ.[೪೭೪] ಕಾಮಾಡಿಸೆಟ್ಟಿ ತಾನು ಕೆರೆಯನ್ನು ಕಟ್ಟಿಸಿ ದೇವರಿಗೆ ಭೂದಾನ ನೀಡಿದನೆಂದು ಶಾಸನವು ತಿಳಿಸುತ್ತದೆ. ಕ್ರಿ.ಶ. ೧೨೨೭ರ ಶಾಸನದಲ್ಲಿ ಸೋಮಯ್ಯನ ಅಕ್ಕ, ಮಹಾದೇವಿ ತಾ ಕಟ್ಟಿಸಿದ ಕೆರೆಯ ಹಿಂದೆ ಆಕೆಯ ಮಗ ಚಿಕ್ಕನಾಂಗಣ್ಣನು ಸೋಮನಾಥ ದೇವರಿಗೆ ಎರಡು ಗದ್ದೆ ಸಲಗೆ ನೀಡಿದನು ಎಂದಿದೆ.[೪೭೫] ಕ್ರಿ.ಶ. ೧೧೮೬ರ ಶಾಸನದಲ್ಲಿ ಕಾಡು ಕಡಿದು ಮಾಡಿದರಾಗಿ ಧ್ರುವವುಂಡಿಗೆ ಕೆಱೆಯಂ ಕಟ್ಟಿದವರ್ಗ್ಗೆ ಹಂನೆರಡು ವರಿಷ ಮಾನ್ಯವಲ್ಲಿಂ ಮೇಲೆ ಹತ್ತು ಸಲಗೆ ಗದ್ದೆಯನ್ನು ಮಾನ್ಯ ಮಾಡಿ ಬಿಟ್ಟರೆಂದಿದೆ.[೪೭೬] ಕಾಡು ಕಡಿದು ಶ್ರೀ ವೀರಬಲ್ಲಾಳ ಪುರದೊಳಗೆ ರುದ್ರಸಮುದ್ರ, ಗಂಗಾ ಸಮುದ್ರ, ಅಚ್ಯುತಸಮುದ್ರ, ವೀರಸಮುದ್ರವೆಂಬ ಕೆಱೆಗಳನ್ನು ಕಟ್ಟಿಸಿ ಆ ಪುರಕ್ಕೆ ನಾಲ್ಕು ಗದ್ಯಾಣ ನೀಡಿದರೆಂದಿದೆ. ಕಾಡು ಕಡಿದು

ಹೊಸದಾಗಿ ಕೆರೆ ಕಟ್ಟಿಸುವವರಿಗೆ ಹನ್ನೆರಡು ವರ್ಷಗಳ ಕಾಲ ಹತ್ತು ಸಲಗೆ ಗದ್ದೆ ದಾನ ನೀಡಿರುವುದು ಕಂಡುಬರುತ್ತದೆ. ಜೊತೆಗೆ ವೀರಬಲ್ಲಾಳ ಪುರದಲ್ಲಿ ಕಾಡು ಕಡಿದು ಕಟ್ಟಿಸಿದ ಕೆರೆಗಳಿಗೆ ನಾಲ್ಕು ಗದ್ಯಾಣ ದಾನ ನೀಡಿರುವುದಿದೆ. ಸಾಮಾನ್ಯವಾಗಿ ಕೆರೆಕಟ್ಟುವವರನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಕೆರೆಕಟ್ಟುವವರಿಗೆ ಇಂತಿಷ್ಟು ವರ್ಷಗಳವರೆಗೆ ಭೂಮಿಯ ಉತ್ಪನ್ನ ಸಿಗುವಂತೆ ಮಾಡಿರುವುದು ಈ ಶಾಸನದಿಂದ ತಿಳಿದುಬರುತ್ತದೆ. ಕೆರೆಗಳನ್ನು ಯಾರೇ ನಿರ್ಮಿಸಲಿ ಅದರ ಉಸ್ತುವಾರಿಯ ಹೊಣೆಗಾರಿಕೆಯು ಆ ಊರಿನ ಜನರಿಗೆ ಸೇರಿತ್ತು. ಕ್ರಿ.ಶ. ೧೧೦೨ರ ಶಾಸನದಲ್ಲಿ ಚಾವುಂಡಯ್ಯನು ಕೆರೆ ಕಟ್ಟಿಸಿ ಕೆರೆಗೆ ಬಿಟ್ಟ ಭೂಮಿಯನ್ನು ಮಹಾಜನರು ಪಾಲಿಸುವರು ಎಂದಿದೆ.[೪೭೭] ರಾಜರು, ಸಾಮಂತ ಮೊದಲಾದ ಅಧಿಕಾರಿ ವರ್ಗದವರು, ಊರಿನ ಪ್ರಮುಖರು ಮೊದಲಾಗಿ ಯಾರು ಕೆರೆ ನಿರ್ಮಿಸಿದರೂ ಅದರ ಒಳಿತು ಕೆಡುಕುಗಳ ಜವಾಬ್ದಾರಿ ಆ ಊರಿಗೆ ಸಂಬಂಧಿಸಿರುತ್ತಿತ್ತು.

ಮೇಲೆ ಉಲ್ಲೇಖಿತ ಶಾಸನಗಳ ಆಧಾರದ ಮೇಲೆ ಹತ್ತನೆಯ ಶತಮಾನದ ಕೊನೆಯ ಭಾಗದಿಂದ ೧೪ನೆಯ ಶತಮಾನದವರೆಗಿನ ಕಾಲವನ್ನು ಜಿ.ಎಸ್.ದೀಕ್ಷಿತ್‌ರವರು ಕೆರೆಗಳ ಸುವರ್ಣಕಾಲ ಎಂದು ಕರೆದಿದ್ದಾರೆ.[೪೭೮] ಕಾರಣ ಕರ್ನಾಟಕವನ್ನಾಳಿದ ಈ ಅವಧಿಯ ಅರಸರು ಹೆಚ್ಚಾಗಿ ಕೆರೆ ನಿರ್ಮಾಣಗಳ ಕಾರ್ಯದಲ್ಲಿ ತೊಡಗಿದರು. ನಿರ್ಮಾಣ ಕಾರ್ಯವಲ್ಲದೆ ಹಳೆಯ ಕೆರೆಗಳ ಜೀರ್ಣೋದ್ಧಾರ ಕಾರ್ಯಗಳು ಈ ಅವಧಿಯಲ್ಲಿ ಜರುಗಿದವು. 'ಕ್ರಿ.ಶ. ೧೧೩೨ರ ಶಾಸನದಲ್ಲಿ ಶಿಗ್ಗಾಂವಿ ತಾಲ್ಲೂಕು ಹುನಗುಂದದ ಕೆರೆಯನ್ನು ೩ನೆಯ ಸೋಮೇಶ್ವರನು ಜೀರ್ಣೋದ್ಧಾರ ಮಾಡಿದನು. ಹಾವೇರಿಯ ಮಲ್ಲಿಕಾರ್ಜುನ ದೇವಾಲಯದ ಕರೆಯ ದತ್ತಿ ನಷ್ಟವಾದುದನ್ನು ನವೀಕರಿಸಿದ ನಾಲ್ಕನೆಯ ಸೋಮೇಶ್ವರನು ಡಂಬಳದ ಗೋಣಸಮುದ್ರದ ತೂಬು ಮತ್ತು ಇತರೆ ದುರಸ್ತಿ ಕಾರ್ಯಗಳಿಗೆ ಪಣ್ಣಯ ಸಂಕ ಬಿಟ್ಟನು.'[೪೭೯] ಕಲ್ಯಾಣ ಚಾಲುಕ್ಯರ ಕಾಲದ ಅವಧಿಯಲ್ಲಿ ಹೊಸಕೆರೆಯ ನಿರ್ಮಾಣಗಳು, ಜೀರ್ಣೋದ್ಧಾರದ ಕಾರ್ಯಗಳು ಹಿಂದಿನ ಕೆರೆಗೆ ತೂಬು ನಿರ್ಮಿಸುವ ಕಾರ್ಯಗಳು, ದುರಸ್ತಿಕಾರ್ಯಗಳು ಚುರುಕುಗೊಂಡದ್ದು ಕಂಡುಬರುತ್ತದೆ. ಇವರ ಕಾಲದಲ್ಲಿ ಆರ್ಥಿಕತೆಯು ಕೃಷಿಯನ್ನು ಅವಲಂಬಿಸಿದಂತೆ ಕಂಡುಬರುತ್ತದೆ. ಈ ಕಾರಣದಿಂದಾಗಿ ಕೃಷಿ ಅಭಿವೃದ್ಧಿಯ ಕಡೆಗೆ ಹೆಚ್ಚಿನ ಗಮನಹರಿಸಿರುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಹೊಯ್ಸಳ ಅರಸರು ಭೂಮಿ ವಿಸ್ತರಣೆಯ ಕಾರ್ಯದೊಂದಿಗೆ ಹೊಸದಾದ ಕೆರೆಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿದರು. ಕೃಷಿಯಲ್ಲಿ ಉತ್ಪನ್ನ ಹೆಚ್ಚಿಸುವ ಸಲುವಾಗಿ, ರೈತರನ್ನು ಸಾಗುವಳಿಗೆ ತೊಡಗಿಸುವ ಸಲುವಾಗಿ ತೆರಿಗೆ ವಿನಾಯಿತಿಯಂತಹ ಕಾರ್ಯಗಳನ್ನು ಮಾಡಿದರು. ಅಲ್ಲದೆ ಕ್ರಿ.ಶ. ೧೧೮೬ರ ಶಾಸನವು ಉಲ್ಲೇಖಿಸುವಂತೆ[೪೮೦] ಕೆಜಿ ಕಟ್ಟುವವರನ್ನು ಉತ್ತೇಜಿಸುವ ದೃಷ್ಟಿಯಿಂದ ಈ ಶಾಸನದಲ್ಲಿ ಹತ್ತು ಸಲಗೆ ನೀರಾವರಿ ಭೂಮಿಯನ್ನು ಹನ್ನೆರಡು ವರ್ಷಗಳವರೆಗೆ ಮಾನ್ಯ ಮಾಡಿ ಕೊಟ್ಟದ್ದು ಕಂಡುಬರುತ್ತದೆ. ಭೂಮಿಯಲ್ಲಿನ ಉತ್ಪನ್ನವನ್ನು ಹೆಚ್ಚಿಸುವ ಸಲುವಾಗಿ, ಬೆದ್ದಲು ಭೂಮಿಗಳನ್ನು ಕೆರೆ ನಿರ್ಮಿಸಿ, ನೀರು ಹರಿಸುವ ಮೂಲಕ ನೀರಾವರಿ ಭೂಮಿಗಳಾಗಿ ಪರಿವರ್ತಿಸಲಾಯಿತು. ಇವರ ಕಾಲದಲ್ಲಿ ಹಾಸನ ಜಿಲ್ಲೆಯ ಬಹುತೇಕ ಭಾಗಗಳು ನೀರಾವರಿ ಆವೃತ್ತ ಪ್ರದೇಶಗಳಾದವು. ಕ್ರಿ.ಶ. ೧೦ನೆಯ ಶತಮಾನದಿಂದ ೧೪ನೆಯ ಶತಮಾನದ ಅವಧಿಯಲ್ಲಾದ ಕೆರೆ, ಕಟ್ಟೆ ಬಾವಿಗಳಂತಹ ನೀರಾವರಿ ಆಕರಗಳ ನಿರ್ಮಾಣ ಕಾರ್ಯದಲ್ಲಿ ಉಂಟಾದ ಪ್ರಗತಿಗೆ ಅನೇಕ ಕಾರಣಗಳಿದ್ದಂತೆ ಕಂಡುಬರುತ್ತದೆ.

- ಅನಾವೃಷ್ಟಿ ಸಂಭವಿಸಿದ ಸಾಧ್ಯತೆಗಳು.
- ಕೃಷಿಯು ಆರ್ಥಿಕ ಉತ್ಪನ್ನಗಳ ಕಡೆಗೆ ತಿರುಗಿದುದು.
- ಆಡಳಿತವು ಕೇಂದ್ರೀಕೃತ ಆಳ್ವಿಕೆಯಿಂದ ಆಡಳಿತ ವಿಕೇಂದ್ರೀಕರಣ ವ್ಯವಸ್ಥೆಯ ಕಡೆಗೆ ತಿರುಗಿದುದು.
- ಸಾಮಂತ, ಪೆರ್ಗಡೆ, ಮಾಂಡಳೀಕ ಮೊದಲಾದ ಅಧಿಕಾರಿ ವರ್ಗಗಳು ಗ್ರಾಮೀಣ ಆಡಳಿತ ಮತ್ತು
- ಗ್ರಾಮೀಣ ವೃತ್ತಿಯಾದ ಕೃಷಿಯನ್ನು ಅಭಿವೃದ್ಧಿಗೊಳಿಸುವ ಕಡೆ ಗಮನಹರಿಸಿದುದು.
- ವ್ಯವಸಾಯದ ಅಭಿವೃದ್ಧಿಯ ಮೂಲಕ ರಾಜ್ಯದ ಅಭಿವೃದ್ಧಿ ಸಾಧಿಸಬಹುದೆಂಬ ಇಂಗಿತದ ಹಿನ್ನೆಲೆಯಿಂದ ರಾಜಕೀಯ ಭದ್ರತೆ ಸ್ಥಾಪಿಸುವ ಉದ್ದೇಶಗಳು ನೀರಾವರಿಯ ಅಭಿವೃದ್ಧಿಗೆ ಕಾರಣಗಳಾದವು.
- ನೀರಾವರಿಯ ಮೂಲಕ ಭೂ ಉತ್ಪನ್ನವನ್ನು ಹೆಚ್ಚಿಸುವ ಸಲುವಾಗಿ
- ವ್ಯವಸಾಯ ಉತ್ಪನ್ನವು ವ್ಯಾಪಾರ, ಉದ್ಯೋಗ, ಕೈಗಾರಿಕೆಗಳಿಗೆ ಸರಕಾದುದು.
- ಧಾರ್ಮಿಕವಾಗಿ ಪುಣ್ಯ ಲಭಿಸುತ್ತದೆ ಎಂಬ ಭಾವನೆ.
- ಸಕಲ ಜೀವರಾಶಿಗಳಿಗೆ ಕುಡಿಯುವ ನೀರನ್ನು ಒದಗಿಸುವ ಸಲುವಾಗಿ.
- ಇಂದಿನಂತೆ ಮಳೆಯಾಶ್ರಿತ ಬೆದ್ದಲು ಭೂಮಿಯಲ್ಲಿ ಬೆಳೆಯುವ ಆಹಾರ ಬೆಳೆಗಳು ಲಾಭದಾಯಕವಾಗಿರುವ ಸಾಧ್ಯತೆಗಳು ವಿರಳ. ಇದು ಶಾಸನಗಳಿಂದಲೂ ತಿಳಿಯುತ್ತದೆ.

ಬೆದ್ದಲು ಭೂಮಿಯಲ್ಲಿ ಬೆಳೆಯುವ ಆಹಾರ ಧಾನ್ಯಗಳಿಂದ ರಾಜ್ಯದ ಬೊಕ್ಕಸಕ್ಕೆ ತೆರಿಗೆ ರೂಪದಲ್ಲಿ ಬರುವ ಆದಾಯ ಅತ್ಯಂತ ಕಡಿಮೆಯಾಗಿತ್ತು. ಈ ಹಿನ್ನೆಲೆಯಲ್ಲಿ ತೋಟದ ಬೆಳೆಗಳಾದ ವಾಣಿಜ್ಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುವ ಮೂಲಕ ಅಭಿವೃದ್ಧಿ ಸಾಧಿಸುವ ಉದ್ದೇಶವನ್ನು ಹೊಂದಿರುವ ಸಾಧ್ಯತೆಗಳಿವೆ. ಈ ಎಲ್ಲ ಕಾರಣಗಳಿಗಿಂತ ಹೆಚ್ಚಾಗಿ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಪ್ರಬಲ ಉದ್ದೇಶದಿಂದಾಗಿ ಗ್ರಾಮೀಣ ಕೃಷಿಯ ಕಡೆಗೆ ಒತ್ತು ನೀಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ನೀರಾವರಿ ಆಕರಗಳ ನಿರ್ಮಾಣ ಕಾರ್ಯಗಳು ಜರುಗಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೩೬೯ ಬುಕ್ಕರಾಯನ ಕಾಲದ ಶಾಸನವು ಆಂಧ್ರಪ್ರದೇಶದ ಕಡಪಾ ಜಿಲ್ಲೆಯ ಬುದುವೇಲು ತಾಲ್ಲೂಕಿನ ಪೆರುಮಾವಿಲ್ಲ ಎಂಬ ಗ್ರಾಮದಲ್ಲಿ ದೊರೆತಿದೆ. ಈ ಶಾಸನದಲ್ಲಿ ಕೆರೆಕಟ್ಟುವವರಿಗೆ ಇರಬೇಕಾದ ತಿಳುವಳಿಕೆ ಮತ್ತು ವಹಿಸಬೇಕಾದ ಕ್ರಮಗಳ ಕುರಿತು ತಿಳಿಸಿದೆ.[೪೮೧]

ಕೆರೆಯನ್ನು ನಿರ್ಮಿಸುವವರು ಮೊದಲು ತೃಪ್ತರಾಗಿ, ಸಂತೋಷದಿಂದ ಕೂಡಿರಬೇಕು. ಸೂರ್ಯಚಂದ್ರರು ಇರುವವರೆಗೂ ಅವನ ಹೆಸರು ಉಳಿಯುವಂತಹ ಕೆರೆ ನಿರ್ಮಿಸಬೇಕು.

- ಜಲಶಾಸ್ತ್ರ(ಪಯಸ್) ಜ್ಞಾನದಲ್ಲಿ ಪಾರಂಗತನಾದ ಬ್ರಾಹ್ಮಣನು ಈ ಕಾರ್ಯ ನಿರ್ವಹಿಸಬೇಕು.
- ಗಟ್ಟಿಯಾದ ಜೇಡಿಮಣ್ಣಿನಿಂದ ಕೂಡಿದ ಪ್ರದೇಶವನ್ನು ಕೆರೆಕಟ್ಟಲು ಆಯ್ಕೆಮಾಡಿಕೊಳ್ಳಬೇಕು.

- ನದಿನೀರು ಹರಿಯುವ ಸ್ಥಳಕ್ಕಿಂತ ಮೂಲದಿಂದ ಮೂರು ಯೋಜನೆಗಳಷ್ಟು ದೂರವಿರಬೇಕು.
- ಕೆರೆಕಟ್ಟಲು ಬೆಟ್ಟಗಳ ಸಾಲುಗಳು ಕಂಡು ಬಂದಿದ್ದಲ್ಲಿ ಅವುಗಳನ್ನು ಬಳಸಿಕೊಳ್ಳುವುದು.
- ಬೆಟ್ಟಗಳ ಸಾಲುಗಳು ಕಂಡುಬಂದಿದ್ದಲ್ಲಿ ಅವುಗಳನ್ನು ಬಳಸಿಕೊಳ್ಳುವುದು.
- ಒಂದು ಗುಡ್ಡವನ್ನು ಅದರ ಬಡುವನ್ನು ಒಡ್ಡಾಗಿ ಬಳಸುವಂತೆ ಎರಡು ಗುಡ್ಡಗಳ ನಡುವಿನ ಕಣಿವೆ ಪ್ರದೇಶವನ್ನು ಬಳಸುವುದು.
- ಎರಡು ಬೆಟ್ಟಗಳ ನಡುವಿನ(ಕಣಿವೆ) ಪ್ರದೇಶದಲ್ಲಿ ಅತಿದೊಡ್ಡದಲ್ಲದ ಮತ್ತು ಸದೃಢ ಏರಿಯನ್ನು ಕಟ್ಟಬೇಕು.
- ಕೆರೆಯ ಬಳಿ ಹತ್ತಿರದಲ್ಲಿ ಬೆಳೆ ಬೆಳೆಯುವ ಭೂಮಿ ಇರಬೇಕು.
- ಕೆರೆಯು ಅಗಲ ಮತ್ತು ಆಳದಿಂದ ಕೂಡಿರಬೇಕು.
- ಕೆರೆ ನಿರ್ಮಿಸುವ ಹತ್ತಿರದಲ್ಲಿಯೇ ಕಲ್ಲಿನ ಗಣಿಗಳಿರಬೇಕು. ಅಲ್ಲಿ ಸಮಾನವಾದ ಮತ್ತು ಉದ್ದವಾದ ಕಲ್ಲುಗಳು ದೊರೆಯುವಂತಿರಬೇಕು.
- ಕೆರೆಯ ಬಳಿ ಫಲವತ್ತಾದ ಭೂಮಿ ಇರಬೇಕು. ಅಲ್ಲಿ ಹಣ್ಣು ಹಂಪಲು ಮತ್ತು ವನಗಳಿಂದ ಕೂಡಿರಬೇಕು. ಆ ಭೂಮಿಯು ಏರಿಳಿತಗಳಿಲ್ಲದೆ ಸಮನಾಗಿರಬೇಕು.
- ತೂಬು ನಿರ್ಮಾಣಕ್ಕೆ ಬಳಸುವ ಕಲ್ಲು ಅಥವಾ ನಿಯಂತ್ರಕಗಳು ಸುಭದ್ರವಾಗಿರಬೇಕು. ಅಲ್ಲದೆ ನೀರಿನ ಒತ್ತಡವನ್ನು ಕಾಪಾಡುವಷ್ಟು ಸದೃಢವಾಗಿರಬೇಕು.
- ಕೆರೆಗಳನ್ನು ನಿರ್ಮಿಸುವ ತಂತ್ರಜ್ಞಾನವನ್ನು ತಿಳಿದಿರುವ ಹನ್ನೆರಡು ಮಂದಿಯಿರಬೇಕು.

ಕೆರೆಯನ್ನು ನಿರ್ಮಿಸುವವರು ಮೇಲೆ ಹೇಳಿದ ಎಲ್ಲ ಅಂಶಗಳನ್ನು ತಿಳಿದಿರಬೇಕು. ಎಂಬ ಅಂಶಗಳನ್ನು ಈ ಶಾಸನವು ಉಲ್ಲೇಖಿಸಿದೆ. ಮೇಲೆ ತಿಳಿಸಿದ ಅಂಶಗಳ ಜೊತೆಗೆ ನಿರ್ಮಾಣದಲ್ಲಿ ಸಂಭವಿಸಬಹುದಾದ ಕೆಲವು ದೋಷಗಳ ಕಡೆಗೆ ವಹಿಸಬೇಕಾದ ಮುನ್ನೆಚ್ಚರಿಕಾ ಕ್ರಮಗಳ ಬಗೆಗೆ ತಿಳಿಸಲಾಗಿದೆ. ಅವುಗಳು ಈ ಕೆಳಗಿನಂತಿವೆ.

- ಕೆರೆಯಿಂದ ನೀರು ಸೋರದಂತೆ ಎಚ್ಚರವಹಿಸಬೇಕು.
- ಮಣ್ಣು ಲವಣಯುಕ್ತವಾಗಿರಬಾರದು.
- ಎರಡು ರಾಜ್ಯಗಳ ಮಧ್ಯದ ಗಡಿಪ್ರದೇಶದಲ್ಲಿ ಕೆರೆ ನಿರ್ಮಿಸಬಾರದು.
- ಕೆರೆಯ ಅಂಗಳದ ಮಧ್ಯದ ಪ್ರದೇಶ(ಕೂರ್ಮ ಪ್ರದೇಶ) ಎತ್ತರ ಅಥವಾ ಉಬ್ಬಾಗಿರಬಾರದು.
- ಕಡಿಮೆ ನೀರು ಸಂಗ್ರಹವಾಗುವ ಪ್ರದೇಶ ಹಾಗೂ ವಿಸ್ತಾರವಾದ ನೀರಾವರಿ ಪ್ರದೇಶ (ಆಯಕಟ್ಟಿನ ಭೂಮಿ) ಇರುವ ಕಡೆ ಕೆರೆ ನಿರ್ಮಿಸಬಾರದು.
- ಕಡಿಮೆ ಭೂಪ್ರದೇಶ, ಅಧಿಕ ನೀರು ಸಂಗ್ರಹವಾಗುವ ಸ್ಥಳದಲ್ಲಿ ಕೆರೆ ನಿರ್ಮಿಸಬಾರದು.

ಎಂಬ ಅಂಶಗಳನ್ನು ಶಾಸನವು ತಿಳಿಸಿದೆ. ಬುಕ್ಕರಾಯನ ಕಾಲಕ್ಕೆ ಅಂದರೆ ಕ್ರಿ.ಶ. ೧೩೬೯ರ ಕಾಲಕ್ಕೆ ಶಾಸನಗಳಲ್ಲಿ ಈ ಅಂಶಗಳು ಬಂದಿರುವುದನ್ನು ಗಮನಿಸಲಾಗಿದೆ. ಇದನ್ನು ಗಮನಿಸಿದರೆ ಇವರ ಹಿಂದಿನ ರಾಜಮನೆತನಗಳು ಆಗಲೇ ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೆರೆಗಳನ್ನು

ನಿರ್ಮಿಸಿರುವ ಸಾಧ್ಯತೆಗಳಿವೆ. ಯಾವ ಜ್ಞಾನವೂ ದಿಢೀರನೆ ಆವಿರ್ಭವಿಸಿ ವ್ಯಾಪಿಸುವುದಿಲ್ಲ. ಅದು ಹುಟ್ಟಿ ಬೆಳೆದು ವಿಸ್ತರಿಸಲು ಸಾಕಷ್ಟು ಅವಧಿಯನ್ನು ತೆಗೆದುಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕವನ್ನಾಳಿದ ವಿಜಯನಗರದ ಪೂರ್ವ ಅರಸರು ಈ ಅಂಶಗಳನ್ನು ಗಮನದಲ್ಲಿರಿಸಿಯೇ ಕೆರೆಗಳನ್ನು ನಿರ್ಮಿಸಿದರು. ಕೆರೆ ನಿರ್ಮಾಣದ ಕಾರ್ಯ ಸಮಾಜದ ಜನರಿಗೆ ಪರಂಪರಾನುಗತವಾಗಿ ಬಂದದ್ದು. ಅದು ಇಂದು ನಿನ್ನೆಯದಲ್ಲ. ಪ್ರಾಚೀನ ಅರಸರ ಕೆರೆಗಳು ಇಂದಿಗೂ ಕೆಲವು ಕಂಡುಬರುತ್ತವೆ. ಅವು ಬುಕ್ಕರಾಯನ ಶಾಸನವು ತಿಳಿಸುವ ಅಂಶಗಳಿಗೆ ಕೈಗನ್ನಡಿಯಂತಿವೆ. ದೀಕ್ಷಿತ್‌ರವರು ಹೊಸದಾದ ಕೆರೆಗಳನ್ನು ನಿರ್ಮಿಸುವುದಕ್ಕಿಂತ ಹಳೆಯ ಕೆರೆಗಳನ್ನು ಜೀರ್ಣೋದ್ಧಾರ ಮಾಡುವುದು ಹೆಚ್ಚು ಸೂಕ್ತ ಎಂದು ತಮ್ಮ ಲೇಖನ 'ಕೆರೆಗಳು;ಚಾರಿತ್ರಿಕ ಅಂಶಗಳು' ಎಂಬುದರಲ್ಲಿ ಹೇಳುತ್ತಾರೆ.[೪೮೨] ಕೆರೆಗಳ ಜೀರ್ಣೋದ್ಧಾರದ ಉಲ್ಲೇಖಗಳು ರಾಷ್ಟ್ರಕೂಟ ದೊರೆ ದಂತಿದುರ್ಗನಿಂದಲೇ ಬಂದಿರುವುದು ಕಂಡುಬರುತ್ತದೆ. ಇವನು ವೈರಮೇಘವೆಂಬ ಕೆರೆಯ ಹುಳನ್ನು ಎತ್ತಲು ದತ್ತಿಕೊಟ್ಟನೆಂದು ತಿಳಿಸಿದೆ.[೪೮೩] ಹೂಳೆತ್ತಲು ದಾನ ನೀಡಿರುವುದು ಅತ್ಯಂತ ವಿರಳ. ಕೆರೆಯೊಂದಿಗೆ ಗಮನಿಸಬೇಕಾದ ಕೆರೆಯ ಅಂಶಗಳೆಂದರೆ ಕೆರೆಯ ಏರಿ, ಕೋಡಿ ಮತ್ತು ತೂಬುಗಳು. ಇವುಗಳನ್ನು ಇಲ್ಲಿ ಚರ್ಚಿಸಲಾಗಿದೆ. ಕೆರೆ ನಿರ್ಮಿಸಿದಾಗ ಏರಿಗಳನ್ನು ಹಾಕುತ್ತಿದ್ದುದು ಸಾಮಾನ್ಯ ಸಂಗತಿಯಾಗಿತ್ತು. ಇದು ಕೃಷಿಯ ಪ್ರಾಥಮಿಕ ಹಂತವನ್ನು ತಿಳಿಸುತ್ತದೆ. ಯಾವಾಗ ಕೆರೆಗಳಿಗೆ ಕೋಡಿ, ತೂಬುಗಳಂತಹ ಅಳವಡಿಕೆ ಸಾಧ್ಯವಾಗತೊಡಗಿತೋ, ಇದು ಕೃಷಿ ಅಭಿವೃದ್ಧಿಯ ಚಾಲನೆಯನ್ನು ತಿಳಿಸುತ್ತದೆ. ಈ ಹಿನ್ನೆಲೆಯಲ್ಲಿ ಕೆರೆಯ ನೀರಿನ ನಿಯಂತ್ರಣದಂತಹ ಅಂಶಗಳು ಮತ್ತು ಇಂತಹ ಅಂಶಗಳ ಉಲ್ಲೇಖಗಳು ಶಾಸನದಲ್ಲಿ ಕಂಡುಬಂದಿವೆ. ಅವುಗಳನ್ನು ಇಲ್ಲಿ ಗುರುತಿಸಲಾಗಿದೆ. ಆದರೆ ಅವುಗಳು ಹೆಚ್ಚಾಗಿ ಜೀರ್ಣೋದ್ಧಾರ ಮಾಡಲು ದಾನ ನೀಡಿದ ವಿವರಗಳಾಗಿ ಕಂಡುಬರುತ್ತವೆ.

**ಕೆರೆಯ ಏರಿಗಳು**

ಕೆರೆಯ ನೀರನ್ನು ಸಂರಕ್ಷಿಸುವ ಹೊಣೆಗಾರಿಕೆಯನ್ನು ಹೊತ್ತ ತಡೆ ಗೋಡೆಯಾಗಿ ಇವು ಕಾರ್ಯನಿರ್ವಹಿಸುತ್ತವೆ. ಸಾಮಾನ್ಯವಾಗಿ ಕೆರೆಯ ಇಳಿಜಾರಿನ ಸುತ್ತಲೂ ಏರಿಯನ್ನು ನಿರ್ಮಿಸಿರುವುದು ಕಂಡಬರುತ್ತದೆ. ಅಲ್ಲದೆ ತೂಬಿನ ಭಾಗದಲ್ಲಿ ದೊಡ್ಡಗಾತ್ರದ ಏರಿಗಳ ನಿರ್ಮಾಣ ಕಂಡುಬರುತ್ತದೆ. ಏರಿ ನಿರ್ಮಾಣ ಕಾರ್ಯದಲ್ಲಿ ತಳಭಾಗದಿಂದ ಅಗಲವಾಗಿ ಮಣ್ಣು ಹಾಕುತ್ತ ಬರಲಾಗುತ್ತದೆ. ಮಣ್ಣಿನ ಮೇಲೆ ಮಣ್ಣು ಹಾಕುತ್ತಾ ಬರುತ್ತಾರೆ. ನಂತರ ಇದಕ್ಕೆ ನೀರು ಬಿಡುತ್ತಾ ಹೋಗುತ್ತಾರೆ. ಇದರಿಂದ ಮಣ್ಣು ಗಟ್ಟಿಯಾಗಿ ಕೂರುತ್ತದೆ. ತಳಭಾಗದಿಂದ ಅಗಲವಾಗಿ ನಿರ್ಮಿಸುತ್ತಾ ಬಂದು ಮೇಲ್ಭಾಗಕ್ಕೆ ಬಂದ ಹಾಗೆ ಕಿರಿದು ಮಾಡುತ್ತಾ ಬರಲಾಗುತ್ತದೆ. ಮೇಲಿನಿಂದ ಇಳಿಜಾರಿನಂತೆ ಈ ಏರಿಗಳು ಕಂಡುಬರುತ್ತವೆ. ಏರಿಗಳ ಇಕ್ಕೆಲಗಳಲ್ಲಿ ಕಲ್ಲಿನಿಂದ ಹೊಂದಿಸಿ ಕಟ್ಟಡದೋಪಾದಿಯಲ್ಲಿ ನಿರ್ಮಿಸಲಾಗುತ್ತದೆ. ಇಳಿಜಾರಿನಂತೆ ಏರಿ ನಿರ್ಮಿಸುವುದರಿಂದ ಕೆರೆಯ ತಳಭಾಗದಲ್ಲಿ ಹೆಚ್ಚಿನ ನೀರನ್ನು ಸಂಗ್ರಹಿಸಿಟ್ಟುಕೊಳ್ಳಲು ಸಾಧ್ಯವಾಗುತ್ತದೆ. ಏರಿಯ ಆಯಕಟ್ಟಿನ ಭಾಗವು ಇಳಿಜಾರಾಗಿರುತ್ತದೆ. ಈ ಇಳಿಜಾರು ರಚನೆಯು ನೀರಿನ ಒತ್ತಡವನ್ನು ವಿರುದ್ಧ ದಿಕ್ಕಿನಿಂದ ತಡೆದು ಏರಿಗೆ ಸಾಕಷ್ಟು ಬಲವನ್ನು ಕೊಡುವಲ್ಲಿ ಸಹಾಯಕವಾಗುತ್ತದೆ. ಇಳಿಜಾರು ಭಾಗಗಳಲ್ಲಿ ಕೆಲವು ಸಸ್ಯಗಳನ್ನು ಬೆಳೆಸಿ ಅದನ್ನು ಮತ್ತಷ್ಟು ಬಲಪಡಿಸುವ ಪದ್ಧತಿಯು ವಾಡಿಕೆಯಲ್ಲಿದೆ.[೪೮೪] ಏರಿಯ ಬಗೆಗೆ ಕುರಿತಾದ ಮಾಹಿತಿಗಳನ್ನು ಶಾಸನಗಳಲ್ಲಿ ಕಾಣಬಹುದಾಗಿದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಏಱಿಂಗಳಿಗೆ ಒಂದು ಹಣವಿನ ಲೆಕ್ಕದಲು ವರ್ಷಪ್ರತಿ ನಿಬಂಧಿ ಆಗಿ ಗದ್ಯಾಣಂ ಒಂದು ಹಣವೆರಡು ಬಿಟ್ಟರೆಂದಿದೆ.[೪೮೫] ಏರಿಯ ನಿರ್ವಹಣೆಗೆ ಪ್ರತಿವರ್ಷ ಹಣವನ್ನು ಬಿಟ್ಟರೆಂದು ಈ ಶಾಸನವು

ತಿಳಿಸುತ್ತದೆ. ಕ್ರಿ.ಶ. ೧೧೨೧ರ ಶಾಸನದಲ್ಲಿ ಮೂಡಣ ಏರಿಯ ಗದ್ದೆದಾನದ ಉಲ್ಲೇಖವಿದೆ.[೪೮೬] ಕೆರೆಯ ಏರಿಯ ಹಿಂದಿನ ಭಾಗದ ಭೂಮಿಗಳು ನೀರಾವರಿ ಪ್ರದೇಶಗಳಾಗಿರುತ್ತಿದ್ದವು. ಅಲ್ಲಿ ಸಾಮಾನ್ಯವಾಗಿ ಗದ್ದೆ ಕಬ್ಬು, ಬಾಳೆಗಳಂತ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಕೆಲವು ಭಾಗದಲ್ಲಿ ಅಡಿಕೆ ಬೆಳೆದಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೦೬ರ ಶಾಸನದಲ್ಲಿ ಏರಿ ಮತ್ತು ತೂಬು ನಿರ್ಮಿಸಿದುದನ್ನು ತಿಳಿಸಿದೆ.[೪೮೭]

ಹೀಗೆ ಕೆರೆಗಳಿಗೆ ನಿರ್ಮಿಸಿದ ಏರಿಯ ಉಲ್ಲೇಖಗಳು ಶಾಸನದಲ್ಲಿ ಕಂಡುಬಂದಿವೆ. ಇಂದು ಏರಿಗಳು ಯಾವ ಸ್ಥಿತಿಯಲ್ಲಿವೆ ಎಂದು ಗಮನಿಸಿದರೆ, ನೀರಿರುವ ಕೆರೆಯ ಏರಿಗಳನ್ನು ಆಗಾಗ ರಕ್ಷಿಸಲಾಗುತ್ತದೆ. ಆದರೆ ನೀರಿಲ್ಲದ ಕೆರೆಗಳ ಏರಿಗಳು ರಸ್ತೆಗಳಾಗಿ ರೂಪಗೊಂಡಿವೆ. ನೀರಿರುವ ಕೆರೆಯ ಏರಿಗಳಿಗೆ ಅತಿಯಾದ ಒತ್ತಡವನ್ನು ಹೇರಬಾರದು. ಅದರಲ್ಲಿ ಬಿರುಕು ಕಂಡ ತಕ್ಷಣ ಮುನ್ನೆಚ್ಚರಿಕೆ ವಹಿಸಬೇಕು. ಏರಿಗಳು ನೀರುಂಬುವಂತಿರಬಾರದು. ಅಂದೇ ಬಸವಣ್ಣನವರು 'ಏರಿ ನೀರುಂಬೊಡೆ ನಾರಿ ತನ್ನ ಮನೆಯಲ್ಲಿ ಕಳುವೊಡೆ ಇನ್ನಾರಿಗೆ ದೂರಲೆಂದು' ಹೇಳಿರುವುದಿದೆ. ಏರಿ ನೀರುಂಡರೆ ಆಗುವ ಅನಾವುತವನ್ನು ಬಸವಣ್ಣ ಅಂದೇ ಗ್ರಹಿಸಿದಂತಿದೆ. ಇಂತಹ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ಕೆರೆ ಏರಿಯ ನಿರ್ವಹಣೆಯಲ್ಲಿ ವಹಿಸಬೇಕಾಗುತ್ತದೆ.

**ತೂಬುಗಳು**

ಕೆರೆಯ ನೀರನ್ನು ನಿಯಂತ್ರಿಸುವ ಸಾಧನಗಳಿಗೆ ತೂಬುಗಳು ಎಂದು ಕರೆಯಲಾಗುತ್ತದೆ. ಈ ತೂಬುಗಳು ಕೆರೆಯ ನೀರು ಹೊರ ಹೋಗದಂತೆ ತಡೆಯುತ್ತವೆ. ಕೆರೆಯ ಗಾತ್ರ ಮತ್ತು ಪ್ರಮಾಣಕ್ಕೆ ಅನುಗುಣವಾಗಿ ಕೆರೆಗಳಿಗೆ ಎರಡು ಮೂರು ತೂಬುಗಳ ನಿರ್ಮಾಣ ಮಾಡಲಾಗುತ್ತದೆ. ಸಾಮಾನ್ಯವಾಗಿ ಕೆರೆಯ ಏರಿಗೆ ಅಂಟಿಕೊಂಡಂತೆ ತೂಬುಗಳ ರಚನೆ ಕಂಡುಬರುತ್ತದೆ. ತೂಬುಗಳನ್ನು ಕಲ್ಲಿನಿಂದ ನಿರ್ಮಿಸಿರುವುದು ಇಂದಿಗೂ ಕಂಡುಬರುತ್ತದೆ. "ಎರಡು ಅಥವಾ ನಾಲ್ಕು ಕಂಬಗಳಿಂದ ತೂಬು ಕೂಡಿರುತ್ತದೆ. ಎರಡು ಕಂಬಗಳ ನಡುವಿನಲ್ಲಿ ಒಂದು ಅಡ್ಡ ಕಲ್ಲನ್ನು ಇರಿಸಲಾಗುತ್ತದೆ. ನಂತರ ಉದ್ದವಾದ ಕಲ್ಲುಗಳ ಮೇಲ್ಭಾಗದಲ್ಲಿ ಅಡ್ಡಗಲ್ಲನ್ನು ಹಾಕಲಾಗುತ್ತದೆ. ಈ ಎರಡು ಅಡ್ಡಕಲ್ಲುಗಳ ನಡುವೆ ಸುಮಾರು ೨೫ ಸೆಂ.ಮೀ. ವ್ಯಾಸದ ರಂಧ್ರವಿರುತ್ತದೆ. ಇದರ ಮೂಲಕವಾಗಿ ರಂಧ್ರದ ಅಳತೆಗೆ ತಕ್ಕ ವಿನ್ಯಾಸವುಳ್ಳ ಮರದ ತುಂಡನ್ನು ಇಟ್ಟು ರಂಧ್ರವನ್ನು ಮುಚ್ಚಲಾಗುತ್ತದೆ. ಆ ಮರದ ದಿಮ್ಮಿಯನ್ನು ಮೇಲಕ್ಕೆತ್ತಿದಾಗ ನೀರು ಕಾಲುವೆಯ ಮುಖಾಂತರ ಹರಿದು ಆಯಕಟ್ಟು ಪ್ರದೇಶಕ್ಕೆ ಹೋಗುತ್ತದೆ. ಮರದ ವಿಶೇಷತೆ ಎಂದರೆ ಅದು ನೀರಿನಲ್ಲಿ ನೆನೆದು, ನೀರು ಕುಡಿದು ಹಿಗ್ಗುತ್ತದೆ. ಈ ರೀತಿಯಾಗಿ ಹಿಗ್ಗಿದ ಮರದ ತುಂಡು ರಂಧ್ರದಲ್ಲಿ ಬಿಗಿಯಾಗಿ ಕೂಡಿದು ಹೊರ ಕಾಲುವೆಯ ಮುಖಾಂತರ ನೀರು ಹರಿಯುವುದನ್ನು ಬಹುಮಟ್ಟಿಗೆ ತಡೆಯುತ್ತದೆ.[೪೮೮] ಕ್ರಿ.ಶ. ೮–೯ನೆಯ ಶತಮಾನದ ಶಾಸನದಲ್ಲಿ ಪೆರ್ಗಡೆ ಚಾಮುಣಯ್ಯ ತೂಯ್ಬು ಮಾಡಿಸಿದನೆಂದಿದೆ.[೪೮೯] ಕ್ರಿ.ಶ. ೯–೧೦ನೆಯ ಶತಮಾನದ ಶಾಸನದಲ್ಲಿ ಕೆಱೆ ಕಟ್ಟಿಸಿ ಕಲ್ಲಿನ ತೂಬು ಅಳವಡಿಸಿದರೆಂದು ತಿಳಿದುಬರುತ್ತದೆ.[೪೯೦] ಕ್ರಿ.ಶ. ೧೧–೧೨ನೆಯ ಶತಮಾನದ ಶಾಸನದಲ್ಲಿ ಕಚ್ಚವೆರ್ಗಡೆ ಕನ್ನೆಗೆರೆಯನ್ನು ಕಟ್ಟಿಸಿ ತೂಂಬನಿಕ್ಕಿಸಿದನೆಂದಿದೆ. ಇದರ ನಿರ್ವಹಣೆಗೆ ಬಿತ್ತವಟ್ಟವನ್ನು ಬಿಟ್ಟರೆಂದು ಶಾಸನವು ತಿಳಿಸುತ್ತದೆ.[೪೯೧]

ಕ್ರಿ.ಶ. ೧೧೧೮–೧೯ರ ಶಾಸನದಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನು ಸುಭಚಂದ್ರ ಸಿದ್ಧಾಂತ ದೇವರಿಗೆ ಪಿರಿಯ ಕೆಱೆಯ ತುಬಿನಿಂ ಬಡಗಣ ಹಳದಿಂ ತೆಂಕ ಕೌಂಗಿನ ತೋಂಟ ಒಳಗಾಗಿ ೩೦ ಗದ್ದೆ ಸಲಗೆಯನ್ನು ಬಿಟ್ಟನೆಂದಿದೆ.[೪೯೨] ಕೆರೆಯ ತುಂಬಿನ ಭಾಗದ ಪ್ರದೇಶಗಳು ನೀರಾವರಿ

ಪ್ರದೇಶಗಳಾಗಿದ್ದವು. ಕೌಂಗು(ಅಡಕೆ) ತೋಟದ ಉಲ್ಲೇಖ ಬಂದಿರುವುದು ಇದಕ್ಕೆ ಸಾಕ್ಷಿಯಂತೆ ಕಂಡುಬರುತ್ತದೆ. ದಡಗದ ವಿಷ್ಣುವರ್ಧನನ ಶಾಸನದಲ್ಲಿ ಹಿರಿಯ ಕೆಱೆಯ ಕೆಳಗಣ ಅಡಕೆಯ ತೋಟವಿರುವ ಉಲ್ಲೇಖವಿದೆ.[೯೩] ಕೆರೆಯ ಕೆಳಗಿನ ಭೂಮಿಯು ನೀರಾವರಿ ಭೂಮಿಯಾಗಿದ್ದು, ಅಲ್ಲಿ ಹೆಚ್ಚಾಗಿ ತೋಟದ ಬೆಳೆಗಳು(ಅಡಕೆ ಮೊದಲಾದ) ಕಂಡುಬಂದಿರುವುದು ಶಾಸನಗಳಿಂದ ತಿಳಿಯುತ್ತದೆ. ಇಂದಿಗೂ ಕೆರೆಯ ಹಿಂದಿನ ಅಥವಾ ಕೆಳಗಿನ ಪ್ರದೇಶಗಳಲ್ಲಿ ತೋಟದ ಅಥವಾ ನೀರಾವರಿ ಬೆಳೆಗಳಾದ ಕಬ್ಬು, ಭತ್ತ ಮೊದಲಾದವನ್ನು ಕಾಣಬಹುದಾಗಿದೆ. ಅಳೀಸಂದ್ರದ ಕ್ರಿ.ಶ. ೧೦೪೮, ೧೧೦೩, ೧೧೮೨, ೧೧೮೩ರ ಶಾಸನದಲ್ಲಿ ಕೆಱೆಯ ಪ್ರಭುತ್ವಕೆ ೫೦೦ ಹೊಂನಂ ಬಿಟ್ಟರೆಂದಿದೆ.[೯೪] ಕೆಱೆಯ ಪ್ರಭುತ್ವವೆಂದರೆ ಕೆರೆಗೆ ಸಂಬಂಧಿಸಿದ ನಿರ್ವಹಣೆಯನ್ನು ನೋಡಿಕೊಳ್ಳುವ ವರ್ಗವಿರುವ ಸಾಧ್ಯತೆಗಳಿವೆ. ಇದು ಕೆರೆಯ ಏರಿ, ತೂಬು, ಕೋಡಿ, ಕೆರೆಯ ಊಳು ಮೊದಲಾದವುಗಳಿಗೆ ಸಂಬಂಧಿಸಿದ ಕೆರೆ ನಿರ್ವಹಣೆಯ ಕಾರ್ಯಗಳನ್ನು ಮಾಡುತ್ತಿತ್ತು.

ಕ್ರಿ.ಶ. ೧೧೩೯-೪೦ರ 'ಶಾಸನದಲ್ಲಿ ಮುತ್ತೆಯನು ತನ್ನ ತಾಯಿ ಮುತ್ತಬ್ಬೆಯು ಸ್ವರ್ಗಸ್ಥಳಾದ ನೆನಪಿಗೆ ಕೆಱೆಯ ಮೇಲಕ್ಕವನಿಕ್ಕಿಸಿ.... ಕಲ್ಲ ತೂಂಬಿನ ಮೊದಲಲು ಗದ್ದೆಸ೩ ಎಂದಿದೆ.[೯೫] ಕೆಱೆಕಟ್ಟಿಸಿ ಕಲ್ಲಿನ ತೂಬು ಮಾಡಿಸಿ, ಮೂರು ಗದ್ದೆ ಸಲಗೆ ಭೂಮಿಯನ್ನು ಕೆರೆಯ ನಿರ್ವಹಣೆಗಾಗಿ ಬಿಟ್ಟಿರುವುದನ್ನು ಶಾಸನವು ತಿಳಿಸಿದೆ. ಕ್ರಿ.ಶ. ೧೩ನೆಯ ಶತಮಾನದಲ್ಲಿ ನೊಣಬಯ್ಯ 'ಹಿರ್ಯ್ಯಕೆಱೆಯ ತುಂಬನಿಕ್ಕಿದನು[೯೬] ಎಂದಿದೆ. ಕ್ರಿ.ಶ. ೧೨೫೯ರ ಶಾಸನದಲ್ಲಿ ಕೆಱೆ ಮತ್ತು ಕೆಱೆಯ ತುಂಬಿನ ಧರ್ಮಕ್ಕಾಗಿ ಗದ್ಯಾಣ ೨೦೦ ಱಕ್ಕಂ ಬೇಳೆ ಬಡ್ಡಿಯಲು ವರುಷಕ್ಕೆ ಗದ್ಯಾಣಂ ಮೂವತುವನುಂ ಬಿಟ್ಟರೆಂದಿದೆ.[೯೭] ಬಡ್ಡಿಯ ಹಣದಿಂದ ಕೆರೆಯ ನಿರ್ವಹಣೆಯಂತಹ ಕಾರ್ಯಗಳು ನಡೆದಿರುವುದನ್ನು ಈ ಶಾಸನವು ತಿಳಿಸುತ್ತದೆ. ಕ್ರಿ.ಶ. ೧೦-೧೧ನೆಯ ಶತಮಾನದ ಶಾಸನದಲ್ಲಿ ಉತ್ತವಯ್ಯನ ಮಗ ಕೆಱೆಯ ಕಟ್ಟಿಸಿ ಕಲ್ಲಿನ ತೂಬು ಅಳವಡಿಸಿದನೆಂದು ತಿಳಿಸುತ್ತದೆ.[೯೮] ಕ್ರಿ.ಶ. ೧೨೩೭ರ ಶಾಸನದಲ್ಲಿ ತೂಬು ನಿರ್ಮಿಸಿದರೆಂದು ತಿಳಿಸುತ್ತದೆ.[೯೯] ಕ್ರಿ.ಶ. ೧೧೮೭ರ ಶಾಸನದಲ್ಲಿ ಚಟ್ಟಿಸೆಟ್ಟಿಯು ಕೆಱೆಕಟ್ಟಿಸಿ ತೂಬನಿಕ್ಕಿಸಿದನು ಎಂದಿದೆ. ಅಲ್ಲದೆ ತಟಾಕ ಕಲ್ಲಿನಕೆಱೆ, ಮಾವಿನ ಕೆಱೆ ಮೊದಲಾದ ಕೆರೆಗಳನ್ನು ಕಟ್ಟಿಸಿ ಒಟ್ಟು ೩೦೦ ಕಂಬ ಬೆದ್ದಲು, ಗರ್ದ್ದೆ ಕೊಳಗ ೧೦ ಭತ್ತಬಳ್ಳ ೧ ದಾನ ನೀಡಿದನೆಂದಿದೆ.[೫೦೦] ಕ್ರಿ.ಶ. ೧೧೩೨ರ ಶಾಸನದಲ್ಲಿ ಕಲ್ಲ ತುಂಬಿನ ಸಾಲ ಮಾವಿನ ಗದ್ದೆ ಸಲಗೆ ಮೂಱುಕೊ" ಉಲ್ಲೇಖವಿದೆ.[೫೦೧] ಕ್ರಿ.ಶ. ೧೧೪೩ರ ಶಾಸನದಲ್ಲಿ ಆಳ್ವಿಭಟಾರರು ತಾವು ದೇವಾಲ್ಯದಿಂ ಮೂಡಲು ಹೊಂನು ಕೊಟ್ಟು ತುಂಬನಿಕ್ಕಿಸಿ ಮೇಲುಮಕ್ಕಿಯ ಗದ್ದೆಯಂ ಮಾಡಿಸಿ ದೇವರಿಗೆ ಬಿಡಿಸಿದರು ಎಂದಿದೆ.[೫೦೨] ಕ್ರಿ.ಶ. ೧೦೬೨ರ ಶಾಸನದಲ್ಲಿ 'ಕೆಱೆಯ ತೂಬಿಂ' ಉಲ್ಲೇಖವಿದೆ.[೫೦೩] ಕ್ರಿ.ಶ.೧೨೩೦ರ ಶಾಸನದಲ್ಲಿ ಹಿರಿಯ ಕೆಱೆಯ ಕಲ್ಲತೂಬನಿಕ್ಕಿಸಿದರು ಎಂದಿದೆ.[೫೦೪] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ಕೆರೆಯ ಮೂಡಣ ತೂಂಬನು ದೇವರ್ಗ್ಗೆ ಬಿಟ್ಟನು ಎಂದಿದೆ[೫೦೫] ಕ್ರಿ.ಶ. ೧೧೭೩ರ ಶಾಸನದಲ್ಲಿ ತೂಂಬಿನನಿತು ಹರಿವಲ್ಲಿ ಸ ೨ ಎಂದಿದೆ.[೫೦೬] ಕ್ರಿ.ಶ. ೧೧೬೪ರ ಶಾಸನದಲ್ಲಿ ಬಿಟ್ಟ ಬೋವಂ ಕಲ್ಲ ತುಂಬಂ ಮಾಡಿಸಿ ದಾನ ನೀಡಿದನೆಂದಿದೆ.[೫೦೭]

ಕೆರೆಗಳ ನಿರ್ವಹಣೆಯಲ್ಲಿ ತೂಬುಗಳ ಪಾತ್ರ ಹಿರಿದಾಗಿರುತ್ತದೆ. ಅರಸರಲ್ಲದೆ ಅಧಿಕಾರಿ ವರ್ಗದವರೂ ತೂಬುನಿರ್ಮಾಣ, ಜೀರ್ಣೋದ್ಧಾರಗಳಂತಹ ಕಾರ್ಯಗಳನ್ನು ನಿರ್ವಹಿಸಿಕೊಂಡು ಬಂದಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಈ ತೂಬುಗಳಿಂದ ನೀರು ದುರುಪಯೋಗವಾಗದಂತೆ ನೀರಗಂಟಿಯು ಕೆರೆಯನ್ನು ಕಾವಲು ಕಾಯಬೇಕಾಗುತ್ತಿತ್ತು. ಇದರ ನಿರ್ವಹಣೆಗಾಗಿ ಅವರಿಗೆ ಆಯ ಕೊಡಲಾಗುತ್ತಿತ್ತು ಎಂಬ ಅಂಶಗಳು ಇಂದಿನವರೆಗೂ ರೂಢಿಯಲ್ಲಿರುವುದು ಕಂಡುಬರುತ್ತದೆ.

**ಕೋಡಿ**

ಕೆರೆಗಳು ಗರಿಷ್ಠ ಮಟ್ಟವನ್ನು ಮೀರಿ ಅನಾಹುತ ಸಂಭವಿಸದಂತೆ, ಕೆರೆಯ ಮಟ್ಟಕ್ಕೆ ಅನುಗುಣವಾಗಿ ನಿರ್ಮಿಸುವ ತಂತ್ರಗಾರಿಕೆಯನ್ನು ಕೋಡಿಗಳೆಂದು ಕರೆಯಲಾಗುವುದು. ಕೋಡಿಗಳನ್ನು ಏರಿಯ ದಿಕ್ಕಿನಲ್ಲಿ, ಜನರು ವಾಸಿಸುವ ಪ್ರದೇಶ ಭಾಗಗಳ ಕಡೆಗೆ ನಿರ್ಮಿಸುವುದಿಲ್ಲ. ಏರಿಯ ಕಡೆಗೆ ನಿರ್ಮಿಸಿದರೆ ಕೆರೆಯು ತುಂಬಿದ ನಂತರ ನೀರು ಜನರು ವಾಸ ಮಾಡುವ ಸ್ಥಳಗಳಿಗೆ ನುಗ್ಗಿ ಹಾನಿಯುಂಟು ಮಾಡುತ್ತದೆ. ಸಾಮಾನ್ಯವಾಗಿ ಕೆರೆಗಳನ್ನು ನಿರ್ಮಿಸುವಾಗ ಜನರು ವಾಸಮಾಡುವ ಪ್ರದೇಶಕ್ಕಿಂತ ತಗ್ಗಿನಲ್ಲಿ ನಿರ್ಮಿಸಲಾಗುತ್ತಿತ್ತು. ಕೆರೆಯ ಗರಿಷ್ಠ ಮಟ್ಟ ಹಾಗೂ ಕೋಡಿಯ ಮಟ್ಟ ಒಂದೇ ಆಗಿರಬೇಕು. ಕೆರೆಯು ಅತೀ ದೊಡ್ಡದಾಗಿದ್ದರೆ ಅಲ್ಲಿ ಎರಡು ಕೋಡಿಗಳನ್ನು ನಿರ್ಮಿಸಲಾಗುತ್ತಿತ್ತು. ಇವುಗಳನ್ನು ಸಾಮಾನ್ಯವಾಗಿ ಕಲ್ಲು, ಗಾರೆಗಳಿಂದ ಕಟ್ಟುತ್ತಾರೆ. ಕೋಡಿಯ ಇಕ್ಕೆಲಗಳಲ್ಲಿ ಕೆಲವೊಮ್ಮೆ ಭದ್ರವಾದ ಕಲ್ಲಿನ ಗೋಡೆಯನ್ನು ನಿರ್ಮಿಸಿ ಕೆರೆ ಏರಿಯು ಕೋಡಿಯ ಮೇಲೆ ಕುಸಿಯದಂತೆ ಕಾಪಾಡುತ್ತಾರೆ. ಕೆಲವು ಉದಾಹರಣೆಗಳಲ್ಲಿ ಕೋಡಿಗಳಿಗೆ ಕಂಬಗಳನ್ನು ಇರಿಸುವ ವಾಡಿಕೆಯಿತ್ತು. ಕೋಡಿ ಬಿದ್ದ ಸಂದರ್ಭದಲ್ಲಿ ಈ ಕಂಬಗಳ ಮೂಲಕ ಕೆರೆ ಏರಿಯ ತುದಿಯಿಂದ ಮತ್ತೊಂದು ತುದಿಗೆ ಹೋಗಲು ಅನುಕೂಲವಾಗುವಂತೆ ಅಳವಡಿಸಲಾಗುತ್ತದೆ. ಹೆಚ್ಚು ನೀರು ಸಂಗ್ರಹಿಸಬೇಕೆಂದಾಗ ಈ ಕಂಬಗಳಿಗೆ ಅಡ್ಡಲಾಗಿ ಕೆಲವು ಮರ, ಕಲ್ಲುಗಳನ್ನು ಇರಿಸಿ ಮುಚ್ಚಿ ನೀರನ್ನು ಶೇಖರಿಸುತ್ತಾರೆ.[೫೦೮] ಈ ರೀತಿ ಕೋಡಿಗಳ ನಿರ್ಮಾಣಗಳು ಕಂಡುಬರುತ್ತವೆ. ಕೋಡಿಗಳ ನಿರ್ಮಾಣವು ಕೆರೆಗಳ ಅಭಿವೃದ್ಧಿಯ ಮುನ್ನೋಟದ ಚಲನೆಯನ್ನು ಸೂಚಿಸುತ್ತವೆ. ಕರ್ನಾಟಕದ ಅತಿದೊಡ್ಡ ಕೋಡಿ ನಿರ್ಮಾಣವು 'ಶಿವಮೊಗ್ಗ ಜಿಲ್ಲೆಯ ಮದಗ ಮಾಸೂರು ಕೆರೆಯಲ್ಲಿ ಇದ್ದು, ಇದರ ಉದ್ದವು ೧೫೭ ಅಡಿ ಇದ್ದು, ಐದು ಅಡಿಗಳಷ್ಟು ಅಗಲವಿದೆ.[೫೦೯]

ಕ್ರಿ.ಶ. ೮೩೭ರ ಶಾಸನದಲ್ಲಿ ಕೆರೆಯಕೋಡಿಯ ನಾಶಪಡಿಸಿದವನು ತನ್ನ ತಾಯಿ ತಂಗಿಯರ ಸಂಗ ಮಾಡಿದ ಪಾಪಕ್ಕೆ ಗುರಿಯಾಗುವನು ಎಂದು ತಿಳಿಸಿದೆ.[೫೧೦] ಕೆರೆಯ ಬಗೆಗೆ ಮತ್ತು ಕೆರೆಗೆ ನಿರ್ಮಿಸಿದ ಕೋಡಿಯ ಕುರಿತ ಈ ಮಾತುಗಳು, ಕೆರೆಯ ಬಗೆಗೆ ಸಮಾಜದ ಜನರು ನೀಡಿದ್ದ ಮಾನ್ಯತೆ ಮತ್ತು ಅದರ ಮಹತ್ವಗಳು ಇದರಿಂದ ತಿಳಿಯುತ್ತವೆ. ತನ್ನ ಕುಟುಂಬದಂತೆ ತಮಗೆ ಜೀವರಕ್ಷಕವಾದ ನೀರಿನ ಸಂಗ್ರಹದ ಕೆರೆಯೊಂದಿಗಿರುವ ಭಾವನಾತ್ಮಕ ಸಂಬಂಧದ ಅಂಶಗಳು ಇಲ್ಲಿ ಕಂಡುಬರುತ್ತವೆ. ಅಲ್ಲದೆ ಕೆರೆಯ ಕೋಡಿಯು ಇಡೀ ಕೆರೆಯ ನೀರಿಗೆ ಅಡ್ಡಲಾಗಿ ಕೆರೆಯ ನೀರನ್ನು ಹಿಡಿದಿಟ್ಟಿರುತ್ತದೆ. ಇದನ್ನು ಕೆಡಿಸಿದರೆ ಇಡೀ ಕೆರೆಯ ನೀರೆಲ್ಲ ಖಾಲಿಯಾಗುವ ಅಂಶವನ್ನು ಮನಗಂಡ ಸಾಧ್ಯತೆಗಳಿಂದ ಇದನ್ನು ಕೆಡಿಸಿದರೆ ಬರುವ ಪಾಪವನ್ನು ಹೇಗೆ ಊಹಿಸಿಕೊಳ್ಳಲು ಸಾಧ್ಯವಿಲ್ಲವೋ ಊರಿನ ಸಂಪತ್ತಾದ ನೀರನ್ನು ವ್ಯರ್ಥವಾಗಿ ಹಾನಿ ಮಾಡಿದಾಗಲೂ, ಸಮಾಜದ ಜನರಿಗೆ ಊಹಿಸಿಕೊಳ್ಳಲು ಸಾಧ್ಯವಿಲ್ಲವೆಂಬ ಅಂಶಗಳು ಈ ಶಾಸನದ ಆಶಯಗಳ ಹಿಂದಿದೆ.

ಕ್ರಿ.ಶ. ೧೧೯೦ರ ಶಾಸನವು ಕೋಡಿಯನ್ನು ಉಲ್ಲೇಖಿಸಿದೆ.[೫೧೧] ಕ್ರಿ.ಶ. ೧೧೯೬ರ ಶಾಸನದಲ್ಲಿ ಕೋಡಿಯ ಗದ್ದೆಕೊ ೧೦ರ ಉಲ್ಲೇಖವಿದೆ.[೫೧೨] ಕ್ರಿ.ಶ. ೧೦೬೬ರ ಶಾಸನದಲ್ಲಿ ಪಡವನೀರ್ವ್ವರಿವ ಕಂಚಿಯ ಕೆರೆಯ ಮೂಡಣ ಕೋಡಿಯಗದ್ದೆ ಮತ್ತರೊಂದು ಮದುಗೆಱೆಯ ಪಿರಿಯತುಂಬಿನ ಮೊದಲ ತೋಂಟದ ಬಳ್ಳಿ ೫೦೦ ಕಲಿದೇವರ ದೇವಾಲಯದ ಜೀರ್ಣೋದ್ಧಾರ ಮೊದಲಾದ ಕಾರ್ಯಗಳಿಗೆ ಬಿಟ್ಟರು ಎಂದಿದೆ.[೫೧೩] ಕ್ರಿ.ಶ. ೧೧೧೫ರ ಶಾಸನದಲ್ಲಿ ಸಾಲಕೆಱೆಯ ಕೋಡಿಯಿಂದಂ ಕೆಳಗೆ ಗಳ್ದೆಯಲು ಮತ್ತರು ೧ ಕೋಡಿಯಿಂದೊಳಗಾದ ತೋಂಟದ ಸ್ಥಳದ ನಿವಳಿಯಲು ಬೆದಲು

ಮೊದಲಾದ ಉಲ್ಲೇಖವಿದೆ.[೫೧೪] ಶಿವಮೊಗ್ಗ ೬೪). ಕ್ರಿ.ಶ. ೧೧೫೬ರ ಶಾಸನದಲ್ಲಿ 'ಕೋಡಿಯ ನೀರುವರಿ ನೀರೊಳಕೊಳು' ಎಂದು ಉಲ್ಲೇಖಿಸಿದೆ.[೫೧೫]

ಹೀಗೆ ಶಾಸನದಲ್ಲಿ ಬರುವ ಕೋಡಿಯ ಉಲ್ಲೇಖಗಳು ಜಮೀನಿನ ಮೇರೆಯನ್ನು ಹೇಳುವಾಗ, ದಾನದ ಭೂಮಿಯ ಉಲ್ಲೇಖ ನೀಡುವಾಗ ಹೆಚ್ಚಾಗಿ ಬಳಕೆಗೊಂಡಿರುವುದು ಕಂಡುಬರುತ್ತದೆ.

ಕೆರೆಗಳ ಸುರಕ್ಷತೆಯ ದೃಷ್ಟಿಯನ್ನು ಅರಿತ ಕೆರೆ ನಿರ್ಮಾಪಕರು ಕೋಡಿಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಕೆರೆಯ ನೀರು ಅಧಿಕ ಒತ್ತಡಕ್ಕೆ ಗುರಿಯಾಗದಂತೆ ಎಚ್ಚರವಹಿಸಿ ಇವುಗಳ ನಿರ್ಮಾಣ ಮಾಡಿರುವುದು ಇಂದಿಗೂ ಕಂಡುಬರುತ್ತದೆ. ಕೆರೆಯಲ್ಲಿನ ನೀರು ಸಮಪ್ರಮಾಣ ಕಾಯ್ದುಕೊಳ್ಳುವ ಉದ್ದೇಶ ಇದರ ರಚನೆಯ ಹಿಂದೆ ಅಡಗಿದೆ. ಕೆರೆಯಲ್ಲಿ ಅಧಿಕ ನೀರು ಸಂಗ್ರಹವಾದರೆ ಅದನ್ನು ಹೊರ ಹಾಕುವ ಕಾರ್ಯವನ್ನು ಕೋಡಿ ನಿರ್ವಹಿಸುತ್ತದೆ. ಇಂದಿಗೂ ಹಳ್ಳಿಗಳ ಕಡೆ 'ಕೋಡಿಯೊಡೆಯಬಾರದು' ಎನ್ನುತ್ತಾರೆ. ಕಾರಣವಿಷ್ಟೆ ಕೆರೆಯ ಕೋಡಿಯೊಡೆದರೆ ರಭಸದಿಂದ ಬರುವ ಕೆರೆಯ ಅಲೆಗಳು ಕೋಡಿಗೆ ಬಂದು ಅಪ್ಪಳಿಸುತ್ತವೆ. ಆಗ ಕೆರೆಯ ನೀರು ಕೋಡಿಯಿಂದ ಹೊರಬರುತ್ತದೆ. ಕೋಡಿಯು ಕೆರೆಯ ನೀರನ್ನು ಕೋಡಿಗಿಂತ ಅರ್ಧ ಅಡಿ ಕೆಳಗಡೆ ಇರುವಂತೆ ನೋಡಿಕೊಳ್ಳುವುದು ಕಂಡುಬರುತ್ತದೆ. ಕೋಡಿಯ ನಿರ್ಮಾಣದಿಂದಾಗಿ ತೂಬುಗಳ ಬಳಿ ಸಿಕ್ಕಿಕೊಳ್ಳುವ ಕಸಕಡ್ಡಿ, ಪ್ರಾಣಿ ಮೊದಲಾದವುಗಳ ಮೃತ ದೇಹ ಬಂದು ಕೋಡಿಬಳಿ ಶೇಖರಣೆಯಾಗುತ್ತದೆ. ಇದು ನೀರು ಸುಗಮವಾಗಿ ಹರಿಯಲು ನೆರವಾಗುತ್ತದೆ. ಒಂದು ಕೆರೆಯು ತುಂಬಿ ಕೋಡಿಯೊಡೆದರೆ ಮತ್ತೊಂದು ಕೆರೆಗೆ ನೀರು ಹೋಗಲು ಅವಕಾಶ ಕಲ್ಪಿಸಲಾಗುತ್ತದೆ. ಇದನ್ನು ಕಲ್ಲು ಮತ್ತು ಗಾರೆಗಳಿಂದ ನಿರ್ಮಿಸಲಾಗುತ್ತದೆ. ಆಗಾಗ ಇದರ ನಿರ್ವಹಣೆಯ ಕಾರ್ಯಗಳನ್ನು ಮಾಡಿಕೊಂಡು ಬಂದರೆ ಕೆರೆಯ ಸ್ವಾಸ್ಥ್ಯವನ್ನು ಕಾಪಾಡಲು ಕೋಡಿಯು ನೆರವಾಗುತ್ತದೆ.

**ಕಟ್ಟೆಗಳು**

ಕಟ್ಟೆಗಳೆಂದರೆ ಕೆರೆಗಳಿಗಿಂತ ಚಿಕ್ಕದಾಗಿರುತ್ತವೆ. ಇವುಗಳಿಗೆ ಒಡ್ಡುಗಳು ಎಂತಲೂ ಕರೆಯಲಾಗುತ್ತದೆ. ಕೆರೆಗಳನ್ನು ನೀರಾವರಿಗೆ ಬಳಸಿದರೆ, ಕಟ್ಟೆಗಳನ್ನು ದನಕರುಗಳಿಗಾಗಿ ಉಪಯೋಗಿಸುತ್ತಾರೆ ಎಂದು ಫ್ರಾನ್ಸಿಸ್ ಬುಕಾನನ್ ತನ್ನ ದಿನಚರಿಯಲ್ಲಿ ಬರೆದಿದ್ದಾನೆ.[೫೧೬]

ಕ್ರಿ.ಶ. ೯೭೦ರ ಶಾಸನದಲ್ಲಿ ಕಟ್ಟೆಯಂ ಕಟ್ಟಿಸಿ ತೂಬನಿಕ್ಕಿಸಿದರೆಂದು ತಿಳಿಸುತ್ತದೆ.[೫೧೭] ಕಟ್ಟೆಗೆ ತೂಬು ಇರಿಸಿದ್ದನ್ನು ಈ ಶಾಸನವು ತಿಳಿಸುತ್ತದೆ. ಇದನ್ನು ಗಮನಿಸಿದರೆ ಇದು ದೊಡ್ಡ ಪ್ರಮಾಣದ ಕಟ್ಟೆಯಾಗಿರುವ ಸಾಧ್ಯತೆ ಇದ್ದು, ಕೃಷಿಗೆ ಬಳಸಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೯೯ರ ಶಾಸನದಲ್ಲಿ 'ಧ್ರುವಜಲವ ಹಂತಾಗಿ ಕಟ್ಟಿಸಿದರಾಗಿ ಇಕೆಱೆಗಳ ಕಟ್ಟೆಕಾಲುವೆಯ' ಎಂದಿದೆ.[೫೧೮] ಕರ್ನಾಟಕದಾದ್ಯಂತ ಅಲ್ಲಲ್ಲಿ ಕಟ್ಟೆ ಸೂಚಕ ಊರುಗಳ ಹೆಸರು ಕಂಡುಬರುತ್ತವೆ. ಉದಾಹರಣೆಗೆ ಬಸುರಿಕಟ್ಟೆ, ಶಿವನೇಕಟ್ಟೆ, ದೊಸರಿಕಟ್ಟೆ ನೇರಲಕಟ್ಟೆ, ಕುಂಬರಗಟ್ಟೆ, ನಲ್ಲಿಕಟ್ಟೆ, ಹುಲ್ಲುಕಟ್ಟೆ ಈ ರೀತಿಯ ಕಟ್ಟೆ ಸೂಚಕ ಪದಗಳ ಊರುಗಳು ಕಂಡುಬರುತ್ತವೆ. ಈ ಊರುಗಳಲ್ಲಿ ಇಂದಿಗೂ ಕಟ್ಟೆಗಳು ಕಂಡುಬರುತ್ತವೆ. ಆದರೆ ಬದಲಾದ ಇಂದಿನ ಸನ್ನಿವೇಶದಲ್ಲಿ ಮಳೆಯ ಅಭಾವದಿಂದಾಗಿ ಕಟ್ಟೆಗಳು ಬತ್ತಿ ಹೋಗಿವೆ. ಅವುಗಳನ್ನು ಸಮಮಾಡಿ ಜನರು ಈ ಪ್ರದೇಶಗಳನ್ನು ಆಕ್ರಮಿಸಿಕೊಂಡು ಕೃಷಿ ಮಾಡುತ್ತಿರುವುದು ಕಂಡುಬರುತ್ತಿದೆ. ಕ್ರಿ.ಶ. ೧೩೧೧ರ ಶಾಸನದಲ್ಲಿ ಹರಿಹರಪುರದ ಕಟ್ಟೆಗೆ ಬಲ್ಲಾಳದೇವರಸರು

ಬಿಜಯಂಗೆಇದು ಆರೋಗಣೆಯಂಮಾಡಿ(ಊಟ ಮಾಡಿ) ಕಟ್ಟೆಕಾಲುವೆಯ ಚಿತ್ರೈಸಿ ಕಟ್ಟುಕಾಲುವೆಯ...... ಕಾಲುವೆಯ..... ವರ್ಷಂ ಪ್ರತಿ ಮಾಡಿಸುವುದಕೆ ಹರಿಹರ ಭಟ್ಟೋಪಾಧ್ಯಾಯರಿಗೆ ಬಿಟ್ಟಂತಿದೆ.[೫೧೯] ಈ ಶಾಸನದಲ್ಲಿ ಅರಸನು ಕಟ್ಟೆಗೆ ಸಂಬಂಧಿಸಿದ ಕಾಲುವೆಯನ್ನು ನೋಡಿಕೊಂಡು ಹೋಗಿದ್ದಾನೆ. ಇದರ ಮೇಲ್ವಿಚಾರಣೆಗೆ ಹರಿಹರ ಭಟ್ಟೋಪಾಧ್ಯಾಯರಿಗೆ ಬಿಟ್ಟಂತಿದೆ. ಇವರು ಪ್ರತಿವರ್ಷ ಅದಕ್ಕೆ ಸಂಬಂಧಿಸಿದ ನಿರ್ವಹಣೆಯ ಕಾರ್ಯಗಳನ್ನು ಮಾಡಿಸಬೇಕು ಎಂದು ಶಾಸನವು ತಿಳಿಸುತ್ತದೆ. ಕ್ರಿ.ಶ. ೧೩೦೫-೦೬ ಶಾಸನದಲ್ಲಿ ಕಟ್ಟೆಯ ಕೆಲಸ ಕಾಲುವೆ ಕೆಚ಼ಿಯ ಕೆಲಸಕ್ಕೆ ಸ ೨ ನೀಡಿದಂತೆ ತಿಳಿಸಿದೆ.[೫೨೦] ಕ್ರಿ.ಶ. ೧೧೨೧ರ ಶಾಸನದಲ್ಲಿ ಕಟ್ಟೆಯ ಕೋಡಿಯ ಉಲ್ಲೇಖವಿದೆ.[೫೨೧] ಕ್ರಿ.ಶ. ೧೧೫೦ರ ಶಾಸನದಲ್ಲಿ ಕಟ್ಟೆಯ ಕೆಳಗೆ ಬಿಟ್ಟ ಭೂಮಿ ಕಮ್ಮ ೭೦೦ ಎಂದಿದೆ.[೫೨೨] ಕ್ರಿ.ಶ. ೧೧೦೬ರ ಶಾಸನದಲ್ಲಿ ಬೆಳ್ಳಕಟ್ಟೆಯ ಕೋಡಿಯ ಉಲ್ಲೇಖವಿದೆ.[೫೨೩] ಕ್ರಿ.ಶ. ೧೨-೧೩ನೆಯ ಶತಮಾನದ ಶಾಸನದಲ್ಲಿ ಕಟ್ಟೆಯ ಉಲ್ಲೇಖ ಕಂಡುಬರುತ್ತದೆ.[೫೨೪]

ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ ಕಟ್ಟೆಗೆ ನೀರಿಂಗೆ ಇಡೆದು ಬಿದ್ದ[೫೨೫] ಎಂದಿದೆ. ನೀರಿಗಾಗಿ ಹೋರಾಟಗಳು ಇಂದಿಗೂ ನಡೆಯುತ್ತಲೇ ಮುಂದುವರೆದುಕೊಂಡು ಬಂದಿವೆ. ಹಳ್ಳಿಗಳ ಮಧ್ಯೆ, ತಾಲ್ಲೂಕುಗಳ ಮಧ್ಯೆ, ರಾಜ್ಯಗಳ ಮಧ್ಯೆ ನೀರಿನ ಸಮಸ್ಯೆಗಳು ಕಂಡುಬರುತ್ತಿವೆ.

ಕಟ್ಟೆಗಳು ಕೆರೆಗಳಿಗಿಂತ ಚಿಕ್ಕ ಜಲಾಶಯಗಳಾಗಿದ್ದು, ಇವುಗಳನ್ನು ನೀರಾವರಿಗೆ ಬಳಸಿದ ಸಾಧ್ಯತೆಗಳು ಕಡಿಮೆ. ದನಕರು, ಪ್ರಾಣಿ ಪಕ್ಷಿಗಳ ಕುಡಿಯುವ ನೀರಿಗಾಗಿ ಕಟ್ಟಿರುವುದು ಕಂಡುಬರುತ್ತದೆ. ಜನರ ಬಾಯಿಯಲ್ಲಿ 'ಕೆರೆ ಕಟ್ಟೆ' ಎಂಬ ಪದಗಳು ಹೆಚ್ಚಾಗಿ ಬಳಕೆಯಲ್ಲಿವೆ. ಕಟ್ಯಾಗೆ ನೀರಿದ್ರ ಬಟ್ಟಲಾಗ ಮುದ್ದಿ' ಎಂಬ ಗಾದೆ ಮಾತಿದೆ. ಈ ಮಾತು ಕೆಲವೊಮ್ಮೆ ಕಟ್ಟೆಯ ನೀರನ್ನು ವ್ಯವಸಾಯಕ್ಕೆ ಬಳಸಿದ್ದಿರಬೇಕು ಎಂಬುದನ್ನು ತಿಳಿಸುವಂತಿದೆ. ಈ ಕಟ್ಟೆಗಳನ್ನು ಪ್ರಕೃತಿದತ್ತವಾಗಿ, ಹಳ್ಳ ಮೊದಲಾದ ಅರಣ್ಯದ ಭಾಗಗಳ ಬಯಲಲ್ಲಿ ನಿರ್ಮಿಸಲಾಗುತ್ತಿತ್ತು. ಮೇಯಲು ಅರಣ್ಯಕ್ಕೆ ಹೋದ ದನಕರುಗಳು ನೀರು ಕುಡಿಯಲಿ ಎಂಬ ಉದ್ದೇಶದಿಂದ ಈ ರೀತಿ ನಿರ್ಮಿಸಿರುವ ಸಾಧ್ಯತೆಗಳಿವೆ. ದೊಡ್ಡ ಜಲಾಶಯಗಳಿಗೂ ಕಟ್ಟೆಯ ಪದಪ್ರಯೋಗವಾಗಿರುವುದಿದೆ. ಕನ್ನಂಬಾಡಿ ಕಟ್ಟೆ ಎಂಬ ಹೆಸರನ್ನು ಅಣೆಕಟ್ಟೆಗೆ ಇಟ್ಟಿರುವುದನ್ನು ಇಂದು ನಾವು ಗಮನಿಸಬಹುದು. ಕೆರೆ ಮತ್ತು ಕಟ್ಟೆಗಳಿಗಿರುವ ವ್ಯತ್ಯಾಸವೆಂದರೆ ಕೆರೆಗಳು ಗಾತ್ರದಲ್ಲಿ ದೊಡ್ಡದಾಗಿದ್ದರೆ, ಕಟ್ಟೆಗಳು ಗಾತ್ರ, ವಿಸ್ತೀರ್ಣದಲ್ಲಿ ಕಿರಿದಾಗಿರುತ್ತವೆ. ಕೆರೆಗಳಂತೆ ಕಟ್ಟೆಗಳು ತೂಬುಗಳ ರಚನೆಯಿಂದ ಕೂಡಿರುವುದಿಲ್ಲ. ಒಟ್ಟಿನಲ್ಲಿ ನೀರು ಸಂಗ್ರಹಣೆಯ ಆಕರಗಳಾಗಿ ಕಂಡುಬರುತ್ತವೆ. ಇಂದು ಕಟ್ಟೆಗಳ ಬದಲು ಹೊಂಡಗಳನ್ನು ನಿರ್ಮಿಸುತ್ತಿರುವುದು ಕಂಡುಬರುತ್ತಿದೆ.

### ಕಾಲುವೆ

ಕೆರೆ ಅಥವಾ ಬಾವಿಗಳಿಂದ ನೀರು ಹರಿಸಲು ಮಾಡುವ ತಗ್ಗು ಅಥವಾ ತೋಡುಗಳನ್ನು ಕಾಲುವೆಗಳು ಎಂದು ಕರೆಯಲಾಗುತ್ತದೆ. ಕೆರೆಯ ನೀರನ್ನು ಕಾಲುವೆಗಳ ಮೂಲಕ ಭೂಮಿಗೆ ಹಾಯಿಸಲಾಗುತ್ತಿತ್ತು. ಅಂತಹ ಉಲ್ಲೇಖಗಳನ್ನು ಶಾಸನಗಳು ದಾಖಲಿಸಿರುವುದು ಕಂಡುಬರುತ್ತದೆ. ಕರೆಯ ನೀರು ತೂಬುಗಳ ಮುಖಾಂತರ ಕಾಲುವೆಗೆ, ಕಾಲುವೆ ಮುಖಾಂತರ ತೋಟಗಳಿಗೆ, ನೀರಾವರಿಗೊಳಪಟ್ಟ ಭೂಮಿಗಳಿಗೆ ನೀರು ಹರಿಸಲಾಗುತ್ತಿತ್ತು. ಕಾಲುವೆಗಳು 'ಕೆರೆಯ ನೀರನ್ನು ನಿಯಂತ್ರಿಸಿ ಆಯಕಟ್ಟು ಪ್ರದೇಶಕ್ಕೆ ನೀರು ಹಾಯಿಸುವ ಮಾರ್ಗ ಕಾಲುವೆಗಳಾಗಿರುತ್ತವೆ.[೫೨೬] ಕಾಲುವೆಗಳು ಎರಡು ರೀತಿಯಾಗಿ ಕಂಡುಬರುತ್ತವೆ. ಕಾಲುವೆಗಳಿಂದ ಕೆರೆಗೆ ಹೋಗುವ ಮತ್ತು

ಕೆರೆಯಿಂದ ಕಾಲುವೆಯ ಮೂಲಕ ನೀರಾವರಿಗೆ ಸಂಬಂಧಿಸಿದ ಭೂ ಪ್ರದೇಶಕ್ಕೆ ನಿರಾಯಿಸುವುದು. ನೀರನ್ನು ಏರಿಯ ಕೆಳಭಾಗದಿಂದ ಹಾಯಿಸುತ್ತಿದ್ದರು. ಕೆರೆಗಳ ಗಾತ್ರಕ್ಕನುಗುಣವಾಗಿ ಕೆರೆಗಳಿಗೆ ತೂಬು ಇರಿಸಲಾಗುತ್ತಿತ್ತು. ಈ ತೂಬುಗಳ ಮುಖಾಂತರ ಕೆರೆಯ ನೀರನ್ನು ಕಾಲುವೆಗಳ ಮೂಲಕ ಹರಿಸುತ್ತಿದ್ದರು. ಕಾಲುವೆಗಳನ್ನು ಕೆರೆಯ ನೀರಿನ ಮಟ್ಟಕ್ಕನುಗುಣವಾಗಿ ರಚನೆ ಮಾಡಲಾಗುತ್ತಿತ್ತು. ಕೆರೆ ತುಂಬಿ ನೀರು ಹೆಚ್ಚಾದಾಗ ಎತ್ತರದ ಕಾಲುವೆಗಳಿಂದ ನೀರು ಹರಿಸುತ್ತಿದ್ದರು. ಕೆರೆಯ ನೀರು ಕಡಿಮೆಯಾಗಿ ತಳದಲ್ಲಿದ್ದಾಗ, ಇಂತಹ ನೀರನ್ನು ಹಾಯಿಸಲು ಕೆಳಭಾಗದ ಕಾಲುವೆಯನ್ನು ಬಳಕೆ ಮಾಡಿಕೊಳ್ಳುತ್ತಿದ್ದರು. ಕೆರೆಯ ಗಾತ್ರಕ್ಕನುಗುಣವಾಗಿ ಕೆರೆಯ ತೂಬು ಮತ್ತು ಕಾಲುವೆಗಳ ನಿರ್ಮಾಣಗಳನ್ನು ಮಾಡಲಾಗುತ್ತಿತ್ತು. ಕಾಲುವೆಗಳನ್ನು ನಾಲೆಗಳೆಂತಲೂ ಕರೆಯಲಾಗುತ್ತಿತ್ತು. "ಹತ್ತಿರದ ದೇವಾಲಯಕ್ಕೆ ನೀರನ್ನು ಹಾಯಿಸುವ ನಾಲೆಗೆ ಮರವನ್ನು ಬಳಸುತ್ತಿದ್ದರು.[೫೨೭] ಎಂದು ತುಮಕೂರಿನ ರಾಮಚಂದ್ರನ ಹಳ್ಳಿಯ ಶಾಸನವು ತಿಳಿಸಿದೆ.

ಕ್ರಿ.ಶ. ೧೨೬೯ರ ಶಾಸನದಲ್ಲಿ ಪೆರುಮಾಳದೇವ ದಂಡನಾಯಕನು ಅಲ್ಲಾಳ ಸಮುದ್ರ, ಅವ್ವೆಯರಕೆಱೆ ಮತ್ತು ತಗಚೆಗೆಱೆಗಳನ್ನು ತೋಡಿಸಿ ಅವುಗಳ ಕಾಲುವೆಯ ಕೆಳಗಿನ ಬೆದ್ದಲು ಭೂಮಿಯನ್ನು ಗದ್ದೆಗೆ ಬದಲಾಯಿಸಿಕೊಂಡ ಸಂದರ್ಭದಲ್ಲಿ ಕೆಲವರು ಬೆಳ್ಳೂರಿನ ಮಹಾಜನರೊಂದಿಗೆ ಮಾಡಿಕೊಂಡ ಒಡಂಬಡಿಕೆಗಳನ್ನು ಈ ಶಾಸನವು ತಿಳಿಸುತ್ತದೆ. ಅದರಂತೆ ತಂಬಿಯಣ್ಣ ಮತ್ತು ತಿರುವರಂಗ ಪೆರುಮಾಳೆಯರಿಗೂ ಬಿತ್ತುವಟ್ಟಕ್ಕಾಗಿ ವರ್ಷ ನಿಬಂಧಿಯಾಗಿ ಖಂಡುಗಕ್ಕೆ ನಾಲ್ಕು ಹಣದಂತೆ ಕೊಡುವುದು. ಅಧಿಕಾರಿಗಳು ಮತ್ತು ಗೌಡುಗಳು ನಗದನ್ನು ತೆರಬೇಕೆಂದು ಶಾಸನಗಳು ತಿಳಿಸಿದೆ.[೫೨೮]

ಈ ಶಾಸನದಲ್ಲಿನ ಬೆದ್ದಲು ಭೂಮಿಯನ್ನು ನೀರಾವರಿ ಭೂಮಿಯಾಗಿ ಪರಿವರ್ತಿಸುವ ಉದ್ದೇಶವನ್ನು ಹೊಂದಿದೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಕೆರೆ ನಿರ್ಮಾಣಗಳಂತಹ ಕಾರ್ಯದಲ್ಲಿ ಊರಿನ ಸಮಸ್ತರ ಸಹಕಾರವಿರುವುದು ಕಂಡುಬರುತ್ತದೆ. ಕೆಱೆಗೆ ಬಿತ್ತುವಟ್ಟಕ್ಕಾಗಿ ಅಧಿಕಾರಿ ವರ್ಗಗಳು ವರ್ಷಪ್ರತಿ ತೆರಬೇಕಾದ ಮೊತ್ತವನ್ನು ತಿಳಿಸಿದೆ. ಬಿತ್ತುವಟ್ಟವೆಂದರೆ ಕೆರೆಯ ನಿರ್ವಹಣೆಗಾಗಿ ಬಿಟ್ಟ ಭೂಮಿಯನ್ನು ಬಿತ್ತುವಟ್ಟವೆನ್ನುವರು. ನೀರು ಹರಿಯುವ ಕಾಲುವೆಗಳ ಆಯಕಟ್ಟಿನ ಇಕ್ಕೆಲಗಳು ನೀರಾವರಿ ಭೂಮಿಗಳಾಗಿ ಪರಿವರ್ತನೆಗೊಳ್ಳುತ್ತಿದ್ದವು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ. ಇದೇ ಶಾಸನಕ್ಕೆ ಸಂಬಂಧಿಸಿದಂತೆ ಮತ್ತೊಂದು ಒಡಂಬಡಿಕೆ ಕಂಡುಬರುತ್ತದೆ. ಅಲ್ಲಾಳ ಸಮುದ್ರದ ಕೆರೆಯನ್ನು ಕಟ್ಟಿಸಿದಾಗ ಶ್ರೀರಂಗಪುರದ ಬೆದ್ದಲು ಭೂಮಿ ಮುಳುಗಡೆಯಾಯಿತು. ಇದಕ್ಕೆ ಪ್ರತಿಯಾಗಿ ಶ್ರೀರಂಗಪುರದವರು ಅಲ್ಲಾಳ ಸಮುದ್ರದ ಕೆರೆಯ ಕೆಳಗೆ ೧೨ ಸಲಗೆ ಭೂಮಿಯನ್ನು ಪಡೆದು ಬೆಳ್ಳೂರ ಮಹಾಜನಕ್ಕೆ ಕಟ್ಟುಗುತ್ತಗೆ, ಪಿಂಡಾದಾನವಾಗಿ ವರ್ಷಂಪ್ರತಿ ೧೨ ಗದ್ಯಾಣಗಳನ್ನು ಕೊಡಲೊಪ್ಪಿದ್ದಾರೆ.[೫೨೯]

ಕ್ರಿ.ಶ. ೧೧೩೨ರ ಶಾಸನದಲ್ಲಿ ಬೆಟ್ಟದಿಂದ ಹರಿದು ಬರುವ ಸಣ್ಣ ಹೊಳೆಗಳನ್ನು ಕಾಲುವೆಗಳ ಮೂಲಕ ಹರಿಸಿ ಕಬ್ಬು ಮತ್ತು ಭತ್ತ ಬೆಳೆದಿರುವ ಬಗೆಗೆ ಶಾಸನವು ಹೀಗೆ ತಿಳಿಸುತ್ತದೆ. 'ಗಿರಿನಿರ್ಜ್ಝರದಿಂ ಸಿಂಧುವ ಪರಿಕಾಲಿಂ ಬಳೆದ ಗಂಧಶಾಲಿಯವನದಿಂ ವರಪುಂಡ್ರೇಕ್ಷುವಾಟೋತ್ಕಾರದಿಂ ದ್ರೋಣಮುಖಾಖ್ಯವದು ಸೊಗಯಿಸುಗಂ"[೫೩೦] ಎಂದಿದೆ. ಕೆರೆಯ ತೂಬಿನಿಂದ ಹೊರಟ ನೀರು ಕಾಲುವೆಗಳಲ್ಲಿ (ಬಾಯ್ಕಿಲ್ ಅಥವಾ ಕಾಲ್) ಗಳ ಮೂಲಕ ಹರಿದು ಗದ್ದೆಯನ್ನು ಸೇರುತ್ತಿತ್ತು.[೫೩೧] ಕ್ರಿ.ಶ. ೧೧೨೯ರ ಶಾಸನದಲ್ಲಿ ಒಂದು ಊರಿನ ನೀರನ್ನು ಮತ್ತೊಂದು ಊರಿನ ಹೊಲಗಳಿಗೆ ಕಾಲುವೆಗಳ ಮೂಲಕ ನೀರು ಹರಿಸಲು ನಾಡಿನ ಎಲ್ಲ ಪ್ರಭುಗಾವುಂಡಗಳ

ಒಪ್ಪಿಗೆಯನ್ನು ಪಡೆಯಬೇಕಿತ್ತೆಂಬ ಅಂಶವನ್ನು ತಿಳಿಸುತ್ತದೆ.[೫೩೨] ಈ ರೀತಿ ಒಪ್ಪಿಗೆ ಅಥವಾ ಒಡಂಬಡಿಕೆಯನ್ನು ನಾಗಮಂಗಲದ ಬೆಳ್ಳೂರಿನ ಶಾಸನವೂ ಸಹ ತಿಳಿಸುತ್ತದೆ. ಕ್ರಿ.ಶ. ೧೦೦೦ದ ಶಾಸನದಲ್ಲಿ ಹಂಚಿಧರ್ಮ ಶೆಟ್ಟಿ ಎಂಬಾತನು ಎಲ್ಲೋ ಹರಿಯುತ್ತಿದ್ದ ಕಾಲುವೆಯನ್ನು ತಿದ್ದಿ ತನ್ನ ಊರಿನ ಬಳಿ ಹರಿಯುವಂತೆ ಮಾಡುತ್ತಾನೆ. ಶಾಸನವು ಅವನ ಧೈರ್ಯ ಸಾಹಸವನ್ನು ಹೊಗಳಿರುವುದು ಕಂಡುಬರುತ್ತದೆ.[೫೩೩] ಕ್ರಿ.ಶ. ೧೨೭೬ರ ಶಾಸನದಲ್ಲಿ ದೇವದಾನದ ಭೂಮಿಯಾದ ಕಾಡನಗದೆ ಬೆದಲೊಳಗಾದ ಭೂಮಿಯೊಳಗೆ ತೆಂಗು ಕವುಂಗು ಮುಖ್ಯವಾದ ಸಮಸ್ತ ಸ್ಥಾವರವಹ ಫಲವೃಕ್ಷಂಗಳನೂ ಯಿಕ್ಕಿಕೊಂಡು ಕೆಱೆಯನು ಕಟ್ಟಿಕೊಂಡು ಕೇಲುವೆಯನೂ ತಂದುಕೊಂಡು ಸಂತಾನಗಾಮಿಯಾಗಿ ಭೋಗಿಸುವರು ಎಂದಿದೆ.[೫೩೪] ಕ್ರಿ.ಶ. ೧೨-೧೩ನೆಯ ಶತಮಾನದ ಶಾಸನಗಳಲ್ಲಿ ಕಾಲುವೆ ಕೆಳಗೆ ಬೆದ್ದಲೆ ಕೊಳಗ ೫ ಎರಡು ಮತ್ತರು ಭೂಮಿಯ ಉಲ್ಲೇಖವಿದೆ.[೫೩೫] ಕಾಲುವೆಗಳ ಬಳಿ ಎಲ್ಲ ಸಮಯದಲ್ಲೂ ನೀರಾವರಿ ಭೂಮಿ ಇರುತ್ತಿರಲಿಲ್ಲ. ಕೆಲವೊಮ್ಮೆ ಹೊಲಗಳ ಪಕ್ಕದಲ್ಲಿ ಕಾಲುವೆ ಹರಿದರು ಆ ಭೂಮಿ ನೀರಾವರಿಗೆ ಒಳಪಡುತ್ತಿರಲಿಲ್ಲ. ಆ ಕುರಿತ ಉಲ್ಲೇಖ ಈ ಶಾಸನದಲ್ಲಿ ಕಂಡುಬಂದಿದೆ. ಕ್ರಿ.ಶ. ೧೨೩೦ರ ಶಾಸನದಲ್ಲಿ ಕೆಱೆ ಕಾಲ್ವೆಯಂ ಕಟ್ಟಿಸಿ ತೋಟ ತುಡಿಕೆಯನಿಕ್ಕಿಸುವರು ಎಂದಿದೆ.[೫೩೬] ಕೆರೆಯ ಕಾಲುವೆಗಳನ್ನು ಮಾಡಿ ಇದಕ್ಕೆ ತೋಟ ಮತ್ತು ಉದ್ಯಾನವನ ಬಿಟ್ಟರೆಂದು ತಿಳಿದುಬರುತ್ತದೆ.

ಕ್ರಿ.ಶ. ೧೨೩೩ರ ಶಾಸನದಲ್ಲಿ 'ಕೆಱೆ ಕಾಲ್ವೆ ಕಟ್ಟಿಸಿ ತೋಟ ತುಡಿಕೆಯನಿಕ್ಕಿ ಸುಖದಿಂ ಬಾಳ್ವಂತಾಗಿ ಮಾಡಿ'[೫೩೭] ಎಂದಿದೆ. ಕೆರೆಗಳಿಂದ ಕಾಲುವೆಗಳ ಮೂಲಕ ಹೊಲಗಳಿಗೆ ನೀರು ಹರಿಸುವ ಮೂಲಕ ನೀರಾವರಿ ಭೂಮಿಯನ್ನಾಗಿ ಮಾಡಿ, ತೋಟ ತುಡಿಕೆ(ಹೂದೂಟ ಅಥವಾ ಉದ್ಯಾನವನ)ಗಳಿಗೆ ನೀರು ಹರಿಸುವಂತೆ ಮಾಡುವ ಮೂಲಕ ಜನರು ಸುಖದಿಂದ ಬಾಳುವಂತೆ ಮಾಡಲಾಯಿತೆಂದು ಶಾಸನವು ತಿಳಿಸುತ್ತದೆ. ನೀರಾವರಿಯು ಕೃಷಿಗೆ ಸಮೃದ್ಧಿಯ ಸಂಕೇತ. ರೈತರು ನೀರಿದ್ದರೆ ನೆಮ್ಮದಿಯ ನಿಟ್ಟುಸಿರು ಬಿಡುತ್ತಾ ಜೀವನವನ್ನು ಸಾಗಿಸುತ್ತಾರೆ ಎಂಬ ವಿಚಾರ ಇಂದಿಗೂ ಸತ್ಯವಾಗಿದ್ದು ಇದು ಶಾಸನಗಳಲ್ಲಿ ಧ್ವನಿತವಾಗಿದೆ.

ಕ್ರಿ.ಶ. ೧೦೭೪ರ ಶಾಸನದಲ್ಲಿ ಪೊಯ್ಸಳ ಗಾವುಂಡನೆಂಬುವವನು ವ್ಯವಸಾಯಕ್ಕಾಗಿ ಕೆರೆಕಟ್ಟಿಸಿ ಕಾಲುವೆ ತೋಡಿಸಿದನೆಂದು ತಿಳಿಸುತ್ತದೆ.[೫೩೮] ಕೆರೆಕಟ್ಟೆ ಬಾವಿ, ಕಾಲುವೆಗಳನ್ನು ತೋಡಿಸುವುದು ಧಾರ್ಮಿಕವಾಗಿ ಪುಣ್ಯದ ಕೆಲಸವೆಂಬುದು ಜನರ ನಂಬಿಕೆಯ ಒಂದು ಭಾಗ. ಆದರೆ ಇದರ ಹಿಂದಿದ್ದ ಪ್ರಬಲ ಆಶಯವೆಂದರೆ ಅದು ಆರ್ಥಿಕ ಅಭಿವೃದ್ಧಿ. ಗ್ರಾಮಗಳಲ್ಲಿ ಕೆರೆಗಳನ್ನು ನಿರ್ಮಿಸುವ ಮೂಲಕ ಗ್ರಾಮೀಣ ಪ್ರದೇಶದ ಉತ್ಪಾದನೆಯನ್ನು ದ್ವಿಗುಣಗೊಳಿಸುವ ಮೂಲಕ ಆರ್ಥಿಕ ಅಭಿವೃದ್ಧಿ ಸಾಧಿಸುವ ಉದ್ದೇಶವನ್ನು ಹೊಂದಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೯೨ರ ಶಾಸನದಲ್ಲಿ "ಮೂಡಣ ಕೋಡಿಯಲ್ಲಿ ಕಾಲುವೆಯ ಏರಿಯಂ"[೫೩೯] ಎಂದಿದೆ. ಕ್ರಿ.ಶ. ೧೧೯೫-೯೬ರ ಶಾಸನದಲ್ಲಿ ಕೆಱೆಯಂ ಕಾಲುಯಂ ಕಟ್ಟಿಸಿ ಕೊಟ್ಟು ಪೊಂಗದ್ಯಾಣ ೫೫೫ ಬಿಟ್ಟರೆಂದಿದೆ.[೫೪೦]

ಕೆರೆಕಟ್ಟೆಗಳು ನೀರನ್ನು ಸಂಗ್ರಹಿಸುತ್ತವೆ. ಆದರೆ ಕಾಲುವೆಗಳು ತೂಬಿನ ಮೂಲಕ ಸಮರ್ಪಕವಾಗಿ ಹೊಲ, ಗದ್ದೆ, ತೋಟಗಳಿಗೆ ತಲುಪಲು ನೆರವಾಗುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ನೀರಾವರಿಯಲ್ಲಿ ಕಾಲುವೆಗಳ ಪಾತ್ರ ಹಿರಿದಾಗಿ ಕಂಡುಬರುತ್ತದೆ. ಇಂತಹ ಕಾಲುವೆಗಳ ದುರಸ್ತಿ ಕಾರ್ಯಗಳಿಗೆ ರಾಜರುಗಳು ಸುಂಕದಾನ, ಭೂಮಿದಾನಗಳನ್ನು ನೀಡಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೭೧ರ ಶಾಸನವು ಕೆರೆ ಕಾಲುವೆಗಳ ದುರಸ್ತಿಗೆ ಸೇಸೆ, ಸಿದ್ಧಾಯ, ಖಾಣ, ಅಭ್ಯಾಗ್ಯತೆ, ಕಿರುಕಳ ಮೊದಲಾದ ತೆರಿಗೆ ಬಿಟ್ಟದ್ದನ್ನು ತಿಳಿಸುತ್ತದೆ.[೫೪೧] ಕ್ರಿ.ಶ. ೧೨೭೬ರ ಶಾಸನದಲ್ಲಿ

ಕೆರೆ ಕಾಲುವೆಗಳ ನಿರ್ವಹಣೆಗಾಗಿ ಐದು ಸಲಗೆ ಗದ್ದೆ ಭೂಮಿಯನ್ನು ಬಿಟ್ಟರೆಂದಿದೆ.[೫೮೨] ಈ ರೀತಿ ಕಾಲುವೆಗಳ ದುರಸ್ತಿಕಾರ್ಯಗಳಿಗೆ ದಾನ ನೀಡಿವುದು ಕಂಡುಬರುತ್ತದೆ. ಕಾಲುವೆಗಳ ದುರಸ್ತಿಕಾರ್ಯಗಳು ಕಾಲಕಾಲಕ್ಕೆ ಸರಿಯಾಗಿ ನಡೆಯದೇ ಹೋದರೆ, ನೀರು ಬೇರೆಡೆಗೆ ಹರಿದು ಹೋಗುತ್ತಿತ್ತು. ಈ ಕಾರಣದಿಂದಾಗಿ ದುರಸ್ತಿಯಂತಹ ಕಾರ್ಯಗಳ ನಿರ್ವಹಣೆಗೆ ದಾನ ನೀಡಿದ ಉಲ್ಲೇಖಗಳು ಕಂಡುಬರುತ್ತವೆ. ಕಾಲುವೆಗಳ ನಿರ್ಮಾಣದ ಸಮಯದಲ್ಲಿ ಎಲ್ಲ ಕಡೆಯೂ ಕಲ್ಲಿನ ಕಟ್ಟಡಗಳೇ ಕಂಡುಬರುವುದಿಲ್ಲ. ಮಣ್ಣಿನಲ್ಲೇ ನೀರು ಹರಿದು ಬರುವಷ್ಟು ತಗ್ಗು ತೋಡಿಕೊಂಡು ಹೋಗುತ್ತಿದ್ದರು. ಪಕ್ಕದಲ್ಲಿ ಬೆಳೆಯುವ ಹುಲ್ಲು ನೀರಿಗೆ ಕಟ್ಟೆಯಾಗಿ ಕಾರ್ಯನಿರ್ವಹಿಸುತ್ತಿತ್ತು. ಇದು ಇಂದಿಗೂ ಕಂಡುಬರುತ್ತದೆ. ಕಾಲುವೆಗೆ ನೀರು ಹರಿಸುವ ಒಂದು ದಿನದ ಮುಂಚಿತವಾಗಿ ಚಿಕ್ಕದಾಗಿ ತೂಬು ಎತ್ತಿ ಕಾಲುವೆಗಳನ್ನು ಹಸಿ ಮಾಡಲಾಗುತ್ತದೆ. ನಂತರ ಕಾಲುವೆಗಳಿಗೆ ನೀರು ಹರಿಸುವ ವಿಧಾನ ರೂಢಿಯಲ್ಲಿದೆ. ಹೀಗೆ ಕೆರೆಗಳಿಂದ ಹೊಲ, ಗದ್ದೆ, ತೋಟಗಳಿಗೆ ನೀರು ತಲುಪಿಸುವ ಮಾಧ್ಯಮಗಳಾಗಿ ಕಾಲುವೆಗಳು ಕಾರ್ಯನಿರ್ವಹಿಸುತ್ತವೆ.

ಪ್ರಾಚೀನ ಕಾಲದ ಜನರು ಮನಗಂಡ ಕೆರೆ ನಿರ್ಮಾಣದಂತಹ ಕಾರ್ಯಗಳು ಇಂದು ಪ್ರಸ್ತುತವೇ ಎಂದು ಗಮನಿಸಿದರೆ ಕೆರೆಗಳು ಎಲ್ಲ ಕಾಲಕ್ಕೂ ಪ್ರಸ್ತುತವೇ ಸರಿ. ಇಂದಿನ ಬದಲಾದ ಸಂದರ್ಭದಲ್ಲಿ ಎದುರಾಗಿರುವ ಸಮಸ್ಯೆ ಸವಾಲುಗಳೇನು ಎಂಬುದನ್ನು ಗಮನಿಸುವ ಅಗತ್ಯತೆಗಳಿವೆ. ಕ್ರಿ.ಶ. ೧೦ ರಿಂದ ೧೪ನೆಯ ಶತಮಾನದ ಅವಧಿಯಲ್ಲಿ ಕೃಷಿಯನ್ನು ಅಭಿವೃದ್ಧಿ ಪಡಿಸುವ ಸಲುವಾಗಿ ಕೆರೆಗಳ ನಿರ್ಮಾಣ ಕಾರ್ಯಗಳು ಬರದಿಂದ ಸಾಗಿದವು. ಇದರ ಹಿಂದಿನ ಪ್ರಮುಖ ಉದ್ದೇಶ ಆರ್ಥಿಕ ಪ್ರಗತಿಯೇ ಆಗಿತ್ತು. ಶಾಸನಗಳನ್ನು ಗಮನಿಸಿದರೆ ಅದು ಸಾಧ್ಯವಾಗಿರುವ ಸಾಧ್ಯತೆಗಳಿವೆ. ಇಂದಿನ ಅವಧಿಗೆ ಪ್ರಸ್ತುತವೆನಿಸಿ, ಅಂದು ಇವುಗಳಿಂದ ಅಭಿವೃದ್ಧಿ ಸಾಧಿಸಲಾಗಿತ್ತು ಎಂದ ಮೇಲೆ ಇಂದಿನ ಅವಧಿಗೆ ಸಾಧ್ಯವಿಲ್ಲವೇ ಎಂಬ ಪ್ರಶ್ನೆ ಎದುರಾಗುತ್ತದೆ. ಬದಲಾದ ಇಂದಿನ ಸನ್ನಿವೇಶದಲ್ಲಿ ಹಳೆಯ ಸಾಧ್ಯತೆಗಳನ್ನು ಜಾರಿಗೆ ತರುವಲ್ಲಿ ಅನೇಕ ಸವಾಲುಗಳನ್ನು ಎದುರಿಸುವ ಸ್ಥಿತಿ ಬಂದೊದಗುತ್ತದೆ. ಆದರೆ ಸವಾಲನ್ನು ಸ್ವೀಕರಿಸಿ ಮುನ್ನೆಡೆಯುವ ಅನಿವಾರ್ಯ ಸ್ಥಿತಿ ಇಂದು ಎದುರು ನಿಂತಿದೆ. ಪ್ರಾಚೀನ ಕಾಲದ ಆಳರಸರು ಕೆರೆಗಳ ಜೀರ್ಣೋದ್ಧಾರ, ದುರಸ್ತಿಯಂತಹ ಕಾರ್ಯಗಳನ್ನು ಮಾಡಿದರು. ಈ ಮೂಲಕ ತಮ್ಮ ರಾಜ್ಯದ ಅಭಿವೃದ್ಧಿಯ ನ್ಯೂನ್ಯತೆಗಳನ್ನು ಅರಿತು ಈ ಮೂಲಕ ಸರಿಪಡಿಸಿಕೊಂಡಿರುವ ಸಾಧ್ಯತೆಗಳಿವೆ. ಆದರೆ ಇಂದು ಆಧುನಿಕ ತಂತ್ರಜ್ಞಾನ ಮುಂಚೂಣಿಯಲ್ಲಿದ್ದು, ಇಂತಹ ಕಾರ್ಯಗಳ ಯಶಸ್ವಿಯ ಸಾಧ್ಯತೆಗಳಿವೆ. ಆಳುವ ಪ್ರಭುತ್ವಕ್ಕೆ ಇದರ ಮನವರಿಕೆ ಮಾಡಿಕೊಡುವ ಅಗತ್ಯ ಅಧ್ಯಯನಗಳ ಮೂಲಕ ಆಗಬೇಕಿದೆ.

ಇಂದು ಕೆರೆಗಳು ಕಣ್ಮರೆಯಾಗಿವೆ. ಕಾರಣ ಕೆರೆಗಳು ತುಂಬಿಕೊಳ್ಳುವಷ್ಟು ಪ್ರಮಾಣದಲ್ಲಿ ಮಳೆ ಸುರಿಯುತ್ತಿಲ್ಲವೆಂಬ ಕಾರಣಗಳು ಕೇಳಿಬರುತ್ತಿವೆ. ಅತಿವೃಷ್ಟಿ ಅನಾವೃಷ್ಟಿಯಂತಹ ಸನ್ನಿವೇಶಗಳು, ಬರಗಾಲದಂತಹ ಸಂದರ್ಭಗಳು ಇಂದಿನಂತೆ ಪ್ರಾಚೀನರಲ್ಲೂ ಕಂಡುಬಂದಿರುವ ಸಾಧ್ಯತೆಗಳಿವೆ. ಹವಾಮಾನ ವೈಪರೀತ್ಯಗಳು, ಮಳೆಯ ಏರಿಳಿತಗಳು ಸರ್ವಕಾಲದಲ್ಲೂ ಸಂಭವಿಸಿವೆ. ಅಂದಿನ ಕೃಷಿಕರು ಕಂಡುಕೊಂಡ ಪರಿಹಾರೋಪಾಯಗಳನ್ನು ಇಂದಿನವರು ಕಂಡುಕೊಳ್ಳುವಲ್ಲಿ ವಿಫಲರಾಗುತ್ತಿದ್ದಾರೆ. ಪ್ರಾಚೀನ ಜನರು ಪ್ರಕೃತಿಯೊಂದಿಗೆ ಹೆಜ್ಜೆ ಹಾಕಿದರೆ ಇಂದಿನ ಆಧುನಿಕ ಮಾನವರು ಪ್ರಕೃತಿಯ ವಿರುದ್ಧ ದಿಕ್ಕಿನಲ್ಲಿ ಸಾಗುತ್ತಿದ್ದಾರೆ. ಇದರ ಫಲಗಳನ್ನು ಸ್ವೀಕರಿಸಿ ಮುನ್ನೆಡೆಯುವ ದುಸ್ಥಿತಿ ಬಂದೊದಗಿದೆ. ಪ್ರಾಚೀನ ಕಾಲದಲ್ಲಿ ಅನುಸರಿಸಿದ ಕೆರೆ ಸಂಬಂಧಿ ಕೆಲವು ಅಂಶಗಳನ್ನು ಇಂದಿನ ದಿನಗಳಿಗೆ ಅನ್ವಯಿಸಿಕೊಳ್ಳುವ ಅಗತ್ಯವಿದೆ. ಕೆರೆಗಳ ಸ್ಥಿತಿ ಇಂದು ಏನಾಗಿದೆ ಎಂಬುದನ್ನು ಗಮನಿಸಿದರೆ ಕೆರೆಗಳು ಹೂಳು ತುಂಬಿ ಹೋಗಿವೆ. ಹೂಳು ತುಂಬಿದ ಕೆರೆಯಲ್ಲಿ

ಜನರು ಕೃಷಿ ಮಾಡುತ್ತಿರುವುದು ಕಂಡುಬರುತ್ತದೆ. ಇನ್ನು ಕೆಲವೆಡೆ ಕೆರೆಗಳನ್ನು ಮುಖ್ಯ ಜನವಸತಿಯನ್ನಾಗಿ ಪರಿವರ್ತಿಸಿಕೊಳ್ಳಲಾಗಿದೆ. ಇದಕ್ಕೆ ಪ್ರಮುಖ ಕಾರಣ ಹೆಚ್ಚುತ್ತಿರುವ ಜನಸಂಖ್ಯೆ. ಮತ್ತೊಂದೆಡೆ ಮಾನವನ ವಿಕೃತ ಮನೋಭಿಲಾಷೆಗಳು. ಆಧುನಿಕತೆಯ ತಂತ್ರಜ್ಞಾನದ ಬರದಲ್ಲಿ ಎಲ್ಲವನ್ನು ಗಾಳಿಗೆ ತೂರಿ ಸ್ವೇಚ್ಛೆಯಾಗುತ್ತಿರುವ ಜೀವನ ಶೈಲಿಗೆ ಪ್ರಕೃತಿಯನ್ನು ಬಲಿಕೊಡುತ್ತಿದ್ದಾನೆ. ಅತಿಯಾಗಿ ಅರಣ್ಯಗಳ ನಾಶದಿಂದಾಗಿ ಮಳೆಯ ಪ್ರಮಾಣ ಕಡಿಮೆಯಾಗಿದೆ. ಹೆಚ್ಚು ಹೆಚ್ಚು ವಾಣಿಜ್ಯ ಬೆಳೆಗಳನ್ನು ಬೆಳೆದು ಅತಿಯಾದ ಆರ್ಥಿಕ ಲಾಭ ಗಳಿಕೆಯ ಉದ್ದೇಶದಿಂದ ಅಂತರ್ಜಲ ಬರಿದು ಮಾಡುತ್ತಿರುವುದು ಪ್ರಮುಖ ಕಾರಣಗಳಾಗಿ ಕಂಡುಬರುತ್ತಿವೆ. ಮಳೆ ಬಂದಾಗಲೂ ಮಳೆಯ ನೀರನ್ನು ಹೀರಿಕೊಂಡು ಅಂತರ್ಜಲ ಸೃಷ್ಟಿಸುವ ಮರಳನ್ನು ಮಿತಿಮೀರಿ ತೆಗೆದು ಅನಗತ್ಯ ಕಟ್ಟಡಗಳ ನಿರ್ಮಾಣಕ್ಕೆ ಬಳಕೆ ಮೊದಲಾದವುಗಳಿಗೆ ಬಳಸುತ್ತಿರುವುದು ಕಂಡುಬರುತ್ತಿದೆ. ಪ್ರಕೃತಿಯ ಅಳಿವಿನಲ್ಲಿ ಮಾನವ ವಿಕೃತಕಾರಿ, ಪರಿಸರ ವಿರೋಧಿ ನಿಲುವುಗಳು ಒಂದಕ್ಕೊಂದು ಕೊಂಡಿಯಂತೆ ಕೆಲಸ ನಿರ್ವಹಿಸುತ್ತಿವೆ. ಪುನಃ ಪ್ರಕೃತಿಯ ಪುನಃಶ್ಚೇತನಕ್ಕೆ ಎಲ್ಲ ಪ್ರಕೃತಿ ವಿರೋಧಿ ನೀತಿಗಳನ್ನು ಕ್ರಮೇಣ ಕಡಿಮೆಗೊಳಿಸುತ್ತ ಬಂದಾಗ ಮಾತ್ರ ಪ್ರಕೃತಿಯ ಉಳಿವು ಸಾಧ್ಯವಾಗುತ್ತದೆ.

ಪ್ರಾಚೀನ ಕಾಲದ ಸೂಕ್ಷ್ಮತೆಗಳನ್ನು ಇಂದಿನ ಕೆರೆ ನೀರಾವರಿಯಲ್ಲಿ ಅಳವಡಿಸುವ ಜರೂರಿದೆ. ಕೆರೆಯ ಜೀರ್ಣೋದ್ಧಾರ, ದುರಸ್ತಿ ಕಾರ್ಯಗಳು ನಡೆಯಬೇಕಿದೆ. ಈ ನಿಟ್ಟಿನಲ್ಲಿ ಸರ್ಕಾರ ಶ್ರಮವಹಿಸಬೇಕು. ಕೆರೆ ಸಂಬಂಧಿ ಪ್ರದೇಶ, ಕೆರೆಯ ಪ್ರದೇಶಗಳು ಒತ್ತುವರಿಯಾಗಿವೆ. ಇವುಗಳ ಬಗೆಗೆ ಕ್ರಮ ಕೈಗೊಂಡು ಕೆರೆಗಳನ್ನು ಅಭಿವೃದ್ಧಿಪಡಿಸಬೇಕು. ಕೆರೆಗೆ ನೀರು ಬರುವ ಹಿಂದಿನ ಮೂಲಗಳನ್ನು ಹುಡುಕಿ, ಕೆರೆಗೆ ನೀರು ಬರುವಂತೆ ನೀರಿನ ಹಾದಿಗಳನ್ನು ಸುಗಮಗೊಳಿಸಬೇಕು. ಮಳೆಯಿಂದ ಬಿದ್ದ ನೀರು ಪೋಲಾಗದಂತೆ ಈ ನೀರು ಕೆರೆಗೆ ಬರುವಂತೆ ವ್ಯವಸ್ಥೆ ಕಲ್ಪಿಸಬೇಕು. ವಾಣಿಜ್ಯ ಬೆಳೆಗಳಾದ ಅಡಿಕೆಯಂತಹ ಬೆಳೆಗಳಿಗೆ ಕಡಿವಾಣ ಹಾಕಬೇಕು. ಸರ್ಕಾರದೊಂದಿಗೆ ಕೃಷಿಕರಿಗೂ ಈ ಬಗೆಗೆ ಅರಿವು ಮೂಡಿಸಬೇಕು. ತೀರದ ಲಾಭ ಗಳಿಕೆಯ ಉದ್ದೇಶದಿಂದ ಹೊಲಗಳಲ್ಲಿ ಸಂಪೂರ್ಣವಾಗಿ ಬದುಗಳು, ಹಳ್ಳಗಳು ಮೊದಲಾದವುಗಳನ್ನು ಸಮತಟ್ಟಾಗಿ ಮಾಡಿಕೊಂಡು ಕೃಷಿ ನಡೆಸುತ್ತಿದ್ದಾನೆ. ಸರ್ಕಾರದೊಂದಿಗೆ ಸಮಾಜ, ಸಮಾಜದೊಂದಿಗೆ ಸರ್ಕಾರ ಕೈಜೋಡಿಸಿ ಅಗತ್ಯಕ್ರಮಗಳನ್ನು ವಹಿಸಿ, ಸದೃಢ ಸಮಾಜದ ನಿರ್ಮಾಣಕ್ಕೆ ಬದ್ಧರಾಗುವ ಪರಿಸ್ಥಿತಿಯಲ್ಲಿ ಇಂದಿನ ಕೃಷಿ ಬಂದು ತಲುಪಿದೆ. ಇಂದು ನದಿನೀರಿನ ಜೋಡಣೆಗಳಂತಹ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ಮುಂದಾಗಿದೆ. ಈ ಕ್ರಮಗಳು ಇಂದಿನದಾಗಿ ಕಂಡುಬರದೆ, ಹಿಂದಿನ ಕಾಲದಲ್ಲಿಯೂ ಇತ್ತು. ಕೆಲವು ಕೆರೆಗಳಿಗೆ ನದಿ ನೀರು ಬರುತ್ತಿದ್ದುದು ಹೊಸ ಪ್ರಕ್ರಿಯೆಯಲ್ಲ. ಅದೇನಿದ್ದರೂ ನದಿ ನೀರಿನ ಜೋಡಣೆಗಳಂತಹ ಪರ್ಯಾಯ ಮಾರ್ಗಗಳು ಇಂದಿನ ಬದಲಾದ ಕೃಷಿಯ ಅಗತ್ಯತೆಗಳಿಗಿದೆ. ನದಿ ನೀರಿನ ಜೋಡಣೆ ಶೀಘ್ರಗತಿಯಲ್ಲಾದರೂ ನೆನೆಗುದಿಗೆ ಬೀಳದೆ ಆಗುವ ಅಗತ್ಯವಿದೆ. ಇದರಿಂದ ಸಮಸ್ಯೆ ಬಗೆಹರಿಯುತ್ತದೆ ಎಂದಲ್ಲ. ಮಾನವ ಪ್ರಕೃತಿ ವಿರೋಧಿ ನೀತಿ ನಿಲ್ಲಿಸಬೇಕು. ಸಾವಯವ ಕೃಷಿ ಅಳವಡಿಸಿಕೊಳ್ಳಬೇಕು. ನೀರಿನ ಬಗೆಗೆ ಅಗತ್ಯ ಜ್ಞಾನ ಹೊಂದಬೇಕು. ಇಂತಹ ಸುಧಾರಣೆಗಳು ಕೃಷಿಕರಲ್ಲಿ ಮೊದಲು ಸಾಧ್ಯವಾದರೆ ಪ್ರಕೃತಿ ತಾನಾಗಿಯೇ ಚೇತರಿಸಿಕೊಳ್ಳುತ್ತದೆ. ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾಗಬೇಕಿದೆ. ಪ್ರಾಚೀನ ಜನಸಾಮಾನ್ಯರು ಕೆರೆಕಟ್ಟಿಸುವುದರಲ್ಲಿ ತೋರಿಸಿದ ಆಸಕ್ತಿಯ ಇಂಗಿತಗಳು, ಈ ಹಿನ್ನೆಲೆಯಲ್ಲಿ ಸಾಮಾಜಿಕ ಕಳಕಳಿ ಹೊಂದಿದಂತಿವೆ. ಇಂದು ಬೆರಳೆಣಿಕೆಯಷ್ಟು ಕಾಳಜಿಗಳು ಸಮಾಜದಲ್ಲಿ ಕಂಡುಬರುತ್ತಿವೆ. ಇದಕ್ಕೆ ಉದಾಹರಣೆ ಎಂಬಂತೆ ಕುರಿಗಾಹಿ ವ್ಯಕ್ತಿಯೊಬ್ಬ ಇಂದಿನ ಆಧುನಿಕ ಯುಗದಲ್ಲಿ ಕೆರೆ ಕಟ್ಟಿಸಿರುವುದು ಅಚ್ಚರಿಯನ್ನು ಮೂಡಿಸುತ್ತದೆ. ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕು ದಾಸನದೊಡ್ಡಿಯ ೭೫ರ

ವಯಸ್ಸಿನ ಕಾಮೇಗೌಡ ಎಂಬಾತನು ತಮ್ಮ ಕುರಿಗಳನ್ನು ಮಾರಿ 'ಅಕ್ಷಯ ಬಟ್ಟಲು' ಎಂಬ ಕೆರೆಯನ್ನು ಬೆಟ್ಟದ ತಪ್ಪಲಲ್ಲಿ ಸರ್ಕಾರಿ ಜಮೀನಿನಲ್ಲಿ ಕಟ್ಟಿರುವುದು ಕಂಡುಬಂದಿದೆ. ಅವರಿಗೆ ನೀವು ಕೆರೆ ಕಟ್ಟಿದ ಉದ್ದೇಶವೇನೆಂದು ಕೇಳಿದರೆ "ಮಹಾಭಾರತದಲ್ಲಿ ಧರ್ಮರಾಯ ಕೆರೆ ಕಟ್ಟೆ ಕಟ್ಟಿಸು ಎಂದು ಕರೆ ಕೊಟ್ಟಿದ್ದಾನೆ. ಅದರಿಂದ ನಮ್ಮೂರಿನ ಬೆಟ್ಟದ ಮೇಲೆ ಏಳು ಕೆರೆ ಕಟ್ಟಿಸಿದ್ದೇನೆ. ಜನರ ಸಹಕಾರ ಸಿಕ್ಕರೆ ಇನ್ನೂ ಹತ್ತು ಕೆರೆ ಕಟ್ಟುತ್ತೇನೆ. ಸಂಪತ್ತು ಕೂಡಿಟ್ಟರೆ ಬಂಗಾರ ಕೂಡಿಟ್ಟ ಎನ್ನುತ್ತಾರೆ. ಆದರೆ ಈಗ ಕಾಮೇಗೌಡ ಕಟ್ಟಿಸಿದ ಕೆರೆ ಎಂದು ಶಾಶ್ವತವಾಗಿ ಜನ ಮಾತನಾಡುತ್ತಾರೆ" ಎಂದು ತಿಳಿಸಿದ್ದಾರೆ.[೫೪೩] ಈ ರೀತಿ ಕುರಿಕಾಯುವ ವ್ಯಕ್ತಿಯಲ್ಲಿರುವ ಮನೋಧರ್ಮ ಸಮಾಜದ ಎಲ್ಲ ಜನರಲ್ಲೂ ಹಳೆಯದನ್ನಾದರು ಸಂರಕ್ಷಿಸುವ ಸಾಮಾಜಿಕ ಕಾಳಜಿ ಮೂಡಿಬಂದರೆ ಪ್ರಕೃತಿಯ ಉಳಿವಿಗೆ ಅಳಿಲು ಸೇವೆಯಾದಂತಾಗುತ್ತದೆ. ಬೀದರ್, ಗುಲ್ಬರ್ಗ, ಬಿಜಾಪುರ, ಭಾಗಗಳಲ್ಲಿ ಕೆರೆಗಳ ನಿರ್ಮಾಣ ಕಾರ್ಯಗಳು ಅಷ್ಟಾಗಿ ನಡೆದಂತೆ ಕಂಡುಬರುವುದಿಲ್ಲ. ಅಂದರೆ ಉಳಿದ ಪ್ರದೇಶಗಳಿಗೆ ಹೋಲಿಸಿದರೆ, ಈ ಭಾಗದಲ್ಲಿ ನಿರ್ಮಾಣಗೊಂಡ ಕೆರೆಗಳ ಪ್ರಮಾಣ ಕಡಿಮೆ. ಸಮತಟ್ಟಾದ ಪ್ರದೇಶಗಳಾಗಿ ಕಂಡುಬರುವ ಸಾಧ್ಯತೆಗಳಿಂದಾಗಿ ನೀರು ನಿಲ್ಲುವ ಪ್ರಮಾಣ ಕಡಿಮೆ ಇರುವ ಸಾಧ್ಯತೆಗಳಿವೆ. ಇಂತಹ ಪ್ರದೇಶಗಳನ್ನು ನೀರಾವರಿಗೆ ಒಳಪಡಿಸಬೇಕಾದರೆ ನದಿ ನೀರಿನ ಜೋಡಣೆಗಳಂತಹ ಕಾರ್ಯಗಳು ಅನುಷ್ಠಾನಗೊಳ್ಳಬೇಕು. ಈ ಪ್ರದೇಶದಲ್ಲಿ ಒಡ್ಡು, ಹೊಂಡ, ಕುಂಟೆ, ಕಟ್ಟೆಗಳಂತಹ ನೀರಿನ ಆಕರಗಳನ್ನಾದರೂ ಹೆಚ್ಚಾಗಿ ನಿರ್ಮಿಸಬೇಕು. ಈ ಭಾಗದಲ್ಲಿ ನದಿಗಳು ಹರಿದು ಹೋಗುತ್ತವೆ ಆದರೂ ನಿಲ್ಲಲು, ನೀರು ಹಿಂಗಲು ಸಾಧ್ಯವಾಗುವುದಿಲ್ಲ. ಇದರಿಂದ ಅಂತರ್ಜಲದ ಪ್ರಮಾಣವು ಕಡಿಮೆಯಾಗಿಯೇ ಕಂಡುಬರುತ್ತದೆ.

**ಹಳ್ಳ**

ಮಳೆಬಂದಾಗ ಸಣ್ಣ ಪ್ರವಾಹದೋಪಾದಿಯಲ್ಲಿ ತಗ್ಗು ಪ್ರದೇಶಗಳಲ್ಲಿ ಹರಿಯುವ ನೀರನ್ನು ಹಳ್ಳಗಳೆಂದು ಕರೆಯಲಾಗುತ್ತದೆ. ಈ ಹಳ್ಳಗಳು ಕಾಲುವೆಯೋಪಾದಿಯಲ್ಲಿ ಹರಿಯುತ್ತವೆ. ಇವು ಬೆಟ್ಟಗುಡ್ಡಗಳಿಂದಲೂ ಹರಿದು ಬರುತ್ತಿದ್ದವು. ಈ ಹಳ್ಳಗಳ ನೀರು ಮಳೆಗಾಲದಲ್ಲಿ ಮಳೆಯಿಂದ ಬೇಸಿಗೆ ಕಾಲದಲ್ಲಿ ಜಿನುಗು ಅಥವಾ ಜೋಪು ನೀರಿನಿಂದ ತುಂಬಿರುತ್ತಿತ್ತು. ಶಾಸನಗಳು ಹಳ್ಳಗಳನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ. ಆದರೆ ಹೆಚ್ಚಾಗಿ ಊರಿನ ಗಡಿಗಳನ್ನು, ಹೊಲಮೇರೆಗಳನ್ನು, ಜಮೀನಿನ ದಾರಿಯನ್ನು ಉಲ್ಲೇಖಿಸುವುದರೊಂದಿಗೆ ಹಳ್ಳಗಳನ್ನು ತಿಳಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೦೫೪ರ ವಿನಯಾದಿತ್ಯನ ಶಾಸನದಲ್ಲಿ ಎರಡು ಹಳ್ಳಗಳ ಮಧ್ಯದಲ್ಲಿ ಭೂಮಿ ಇತ್ತೆಂದು ತಿಳಿಸಿದೆ.[೫೪೪]

ಹಳ್ಳಗಳು ಹೆಚ್ಚಾಗಿ ಜಮೀನಿನ ಪಕ್ಕದಲ್ಲಿ ಅಥವಾ ಆಜುಬಾಜಿನಲ್ಲಿ ಹರಿಯುತ್ತಿದ್ದುದುಂಟು. ಯಾರ ಜಮೀನಿಗೆ ಹಳ್ಳಗಳು ಹತ್ತಿರ ಇರುತ್ತಿದ್ದವೋ ಅವರು ಹಳ್ಳಗಳಿಗೆ ಅಡ್ಡಲಾಗಿ ಕಟ್ಟೆ ನಿರ್ಮಿಸಿಕೊಂಡು ನೀರಾವರಿ ಕೃಷಿ ನಡೆಸಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೧೧೭ರ ಶಾಸನವೊಂದು ಹಳ್ಳದ ಗದ್ದೆಯನ್ನು ಉಲ್ಲೇಖಿಸಿರುವುದಿದೆ.[೫೪೫] ಕ್ರಿ.ಶ. ೧೦೬೨ರ ಶಾಸನದಲ್ಲಿ ಪಟ್ಟಣಸ್ವಾಮಿ ನೊಕ್ಕಯ್ಯನು ನೂರು ಗದ್ಯಾಣಗಳನ್ನು ಖರ್ಚುಮಾಡಿ ಹಳ್ಳಕ್ಕೆ ಅಡ್ಡಕಟ್ಟೆ ಕಟ್ಟಿಸಿದಂತಿದೆ.[೫೪೬] ಕ್ರಿ.ಶ. ೧೮೯೫ರ ಶಾಸನದಲ್ಲಿ ತೊಜಿಗಟ್ಟಿಯ ಉಲ್ಲೇಖವಿದೆ.[೫೪೭] ನದಿಯ ನೀರಿನಿಂದ ಗಟ್ಟಿ ಭೂಮಿಯಲ್ಲಿ ಅಂದರೆ ನೀರಾವರಿ ಬೆಳೆಗಳನ್ನು ಬೆಳೆದಿರುವಂತಿದೆ. ಅಂದರೆ ನೀರಾವರಿ ಬೇಸಾಯ ಇಲ್ಲಿ ಕಂಡುಬರುತ್ತದೆ.

ಕ್ರಿ.ಶ. ೧೧೨೫ರ ಶಾಸನದಲ್ಲಿ ಹಳ್ಳವನ್ನು ಕಟ್ಟಿಸಿದನ್ನು ಹೇಳುತ್ತದೆ.[೫೪೮] ಹಳ್ಳಗಳ ನೀರನ್ನು ಬಳಸಿ ನೀರಾವರಿ ಬೇಸಾಯ ಮಾಡಿರುವುದು ಕಂಡುಬರುತ್ತದೆ. ಹಳ್ಳಗಳು ನೈಸರ್ಗಿಕವಾಗಿ ಹರಿಯುತ್ತವೆ. ಇವುಗಳಿಗೆ ಅಡ್ಡಲಾಗಿ ಬದುಗಳನ್ನು ನಿರ್ಮಿಸಿಕೊಂಡು ಆ ನೀರನ್ನು ನೀರಾವರಿಗೆ ಬಳಸಿಕೊಂಡಿರುವಂತೆ ಕಂಡುಬರುತ್ತದೆ. ಈ ಪ್ರಕ್ರಿಯೆಯು ಕೆಲವೊಮ್ಮೆ ಸಾಮೂಹಿಕವಾಗಿ, ಮತ್ತೆ ಕೆಲವೊಮ್ಮೆ ವೈಯಕ್ತಿಕವಾಗಿ ಕಂಡುಬರುತ್ತವೆ.

ಕ್ರಿ.ಶ. ೧೦೬೭ರ ಶಾಸನದಲ್ಲಿ ನೊಕ್ಕಯ್ಯಂ ಶಾಂತಗೆಱೆ, ತೊಳಕೆಱೆ ಪಟ್ಟಣಸ್ವಾಮಿಗೆಱೆಯಂ, ತಲೆವಿಂಡೆ ಗೆಱೆಗಳೆಂಬ ಕೆರೆಗಳಂ ಕಟ್ಟಿಸಿದಂ ನೂಱು ಗದ್ಯಾನ ಪೊನ್ನಂ ಕೊಟ್ಟು ವುಗರೆಯೆಂಬ ಪಳ್ಳಮಂ ಸಾಳಂಗದಾ ಪಾಣಿಮಗಳಮೆಂಬ ಕೆಱೆಯಂ ಪುಗಿಸಿದಂ[೫೪೯] ಕೆರೆ ನೀರಿನ ಆಕಾರ ಮತ್ತು ಸಂಪನ್ಮೂಲಗಳು ಹಳ್ಳಗಳಾಗಿರುತ್ತಿದ್ದವು. ನೈಸರ್ಗಿಕವಾಗಿಯೇ ಹಳ್ಳಗಳಿಂದ ಮಳೆ ಬಂದಾಗ ಕೆರೆಗೆ ನೀರು ಹರಿದು ಬರುತ್ತದೆ. ಆದರೆ ಈ ಶಾಸನದಲ್ಲಿ ಕೃತಕವಾಗಿ ಹಳ್ಳದ ನೀರನ್ನು ಕೆರೆಗೆ ಹರಿಸಿ ತುಂಬಿಸಿದುದರ ಬಗೆಗೆ ಶಾಸನವು ತಿಳಿಸುತ್ತದೆ. ಕೆಱೆ ಕಟ್ಟಿಸಿದಾಗ ಕೆಱೆಯನ್ನು ತುಂಬಿಸುವುದು ಮಹತ್ವದ ಕಾರ್ಯವಾಗಿರುತ್ತದೆ. ಕೃತಕ ನೀರು ಹಳ್ಳಗಳಿಂದ ಹರಿಸಿರುವುದಕ್ಕೆ ಕಾರಣಗಳಿವೆ. ಹಳ್ಳಗಳು ಸಾಮಾನ್ಯವಾಗಿ ಕೆರೆಗಳಂತೆ ಬತ್ತುವುದಿಲ್ಲ. ಹಳ್ಳಗಳಲ್ಲಿ ಜಿನುಗು ತೊರೆ ನೀರು ಹರಿಯುತ್ತಿರುತ್ತದೆ. ಇಂತಹ ನೀರನ್ನು ಕೆರೆಗೆ ಬಿಟ್ಟಿರುವ ಸಾಧ್ಯತೆಗಳಿವೆ. ಇಂದಿನ ಬದಲಾದ ಸನ್ನಿವೇಶದಲ್ಲಿ ಮಳೆ ಬಂದಾಗಲೂ ಹಳ್ಳದ ಮೂಲಕ ಕೆರೆಗೆ ಹೋಗುವ ನೀರಿನ ಪ್ರಮಾಣ ತುಂಬಾ ಕಡಿಮೆಯಾಗಿದೆ. ಇದಕ್ಕೆ ಪ್ರಮುಖ ಕಾರಣ ಇಂದಿನ ಆಧುನಿಕ ತಂತ್ರಜ್ಞಾನದ ಅವಧಿಯಲ್ಲಿ ಜನರು ಅಲ್ಲಲ್ಲಿ ಹಳ್ಳದ ನೀರಿಗೆ ಅಡ್ಡಲಾಗಿ ಚಕ್ ಡ್ಯಾಂಗಳನ್ನು ನಿರ್ಮಿಸಿ ಕೊಂಡಿದ್ದಾರೆ. ಇದರಿಂದ ಕೆರೆಗೆ ನೀರು ಹರಿಯುವ ಪ್ರಮಾಣ ಕಡಿಮೆಯಾಗಿದೆ. ಇಂದಿನ ಮಿತಿಮೀರಿ ಕೊರೆಯುವ ಕೊಳವೆ ಬಾವಿಗಳಿಂದಾಗಿ ಹಳ್ಳಗಳು ಬತ್ತಿಹೋಗಿ, ಜಿನುಗು ನೀರು ಸಹ ಬತ್ತಿ ಹೋಗಿದೆ. ಬದಲಿಗೆ ಇಂದು ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಂಡು ನದಿ ನೀರನ್ನು ಕೆರೆಗೆ ಬಿಡುವ ಕಾರ್ಯಗಳು ನಡೆಯುತ್ತಿವೆ. ಹಿಂದೆಯೂ ಈ ಕಾರ್ಯಗಳು ಬಳ್ಳಾರಿ ಪರಿಸರ, ಸೂಳೆಕೆರೆ ಅಥವಾ ಶಾಂತಿಸಾಗರ, ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕು ಮಾರಿಕಣಿವೆಯ ವಾಣಿವಿಲಾಸ ಸಾಗರಕ್ಕೆ ಭದ್ರಾನೀರು, ಹೀಗೆ ಕೆಲವೆಡೆ ನದಿ ನೀರನ್ನು ಕೆರೆಗಳಿಗೆ ಬಿಟ್ಟು ತುಂಬಿಸುತ್ತಾ ಬಂದಿರುವುದಿದೆ. ಇಂದು ಅನೇಕ ಕೆರೆಗಳಿಗೆ ಈ ಯೋಜನೆಗಳನ್ನು ತರಲು ಸರ್ಕಾರ ಮುಂದಾಗಿದೆ. ಇದರಿಂದ ಅಂತರ್ಜಲ ಮಟ್ಟದ ಚೇತರಿಕೆ ಸಾಧ್ಯವಾಗುವ ನಿರೀಕ್ಷೆ ಕಂಡುಬರುತ್ತಿದೆ.

ಇಂದಿನ ಹವಾಮಾನ, ಮಳೆಯ ವೈಪರೀತ್ಯದಿಂದಾಗಿ ಮಳೆಯ ಪ್ರಮಾಣ ಕಡಿಮೆಯಾಗಿದೆ. ರೈತರು ಹೆಚ್ಚು ಹೆಚ್ಚು ವಾಣಿಜ್ಯ ಬೆಳೆಗಳನ್ನು ಬೆಳೆಯುವ ಕಡೆಗೆ ಆಕರ್ಷಿತರಾಗಿದ್ದಾರೆ. ಇದರಿಂದ ಭೂಮಿಯೊಳಗಿನ ಅಂತರ್ಜಲವನ್ನು ಕೊಳವೆ ಬಾವಿಗಳ ಮೂಲಕ ಹೊರ ತೆಗೆಯುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಅಂತರ್ಜಲವು ಅಳಿವಿನಂಚಿನಲ್ಲಿದೆ. ಹಳ್ಳಗಳೂ ಬತ್ತಿ ಬರಡಾಗಿ ನಿಂತಿವೆ. ಅಲ್ಲದೆ ಇಂದು ಹಳ್ಳಗಳೇ ಕಣ್ಮರೆಯಾಗುತ್ತಿವೆ. ಇವುಗಳನ್ನು ಸಮಗೊಳಿಸಿ ಹಳ್ಳಗಳ ಮೇಲೆ ಕೃಷಿ ಕಾರ್ಯಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ.

**ಬಾವಿಗಳು**

ಇದೊಂದು ಅಂತರ್ಜಲ ವಿಧಾನವಾಗಿದೆ. ಕೆರೆ, ಕಟ್ಟೆ, ತೊರೆಗಳು ಮಳೆಗಾಲದಲ್ಲಿ ಹರಿಯುತ್ತವೆ. ಬೇಸಿಗೆಯ ಸಂದರ್ಭದಲ್ಲಿ ನೀರಿನ ಅಭಾವ ಎದುರಾದ ಸಂದರ್ಭದಲ್ಲಿ ಪರ್ಯಾಯವಾಗಿ ರೂಪಿಸಿಕೊಂಡ ನೀರಿನ ಆಕರಗಳು ಬಾವಿಗಳಾಗಿವೆ. ಈ ಆಕರವು ಭೂಮಿಯ

ಒಳಭಾಗದಲ್ಲಿ ದೊರೆಯುವ ನೀರಿನ ಸೆಲೆಯಾಗಿದೆ. ಕೆರೆಯ ನೀರು ಬೇಸಿಗೆಯ ಸಂದರ್ಭದಲ್ಲಿ ಬತ್ತುವುದರಿಂದ ನೀರಾವರಿಗೆ ಶಾಶ್ವತ ಪರಿಹಾರವನ್ನು ಒದಗಿಸುವ ದೃಷ್ಟಿಯಿಂದ ರಚನೆಗೊಂಡ ನೀರಾವರಿ ವಿಧಾನ ಇದಾಗಿದೆ. ಈ ಬಾವಿಯ ನೀರನ್ನು ನೀರಾವರಿಗಲ್ಲದೆ ಧಾರ್ಮಿಕ ಕಾರ್ಯಗಳಿಗಾಗಿ ಬಳಸಿಕೊಳ್ಳುತ್ತಿದ್ದರು. ಆ ಹಿನ್ನೆಲೆಯಲ್ಲಿ ನಿರ್ಮಿಸಿರುವ ಉಲ್ಲೇಖಗಳು ಶಾಸನದಲ್ಲಿ ಕಂಡುಬರುತ್ತವೆ. ಬಾವಿಗಳಲ್ಲಿ ಎರಡು ವಿಧಗಳನ್ನು ಕಾಣಬಹುದು. 'ಸರ್ವಋತು ಬಾವಿ ಮತ್ತು ತಾತ್ಕಾಲಿಕವಾಗಿ ನದಿ ಅಥವಾ ಹಳ್ಳಗಳ ನೀರಿಗೆ ತೋಡಲಾದ ಒರತೆ ಅಥವಾ ಊಟೆ ಬಾವಿಗಳು,'[೫೫೦] ಬಾವಿ ನೀರಾವರಿ ವ್ಯವಸ್ಥೆಯು ಸಾಮಾನ್ಯವಾಗಿ ಖಾಸಗಿಯಾಗಿರುತ್ತಿತ್ತು. ಇದರಿಂದ ಅಧಿಕ ಪ್ರದೇಶಗಳಿಗೆ ನೀರು ಹರಿಸಲು ಸಾಧ್ಯವಾಗುತ್ತಿರಲಿಲ್ಲ. ಬಾವಿಗಳಲ್ಲಿ ನೀರಾವರಿ, ದೇವಸ್ಥಾನ, ಕುಡಿಯುವ ಬಾವಿಗಳೆಂದು ಮೂರು ರೀತಿಯಾಗಿ ಕಂಡುಬರುತ್ತವೆ. ಬಾವಿಗಳನ್ನು ಸಾಮಾನ್ಯವಾಗಿ ಕಲ್ಲಿನ ಕಟ್ಟಡಗಳಿಂದ ನಿರ್ಮಿಸಲಾಗುತ್ತಿತ್ತು. ನೀರಾವರಿಗೆ ಸಂಬಂಧಿಸಿದ ಬಾವಿಗಳು ತೋಟ, ಹೊಲಗದ್ದೆಗಳಲ್ಲಿ ಕಂಡುಬರುತ್ತವೆ. 'ದೇವಾಲಯ ಕುಡಿಯುವ ನೀರಿಗಾಗಿ ನಿರ್ಮಿಸುವ ಬಾವಿಗಳು ಮಂಟಪಗಳಿಂದಲೂ ನಾಲ್ಕು ಬದಿಯಲ್ಲಿ ಪಾವಟೆಗಳಿಂದಲೂ ಕೂಡಿದ ರಚನೆಯನ್ನು ಒಳಗೊಂಡಿರುತ್ತಿದ್ದವು.'[೫೫೧] ಇವುಗಳಿಗೆ ತಮಿಳಿನಲ್ಲಿ ನಡೈಬಾವಿ, ಕನ್ನಡದಲ್ಲಿ ನಡೆಬಾವಿ ಎಂದು ಕರೆಯಲಾಗಿದೆ. ಅಂದರೆ ಸುತ್ತಲೂ ಪವನೆ ಅಥವಾ ಸೋಪಾನಗಳಿರುವ ಬಾವಿಗಳು. ಇವುಗಳನ್ನು ನೀರಿನ ಮಟ್ಟದವರೆಗೂ ರಚನೆ ಮಾಡಲಾಗುತ್ತಿತ್ತು.[೫೫೨]

ಒಂದು ಕಡೆ ಸಾಮೂಹಿಕವಾಗಿ ಊರಿಗೊಂದು ಕೆರೆಯಂತೆ ಕೆರೆಗಳು ನಿರ್ಮಾಣವಾದವು. ಮತ್ತೊಂದೆಡೆ ವೈಯಕ್ತಿಕವಾಗಿ ಮತ್ತು ಸಾಮುದಾಯಿಕವಾಗಿಯೂ ಗ್ರಾಮಗಳಿಗೆ ಅಗತ್ಯವಿದ್ದಷ್ಟು ಬಾವಿಗಳ ರಚನೆಗಳನ್ನು ಮಾಡಲಾಯಿತು. ಆರಂಭದಲ್ಲಿ ಬಾವಿಗಳನ್ನು ದೇವರ ಪೂಜಾ ಕಾರ್ಯಗಳಿಗೆ, ಕುಡಿಯುವ ನೀರಿಗಾಗಿ ಬಳಕೆ ಮಾಡಿರುವ ಸಾಧ್ಯತೆಗಳಿವೆ. ನಂತರ ಬಾವಿಗಳನ್ನು ನೀರಾವರಿ ವ್ಯವಸಾಯದಲ್ಲಿ ತೋಟ ಮೊದಲಾದವುಗಳಿಗೆ ಬಳಕೆ ಮಾಡಿ ಕೊಂಡಿರುವುದು ಕಂಡುಬರುತ್ತದೆ. ಕೆರೆಗಳು ಇದ್ದಾಗಲು ಕೆರೆಯ ನೀರು ಕುಡಿಯಲು ಯೋಗ್ಯವಿರದ ಕಾರಣ ಬಾವಿಗಳ ನಿರ್ಮಾಣಗಳು ಆರಂಭಗೊಂಡಿರುವ ಸಾಧ್ಯತೆಗಳಿವೆ.

ಚಾವುಂಡರಾಯನು ಲೋಕೋಪಕಾರದಲ್ಲಿ ಬಾವಿಯ ನಿರ್ಮಾಣದ ಬಗೆಗೆ ತಿಳಿಸಿರುವುದು ಕಂಡುಬರುತ್ತದೆ. ಇದರಲ್ಲಿ 'ಉದಕಾರ್ಗಳ'[೫೫೩] ಅಂದರೆ ಜಲಶಿಲ್ಪಿಗಳು ಇರುತ್ತಿದ್ದರು. ಇವರು ಎಲ್ಲಿ ನೀರು ತೋಡಬೇಕು ಯಾವ ಸ್ಥಳದಲ್ಲಿ ನೀರು ತೋಡಿದರೆ ನೀರು ಬರುತ್ತದೆ. ಬಾವಿಗಳನ್ನು ಹೇಗೆ ತೋಡಬೇಕೆಂದು ತಿಳಿಸುತ್ತಿದ್ದರು. ಇಂದು ಭೂಗರ್ಭಶಾಸ್ತ್ರಜ್ಞರು ಈ ಕಾರ್ಯಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ. ಇಂದು ನದಿ ನೀರಿನ ಜಲಾನಯನ ಪ್ರದೇಶಗಳನ್ನು ಹೊರತುಪಡಿಸಿ, ಶೇಕಡ ೪೩ರಷ್ಟು ಬಾವಿಗಳ ಬದಲಿಗೆ ಕೊಳವೆ ಬಾವಿಗಳಿಂದ ನೀರಾವರಿ ಬೇಸಾಯ ನಡೆಯುತ್ತಿರುವುದು ಕಂಡುಬರುತ್ತದೆ. ವರಾಹಮಿಹಿರನು ಅಂತರ್ಜಲ ಜ್ಞಾನದ ಕುರಿತು ಹೀಗೆ ಹೇಳಿದ್ದಾನೆ.

ಧರ್ಮ್ಯಂ ಯಶಸ್ಯಂ ಚ ಉದಾಮ್ಯತ್ಯೋಹಂ
ದಕಾರ್ಗಲಂ ಯೇನ ಜಲೋಪಲಬ್ಧಿಃ
ಪುಂಸಾಂ ಯಥಾಂಗೇಷಂ ಶಿರಾಸ್ತಥೈವ
ಕ್ಷಿತಾವಪಿ ಪ್ರೋನ್ನತ ನಿಮ್ನ ಸಂಸ್ಥಾಃ[೫೫೪]

ವರಾಹಮಿಹಿರನು ಈಗ ನಾನು ಧರ್ಮವನ್ನು ಉಂಟು ಮಾಡುತ್ತಿರುವುದು ಕೀರ್ತಿಕರವಾದುದು. ದರ್ಕಾಲ(ಎಂದರೆ ಜಲಶೋಧನೆ)ದ ಬಗೆಗೆ ಹೇಳುತ್ತಿದ್ದೇನೆ. ಪುರುಷರ ಅಂಗಾಂಗಗಳಲ್ಲಿ ಹೇಗೆ ರಕ್ತಸಂಚರಿಸುತ್ತದೆಯೋ ಹಾಗೆಯೇ ಭೂಮಿಯ ಒಳಭಾಗದ ಪದರಗಳಲ್ಲಿ ಜಲವಾಹಿನಿಗಳಿರುತ್ತವೆ. ಇವು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹರಿಯುತ್ತವೆ ಎಂಬ ಅಂಶಗಳನ್ನು ಅಂದೇ ವರಾಹಮಿಹಿರನು ಅರಿತಿದ್ದನೆಂಬುದು ತಿಳಿಯುತ್ತದೆ. 'ದಕಾರ್ಗಲ'ಕ್ಕೆ ಇಂಗ್ಲೀಷ್‌ನಲ್ಲಿ Exploration of warter Spxing's ಎಂದು ಕರೆಯಲಾಗುತ್ತದೆ.[೫೫೫] ಅಂತರ್ಜಲ ಶೋಧನ ಕುರಿತ ಮೊದಲ ಪ್ರಾಚೀನ ಗ್ರಂಥವಾಗಿ ವರಾಹಮಿಹಿರನ ಬೃಹತ್ಸಂಹಿತೆಯಲ್ಲಿ ಕಂಡುಬರುತ್ತದೆ. ಚಾವುಂಡರಾಯನು ಬಾವಿ ತೋಡಿಸುವ ಸ್ಥಳಗಳನ್ನು ಕುರಿತು ಪ್ರಸ್ತಾಪಿಸಿದ್ದಾನೆ.

ಮುಳ್ಳಿಲ್ಲದ ಬನ್ನಿಯಮರ
ನುಳ್ಳೆಡೆಯೊಳಮಲ್ಲದಂದು ಮೇಣ್ ಪುತ್ತುಗಳೊಂ
ದುಳ್ಳೆಡೆಯೊಳ್ ಬೆಳ್ವತ್ತು ಗ
ಉಳ್ಳೆಡೆಯೊಳ್ ವೊಂದು ಪುರುಷದೊಳ್ ನೀರಕ್ಕುಂ[೫೫೬]

ಚಾವುಂಡರಾಯನು ಮುಳ್ಳಿಲ್ಲದ ಬನ್ನಿಯಮರ ಅಥವಾ ಹುತ್ತಗಳು ದೊಡ್ಡಗಾತ್ರದಲ್ಲಿ ಬೆಳೆದ ಕಡೆ ಒಂದು ಪುರುಷ ಪ್ರಮಾಣದಲ್ಲಿ ನೀರು ಸಿಗುತ್ತದೆ. ಮುಳ್ಳಿಲ್ಲದ ಬನ್ನಿಯ ಮರಗಳು ಸಿಗುವುದು ವಿರಳ. ಇಂತಹ ಕಡೆ ನೀರು ದೊರೆಯುತ್ತದೆ ಎಂದು ತಿಳಿಸಿದ್ದಾನೆ. ಹುತ್ತಗಳಲ್ಲಿ ನೀರು ಸಿಗುತ್ತದೆ ಎಂದು ಹೇಳಿರುವುದು ಇಂದಿಗೂ ವೈಜ್ಞಾನಿಕವಾಗಿ ದೃಢಪಟ್ಟಿದೆ. ಹುತ್ತಗಳನ್ನು ಕಟ್ಟಲು ಗೆದ್ದಲು ಹುಳುವಿಗೆ ನೀರಿನ ಅಗತ್ಯವು ಹೆಚ್ಚಿರುತ್ತದೆ. ನೀರಿರುವ ಕಡೆ ಮಾತ್ರ ದೊಡ್ಡಗಾತ್ರದ ಹುತ್ತಗಳನ್ನು ಕಟ್ಟಲು ಸಾಧ್ಯವಾಗುತ್ತದೆ. ವರಾಹಮಿಹಿರನ ಮುಳ್ಳುಗಳಿಂದ ಕೂಡಿದ ಬನ್ನಿಯಮರದಲ್ಲಿ ನೀರು ಸಿಗುತ್ತದೆ ಎಂದು ಹೇಳಿದ್ದಾನೆ.[೫೫೭] ಆದರೆ ಇದನ್ನು ಪರಿಶೀಲಿಸುವ ಅಗತ್ಯವಿದೆ.

ಬ್ರಾಂತೇಂ ಪಣನಿಳಯಂ ತಾ
ಟಿಂ ತೆಂಗಿನಮರನನಡುವುದು(ದ)ಮ(ದ) ದಟಿಂದಜುಗೆ
ಯ್ಯಂತರದೊಳ್ ಬಡಗಲ್ ನೀರು
ತಂ ತೋಡುಗೆ ನಾಲ್ಕು ಪುರುಷದೊಳ್ ನೀರಕ್ಕುಂ[೫೫೮]

ತಾಳೆ ಮತ್ತು ತೆಂಗು ಜಾತಿಯ ಮರಗಳು ಸ್ವಾಭಾವಿಕವಾಗಿ ಬೆಳೆಯುವಲ್ಲಿ ನಾಲ್ಕು ಪುರುಷ ನೀರು ಸಿಗುತ್ತದೆ ಎಂದಿರುವನು. ಚಾವುಂಡರಾಯನ ಕಾಲಕ್ಕೆ ಇದು ಜರುಗಿರುವ ಸಾಧ್ಯತೆಗಳಿವೆ. ಚಾವುಂಡರಾಯನ ಜ್ಞಾನ ಆ ಕಾಲಕ್ಕೆ ಸರಿ ಮತ್ತು ಇಂದಿಗೂ ಅದು ಅನ್ವಯಿಸುತ್ತದೆ. ಆದರೆ ಬದಲಾದ ಇಂದಿನ ಸಂದರ್ಭದಲ್ಲಿ ಯಾವ ಜಾಗದಲ್ಲಿ ಬಾವಿ ತೋಡಿದರೂ ನೀರು ದೊರೆಯದಾಗಿದೆ. ಅಂತರ್ಜಲ ಬರಿದಾಗುತ್ತಾ ಬರುತ್ತಿದೆ. ಇಂದು ಸಸ್ಯಗಳು ದಟ್ಟವಾಗಿ ಬೆಳೆಯುವ ಹಸಿರು ಹುಲ್ಲು ಅಂದರೆ ಬೇಸಿಗೆಯಲ್ಲೂ ಹುಲ್ಲು ಹಸಿರಾಗಿರುವ ಕಡೆ ಬಾವಿ ತೋಡಿದರೆ ನೀರು ದೊರೆಯುತ್ತದೆ. ಎಕ್ಕದ ಗಿಡ, ಲಕ್ಕಿಗಿಡ ಮೊದಲಾದ ಕಡೆ ಬಾವಿ ತೆಗೆಸಿದರೆ ನೀರು ಸಿಗುತ್ತದೆ ಎಂಬ ಜ್ಞಾನ ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಆದರೆ ಬದಲಾದ ಇಂದಿನ ಸನ್ನಿವೇಶಕ್ಕೆ ಇದು ವಿರಳತೆಯ ಸಾಧ್ಯತೆಗಳನ್ನು ಸಾಕ್ಷೀಕರಿಸುತ್ತಿದೆ. ಚಾವುಂಡರಾಯನು ಭೂ ಮತ್ತು ಸಸ್ಯ ವೈಜ್ಞಾನಿಕ ಆಧಾರಿತವಾಗಿ ನೀರಿನ ಸೆಲೆಯ ಬಗೆಗೆ ಹೀಗೆ ಹೇಳುತ್ತಾನೆ.

ನೆಲನಂಘಟ್ಟಿಸೆ ಶಬ್ದಮಬ್ಬರಿಮೊಡಂ ಮೇಣ್ ಮಿಂಚುವೆತ್ತಿರ್ಪೊಡುಂ
ಶಿಲೆಗಳ್ ಬೆಳ್ಪೆಸೆದಿರ್ಪುಡಂ ತರುಗಳೊಳ್ ನಿಂದೊಂದು ಕೊಂಬಾವರ್ಗಂ
ನೆಲನಂ ಮೋದುವೂಡಂ ಬೆಳತೋರ್ಡಮದರ್ಕೇಂ ಸಂದೆಯಂ ನಿಶ್ಚಯಂ
ಜಲಮಕ್ಕುಂ ಪುರುಷದ್ವಯ ಪ್ರಮೀತದೊಳ್ ಶ್ರೀಶಿಷ್ಟಕಲ್ಪದ್ರುಮಾ[೫೫೯]

ಶಿಲೆಗಳಲ್ಲಿ ಬಿರುಕು ಇದ್ದ ಕಡೆ ಶಿಲೆಗಳನ್ನು ಬಡಿದರೆ ಶಬ್ದ ಬರುತ್ತದೆ. ಈ ಬಿರುಕಿನ ಚಿಕ್ಕ ರಂಧ್ರಗಳ ಮೂಲಕ ನೆಲದ ಮೇಲೆ ಬಿದ್ದ ನೀರು ಇಂಗಿ ಅಂತರ್ಜಲವಾಗುತ್ತದೆ. ಈ ಶಿಲೆಗಳಲ್ಲಿ 'ಸಚ್ಛಿದ್ರತೆ ಮತ್ತು ವ್ಯಾಪಕತೆ ಹೆಚ್ಚಾಗಿದ್ದು, ಸ್ರಾವಕ ಗುಣವು ಚೆನ್ನಾಗಿರುತ್ತದೆ. ಉದಾ: ಮರಳು, ಕಲ್ಲು ಮುಂತಾದ ಶಿಲೆಗಳ ರಂಧ್ರಗಳು[೫೬೦] ಇಂತಹ ಕಡೆ ನೀರು ಬರುತ್ತದೆ ಎಂಬುದು ಚಾವುಂಡರಾಯನ ಅಭಿಮತ. ಬಾವಿ ತೋಡುವಾಗ ಬಾವಿಯ ಸುತ್ತಲಿನ ಪ್ರದೇಶವನ್ನು ಗಮನದಲ್ಲಿಟ್ಟುಕೊಂಡು ತೋಡಿಸಬೇಕು ಎಂದು ಹೇಳುವಾಗ.

ಸುರರಾಜಾದ್ಯಷ್ಟದಿಶಾಂ
ತರಂಗಳೊಳ್ ಶಿಲೆಗಳೊಗೆಯ ದಿಶೆಗಳ ದೆಸೆಯೊಳ್
ಪಿರಿದಕ್ಕುಂ ನೀರ್ ವಿದಿಶಾಂ
ತರಂಗಳೊಳ್ ಗೆಂಟಜಿಂದೆ ನೀರ್ ಕಿಱಿದಕ್ಕುಂ[೫೬೧]

ಬಾವಿಗಳನ್ನು ತೋಡುವ ಸಂದರ್ಭದಲ್ಲಿ ಬಾವಿ ತೋಡುವ ಸ್ಥಳದ ಸುತ್ತಲಿನ ನೆಲದ ಮೇಲ್ಮೈಯ ರಚನೆಯನ್ನು ತಿಳಿದುಕೊಳ್ಳಬೇಕು. ಜೊತೆಗೆ ಕೆಳಗಡೆ ಎಂತಹ ಶಿಲೆಗಳಿವೆ ಎಂಬುದನ್ನು ತಿಳಿಯುವುದು ಹೆಚ್ಚು ಸೂಕ್ತ. ಇದರಿಂದಾಗಿ ಶಿಲಾ ಪದರಗಳ ಇಳಿಜಾರು, ಇಳಿಜಾರಿನ ದಿಕ್ಕು ಮತ್ತು ಕೋನ ಹಾಗೂ ಆ ಶಿಲೆಗಳ ಜಲಸಂಗ್ರಹದ ಸಾಮರ್ಥ್ಯ ತಿಳಿಯುತ್ತದೆ. ಅಲ್ಲದೆ ಭೂಮಿಯೊಳಕ್ಕೆ ಇಂಗಿದ ನೀರು ಯಾವ ಕಡೆಯಿಂದ ಯಾವ ಕಡೆಗೆ ಹರಿಯುತ್ತದೆ ಎಂಬುದು ತಿಳಿಯುತ್ತದೆ. ನೀರನ್ನೇ ಹೀರಿಕೊಳ್ಳುವ ಬಂಡೆಗಳಿರುವ ಕಡೆ ವೃಥಾ ಬಾವಿ ತೋಡಿ ನಷ್ಟ ಅನುಭವಿಸಬಾರದು.[೫೬೨] ತಾತ್ಕಾಲಿಕವಾಗಿ ಅಂತರ್ಜಲ ಸಿಗುವ ಕುರಿತು ಹೀಗೆ ತಿಳಿಸಲಾಗಿದೆ.

ದೊರೆಕೊರೆ ತಾಱಿಯಿಂ ಪಡುವ ಪುತ್ತಿರೆ ನೀಱದಱಿಂದೆ ತೆಂಕ ಮು
ಪುರುಷದೊಳಾಗಿ ಮೂಱು ಬರಿಸಕ್ಕದು ಪಿಂಗುಗುಮಾ ಮರಕ್ಕೆ ಮೇಣ್
ದೊರೆಕೊಳೆ ಪುತ್ತು ತೆಂಕಲದಱಿಂ ಪಡುವಲ್ ಪುರುಷತ್ರಯಕ್ಕೆ ಯ
ಚ್ಚರಿಯನೆ ಮೂಡಣಿಂದಮೊಸರ್ಗುಂ ಸಲಿಲಂ ಜಯಬಂಧು ನಂದನಾ[೫೬೩]

ಅಂತರ್ಜಲವು ಮಳೆಯನ್ನು ಅವಲಂಬಿಸಿರುತ್ತದೆ. ಭೂಮಿಯ "ಹೊರ ಚಿಪ್ಪಿನಲ್ಲಿರುವ ಸರಂಧ್ರ ಹಾಗೂ ವ್ಯಾಪ್ಯ ಶಿಲೆಗಳ ಮೂಲಕ ಪ್ರವಹಿಸಿ ಅನುಕೂಲಕರವಾದ ಸನ್ನಿವೇಶವಿರುವ ಆಳದಲ್ಲಿ ಸಂಗ್ರಹವಾಗಿ ಅಂತರ್ಜಲವಾಗುತ್ತದೆ. ಹೀಗೆ ಶೇಖರಣೆಗೊಂಡ ನೀರನ್ನು ಜಲಮಟ್ಟ ಎಂದು ಕರೆಯಲಾಗುತ್ತದೆ. ಇದಕ್ಕೆ ಕಾರಣ ಅಸ್ರಾವಿಕ ಶಿಲಾ ಪದರಗಳು. ಈ ಪದರದಿಂದಾಗಿ ಕೆಲವೆಡೆ ಶಾಶ್ವತ ಮತ್ತೆ ಕೆಲವೆಡೆ ತಾತ್ಕಾಲಿಕ ಜಲಮಟ್ಟ ರೂಪುಗೊಳ್ಳುತ್ತದೆ."[೫೬೪] ತಾತ್ಕಾಲಿಕವಾಗಿ ಸಿಗುವ ಜಲಮಟ್ಟವು ದೊರೆಯುವ ಕಡೆ ಬಾವಿ ತೋಡಿಸುವುದನ್ನು ಬಿಟ್ಟು ಬೇರೆ ಕಡೆ ಬಾವಿ ತೋಡಿಸಬೇಕು. 'ಮೂಡಣಿಂದ ಮೊಸರ್ಗುಂ ಸಲಿಲಂ' ಎಂಬ ಸಾಲು ಜಲವು ದೊರೆಯುವ

ದಿಕ್ಕನ್ನು ಸೂಚಿಸುತ್ತದೆ. ಮಣ್ಣಿನ ಗುಣದಿಂದ ನೀರಿನ ಗುಣವನ್ನು ಪತ್ತೆ ಹಚ್ಚುವುದಕ್ಕೆ ಹೀಗೆ ಹೇಳಿರುವುದು ಕೆಳಗಿನ ಪದ್ಯದಲ್ಲಿ ತಿಳಿಯುತ್ತದೆ.

ಉದಕಂ ಕರ್ಪೆಸದಿರ್ಪ ಮಣ್ಣೊಳೊಗಱಕ್ಕುಂ ನೀಲಿಯಂ ಪೋಲ್ವ ಬ
ಣ್ಣದ ಮಣ್ಣೊಳ್ ಬಿಳಿದಪ್ಪ ಮಣ್ಣೊಳಿನಿದಕ್ಕುಂ ಧೂಸರಂ ಪೊನ್ನ ಬ
ಣ್ಣದ ಮಣ್ಣೊಳ್ ಪರಲಾಗಿ ಕೆಂಪೆಸೆವ ಮಣ್ಣೊಳ್ ಕ್ರಪೆಯಾಗಿರ್ಕುಮೊಂ
ದಿದ ಬೆಳ್ಗೆಂಪೆಸದಿರ್ಪ ಮಣ್ಣೊದವಿಂದುಪ್ಪಕ್ಕುಂ ನಿರ್ವ್ಯಾಜದಿಂ[೫೬೫]

ನೀರಿಗೆ ಯಾವುದೇ ಬಣ್ಣ, ರುಚಿ, ವಾಸನೆಯಾಗಲಿ ಇರುವುದಿಲ್ಲ. ಮಳೆಯ ನೀರು ಭೂಮಿಗೆ ಬಿದ್ದಾಗ ಮಣ್ಣಿನ ಬಣ್ಣಕ್ಕನುಗುಣವಾಗಿ ನೀರು ಪರಿವರ್ತನೆಯಾಗಿರುವ ಬಗೆ (ನೀರು ಮಣ್ಣಿನ ಆಯಾಯ ಬಣ್ಣಗಳಿಗೆ ಪರಿವರ್ತನೆಯಾಗುವುದನ್ನು) ಇಲ್ಲಿ ತಿಳಿಸಿರುವುದು ಕಂಡುಬರುತ್ತದೆ.

ಬಾವಿಯನ್ನು ತೋಡಲು ಬಳಸುವ ಸಾಧನದ ಬಗೆಗೆ ಹೀಗೆ ಹೇಳಿರುವನು. "ಶಿಲೆಗಳನ್ನು ಒಡೆಯಲು ಬಳಸುವ ಉಳಿಗಳ ಮೊನೆ ಮೊಂಡಾಗದಂತೆ ಯಾವಾಗಲೂ ಗಟ್ಟಿಯಾಗಿರಬೇಕಾದುದು ಅಗತ್ಯ. ಅದಕ್ಕಾಗಿ ಎಕ್ಕೆಗಿಡದ ಹಾಲು, ಪಾರಿವಾಳ ಮತ್ತು ಇಲಿಗಳ ಹಿಕ್ಕೆ, ಟಗರು ಕೊಂಬಿನ ಮಸಿ ಇವುಗಳನ್ನೆಲ್ಲ ಒಂದುಗೂಡಿಸಿ ಉಳಿಯ ತುದಿಗೆ ಲೇಪಿಸಬೇಕು. ಬಳಿಕ ಅದನ್ನು ಕಾಯಿಸಿ ಒಳ್ಳೆಯ ನೀರೂಟವನ್ನು ಎಣ್ಣೆ ಮತ್ತು ಮಜ್ಜಿಗೆಯ ಮಿಶ್ರಣದಿಂದ ಅದ್ದಿ ತೆಗೆಯಬೇಕು. ಇದರಿಂದ ಉಳಿಗಳು ತಾಳಿಕೆ ಬರುತ್ತವೆ"[೫೬೬] ಎಂದಿದ್ದಾರೆ. ಈ ಕುರಿತಾಗಿ ಈ ಕೆಳಗಿನ ಪದ್ಯಗಳಲ್ಲಿ ತಿಳಿಸಿದ್ದಾನೆ.

ರವಿದುಗ್ದಂ ಪಾರಿವದೆ
ಚ್ಚವುಂದುರದ ವಿಷ್ಟಿ ತಗಱಕೋಡಿನ ಮಹಿಯೆಂ
ಬಿವನೊರಸಿ ಕಾಸಿ ನೀರೊ
ಡುವುದುಟೆಯಂ ತೈಲ ತಕ್ರದೊಳ್ ಪವಿಯಕ್ಕುಂ
ಬೇವಿನ ಬೆಳ್ಳುಳ್ಳಿಯ ಕೊಳೆ
ವಾವಿನ ಸುಂಡಿಲಿಯ ಪುಣ್ಣ ಮೀಂಬೊಲಸಿನಗೋ
ದಾವೆಯ ತಗುಣೆಯ ಗತ್ತದ
ಬಾವಲ ನಾತಂಗಳಾಗೆ ಒಟ್ಟುಗಳ ಶುಭಂ
ನಿಡಿದಪ್ಪಕೆಯ್ದು ವೊಪ್ಪಂ
ಬಡೆಯದೊಡೆ ಮಸೆದುರ್ದಿ ಕಳೆವುದಲ್ಲದೆ ಮೊನೆಯಂ
ಕಡಿದಂದು ತಾ ಕಾಯಗೂಲಂ
ಕಡಿವಂಧಿಪತಿಗೆ ಮರಣಮಕ್ಕುಮಮೋಘಂ[೫೬೭]

ಬಾವಿ ತೋಡುವಾಗ ಅರೆಬಂಡೆ ಅಡ್ಡವಾದರೆ ಅದನ್ನು ಮೃದುವಾಗಿ ಒಡೆಯುವ ಕ್ರಮವನ್ನು ತಿಳಿಸಿದ್ದಾನೆ. ಬಂಡೆಗಳನ್ನು ಒಡೆಯುವ, ಉಳಿಗಳನ್ನು ವಜ್ರದಂತೆ ಗಟ್ಟಿಗೊಳಿಸಿಕೊಳ್ಳುವ ವಿಧಾನವನ್ನು ಪ್ರಸ್ತಾಪಿಸಿದ್ದಾನೆ. ಇಂದಿನಂತೆ ಆಧುನಿಕ ತಂತ್ರಜ್ಞಾನ ಅಂದು ಇರಲಿಲ್ಲ. ಬದಲಿಗೆ ಮಾನವ ಶ್ರಮವನ್ನಾಧರಿಸಿತ್ತು. ಬಂಡೆಗಳನ್ನು ಒಡೆಯುವಾಗ ಸನ್ನೆಯ ಮೂಲಕ ಒಡೆಯಲಾಗುತ್ತಿತ್ತು.

ಕ್ರಿ.ಶ. ೯೪ರ ಶಾಸನದಲ್ಲಿ 'ಕಲ್ಲಬಾವಿಯ ತೋಂಟವೊಂದು'ರ ಉಲ್ಲೇಖವಿದೆ.[೫೬೮] ಕ್ರಿ.ಶ. ೧೦೪೯ರ ಶಾಸನದಲ್ಲಿ ಕಪಿಲತೀರ್ಥವೆಂಬ ಬಾವಿಯನ್ನು ಕಟ್ಟಿಸಿದಂತೆ ತಿಳಿಸಿದೆ.[೫೬೯] ಈ ಬಾವಿಯನ್ನು ದೇವಾಲಯಕ್ಕಾಗಿ ಕಟ್ಟಿಸಿದಂತೆ ಕಂಡುಬರುತ್ತದೆ. ಕ್ರಿ.ಶ. ೧೦೬೩ರ ಶಾಸನದಲ್ಲಿ ಪೋಚಿಮಯ್ಯನು ಎರೆಯಕೆಱೆ ಮಚ್ಚೇಱು ತೆಲ್ಲಿಗನ ಕೆಱೆಯೆಂದಿವಂ ತನ್ನಿಂದಂ ಮಾಡಿ ಕೆಱೆಯುಂ ಕೆಱೆಯ ತುಂಬುಗಳುಮಂ ಬಾವಿಗಳುಮಂ ಮಾಡಿಸಿದನು ಎಂದು ಉಲ್ಲೇಖಿಸಿದೆ.[೫೭೦] ಕ್ರಿ.ಶ. ೧೨೩೦ರ ಶಾಸನದಲ್ಲಿ ಚಿಕ್ಕ ತುಂಬಿನ ಬಾವಿಯ ಉಲ್ಲೇಖವಿದೆ.[೫೭೧] ಇದು ಏನೆಂಬುದು ಸ್ಪಷ್ಟವಾಗಿ ತಿಳಿದಿಲ್ಲ. ಕ್ರಿ.ಶ. ೧೧೬೮ರ ಶಾಸನದಲ್ಲಿ ಹೊನ್ನೆಯ ಜೀಯನು ಬಾವಿ ಕಟ್ಟಿಸಿದನೆಂದು ಶಾಸನವು ತಿಳಿಸಿದೆ.[೫೭೨] ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ 'ಸೆಟ್ಟಿಯು ಮಾಡಿಸಿದ ಬಾವಿ' ಎಂದಿದೆ.[೫೭೩] ಕಲ್ಲಬಾವಿಯಿಂದ ತೋಟಕ್ಕೆ ನೀರು ಹಾಯಿಸಿರುವುದು ಕಂಡುಬರುತ್ತದೆ. ಈ ಬಾವಿಯ ತೋಟದಾನವನ್ನು ಈ ಶಾಸನವು ಉಲ್ಲೇಖಿಸಿದೆ. ಕ್ರಿ.ಶ. ೧೧೫೦ರ ಶಾಸನದಲ್ಲಿ ಕೇಶವನ ನೂಱಮೂವತ್ತು ಮರಕ್ಕೆ ದೇವರ ತೋಂಟದ ಬಾವಿಯಲು ನೀರನೆತ್ತಿಯೂಡುವರು[೫೭೪] ಎಂದಿದೆ. ದೇವರ ಬಾವಿಯ ನೀರನ್ನು ಇತರೆ ತೋಟದವರು ಹಾಯಿಸಿರುವುದು ಇಲ್ಲಿ ತಿಳಿಯುತ್ತದೆ. ಆದರೆ ಹೀಗೆ ತೋಟದ ನೀರನ್ನು ಬಳಕೆ ಮಾಡಿಕೊಂಡಾಗ ಅದಕ್ಕೆ ಪ್ರತಿಯಾಗಿ ದೇವರಿಗೆ ಇಂತಿಷ್ಟು ಆದಾಯದ ಕೆಲವೊಂದು ಭಾಗವನ್ನೊ, ಹಣವನ್ನೊ ನೀಡಿರುವ ಸಾಧ್ಯತೆಗಳಿವೆ. ಮಸ್ಕಿಯ ಶಾಸನವೊಂದರಲ್ಲಿ ಶಾಂತರಸನೆಂಬುವವ ಪುಷ್ಕರಣಿ, ಬಾವಿ, ಏತವನ್ನು ಮಾಡಿಸಿದನೆಂದು ತಿಳಿಸಿದೆ.[೫೭೫] ಕ್ರಿ.ಶ. ೧೧೯೬ರ ಶಾಸನದಲ್ಲಿ ಬಾವಿಯೆರೆಯ ಉಲ್ಲೇಖವಿದೆ.[೫೭೬]

ಎರೆಯಭೂಮಿ ಅಥವಾ ಕಪ್ಪು ಭೂಮಿಗೆ ಬಾವಿಯ ನೀರನ್ನು ಹಾಯಿಸಿ ನೀರಾವರಿ ಬೆಳೆಗಳನ್ನು ಬೆಳೆದಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೦೬೮ರ ಶಾಸನದಲ್ಲಿ ಬೀರಯ್ಯ ಗವುಣ್ಡನು ಬಾವಿಗೆ ಕರಿಯ ಕೆಮ್ಮತ್ತರು ೫ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.[೫೭೭] ಕ್ರಿ.ಶ. ೧೦೮೨ರ ಶಾಸನದಲ್ಲಿ ಬಾವಿಗೆ ಯರೆಯ ಮತ್ತರು ೪ ಹೊಂಗೆ ೪ ಕೆಂಗಾಡು ೪ ಬಿಟ್ಟರೆಂದಿದೆ.[೫೭೮] ಕ್ರಿ.ಶ. ೧೦೪೬ರ ಶಾಸನದಲ್ಲಿ ಕೆಱೆಯೊಳಗೆ ಬಾವಿಯನಗಳಿಸಿ ಸೋಮತೀರ್ಥಮೆನ್ದು ಪೆಸರಿಟ್ಟು ಪೂದೋಂಟಂ ನನ್ದನವನಮುಮನಿಟ್ಟು ಕೆಱೆಬಾವಿ ತೋಂಟಕೆಱೆಗೆ ಭೂಮಿಯನ್ನು ಕೊಂಡು ನಾಗಮಯ್ಯನು ದಾನ ಮಾಡುತ್ತಾನೆ.[೫೭೯] ಕೆರೆಯೊಳಗೆ ಬಾವಿ ತೋಡಿಸಿದ ಉದ್ದೇಶವೇನು ಎಂಬುದನ್ನು ಗಮನಿಸಿದಾಗ ಈ ವೇಳೆಯಲ್ಲಿ ಬರಗಾಲ ಎದುರಾಗಿ ಕೆರೆ ಬರಿದಾಗಿರಬೇಕು. ಕೆರೆಯಲ್ಲಿ ನೀರಿದ್ದಾಗ ಬಾವಿ ತೆಗೆಸಲು, ಬಾವಿಯ ನೀರನ್ನು ಉಪಯೋಗಿಸಲು ಸಾಧ್ಯವಾಗುವುದಿಲ್ಲ. ಈ ಬಾವಿಯನ್ನು ಕುಡಿಯುವ ನೀರಿನ ಸಲುವಾಗಿ, ದೇವರ ಧರ್ಮಕಾರ್ಯಗಳಿಗೆ, ಹೂದೋಟ ಮೊದಲಾದವುಗಳಿಗೆ ಬಳಸಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೦೬೪ರ ಶಾಸನದಲ್ಲಿ ಬಾವಿಯನ್ನು ನಿರ್ಮಿಸಿದ ಉಲ್ಲೇಖವಿದೆ.[೫೮೦] ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ ಕುವರಹಾಳನ್ತಯನ ಬಾವಿಯ ಉಲ್ಲೇಖವಿದೆ.[೫೮೧] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ 'ನಾಗರ ಬಾವಿ'ಯ ಉಲ್ಲೇಖವಿದೆ.[೫೮೨] ಈ ಶಾಸನದಲ್ಲಿ ದಾನ ಚಿಂತಾಮಣಿ ಘಳೆಯಕೋಲು ಎಂದು ಅಳತೆಗೋಲನ್ನು ಕರೆಯಲಾಗಿದ್ದು, ಅತ್ತಿಮಬ್ಬೆಯ ಗಂಡ ನಾಗದೇವನ ಹೆಸರನ್ನು ಬಾವಿಗೆ ಇಟ್ಟಿರುವ ಸಾಧ್ಯತೆಗಳಿವೆ. ನಾಗದೇವನ ಹೆಸರಿನಲ್ಲಿ 'ನಾಗರ ಬಾವಿ' ಎಂದು ಕರೆದಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ದೇಗುಲ ಬಾವಿಯ ಉಲ್ಲೇಖವಿದೆ.[೫೮೩]

ಕ್ರಿ.ಶ. ೧೧೨೭ರ ಶಾಸನದಲ್ಲಿ ಬಾವಿಯನಗಳಿಸಿ ಆ ಬಾವಿಗೆ ಗಂಗರಸರು ಬನ್ನಿಕೆಱೆಯೊಡೆಯ ರುದ್ರಮಯ್ಯನು ಗದ್ದಕಮ್ಮವಯ್ವಿತ್ತಾಱು ಬೆದ್ದಲೆ ಘಳೆಯ ಮತ್ತರೆರಡು ಕಮ್ಮವೆಪತ್ತಯ್ದು ಬಿಟ್ಟರೆಂದಿದೆ.[೫೮೪] ಈ ಬಾವಿಯನ್ನು ಮೂಲಸ್ಥಾನ ದೇವರ ಮುಂದೆ

ತೋಡಿಸಿರುವುದು ಕಂಡುಬರುತ್ತದೆ. ದೇವರ ಪೂಜೆಗೋ, ಊರಿನ ಕುಡಿಯುವ ನೀರಿನ ಸಲುವಾಗಿಯೋ ತಿಳಿಯದು. ಆದರೆ ದೇವರ ಮುಂದೆ ತೆಗೆಸಿರುವುದನ್ನು ಗಮನಿಸಿದರೆ ದೇವಸ್ಥಾನದ ಕಾರ್ಯಗಳಿಗೆ ತೋಡಿಸಿದಂತೆ ಕಂಡುಬರುತ್ತದೆ. ಕ್ರಿ.ಶ. ೧೧೪೯ರ ಶಾಸನದಲ್ಲಿ ಕಿಟ್ಚೊಡಿದ ಬಾವಿಯ ಬಟಿಗಾಗಿ ಹೊನ್ನಜಿಕೊಂಡು ಭೂಮಿಯಂ ಕೊಟ್ಟಂ ಎಂದಿದೆ.[೫೮೫] ಬಾವಿಯ ನಿರ್ವಹಣೆಗೆ ಭೂಮಿ ಬಿಟ್ಟಂತೆ ತಿಳಿಸಿದೆ.

ಬಾವಿಗಳ ನೀರನ್ನು ಮೇಲೆತ್ತಲು ಇಂದು ವಿದ್ಯುತ್ ಮೋಟಾರು ಪಂಪ್‌ಗಳನ್ನು ಬಳಸಲಾಗುತ್ತಿದೆ. ಅಲ್ಲದೆ ಪ್ರಾಚೀನ ಕಾಲದಲ್ಲಿ ನಿರ್ಮಾಣಗೊಂಡ ತೆರೆದ ಬಾವಿಗಳು ಇಂದು ಕಣ್ಮರೆಯಾಗುತ್ತಿವೆ. ಇದಕ್ಕೆ ಪ್ರಮುಖ ಕಾರಣ ಕೊಳವೆ ಬಾವಿಗಳು. ತೆರೆದ ಬಾವಿಗಳ ಪರ್ಯಾಯವಾಗಿ ಕಂಡುಬರುತ್ತಿವೆ. ಪ್ರಾಚೀನ ಕಾಲದಲ್ಲಿ ಬಾವಿಗಳಿಂದ ನೀರೆತ್ತುವ ಸಾಧನವನ್ನು ಏತಗಳೆಂದು ಕರೆಯುತ್ತಿದ್ದರು. ಇದಕ್ಕೆ 'ಏತಪದ್ಧತಿ, ಕಪಿಲೆ, ಮಟ್ಟಿಪದ್ಧತಿಗಳನ್ನು ಅನುಸರಿಸಲಾಗುತ್ತಿತ್ತು. ಮಟ್ಟಿಪದ್ಧತಿಯಲ್ಲಿ ಅರ್ಗಹಟ್ಟಿ, ಅರಹಟ್ಟಿ ಅಥವಾ ಘಟಿಯಂತ್ರ'[೫೮೬] ಶಾಸನಗಳಲ್ಲಿ ಘಟಿಯಂತ್ರ ಮತ್ತು ರಾಟಣಗಳ ಉಲ್ಲೇಖ ಕಂಡುಬರುತ್ತದೆ. ಸಾಗುವಳಿ ಮಾಡುವ ಪ್ರದೇಶಕ್ಕಿಂತ ಕೆಳಮಟ್ಟದಲ್ಲಿರುವ ನೀರನ್ನು ಮೇಲಕ್ಕೆತ್ತಿ ಭೂಮಿಗೆ ನೀರುಣಿಸುವ ವಿಧಾನವನ್ನು ಏತ ನೀರಾವರಿ ಪದ್ಧತಿ ಎಂದು ಕರೆಯಲಾಗುತ್ತದೆ.

**ಏತ ನೀರಾವರಿ**

ತಗ್ಗು ಪ್ರದೇಶದಿಂದ ಅಥವಾ ಬಾವಿಗಳಿಂದ ನೀರೆತ್ತುವುದನ್ನು ಏತಬಾವಿ ಎಂದು ಕರೆಯಲಾಗುತ್ತದೆ. ಋಗ್ವೇದದಲ್ಲಿ ಎತ್ತುಗಳ ನೆರವಿನಿಂದ ನೀರನ್ನು ಎಳೆದುಹಾಕುವ ವಿಧಾನವಿತ್ತು(ಬಹುಶಃ ಕಪಿಲೆ ಇರುವ ಸಾಧ್ಯತೆ ಇದೆ).[೫೮೭] ಪ್ರಾಚೀನ ಕಾಲದ ಶಾಸನಗಳನ್ನು ಗಮನಿಸಿದರೆ ದೇವರಿಗೆ ಬಿಟ್ಟ ಹೂದೋಟಗಳಿಗೆ ನೀರು ಹರಿಸಲು ಇಂತಹ ಬಾವಿಗಳ ನಿರ್ಮಾಣವಾಗಿರುವುದು ಕಂಡುಬರುತ್ತದೆ.

ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ರಾಟಣದ ಉಲ್ಲೇಖವಿದೆ.[೫೮೮] ಈ ಶಾಸನದಲ್ಲಿ ಪೊನ್ನೆತ್ತಿ ಕೊಳೆ ಕೊಟ್ಟ ಒಕ್ಕಲ್ಗೆ ಪೊನ್ವಿಟ್ಟು ಪುಗಿಸಿದಾರ್ ರಾಟಣ ಪೂವಿನ್ನಿರ್ಪ್ಪತ್ತಯ್ಗಣ್ಡುಗಂ ವತ್ತ ತೆಉವೊದು ಪಾರ್ವನ ಮಣ್ಣಿಲ್ಗೆ ಕೂಡಿತೆ ಕಾಯ ಬಿಟ್ಮಣ್ಣುಗಂ ಅರಸಣ್ಣಂ ಅಯ್ದೊನ್ದಿ ಒತ್ತೆ ಮಾಣ್ವಿತ್ತು ಪಾದಂತ್ತೆತ್ತುನ್ಮೊ ಬಿಟ್ಟಂ" ಎಂದು ಶಾಸನದ ಸಾಲುಗಳು ಕಂಡುಬರುತ್ತವೆ. ಕ್ರಿ.ಶ. ೧೧೩೪ರ ಶಾಸನದಲ್ಲಿ ಶಂಕರನಾರಾಯಣ ದೇಗುಲಕ್ಕೆ 'ನೀರು ಯೇತಗದ್ದೆ ಸಲ್ಗು' ಎಂದಿದೆ.[೫೮೯] ಈ ಶಾಸನವು ತಿಳಿಸುವಂತೆ ದೇವರ ಗದ್ದೆ ಭೂಮಿಗೆ ಸಂಬಂಧಿಸಿದ ಏತ ಬಾವಿಯ ನೀರು ಇದಕ್ಕೆ ಮಾತ್ರ ಸೀಮಿತವೆಂದು ತಿಳಿಸಿದಂತಿದೆ. ತೋಟಗಳಲ್ಲಿ ಸಾಮಾನ್ಯವಾಗಿ ಬಾವಿಗಳನ್ನು ನಿರ್ಮಾಣ ಮಾಡಲಾಗುತ್ತಿತ್ತು. ಕ್ರಿ.ಶ. ೧೦೮೭ರ ಶಾಸನದಲ್ಲಿ ಸಿರಿಗುಪ್ಪೆಯಲ್ಲಿ ಎಜೆಗ ಎಂಬಾತನು 'ಮರಕಟ್ಟಿನ ಪಿಜೆಯ ಬಾವಿ'ಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[೫೯೦] ಕ್ರಿ.ಶ. ೧೧೪೭ರ ಶಾಸನದಲ್ಲಿ ಬಾವಿಗಳ ನೀರನ್ನು ಮೇಲೆತ್ತುವುದಕ್ಕೆ ಏತ ಮತ್ತು ಘಟೀಯಂತ್ರಗಳನ್ನು ಬಳಸುತ್ತಿದ್ದರು. ಇದರ ಮೂಲಕ ತೋಟಕ್ಕೆ ನೀರು ಹಾಯಿಸಲಾಗುತ್ತಿತ್ತು. ಶಾಸನವು ಹೀಗೆ ಹೇಳಿರುವುದು ಕಂಡುಬರುತ್ತದೆ. "ಅರಿಸೇನಾ ಚಕ್ರಚಕ್ರಂ ಪೊರಳೆ ರಿಪುಕುಭೃತ್ ಪುಂಗವ ಭ್ರಾಂತಿ ತಳ್ತೊಪ್ಪಿರೆ ತನ್ನು ಉಗ್ರಾಸಿಯಿಂ ದುಚ್ಚಳಿಸಿ ಧರೆಗುರುಳ್ತಪ್ಪ ವಿದ್ವಿಟ್ಸಿರಂಗಲ್ ತರದಿಂ ಕುಂಭಂಗಳಂ ಪೋಲ್ತೆ, ಸೆಯೆ ನವ ಘಟೀಯಂತ್ರದಿಂ ವಿಷ್ಣು ಯುದ್ಧಾಜಿರ ವಾಪೀ ವೈರಿ ರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತವಿಪ್ಪಂ"[೫೯೧] ಇದನ್ನು

'ಅಜಿತಪುರಾಣದಲ್ಲಿ ಘಟೀಯಂತ್ರವೆಂದು ಕರೆಯಲಾಗಿದೆ.'[೯೨] ಏತ ಬಾವಿಗಳು ಸಾಮಾನ್ಯವಾಗಿ ತೋಟಗಳಲ್ಲಿ ನಿರ್ಮಿಸಿದವುಗಳು. ಖಾಸಗಿ ಆಸ್ತಿಗಳಾಗಿ ಕಂಡುಬರುತ್ತವೆ.

ಮಸ್ಕಿಯ ಶಾಸನವೊಂದರಲ್ಲಿ ಶಾಂತರಸನು ಕಟ್ಟಿಸಿದ ಪುಷ್ಕರಣಿ, ಬಾವಿ, ಏತಗಳ ಬಗೆಗೆ ಹೀಗೆ ಹೇಳುತ್ತದೆ. ಶಾಂತರಸನು ನಿರ್ಮಿಸಿದ ಪುಷ್ಕರಣಿ ಹೇಗಿತ್ತೆಂದರೆ "ಸುರನದಿಗೆಣೆ ಯೆನಿಸುವ ಪುಷ್ಕರಣಿಯ ನಖಿಳೋರ್ವ್ವಿಗೆಸೆವ ಕಾಟಿಂಗಲ್ಲೊಳ್ ಪರಹಿತ ವಿನೋದನಾಶ್ರಿತ ಸುರತರು ಸಾನ್ತರಸ ಸತಿಸಯಂ ಕಟ್ಟಿಸಿದಂ ಎಂದು ಉಲ್ಲೇಖಿಸಿದೆ.

ಬಾವಿಯನ್ನು ಕುರಿತು ಶಾಂತರಸನು "ಸುರನದಿ ಕಾಟಿಂಗಲ್ಲಿಂಗಿರದವತರಿಸಿರ್ಮ್ಬಿದಖಿಳ ತೀರ್ತ್ಥಂಗಳು ಬಂದಿರದೆ ನೆಲಸಿಙ್ದುವೆನೆ ಸಾನ್ತರಸಂ ಕಟ್ಟಿಸಿದ ಬಾವಿ ಕಣ್ಗೆಸದಿಕ್ಕು ಧರಯೊಳಗೀ ಧರ್ಮ್ಮಮನುದ್ಧರಿಸುವರಾರೆಂದು ನೋರ್ಪ್ಪ ನೋಟಕ ಜನಕಚ್ಚರಿಯನೆ ಕಟ್ಟಿಸಿದಂ ಸಾನ್ತರಸಂ ಬಾವಿಯನಪೂರ್ವ್ವ ರಚನೋಕ್ತಿಗಳಿಂ" ಎಂದು ಹೇಳಿರುವುದು ಕಂಡುಬಂದಿವೆ. ಸುರನದಿಗೆ ಸಮಾನವಾದ, ಭೂಮಿಯಲ್ಲೆ ಹೆಸರು ಪಡೆದ ಕೊಳದಂತೆ, ಶಾಂತರಸ ಕಟ್ಟಿಸಿದ ಬಾವಿ ಕೀರ್ತಿ ಪಡೆದಿತ್ತು. ಭೂಲೋಕದಲ್ಲಿ ಈ ಧರ್ಮವನ್ನು ರಕ್ಷಿಸುವವರು ಯಾರು ನೋಡುವವರು ಆಶ್ಚರ್ಯಪಡುವಂತೆ ಈ ಬಾವಿ ನಿರ್ಮಿಸಲಾಗಿತ್ತು. ಈ ಬಾವಿಯನ್ನು ಅಪೂರ್ವ ರಚನಾ ವಿನ್ಯಾಸದಿಂದ ಮಾಡಿಸಿದನೆಂದು ಶಾಸನವು ತಿಳಿಸುತ್ತದೆ.

ಬಾವಿಗಾಗಿ ಮಾಡಿಸಿದ ಏತವನ್ನು ಕುರಿತು ಶಾಸನವು ಹೀಗೆ ಹೇಳಿದೆ. ಪಸಿದರಿಗನ್ನವನಿಕ್ಕುವ ಪಸುವಿಂಗೊಲುದೊಳ್ವಿನಿಂದೆ ಧರ್ಮ್ಮೆತವನೆತ್ತಿಸುವಾದಾನಗುಣಂ ಧರೆಗಸದಳಮೆನಿಸಿದುದು ಸಾನ್ತಿವರ್ಮಗ್ರಹಿಯಾ" ಎಂದಿದೆ.[೯೩] ಈ ಏತವನ್ನು ಮಾಡಿಸಿದ ಶಾಂತರಸನು ಅನ್ನದಾನ ಶ್ರೇಷ್ಠನೆಂದು ಹೇಳಿದೆ. ಮೊದಲೇ ನಿರ್ಮಿಸಿದ ಬಾವಿಗೆ ಇಲ್ಲಿ ಶಾಂತರಸನು ಏತವನ್ನು ಮಾಡಿಸಿದಂತಿದೆ. ಈ ಏತವನ್ನು ಯಾರು ಬೇಕಾದರೂ ಬಳಸಬಹುದಿತ್ತು. ನೀರಾವರಿ ಅಥವಾ ಸಾರ್ವಜನಿಕ ಬಾವಿ, ಕೊಳಗಳ ಬಗೆಗೆ ಅರಸರಿಗಿದ್ದ ಮನೋಭಾವ ಈ ಶಾಸನದಲ್ಲಿ ವ್ಯಕ್ತವಾಗಿದ್ದು, ಪರರ ಹಿತಕ್ಕಾಗಿಯೇ ಮಾಡಿಸಿದುದನ್ನು ಶಾಸನವು ತಿಳಿಸಿದೆ.

ಕ್ರಿ.ಶ. ೧೧೯೧ರ ಶಾಸನದಲ್ಲಿ ಕಣ್ಣಸಾವಿಯ ಧರ್ಮದ ಏತದ ಬಾವಿಗೆ ೬ ಮತ್ತರು ಭೂಮಿ ಬಿಟ್ಟದ್ದನ್ನು ತಿಳಿಸಿದೆ.[೯೪] ಕ್ರಿ.ಶ. ೧೧೯೧ರ ಶಾಸನದಲ್ಲಿ ಧರ್ಮದ ಏತಕ್ಕೆ ದೇವನಾಯಕನ ಮಕ್ಕಳು ಬಾಗುಳಹಾವಿ ಈಶ್ವರಣ್ಣನಿಂದ ಭೂಮಿಯನ್ನು ಕ್ರಯಕ್ಕೆ ಪಡೆದುಬಿಟ್ಟರೆಂದಿದೆ.[೯೫] ಕ್ರಿ.ಶ. ೧೦೫೩ರ ಶಾಸನದಲ್ಲಿ ತ್ರೈಲೋಕ್ಯಮಲ್ಲನ ರಾಣಿ ಧರ್ಮದ ಏತಕ್ಕೆ ದಾನ ನೀಡದಳೆಂದು ತಿಳಿದುಬರುತ್ತದೆ.[೯೬] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಧರ್ಮದ ಏತಕ್ಕೆ ದಾನ ನೀಡಿರುವುದು ಕಂಡುಬರುತ್ತದೆ.[೯೭] ಕ್ರಿ.ಶ. ೧೧೫೭ರ ಶಾಸನದಲ್ಲಿ ಧರ್ಮದ ಏತಕ್ಕೆ ಮಾಣಿಕೇಶ್ವರದ ನಾಲ್ಕು ಮತ್ತರು ಭೂಮಿ ದಾನ ನೀಡಿದ್ದನ್ನು ತಿಳಿಸಿದೆ.[೯೮] ಕ್ರಿ.ಶ.೧೨ನೆಯ ಶತಮಾನದ ಶಾಸನದಲ್ಲಿ ಧರ್ಮದ ಏತಕ್ಕೆ ಭೂಮಿದಾನ ನೀಡಿದ ಉಲ್ಲೇಖವಿದೆ.[೯೯] ಕ್ರಿ.ಶ. ೧೧೭೪ರ ಶಾಸನದಲ್ಲಿ ಬಾವಿಯ ಧರ್ಮದೇತಕ್ಕೆ ಭೂಮಿ ನಿವೇಶನ ದಾನ ನೀಡಿದುದನ್ನು ತಿಳಿಸುತ್ತದೆ.[೧೦೦] ಕ್ರಿ.ಶ. ೧೨೫೬ರ ಶಾಸನದಲ್ಲಿ ಹೂದೋಟಕ್ಕೆ ನೀರುಣಿಸಲು ಬಳಸುವ ರಾಟಣಕ್ಕೆ ಹೂಡಿದ ಎತ್ತುಗಳ ಮೇವಿಗಾಗಿ ಭೂಮಿ, ಒಂದು ಗದ್ಯಾಣ, ಒಂದು ಹಣವನ್ನು ನೀಡಿದಂತೆ ಕಂಡುಬಂದಿದೆ.[೧೦೧] ರಾಟಣವೆಂದರೆ ಬಾವಿಯಿಂದ ನೀರೆತ್ತುವ ಗಾಲಿಯ ಯಂತ್ರವೆನ್ನಲಾಗಿದೆ). ಇದರ ಸಹಾಯದಿಂದ ಎತ್ತುಗಳನ್ನು ಇದಕ್ಕೆ ಹೂಡಿ ನೀರೆಳೆಸುತ್ತಿದ್ದರೆಂದು ತಿಳಿದುಬರುತ್ತದೆ. ಎರಡನೆಯ ಬಲ್ಲಾಳನ ಮಳ್ಳೂರು

ಶಾಸನದಲ್ಲಿ ಮೂಲೈ ಪುರಸೈ ಎಂಬುವವನು ಏತ ಪದ್ಧತಿಯಿಂದ ನೀರಾವರಿಯಾಗುತ್ತಿದ್ದ ಎರಡು ಕಾಣಿ ಗದ್ದೆ ಭೂಮಿಯನ್ನು ವಿಷ್ಣು ದೇವಾಲಯಕ್ಕೆ ಬಿಟ್ಟನೆಂದಿದೆ.[೬೦೨]

ಏತ ನೀರಾವರಿ ಪದ್ಧತಿಯಲ್ಲಿ ನಾಲ್ಕು ವಿಧಾನಗಳು ಕಂಡುಬರುತ್ತವೆ. 'ನದಿದಂಡೆಯ ಮೇಲೆ ಕಲ್ಲಿನ ಉಪಕರಣ, ಅಂದರೆ ಎರಡು ಕಲ್ಲಿನ ಕಂಬಗಳನ್ನು ಹೂಳಿ ಎರಡು ಕಂಬಗಳ ಮಧ್ಯೆ ಅಡ್ಡಲಾಗಿ ಒಂದು ಗಟ್ಟಿ ಬಿದಿರಿನ ಬೊಂಬಿಯನ್ನು ಇಡಲಾಗುತ್ತಿತ್ತು. ಈ ಅಡ್ಡಬೊಂಬಿಗೆ ನೀರಿನ ಬದಿಗೆ ಒಂದು ಗಳಕ್ಕೆ ಬಿದಿರಿನ ಅಥವಾ ತಾಳೆಗರಿಯ ತ್ರಿಕೋನ ಆಕಾರದ ಬುಟ್ಟಿಯನ್ನು ಕಟ್ಟಿ ಆ ಬುಟ್ಟಿಯ ಎರಡೂ ಪಾರ್ಶ್ವದಲ್ಲಿ ಎರೆಡೆರಡು ಹಗ್ಗಗಳನ್ನು ಬಿಗಿಯುತ್ತಿದ್ದರು. ಈ ಗಳವನ್ನು ಏತದ ಪ್ರಮುಖ ಅಂದರೆ ಕಲ್ಲಿನ ಕಂಬಗಳ ಮಧ್ಯೆ ಇರುವ ಬೊಂಬಿನ ಮೇಲೆ ಉದ್ದವಾದ ಬೊಂಬಿಗೆ ಕಟ್ಟಿ ಅದನ್ನು ಗಡ್ಡೆಯ ಇನ್ನೊಂದು ಬದಿಗೆ ಒಯ್ಯಲಾಗುತ್ತಿತ್ತು. ಹೀಗೆ ಸಲಂಬಾಕೃತಿಯ ಬೊಂಬಿನ ಒಂದು ಕೋಣದಲ್ಲಿ ನೀರಿನ ಬುಟ್ಟಿ ಇದ್ದರೆ, ಎದುರು ದಿಕ್ಕಿನಲ್ಲಿ ಭಾರವಿರುವ ಒಂದು ಕಲ್ಲು ಕಟ್ಟುತ್ತಿದ್ದರು. ಏತದ ಎರಡೂ ಬದಿಯಲ್ಲಿ ಇಬ್ಬರು ಕುಳಿತು ಏತವನ್ನು ಮೇಲೆ ಕೆಳಗೆ ಜೋಲು ಹೊಡೆಸಿ ಬುಟ್ಟಿಯಲ್ಲಿ ತುಂಬಿಸಿ ಮೇಲೆ ಎತ್ತಿ ಏತದ ಬುಡದಲ್ಲಿದ್ದ ಕಲ್ಲಿನ ಡೋನಿಯಲ್ಲಿ ಚೆಲ್ಲುತ್ತಿದ್ದರು.[೬೦೩] ಹೀಗೆ ಮೇಲೆತ್ತಿದ ನೀರನ್ನು ಕಾಲುವೆಗಳ ಮೂಲಕ ತೋಟ ಅಥವಾ ಜಮೀನುಗಳಿಗೆ ಹರಿಸುತ್ತಿದ್ದುದು ಒಂದು ವಿಧದ ಏತ ನೀರಾವರಿ ಪದ್ಧತಿಯಾಗಿತ್ತು. ಇದನ್ನು ಒಂದೆರಡು ಎಕರೆ ಭೂಮಿಯಲ್ಲಿ ಸಾಗುವಳಿ ಮಾಡಲು ಬಳಸಿರುವ ಸಾಧ್ಯತೆಗಳಿವೆ. ಈ ವಿಧಾನವನ್ನು ಗಮನಿಸಿದರೆ ಇದು ಶ್ರಮದಾಯಕವಾಗಿ ಕಂಡುಬರುತ್ತದೆ.

'ಸಾಗುವಳಿ ಭೂಮಿಯ ಮಟ್ಟಕ್ಕಿಂತ ಕೆಳಗಡೆ ಇರುವ ನೀರನ್ನು ಮೇಲೆತ್ತುವುದು ಒಂದು ವಿಧಾನ. ಇದನ್ನು 'ತಮಿಳು ಭಾಷೆಯಲ್ಲಿ ಏತಂ, ಕರ್ನಾಟಕದಲ್ಲಿ ಸೇದುಬಾವಿ, ತಮಿಳು ಪ್ರದೇಶದಲ್ಲಿ ಪಿಕ್ಕೊಟ್ಟಾ ಎಂದು ಕರೆಯುವುದಿದೆ.[೬೦೪] ಈ ವಿಧಾನದಲ್ಲಿ ಬುಟ್ಟಿಯ ಬದಲಿಗೆ ಮಡಿಕೆ ಬಳಸಲಾಗುತ್ತಿತ್ತು. ಇದರಲ್ಲಿ 'ಗಳದ ಒಂದು ಬದಿಗೆ ಭಾರವಾದ ಕಲ್ಲುಕಟ್ಟಿ ಇದನ್ನು ಭಾರ ಯಂತ್ರದಂತೆ ಒಬ್ಬ ವ್ಯಕ್ತಿ ನೀರು ಎತ್ತುತ್ತಿದ್ದನು. ಈ ವಿಧಾನದ ಮಾದರಿಯ ಉಲ್ಲೇಖ ಮಳ್ಳೂರು ಶಾಸನದಲ್ಲಿದೆ.[೬೦೫] ಈ ವಿಧಾನವು ಮೊದಲ ವಿಧಾನಕ್ಕಿಂತ ಕಡಿಮೆ ಶ್ರಮವನ್ನು ಹೊಂದಿದೆ. ಅಲ್ಲದೆ ಕಡಿಮೆ ಪ್ರಮಾಣದ ಭೂಮಿಯ ನೀರಾವರಿಗೆ ಇದನ್ನು ಬಳಕೆ ಮಾಡಿಕೊಂಡಿರುವ ಸಾಧ್ಯತೆಗಳಿವೆ. ಸುಮಾರು ೧೫ ಅಡಿ ಆಳದಿಂದ ನೀರೆತ್ತಿರುವ ಸಾಧ್ಯತೆ ಕಂಡುಬರುತ್ತದೆ. ಈ ರೀತಿಯ ವಿಧಾನ ಇಂದು ಸಂಪೂರ್ಣವಾಗಿ ಕಣ್ಮರೆಯಾಗಿದೆ. ಕೆಲವೊಂದು ತೋಟಗಳಲ್ಲಿರುವ ಬಾವಿಗಳು ಮಳೆಗಾಲದಲ್ಲಿ ಮಳೆಯ ನೀರಿನಿಂದ ತುಂಬಿದಾಗ ಮಾತ್ರ ಈ ವಿಧಾನವನ್ನು ವಿರಳವಾಗಿ ಬಳಸಲಾಗುತ್ತದೆ.

ಏತ ನೀರಾವರಿಯ ಮತ್ತೊಂದು ವಿಧಾನ 'ಕಪ್ಪಿಲೆ ಪದ್ಧತಿ.' ಈ ಪದ್ಧತಿಯಲ್ಲಿ ೪೦-೫೦ ಗ್ಯಾಲರಿ ನೀರು ಹಿಡಿಯುವ ತೊಗಲಿನ ಒಂದು ಚೀಲವಿರುತ್ತದೆ. ಈ ಚೀಲಕ್ಕೆ ಸುತ್ತಲೂ ಕಬ್ಬಿಣದ ಬಳೆಗಳನ್ನು ತೊಡಿಸಿ, ಈ ಬಳೆಗಳಿಗೆ ಹಗ್ಗವನ್ನು ಪೋಣಿಸಿ, ಆ ಹಗ್ಗವನ್ನು ಬಾವಿ ಮೇಲ್ದಡದಲ್ಲಿ ನಿರ್ಮಿಸಲಾದ ಗಡೆಯ ಮೇಲ್ಭಾಗದಿಂದ ಹಾದು ಬರುವ ವ್ಯವಸ್ಥೆ ಮಾಡಲಾಗಿರುತ್ತದೆ. ಇದನ್ನು ಎತ್ತುಗಳ ಸಹಾಯದಿಂದ ಎಳೆಯಲಾಗುತ್ತದೆ. ಹೀಗೆ ತೊಗಲಿನ ಚೀಲ ಮೇಲೆ ಬಂದಾಗ ಅದರಲ್ಲಿ ಶೇಖರಿಸಿದ ನೀರನ್ನು ಚೀಲಕ್ಕೆ ಅಂಟಿಕೊಂಡಿರುವ ತೊಗಲಿನ ಕೊಳುಮೆಯಿಂದ ಕಲ್ಲಿನ ಗುಂಡಿಯಲ್ಲಿ ಚೆಲ್ಲಲಾಗುತ್ತದೆ. ಹೀಗೆ ಗುಂಡಿಗೆ ಬಿದ್ದ ನೀರನ್ನು ಕಾಲುವೆಗಳ ಮೂಲಕ ಬೆಳೆಗಳಿಗೆ ಹರಿಸಲಾಗುತ್ತದೆ.[೬೦೬] ಈ ಕಪ್ಪಿಲೆ ಪದ್ಧತಿಗೆ ಜೋಡೆತ್ತುಗಳನ್ನು ಬಳಸಿರುವುದಿದೆ. ಇದರ ಮೇಲಿನ

ತೆರಿಗೆಯಾದ ಕಪಿಲದೆರೆಯ ಉಲ್ಲೇಖ ಪಾಂಡವಪುರದ ಕ್ರಿ.ಶ.೧೪ನೆಯ ಶತಮಾನದ ಶಾಸನದಲ್ಲಿ ಕಂಡುಬಂದಿದೆ.[೬೦೭]

ನಾಲ್ಕನೆಯ ಘಟೀಯಂತ್ರ, ಅರ್ಗಹಟ್ಟಿ, ಅರಹಟ್ಟಿ, ರಾಟಣ, ರಾವಳ ವಿಧಾನ ಇದೊಂದು ಗಾಲಿಯೋಪಾದಿಯ ಯಂತ್ರ. ಇದು ಮೇಲೆ ತಿಳಿಸಿದ ಮೂರು ವಿಧಾನಗಳಂತೆ ಶ್ರಮದಾಯಕವಲ್ಲ. ಮೇಲೆ ಉಲ್ಲೇಖಿಸಿದ ಶಾಸನಗಳಲ್ಲಿ ಇವುಗಳ ಉಲ್ಲೇಖ ಕಂಡುಬಂದಿದೆ. ಆಳವಾದ ಬಾವಿಯಿಂದಲೂ ಈ ವಿಧಾನದಲ್ಲಿ ನೀರೆತ್ತಿರುವ ಸಾಧ್ಯತೆಗಳಿವೆ. 'ಅರ್ಗಹಟ್ಟಿ' ಎಂದರೆ ಬಾವಿಯ ದಂಡೆಯ ಮೇಲೆ ಒಂದು ಕಟ್ಟಿಗೆಯ ರಾಟೆ ಅಥವಾ ಗಡೆ ಅಥವಾ ಗಾಲಿಯನ್ನು ಕೂಡಿಸಿ ಈ ಚಕ್ರದ ಗಾಲಿಗೆ ಮಾಲಕಾರದಲ್ಲಿ ಗಡಿಗೆಗಳನ್ನು ಅಥವಾ ಬಕೆಟ್ಟು ಮಾದರಿಯ ತಗಡಿನ ಡಬ್ಬಿಗಳನ್ನು ಜೋಡಿಸಿ ನೀರಿನಲ್ಲಿ ಬಿಟ್ಟು ನೀರು ತುಂಬುವಂತೆ ಕಟ್ಟಿಗೆಯ ಚಕ್ರವನ್ನು ತಿರುಗಿಸಲಾಗುವುದು. ಅದಕ್ಕೆ ಸಮಲಂಬದಲ್ಲಿ ನಿರ್ಮಿಸಿದ ಒಂದು ಮರದ ಬೊಡ್ಡೆಯನ್ನು ಎತ್ತುಗಳ ಸಹಾಯದಿಂದ ವೃತ್ತಾಕರದಲ್ಲಿ ತಿರುಗಿಸಿದಾಗ ಗಡಿಗೆಗಳಲ್ಲಿ ನೀರು ತುಂಬಿ ಮೇಲಕ್ಕೆ ಹರಿಸಲಾಗುವುದು.[೬೦೮] ಇದನ್ನು ಮಾನವನ ಸಹಾಯವಿಲ್ಲದೆ ಮಾಡಲಾಗುತ್ತಿತ್ತು. ಆದರೆ ಚಿಕ್ಕ ಭೂಪ್ರದೇಶವನ್ನು ಮಾತ್ರ ಇದರಿಂದ ನೀರಾವರಿಗೆ ಒಳಪಡಿಸಲು ಸಾಧ್ಯವಾಗುತ್ತಿತ್ತು.

ಇಂದು ಆಧುನಿಕ ವಿದ್ಯುನ್ಮಾನ ಬಳಕೆಯಿಂದಾಗಿ ಇವು ಸಂಪೂರ್ಣ ಕಣ್ಮರೆಯಾಗಿವೆ. ಇಂದು ಕೊಳವೆ ಬಾವಿಗಳು ಬಾವಿಯ ಜಾಗವನ್ನು ಆಕ್ರಮಿಸಿವೆ. ಹೆಚ್ಚುತ್ತಿರುವ ಜನಸಂಖ್ಯೆ ಅಧಿಕ ನೀರಾವರಿ ಪ್ರದೇಶ, ಕಡಿಮೆ ಶ್ರಮ ಇವೆಲ್ಲವುಗಳು ಇಂದು ಆಧುನಿಕ ತಂತ್ರಜ್ಞಾನವನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಇಂದು ಬಾವಿಗಳು ಬತ್ತಿವೆ. ನೀರೆತ್ತುವ ವಿಧಾನಗಳೂ ಕಣ್ಮರೆಯಾಗಿ ವಿಸ್ಮೃತಿಗೆ ಸರಿಯುತ್ತಿವೆ. ಏತಬಾವಿಗಳು ಹೆಚ್ಚಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಕಂಡುಬಂದಿರುವುದು ಶಾಸನಗಳಿಂದ ತಿಳಿಯುತ್ತದೆ.

**೨.೫. ಕೃಷಿ ಉಪಕರಣಗಳು**

ಮಾನವನು ಕೃಷಿಯ ಆರಂಭಿಕ ಹಂತದಲ್ಲಿ ಚೂಪಾದ ಕಲ್ಲುಗಳ ಆಯುಧಗಳನ್ನು ಬಳಸಿ ಕೃಷಿ ಕಾರ್ಯವನ್ನು ಮಾಡುತ್ತಿದ್ದನು. ಅನಂತರದ ಕಬ್ಬಿಣದ ಆವಿಷ್ಕಾರದಿಂದಾಗಿ ಕೃಷಿಯ ಉಳುಮೆಯಲ್ಲಿ ಬದಲಾವಣೆಯ ಪರ್ವ ಆರಂಭವಾಯಿತು. ಇದಕ್ಕೆ ಪ್ರಮುಖ ಕಾರಣ ಕಬ್ಬಿಣವನ್ನು ಬಳಸಿ ಕೃಷಿ ಉಪಕರಣಗಳನ್ನು ತಯಾರಿಸಿ ಕೃಷಿಯ ಉಳುಮೆಗೆ ಬಳಸಿದರು. ಇದರಿಂದ ಕೃಷಿಭೂಮಿಯ ವಿಸ್ತರಣೆ ಪ್ರಾರಂಭವಾಯಿತು. ಕೃಷಿಕ ಜೀವನಕ್ಕೆ ಅವಿಭಾಜ್ಯ ಅಂಗದಂತೆ ಕಾರ್ಯನಿರ್ವಹಿಸುವ ಸಾಧನಗಳು ಉಪಕರಣಗಳಾಗಿವೆ. ಕೃಷಿ ಜೀವನಕ್ಕೆ ಅವುಗಳ ಮಹತ್ವ ಎಷ್ಟಿರುತ್ತದೆಂದರೆ ಒಂದು ವಸ್ತು ಇಲ್ಲವಾದರೂ ಅಂದಿನ ಅವನ ಕೃಷಿ ಬದುಕು ಕುಂಠಿತವಾಗುತ್ತದೆ. ಅಷ್ಟರ ಮಟ್ಟಿಗೆ ಉಪಕರಣಗಳ ನಂಟು ಕೃಷಿ ಬದುಕಿಗೆ ಅಂಟಿಕೊಂಡಿದೆ. ಕರ್ನಾಟಕದ ಸಂದರ್ಭದಲ್ಲಿ ಭೌಗೋಳಿಕ ಮತ್ತು ಪ್ರಾಕೃತಿಕ ಕಾರಣಗಳಿಂದಾಗಿ, ಭೂಮಿಯ ವಿಧಗಳು ಮತ್ತು ಬೆಳೆಯುವ ಬೆಳೆಗಳಲ್ಲಿ ಬದಲಾವಣೆ ಕಂಡುಬರುತ್ತದೆ. ಆದರೆ ಕೃಷಿ ಉಪಕರಣಗಳಲ್ಲಿ ಅಷ್ಟಾಗಿ ಭಿನ್ನತೆಗಳು ಕಂಡುಬರುವುದಿಲ್ಲ. ಬದಲಿಗೆ ಪ್ರಾದೇಶಿಕ ಭಾಷೆಗನುಗುಣವಾಗಿ ಬೇರೆ ಹೆಸರುಗಳಿಂದ ಕರೆಯುವುದಿದೆ.

## ನೇಗಿಲು

ಭೂಮಿಯನ್ನು ಉಳಲು ಬಳಸುವ ಉಪಕರಣಗಳಲ್ಲಿ ಇದು ಒಂದಾಗಿದೆ. ಕ್ರಿ.ಪೂ. ೨೬೦೦–೧೮೦೦ರ (ಕ್ಯಾಲಿಬ್ರೇಟೆಡ್ ಕಾರ್ಬನ್ ಡೇಟಿಂಗ್ ಪ್ರಕಾರ) ಕಾಲದ ನಾಗರೀಕತೆ ಸಿಂಧು ಕಣಿವೆಯಲ್ಲಿ ವ್ಯವಸಾಯಕ್ಕೆ ನೇಗಿಲು ಮೂಲಾಧಾರವಾಗಿತ್ತು ಎನ್ನಲಾಗಿದೆ.[೭೯] ಆದರೆ ಡಿ.ಎಚ್.ಗೋರ್ಡನ್‌ರವರು 'ದಿ ಪ್ರೀ ಹಿಸ್ಟಾರಿಕ್ ಬ್ಯಾಕ್‌ಗೌಂಡ್ ಆಫ್ ಇಂಡಿಯನ್ ಕಲ್ಚರ್ ಎಂಬ ಪುಸ್ತಕದಲ್ಲಿ ಸಿಂಧೂ ನಾಗರೀಕತೆಯಲ್ಲಿ ನೇಗಿಲು ಇರಲಿಲ್ಲವೆನ್ನುತ್ತಾರೆ. ಆದರೆ ನೇಗಿಲು ಇತ್ತೆಂಬುದಕ್ಕೆ ಕಾಲಿಭಂಗನ್ ಹತ್ತಿರ "ಕೋಣ ಉತ್ತ ಹೊಲದ ಸಾಲುಗಳು ಕಂಡುಬಂದಿವೆ. ಇದು ಹರಪ್ಪ ನಾಗರೀಕತೆಯ ಪದರದ ಕೆಳಗಿದೆ.[೮೦] ಈ ನಾಗರೀಕತೆ ಭಾರತದ ವಾಯುವ್ಯ ಬಯಲು ಪ್ರದೇಶದಿಂದ, ಗುಜರಾತ್‌ವರೆಗೆ ವಿಸ್ತರಿಸಿದೆ.[೮೧] ಈ ಕಾರಣದಿಂದಾಗಿ ಈ ಅವಧಿಗೂ ಪೂರ್ವದಲ್ಲೇ ನೇಗಿಲ ಬಳಕೆಯಾಗಿರುವ ಸಾಧ್ಯತೆಗಳಿವೆ. ಅಲ್ಲದೆ ನೇಗಿಲ ಸಹಾಯದಿಂದ ಉಳುಮೆ ಮಾಡಿ ಜೋಳ, ಭತ್ತ, ಹತ್ತಿ ಬೆಳೆಯುತ್ತಿದ್ದರೆಂದು ಅಲ್ಲಿ ದೊರೆತ ಸಿಂಧೂ ನಾಗರೀಕತೆಯ ಅವಧಿಯ ಅವಶೇಷಗಳಿಂದ ತಿಳಿದುಬರುತ್ತದೆ.[೮೨] ಮೆಹೆಂಜೋದಾರೋದಲ್ಲಿ ಕ್ರಿ.ಪೂ.೨೩೦೦ರ ಆವೆ ಮಣ್ಣಿನ ನೇಗಿಲು ದೊರೆತಿದ್ದು, ಮುಂಬೈ ಮ್ಯೂಸಿಯಂನಲ್ಲಿದೆ. ಆದರೆ ಇದರಲ್ಲಿ ಕಬ್ಬಿಣದ ಗುಳ ಕಂಡುಬಂದಿಲ್ಲ.[೮೩]

ದಕ್ಷಿಣ ಭಾರತದಲ್ಲಿ ಕ್ರಿ.ಪೂ. ೧೫೦೦ರ ವೇಳೆಗೆ ಕಬ್ಬಿಣದ ಬಳಕೆ ಸಾರ್ವತ್ರಿಕವಾಗಿತ್ತು.[೮೪] ಇದರಿಂದಾಗಿ ಭೂಮಿಯನ್ನು ಸಾಗುವಳಿ ಮಾಡಲು ಕಬ್ಬಿಣದ ಆಯುಧಗಳನ್ನು ಬಳಸಿ ಭೂಮಿ ವಿಸ್ತರಣೆಯಂತಹ ಕಾರ್ಯಗಳು ಆರಂಭಗೊಂಡಿರುವ ಸಾಧ್ಯತೆಗಳಿವೆ. ಋಗ್ವೇದದ ಶ್ಲೋಕವೊಂದರಲ್ಲಿ "ನೊಗವನ್ನು(ಎತ್ತುಗಳಿಗೆ) ಹೊಂದಿಸಿ ನೇಗಿಲನ್ನು ಹೂಡು. ಈಗ ಭೂಮಿಯ ಗರ್ಭವು ಬೀಜಗಳ ಬಿತ್ತನೆಗೆ ಪಕ್ವವಾಗಿದೆ ಎಂದು ಹೇಳುತ್ತದೆ.[೮೫] ವೇದಗಳ ಕಾಲದಲ್ಲಿ ಎತ್ತುಗಳ ಸಹಾಯದಿಂದ ನೇಗಿಲನ್ನು ಬಳಸಿ ಉಳುಮೆ ಮಾಡುತ್ತಿದ್ದರು ಎಂಬುದು ಇದರಿಂದ ತಿಳಿಯುತ್ತದೆ. ಎತ್ತುಗಳನ್ನಲ್ಲದೆ ಹೋರಿಗಳ ಬಳಕೆಯೂ ಈ ಅವಧಿಯಲ್ಲಿ ಕಂಡುಬರುತ್ತದೆ. ಹೋರಿಗಳನ್ನು ಗೋವುಗಳ ಮಧ್ಯೆ ಬಿಡಲಾಗುತ್ತಿತ್ತು. ಅಲ್ಲದೆ 'ಸೀತಾ'[೮೬] ಎಂದು ನೇಗಿಲ ಸಾಲುಗಳಿಗೆ ಕರೆಯಲಾಗುತ್ತಿತ್ತು. ರಾಮಾಯಣದಲ್ಲಿ ಭೂಮಿಯನ್ನು ಉಳುಮೆ ಮಾಡುವ ಸಂದರ್ಭದಲ್ಲಿ ನೇಗಿಲ ಗೆರೆಯಲ್ಲಿ ದೊರೆತಿದ್ದರಿಂದ, ಜನಕ ರಾಜನು 'ಸೀತಾ' ಎಂದು ಕರೆದಿರುವುದು ಕಂಡುಬರುತ್ತದೆ. ಮಹಾಭಾರತದಲ್ಲಿಯೂ ಬಲರಾಮನ ಆಯುಧವಾಗಿ ನೇಗಿಲು ಕಂಡುಬರುತ್ತದೆ. ಅರ್ಥಶಾಸ್ತ್ರದಲ್ಲಿ ವ್ಯವಸಾಯದ ಮೇಲ್ವಿಚಾರಕನಿಗೆ ಸೀತಾಧ್ಯಕ್ಷ[೮೭] ಎಂದು ಕರೆಯಲಾಗುತ್ತಿತ್ತು. ಅಲ್ಲದೆ ಕೃಷಿಯ ಉಪಕರಣಗಳಾದ ನೇಗಿಲು, ಕುಂಟೆ, ಹಗ್ಗ, ಕುಡುಗೋಲು ಮತ್ತು ಎತ್ತು ಮುಂತಾದ ಉಪಕರಣಗಳ ಅಭಾವ ಬಾರದಂತೆ ಕಮ್ಮಾರ, ಬಡಗಿ, ಅಗೆಯುವವನು, ಅಗ್ಗವನ್ನು ಹೊಸೆಯುವವರು ಮೊದಲಾದವರು ಕೃಷಿ ಕಾರ್ಯಕ್ಕೆ ಅಡ್ಡಿಪಡಿಸದಂತೆ ಸಮಯಕ್ಕೆ ಸರಿಯಾಗಿ ಒದಗಿಸಬೇಕು. ಇದರಿಂದ ಕೃಷಿಗೆ ಧಕ್ಕೆಯುಂಟಾದರೆ ಇವರಿಗೆ ದಂಡವಿಧಿಸಬೇಕು ಎಂದು ತಿಳಿಸಿದೆ.[೮೮] ಇದರಿಂದ ಕೃಷಿ ಉಪಕರಣಗಳನ್ನು ತಯಾರಿಸಿಕೊಡುವ ವರ್ಗವು ಅಂದಿನಿಂದಲೂ ಇತ್ತೆಂಬುದು ತಿಳಿಯುತ್ತದೆ. ಆದರೆ ಇಂದಿನ ಬದಲಾದ ಆಧುನಿಕ ಸನ್ನಿವೇಶದಲ್ಲಿ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಪಲ್ಲಟಗಳಿಂದಾಗಿ ಈ ವೃತ್ತಿ ವರ್ಗವು ಕಣ್ಮರೆಯಾಗುತ್ತಿದೆ. ಕೆಲವು ಗ್ರಾಮೀಣ ಪರಿಸರದಲ್ಲಿ ಇಂದಿಗೂ ಉಳಿದುಕೊಂಡು ಬಂದಿದೆ. ಈ ಉಪಕರಣಗಳ ತಯಾರಿಕೆಯಲ್ಲಿ ಪ್ರಮುಖವಾಗಿ ಕಮ್ಮಾರರು, ಬಡಗಿಗಳು ನೆರವಾಗುತ್ತಿದ್ದರು.

ಶಾಸನಗಳಲ್ಲಿ ಕಬ್ಬಿಣ ಕೆಲಸ ಮಾಡುವವರನ್ನು ಕಮ್ಮಾರ ಎಂದು ಕರೆಯಲಾಗುತ್ತಿತ್ತು. ಇವನು ಕೃಷಿಗೆ ಅಗತ್ಯವಾದ ಉಪಕರಣಗಳನ್ನು ತಯಾರಿಸಿಕೊಡುತ್ತಿದ್ದನು. ನೇಗಿಲುಗಳ ಬಳಕೆಯಲ್ಲಿ ಎರಡು ರೀತಿಯ ನೇಗಿಲುಗಳು ಕಂಡುಬರುತ್ತವೆ. ಅವು ಕಬ್ಬಿಣ ನೇಗಿಲು ಮತ್ತು ಮರನೇಗಿಲುಗಳು. ಕಬ್ಬಿಣದ ನೇಗಿಲ ಸಾಮಗ್ರಿಗಳನ್ನು, ನೇಗಿಲು ಮತ್ತು ಅದಕ್ಕೆ ಸಂಬಂಧಿಸಿದ ಕುಳಗಳನ್ನು ಅಣಿಯುವುದು, ಚೂಪು ಮಾಡುವ ಮೂಲಕ ತಯಾರಿಸುವುದು ಕಮ್ಮಾರರ ಜವಾಬ್ದಾರಿಯಾಗಿತ್ತು. ಕ್ರಿ.ಶ. ೧೦೬೧ರ ಶಾಸನ ಕಮ್ಮಾರನ ಬಗೆಗೆ ಉಲ್ಲೇಖಿಸಿದೆ.[೬೯] ಕ್ರಿ.ಶ. ೧೦೧೬ರ ಶಾಸನದಲ್ಲಿಯೂ ಕಮ್ಮಾರರ ಉಲ್ಲೇಖ ಕಂಡುಬರುತ್ತದೆ.[೭೦] ಚಿದಾನಂದಮೂರ್ತಿಯವರು ಕಾವ್ಯಾವಲೋಕನದಲ್ಲಿ ಪಂಪನ ಒಂದು ಪದ್ಯವನ್ನು ಉಲ್ಲೇಖಿಸಿದ್ದಾರೆ. ಅದು ಕಮ್ಮಾರರಿಗೆ ಸಂಬಂಧಿಸಿದ್ದಾಗಿದೆ.

"ಮದಗಜವೆರಡಱ ಬಾಲದ। ಮೊದಲಂ ಪಿಡಿದೆತ್ತಿಯೊತ್ತಿ ನುರ್ಗುತ್ತಿರೆಯಾ। ಸ್ಯದಿನುಗುವ ರಕ್ತಮುರಿಯೆನೆ। ತಿದ್ದಿಯೊತ್ತುವ ಕಮ್ಮಱಂ ಬೊಲಿರ್ದಂ ಭೀಮಂ" ಅಂದರೆ ಭೀಮ ಆನೆಯನ್ನು ಒಂದು ಕೈಯಲ್ಲಿ ಎತ್ತಿ ಹಿಡಿದು ಒತ್ತಿದಾಗ ಅದರ ಬಾಯಿಂದ ಬಂದ ರಕ್ತ ಕೆಂಪಗೆ ಉರಿಯಂತೆ ಇದಿತ್ತು.[೭೧] ಈ ಪದ್ಯದಲ್ಲಿ ಕಮ್ಮಾರನ ಉಲ್ಲೇಖವಿದ್ದು, ತಿದಿಯೊತ್ತುವ ಕಮ್ಮರನಂತೆ ಭೀಮ ಇದ್ದನು ಎಂದಿದೆ. ಅಂದರೆ ಕಮ್ಮಾರನ ಕುಲುಮೆಯಲ್ಲಿ ತಿದಿಯೊತ್ತುವುದು (ಇದರಿಂದ ಗಾಳಿ ಹಾಕುವುದು) ಇರುತ್ತಿತ್ತು. ಇದನ್ನೊತ್ತಿದರೆ ಇದರ ಮೂಲಕ ಗಾಳಿ ಬಂದು ಉರಿ ಹೆಚ್ಚಾಗಿ ಕಬ್ಬಿಣ ಚೆನ್ನಾಗಿ ಕಾಯುತ್ತಿತ್ತು. ಇದನ್ನು ಒತ್ತುವವನು ತುಂಬಾ ಶಕ್ತಿಶಾಲಿಯಾಗಿರಬೇಕಿತ್ತು. ಈ ಅರ್ಥದಲ್ಲಿ ಭೀಮನನ್ನು ಬಳಸಲಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಕಮ್ಮಾರರಿಗೆ ಸಂಬಂಧಿಸಿದ ಗಾದೆ ಮತ್ತೊಂದು ಬಳಕೆಯಲ್ಲಿತ್ತು. ಕಮ್ಮಱನಂಬು ಕಮ್ಮಱಂಗೆ'[೭೨] ಅಂದರೆ ಕಮ್ಮಾರರು ಬಾಣಗಳನ್ನು ತಯಾರಿಸುತ್ತಿದ್ದರು ಎನ್ನಲಾಗಿದೆ. ಮಂಟೇಸ್ವಾಮಿ ಕಾವ್ಯದಲ್ಲಿಯೂ ಕಬ್ಬಿಣದ ಸಾಮಾನು ಅಥವಾ ಉಪಕರಣಗಳನ್ನು ತಯಾರಿಸುವವರಿಗೆ ಪಾಂಚಾಳರು ಎಂದು ಕರೆಯುತ್ತಿದ್ದರು. ಈ ಕಮ್ಮಾರರು ಪಾಂಚಾಳರಲ್ಲಿ ಒಬ್ಬರಾಗಿ ಕಂಡುಬರುತ್ತಾರೆ. ಕಮ್ಮಾರರು ಉಪಕರಣಗಳನ್ನು ತಯಾರಿಸುತ್ತಿದ್ದರೆಂದು ಮಂಟೇಸ್ವಾಮಿ ಕಾವ್ಯವು ತಿಳಿಸುತ್ತದೆ. ಕಮ್ಮಾರರು ಮುಂಜ, ಬಳಿ, ಕುಡ, ಮೊಳಿ, ಕೊಡ್ಲಿ, ಗುದ್ದಲಿ, ಬೆಡಗ, ಬಾಚಿ, ಉಳಿ, ಕುರಿಪೆ, ಕುಡುಗೋಲು[೭೩] ಮೊದಲಾದ ಉಪಕರಣಗಳನ್ನು ತಯಾರಿಸುತ್ತಿದ್ದರು. ಇದರಲ್ಲಿ ಕುಡ ಅಥವಾ ಕುಳವನ್ನು ನೇಗಿಲಿಗೆ ಬಳಸಲಾಗುತ್ತಿತ್ತು.

ಮರದ ನೇಗಿಲನ್ನು ತಯಾರಿಸುವವರು ಬಡಗಿಗಳಾಗಿರುತ್ತಿದ್ದರು. ಇವರು ದೇವಾಲಯದ ಮರಕೆಲಸಗಳನ್ನು ಮಾಡುತ್ತಿದ್ದರೆಂದು 'ಕ್ರಿ.ಶ. ೧೦೩೨ರ ಶಾಸನವು ತಿಳಿಸುತ್ತದೆ.[೭೪] ಕ್ರಿ.ಶ. ೧೦೪೨ರ ಶಾಸನದಲ್ಲಿಯೂ ದೇಗುಲಂಗಳ ಬಡಗಿ ವೆಸದೊಳ್ ಹಡಿಸಲಿಸುವ ಮಂಡಲಿಕ ಮಾಣಿಕಾಚಾರಿ ಹೊನ್ನೊಜ[೭೫] ಎಂದಿದೆ. ಅಲ್ಲದೆ ಈ ಕೆಲಸಗಳಿಗೆ ದತ್ತಿ ಕೊಡಲಾಗುತ್ತಿತ್ತು. ರೈತರಿಗೆ ಇವರು ಉಪಕರಣಗಳನ್ನು ತಯಾರಿಸಿ ಕೊಡುವಾಗ ಅವರಿಗೆ ಆಯವನ್ನು ಕೊಡುವ ಪದ್ಧತಿ ರೂಢಿಯಲ್ಲಿತ್ತು. ಅದು ಇಂದಿಗೂ ಕೆಲವು ಹಳ್ಳಿಗಳಲ್ಲಿ ಕಂಡುಬರುತ್ತದೆ. ಈ ಆಯ ಪದ್ಧತಿ ಪ್ರಾಚೀನ ಸಂದರ್ಭದಲ್ಲಿತ್ತೆಂಬುದಕ್ಕೆ ಕ್ರಿ.ಶ. ೧೦೩೫ರ ಶಾಸನವು "ಅಕ್ಕಸಾಲಿಯಾಯ ಉಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ"[೭೬] ಅಕ್ಕಸಾಲಿಗಳಿಗೆ ಧಾನ್ಯ ಮೊದಲಾದ ರೂಪದಲ್ಲಿ ಆಯ ನೀಡಬೇಕೆಂದಿರುವ ಬಗ್ಗೆ ಶಾಸನವು ತಿಳಿಸಿದೆ. ಕ್ರಿ.ಶ. ೧೨೮೮-೮೯ರ ಶಾಸನದಲ್ಲಿ ಅಕ್ಕಸಾಲಿ ಬಾವೊಜನ ಭಾಗದಾಯಿ[೭೭] ಎಂದಿದೆ. ಇವುಗಳನ್ನು ಗಮನಿಸಿದರೆ ಇವರು ಸಮಾಜದಲ್ಲಿ ಜನರಿಗೆ ಉಪಯೋಗವಾಗುವ ಉಪಕರಣಗಳನ್ನು ತಯಾರಿಸುತ್ತಿದ್ದರು. ಇದಕ್ಕೆ ಪ್ರತಿಯಾಗಿ ವರ್ಷಪ್ರತಿ ಸಮಾಜದ ಜನರು ಆಯವನ್ನು ನೀಡಬೇಕಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೧೧೩೦ರ ಶಾಸನದಲ್ಲಿ 'ಅಕ್ಕಸಾಲಿ ಕಮ್ಮಾಱ' ಎಂಬ ಉಲ್ಲೇಖವಿದೆ.[೭೮] ಇದನ್ನು ಗಮನಿಸಿದರೆ ಪ್ರಾಚೀನ ಸಂದರ್ಭದಲ್ಲಿ ವೃತ್ತಿ ಬದಲಾವಣೆ

ಸಾಧ್ಯವಿತ್ತು ಎಂಬುದು ತಿಳಿಯುತ್ತದೆ. ಒಟ್ಟಿನಲ್ಲಿ ಬಡಗಿ ಕಮ್ಮಾರರು ಕೃಷಿಕರಿಗೆ ಕಾಲಕ್ಕೆ ಸರಿಯಾಗಿ ಕೃಷಿಗೆ ಬೇಕಾದ ಉಪಕರಣಗಳನ್ನು ತಯಾರಿಸಿ ಕೊಡುತ್ತಿದ್ದರು. ಒಂದು ವೇಳೆ ಅವರು ಅಂದು ಸಿಗದಿದ್ದರೆ ಅಂದಿನ ಕೃಷಿ ಬದುಕು ನಷ್ಟಕ್ಕೊಳಗಾಗುತ್ತಿತ್ತು. ಈ ರೀತಿಯ ತೊಂದರೆಯಾಗದಂತೆ ಕಾಲಕ್ಕೆ ಸರಿಯಾಗಿ ಕೃಷಿಯ ಭಾಗವಾಗಿ ಬಡಗಿ ಕಮ್ಮಾರ ಮೊದಲಾದವರು ಕಾರ್ಯನಿರ್ವಹಿಸುತ್ತಿದ್ದರು. ಇದಕ್ಕೆ ಪ್ರತಿಯಾಗಿ ರೈತರು ತಾವು ಬೆಳೆದ ಬೆಳೆಯಲ್ಲಿ ಇಂತಿಷ್ಟು ಪ್ರಮಾಣದ ಧಾನ್ಯವನ್ನೋ, ಹಣವನ್ನೋ ಆಯದ ರೂಪದಲ್ಲಿ ಪ್ರತಿವರ್ಷ ಸುಗ್ಗಿಯ ಸಂದರ್ಭದಲ್ಲಿ ಕೊಡಬೇಕಾಗಿತ್ತು.

ರೈತನ ಜೀವನಕ್ಕೆ ಉಪಕರಣಗಳು ಕೃಷಿಯ ಭಾಗವಾಗಿ ಕಾರ್ಯನಿರ್ವಹಿಸುತ್ತಿದ್ದವು. ಡಿ.ಡಿ.ಕೋಸಾಂಬಿಯವರು ಒಂದು ನಿರ್ದಿಷ್ಟ ಕಾಲದ ಜನರು ನೇಗಿಲನ್ನು ಬಳಸಿದರೋ ಇಲ್ಲವೊ ಎನ್ನುವುದನ್ನು ತಿಳಿದುಕೊಳ್ಳುವುದು ಅವರ ರಾಜರ ಹೆಸರನ್ನು ತಿಳಿದುಕೊಳ್ಳುವುದಕ್ಕಿಂತ ಮುಖ್ಯ ಎಂದಿದ್ದಾರೆ.[೬೨೯] ಈ ಮಾತುಗಳು ಕೃಷಿ ಮತ್ತು ಕೃಷಿಗೆ ಬಳಸಿದ ನೇಗಿಲ ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಅಲ್ಲದೆ ಸಾಧನಗಳು ಕೃಷಿಯಲ್ಲಿ ಹೇಗೆ ಉತ್ಪಾದನ ಸಂಬಂಧದ ಹೆಚ್ಚಳಕ್ಕೆ ಅನುವು ಮಾಡಿಕೊಟ್ಟವೆಂಬುದು ತಿಳಿದುಬರುತ್ತದೆ.

ನೇಗಿಲಿಗೆ ಉತ್ತರ ಕರ್ನಾಟಕದ ಭಾಗಗಳಲ್ಲಿ 'ಮಡಿಕೆ' ಎಂದು ಕರೆಯುತ್ತಾರೆ. ಅಮರಸಿಂಹನ ಅಮರಕೋಶದಲ್ಲಿ ನೇಗಿಲು(ಲಾಂಗಲ, ಹಲ)ದ ಉಲ್ಲೇಖ ಕಂಡುಬರುತ್ತದೆ.[೬೩೦] ಮಹಾಭಾರತದ ಬಲರಾಮನ ಆಯುಧದ ಹೆಸರೂ ಸಹ 'ಹಲಾಯುಧ'ವಾಗಿತ್ತೆಂದು ತಿಳಿದುಬರುತ್ತದೆ. ಕೆಲವು ಕಡೆ 'ರಂಟೆ' ಎಂದು ಕರೆಯುತ್ತಾರೆ. ಶಾಸನಗಳಲ್ಲಿ ಕೃಷಿ ಉಪಕರಣಗಳು ದೊರೆಯುವುದು ತೀರಾ ವಿರಳವಾಗಿ ಕಂಡುಬರುತ್ತದೆ. ರಾಷ್ಟ್ರಕೂಟರ ಶಾಸನ ಶಿಲ್ಪಗಳಲ್ಲಿ ನೇಗಿಲು ಉಪಕರಣದ ಕೆತ್ತನೆಗಳು ಕಂಡುಬರುತ್ತವೆ. ಬಾದಾಮಿಯ ಮ್ಯೂಸಿಯಂನಲ್ಲಿ ರಾಷ್ಟ್ರಕೂಟರ ಶಾಸನದ ಮಧ್ಯಭಾಗದಲ್ಲಿ ಉಬ್ಬುಶಿಲ್ಪವಾಗಿ ಒಂದು ನೇಗಿಲನ್ನು ಕೊರೆದಿರುವುದು ಕಂಡುಬರುತ್ತದೆ.[೬೩೧] ರಾಷ್ಟ್ರಕೂಟ ದೊರೆ ಅಮೋಘವರ್ಷನ ಕಾಲದ ದೇವಿಹೊಸೂರು ಶಾಸನದಲ್ಲಿ 'ಗೋಸಾಸಿಯ ಮೇಂಣ್ಟಿ'[೬೩೨]ಯ ಉಲ್ಲೇಖವಿದೆ. ಮುತ್ತಳ್ಳಿಯ ಕ್ರಿ.ಶ.ಸು. ೮ನೆಯ ಶತಮಾನದ ಶಾಸನದಲ್ಲಿ ಮೇಣ್ಟೆನಿಜೆಸಿದಾನ್[೬೩೩] ಎಂದು ಉಲ್ಲೇಖಿಸಿದೆ. ಇದೇ ಊರಿನ ಕ್ರಿ.ಶ. ೭೮೦ರ ಶಾಸನದಲ್ಲಿ 'ಗೋಸಹಸ್ರಮಿಟ್ಟೊ ಪದಾ[ದ]ಲ್ದಾನ[ಂ]ಗೊಟ್ಟು ನಿರಇಸಿದ ಮೇಣ್ಟಿ ಕರಗೆಯಮಾ ಚೋವಜನ ಮಾಡಿದ ಮೇಣ್ಟಿ[೬೩೪] ಎಂದಿದೆ. ಲಕ್ಷ್ಮೇಶ್ವರದ ಶಾಸನವೊಂದರಲ್ಲಿ ಗೋಸಾಸಿಯ ಮೇಣ್ಟಿ[೬೩೫] ಎಂದು ಉಲ್ಲೇಖಿಸಿದೆ. ಸಂಗೂರಿನ ಕ್ರಿ.ಶ. ೮–೯ ನೆಯ ಶತಮಾನದ ಶಾಸನ ಶಿಲ್ಪದ ಮೇಲೆ ನೇಗಿಲಿನ ಚಿತ್ರವಿದೆ.[೬೩೬] ಬಾಗಳಿಯ ಕ್ರಿ.ಶ. ಸು. ೧೦ನೆಯ ಶತಮಾನ ಬಾಗಳಿಯ ಶಾಸನದ ಕೆಳಗೆ ನೇಗಿಲಿನ ಚಿತ್ರವನ್ನು ಕೆತ್ತಲಾಗಿದೆ.[೬೩೭] ಕ್ರಿ.ಶ. ೯೧೪ರ ದೇವಿಹೊಸೂರು ಶಾಸನದಲ್ಲಿ ಗೋಸಾಸಿಯ ಮೇಂಣ್ಟಿಯ ಉಲ್ಲೇಖವಿದೆ.[೬೩೮] ಕ್ರಿ.ಶ.೯೧೦ರ ಶಾಸನದಲ್ಲಿ ಸುವರ್ಣ ಗೋಸಾಸ ನೀಡಿ ಮೇಣ್ಟಿ ಕಲ್ಲನ್ನು ನಿಲ್ಲಿಸಿದರೆಂದಿದೆ.[೬೩೯] ದೇವಗಿರಿಯ ಶಾಸನವೊಂದರಲ್ಲಿ ಮಾರಮ್ಮಗೋಸಾಸಿ ನಿಟುಸಿದೋ ಮೇಣ್ಟಿಯ[೬೪೦] ಎಂದಿದೆ. ಕ್ರಿಶ ೮ನೆಯ ಶತಮಾನದ ಶಾಸನವೊಂದರಲ್ಲಿ ಗೋಸಾಸದ ಮೇನ್ಟಿ ದಡಿಗರಸರ್[೬೪೧] ಎಂದಿದೆ. ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕು ರಟ್ಟೀಹಳ್ಳಿ ಸಮೀಪದ ಕಡೂರು ಗ್ರಾಮದ ಭಗವತೀ ಘಟ್ಟದಲ್ಲಿ ನೇಗಿಲು ಇರುವ ಶಾಸನ ಸಹಿತ ವೀರಗಲ್ಲು ದೊರೆತಿದೆ. ಇದು ರಾಷ್ಟ್ರಕೂಟ ದೊರೆ ಇಂದಪಯ್ಯನ ಕಾಲದ್ದಾಗಿದೆ. ಇದು ಕ್ರಿ.ಶ.೯ನೇ ಶತಮಾನಕ್ಕೆ ಸೇರಿದುದಾಗಿದೆ. ರಾಷ್ಟ್ರಕೂಟ ದೊರೆ ಜಯತುಂಗನ ಕಾಲದ್ದಾಗಿದ್ದು, ರೇಚಗಾವುಂಡನೆಂಬುವವನು ಯುದ್ಧದಲ್ಲಿ ಹೋರಾಡಿ ಮಡಿದ ನೆನಪಿಗೆ ಹಾಕಿಸಿದ ವೀರಗಲ್ಲಾಗಿದೆ. ರಾಷ್ಟ್ರಕೂಟ ಅರಸರ

ಆಳ್ವಿಕೆಯ ಅವಧಿಯಲ್ಲಿ ಹೆಚ್ಚಾಗಿ ನೇಗಿಲು ಉಪಕರಣವಿರುವ ಶಾಸನಗಳು ದೊರೆತಿರುವುದು ಗಮನಾರ್ಹ ಸಂಗತಿಯಾಗಿದೆ. ಇದು ಏಕೆ ಎಂದು ಗಮನಿಸಿದರೆ ಕೃಷಿಯ ವಿಸ್ತರಣೆಯನ್ನು ಇದು ಸೂಚಿಸುತ್ತದೆ. ಅಲ್ಲದೆ ಈ ರಾಜ ಮನೆತನವು ಕೃಷಿಯನ್ನು ಅವಲಂಬಿಸಿತ್ತು. ಹಾಗೂ ಪ್ರೋತ್ಸಾಹಿಸಿತ್ತು ಎಂಬುದು ತಿಳಿಯುತ್ತದೆ. 'ಭೂದಾನದೊಂದಿಗೆ ನೇಗಿಲನ್ನು ದಾನ ನೀಡುತ್ತಿದ್ದರೆಂದು ಅ.ಸುಂದರ ಅವರು ತಿಳಿಸಿದ್ದಾರೆ. ಅಲ್ಲದೆ ಇದು ಕೃಷಿಯ ವಿಸ್ತಾರದ ಸೂಚನೆಯನ್ನು ನೀಡುತ್ತದೆ ಎಂದಿದ್ದಾರೆ.[೬೪೨] ಕ್ರಿ.ಶ. ೧೦೮೫ರ ಶಾಸನದಲ್ಲಿ ಜಾತಿ ವಿಜಾತಿಯನದೆ ನೊಗನಿಕ್ಕಿ ಉತ್ತು ಹರಗಿ ಬಿತ್ತಿ ಬೆಳೆದು, ಆ ಹಿರಿಯ ಮಹಾಜನಂಗಳಿಗೆ ಸೂಡು ಜೋಳಯಂ ತೆತ್ತುಗೆಯ್ದುಂ ಎಂದಿದೆ.[೬೪೩] 'ನೊಗನಿಕ್ಕಿ ಉತ್ತು ಹರಗಿ' ಎಂಬಲ್ಲಿ ನೊಗಕ್ಕೆ ನೇಗಿಲು ಹಾಕಿ ಉಳುಮೆ ಮಾಡಿದರೆಂದು ತಿಳಿಯುತ್ತದೆ.

ಕಬ್ಬಿಣದ ನೇಗಿಲನ್ನು ಬೆಳೆ ತೆಗೆದ ನಂತರ ಕೊಳೆ ಭೂಮಿಗೆ ಹೂಡುತ್ತಿದ್ದರು. ಈ ಪ್ರಕ್ರಿಯೆಯು ಶಿವರಾತ್ರಿಯಿಂದ ಯುಗಾದಿವರೆಗೂ ನಡೆಯುತ್ತಿತ್ತು. ಎರೆ ನೆಲಗಳಲ್ಲಿ ಭೂಮಿ ಗಟ್ಟಿಯಾಗಿ ಬೀಟು ಸೆಳೆದಾಗ ನಾಲ್ಕರಿಂದ ಎಂಟು ಎತ್ತಿನವರೆಗೂ ಹೂಡಿ ನೇಗಿಲನ್ನು ಎಳೆಸಲಾಗುತ್ತಿತ್ತು. ಎರಡೆರಡು ಎತ್ತಿಗೆ ಒಂದು ಜೊತೆಯಂತೆ, ಒಂದು ಜೊತೆ ಎತ್ತಿನ ಹಿಂದೆ ಮತ್ತೊಂದು ಜತೆ ಎತ್ತನ್ನು ಹೂಡಿ ಹಗ್ಗಗಳನ್ನು ಒಂದು ಜೊತೆಯಿಂದ ಇನ್ನೊಂದು ಜೊತೆಗೆ ಕಟ್ಟಿ ನೇಗಿಲಿಗೆ ಹಗ್ಗ ಕಟ್ಟುವ ಮೂಲಕ ಈ ನೇಗಿಲಿನಿಂದ ಭೂಮಿಯನ್ನು ಉಳಲಾಗುತ್ತಿತ್ತು. ಇದರಿಂದ ಗೇಕು, ಗರಿಕೆಯಂತಹ ಹುಲ್ಲುಗಳು ಕಿತ್ತು ಬರುತ್ತಿದ್ದವು. ಅಲ್ಲದೆ ಎರೆ ನೆಲಗಳಲ್ಲಿ ಕಬ್ಬಿಣದ ನೇಗಿಲ ಉಳುಮೆಗೂ ಬರದಿದ್ದಾಗ ಭೂಮಿಗೆ ನಿಟ್ಟು ಬಗೆಸುತ್ತಿದ್ದರು. ಅಂದರೆ ಹಾರೆಯಿಂದ ನೆಲವನ್ನು ಬಗೆದು ಉರುಳಿಸುತ್ತಾ ಹೋಗುವ ಮೂಲಕ ಇಡೀ ಹೊಲವನ್ನು ಉಳಲಾಗುತ್ತಿತ್ತು. ಇದು ಗರಿಕೆ, ಗೇಕುಗಳನ್ನು ತೆಗೆಯುವ ವಿಧಾನವಾಗಿತ್ತು. ಈ ಗೇಕು ಮತ್ತು ಗರಿಕೆಗಳು ಭೂಮಿಯಲ್ಲಿ ಆಳವಾಗಿ ಬೇರೂರಿರುತ್ತವೆ. ಕೃಷಿಕರು ಇದು ಏಳು ಪದರದಲ್ಲಿರುತ್ತದೆ ಎಂದು ಹೇಳುತ್ತಾರೆ. ಇದು ಉಳುವವನಿಗೆ "ಎಂಟು ಜೊತೆ ಎತ್ತು ಕಟ್ಟಿ ಎಳೆಸಿದರೂ ನನ್ನ ಷಂಟ ಅರಿಯೋಕಾಗಲ್ಲ" ಎನ್ನುತ್ತದೆಯಂತೆ. ಈ ಮಾತನ್ನು ಜನಪದರು ತಮ್ಮ ಅನುಭವದಿಂದ ಹೇಳಿರುವುದಿದೆ. ಇದನ್ನು ಗಮನಿಸಿದರೆ ಬೇಸಾಯ ಹೊಡೆದಾಗ ಈ ಗೇಕು, ಗರಿಕೆಗಳು ಕಾಣಿಸುವುದಿಲ್ಲ. ನಂತರ ಎಂಟು ದಿನಗಳಲ್ಲೇ ಮತ್ತೆ ಚಿಗುರುವುದು ಕಂಡುಬರುತ್ತದೆ. ಜೊತೆಗೆ ಆಯಗಲ್ಲಿನ ಭೂಮಿಗೂ ಈ ನೇಗಿಲನ್ನು ಬಳಸಲಾಗುತ್ತಿತ್ತು. ಇದರಿಂದ ಭೂಮಿಯ ಒಳಗಿನ ಕಲ್ಲನ್ನು ಮೇಲೆ ತರಲು ಸಹಾಯ ಮಾಡುತ್ತಿತ್ತು.

ಕಬ್ಬಿಣದ ನೇಗಿಲನ್ನು ಬೀಳು ಭೂಮಿಯ ಉಳುಮೆಗೆ ಬಳಸಿದರೆ ಮರದ ನೇಗಿಲನ್ನು ಎರಡನೆಯ ಬಾರಿ ಭೂಮಿಯನ್ನು ಉಳುವುದಕ್ಕೆ, ಬಿತ್ತನೆಗೆ ಬಳಸಲಾಗುತ್ತದೆ. ಈ ನೇಗಿಲನ್ನು ಮರದಿಂದ ತಯಾರಿಸುತ್ತಾರೆ. ನೇಗಿಲ ತುದಿಯಲ್ಲಿ ಮಾತ್ರ ಕಬ್ಬಿಣದ ಗುಳವನ್ನು ಅಳವಡಿಸಿರಲಾಗುತ್ತದೆ.

ಹೀಗೆ ನೇಗಿಲನ್ನು ಭೂಮಿಯ ವಿಸ್ತರಣೆ ಮತ್ತು ಉಳುಮೆಯಂತಹ ಕಾರ್ಯಗಳಿಗೆ ಬಳಸಲಾಯಿತು. ಇದು ಕಬ್ಬಿಣದ ಬಳಕೆಯಿಂದಾಗಿ ಕೃಷಿಯ ಪ್ರಗತಿ ಸಾಧ್ಯವಾಯಿತು ಎಂಬುದು ಇದರಿಂದ ತಿಳಿಯುತ್ತದೆ.

**ಮೇಳಿ**

ಇದು ಕೃಷಿಯ ಒಂದು ಉಪಕರಣವಾಗಿದೆ. ಇದನ್ನು ನೇಗಿಲನ್ನು ಹಿಡಿಯಲು ಬಳಸಲಾಗುತ್ತದೆ. ಜೊತೆಗೆ ಶಾಸನಗಳಲ್ಲಿ ನೇಗಿಲು ಎಂಬರ್ಥದಲ್ಲಿಯೂ ಬಳಕೆಯಾಗಿದೆ. ಕುಂಟೆ,

ಕೂರಿಗೆಗಳನ್ನು ಹಿಡಿಯಲು ಮೇಳಿಯನ್ನು ಬಳಸುತ್ತಾರೆ. ಕೆಲವು ಕಡೆ 'ಮೇಣಿ' ಎಂತಲೂ ಕರೆಯುವ ವಾಡಿಕೆ ಕಂಡುಬರುತ್ತದೆ. ಇದು ನೇಗಿಲು ಅಥವಾ ಕುಂಟೆ ಮೊದಲಾದವುಗಳನ್ನು ಹಿಡಿದುಕೊಂಡು ರೈತನು ಭೂಮಿಯನ್ನು ಉಳುವುದು, ಹರಗುವುದು ಮಾಡುವಾಗ ಮೇಳಿಯನ್ನು ಹಿಡಿದರೆ ಉಪಕರಣಗಳ ಕಡಿದು, ಬಡಿದು ಭೂಮಿ ಆಯುತ್ತಿರುವುದು ರೈತನಿಗೆ ಅರ್ಥವಾಗುತ್ತದೆ. ಅದಕ್ಕನುಗುಣವಾಗಿ ಅವನು ನೇಗಿಲು ಅಥವಾ ಕುಂಟೆಯನ್ನು ಹೂಡಲು ಬಳಸಿದ ಹಗ್ಗದಲ್ಲಿ ಸರಿಮಾಡಿಕೊಂಡು ಭೂಮಿಯ ಹದಕ್ಕನುಗುಣವಾಗಿ ಬೇಸಾಯ ಮಾಡಲು ಮೇಣಿ ಸಹಾಯಕವಾಗುತ್ತದೆ

**ಕುಂಟೆ**

ಇದೊಂದು ಕೃಷಿ ಉಪಕರಣವಾಗಿದೆ. ಕುಂಟೆಯ ಉಲ್ಲೇಖ ಅರ್ಥಶಾಸ್ತ್ರದಲ್ಲಿಯೂ ಕಂಡುಬರುತ್ತದೆ.[೬೪೪] ಶಾಸನಗಳಲ್ಲಿ ಕುಂಟೆಯ ಉಲ್ಲೇಖಗಳು ಅತ್ಯಂತ ವಿರಳವಾಗಿ ಕಂಡುಬರುತ್ತವೆ. ಕ್ರಿ.ಶ. ೧೦೮೫ರ ಶಾಸನದಲ್ಲಿ ಕುಂಟೆಯ ಮೇಳಿಯಲೊಂದೊಂ... ಆವೊಕ್ಕಲು ಎನಿಸು ಕುಂಟೆಯಲು...ಎನಿಸು ಕುಂಟೆಗಳ್ಗ ಮೇಣಿಯಲೊಂದೊಂದು ಎಂದಿದೆ.[೬೪೫] ಈ ಉಪಕರಣವನ್ನು ಭೂಮಿಯಲ್ಲಿ ಹರಗಲು ಉಪಯೋಗಿಸಲಾಗುತ್ತಿತ್ತು. ಕುಂಟೆಗೆ ಬೇಕಾಗುವ ಸಾಮಗ್ರಿಗಳೆಂದರೆ "ದಿಂಡು, ತಾಳು (ಎರಡು), ಎರಡು ಬಳೆ, ಒಂದು ಕುಡ, ಎರಡು ಈಸು(ಈಚು), ಒಂದು ಮೇಳಿ, ಒಂದುಶಕ್ಕೆ,(ಚಕ್ಕೆ) ಹಿಂಗಿಲುನೊಗ,(೯ಗೇಣು) ಕಳೆ, ಜತ್ತಿಗೆ, ಮಿಣಿ, ನೊಗ ಬೇಕಾಗುತ್ತವೆ.[೬೪೬]

ಮೇಲೆ ಹೇಳಿದ ಎಲ್ಲಾ ವಸ್ತುಗಳನ್ನು ಅಗತ್ಯವಿದ್ದಲ್ಲಿಗೆ ಜೋಡಿಸಿ ಕುಂಟೆಯನ್ನು ತಯಾರಿಸಲಾಗುತ್ತದೆ. ಈ ಕುಂಟೆಯನ್ನು ಭೂಮಿಯಲ್ಲಿ ನೇಗಿಲು ಹೊಡೆದ ನಂತರ ಹರಗಲು ಬಳಸಲಾಗುತ್ತದೆ. ಅಲ್ಲದೆ ಬಿತ್ತನೆ ಮಾಡಿದಾಗ, ಕೂರಿಗೆ ಹೊಡೆದಾಗ ಅದರ ಹಿಂದೆ ಸಾಲು ಮುಚ್ಚಲು ಕುಂಟೆ ಹೊಡೆಯಲಾಗುತ್ತದೆ.

ಹತ್ತು ಎತ್ತಿನ ಕುಂಟೆ, ನಾಲ್ಕು ಎತ್ತಿನ ಕುಂಟೆ, ರಂಟೆಕುಂಟೆ, ಐದು ಗೇಣಿನ ಕುಂಟೆ, ಎಡೆಕುಂಟೆ, ದಳೆಕುಂಟೆ, ಬೋದು ಕುಂಟೆ, ಜಂತು ಕುಂಟೆ, ರಾಶಿ ಕುಂಟೆ ಎಂಬ ಹಲವು ವಿಧದ ಕುಂಟೆಗಳಿವೆ. ಕೆಲವೊಂದು ಎತ್ತುಗಳಿಂದ ಬಳಕೆಯಾದರೆ ಮತ್ತೆ ಕೆಲವು ಮಾನವ ಚಾಲಿತವಾಗಿವೆ.[೬೪೭]

ಹೆಗ್ಗುಂಟೆಯನ್ನು 'ನಾಡಕುಂಟೆ'[೬೪೮] ಎಂತಲೂ ಕರೆಯಲಾಗುತ್ತದೆ. ಇದು ಕುಂಟೆಗಳಲ್ಲೆಲ್ಲ ದೊಡ್ಡದಾಗಿರುತ್ತದೆ. ಇದನ್ನು ಮುಂಗಾರು ಮಳೆಯ ಪ್ರಾರಂಭದಲ್ಲಿ ಭೂಮಿಯ ತೇವಾಂಶ ಆರದಂತೆ ನೋಡಿಕೊಳ್ಳಲು ಈ ಕುಂಟೆ ಹೊಡೆಯುತ್ತಾರೆ. ಹತ್ತು ಎತ್ತಿನ ಕುಂಟೆಗೆ ಉದ್ದವಾದ ನೊಗ ಬಳಸಿ ಹತ್ತು ಎತ್ತು ಹೂಡುತ್ತಾರೆ. ಹತ್ತು ಜನರು ಒಂದೇ ಭೂಮಿಯನ್ನು ಉಳುಮೆ ಮಾಡಲು ಬಳಸಲಾಗುತ್ತಿತ್ತು. ಆದರೆ ಇಂದು ಸಂಪೂರ್ಣ ಈ ಕುಂಟೆ ಮಾಯವಾಗಿದೆ. ನಾಲ್ಕು ಎತ್ತಿನ ಕುಂಟೆಯು ಹತ್ತು ಎತ್ತಿನ ಕುಂಟೆಯ ಅರ್ಧಭಾಗದ ಕೆಲಸವನ್ನು ಮಾಡುತ್ತದೆ. ಹೊಲವನ್ನು ಹರಗಲು, ನೇಗಿಲಸಾಲು ಮುಚ್ಚಲು ಬಳಸಲಾಗುತ್ತಿತ್ತು. ಇದೂ ಸಹ ಇಂದು ಮಾಯವಾಗುತ್ತಿದೆ. ರಂಟೆ ಕುಂಟೆಯು ಬಿತ್ತನೆ ಪೂರ್ವದಲ್ಲಿ ಹೊಡೆಯುವುದಾಗಿದೆ. ಬಿತ್ತನೆ ಪೂರ್ವದಲ್ಲಿ ರಂಟೆ ಹೊಡೆದು ಉತ್ತ ನಂತರ ಕುಂಟೆಯಲ್ಲಿ ಹರಗಿ ಹುಲ್ಲು ಮೊದಲಾದವು ಒಣಗಲೆಂದು ಈ ಕುಂಟೆಯನ್ನು ಬಳಸಲಾಗುತ್ತದೆ. ಇದು ಇಂದಿಗೂ ರೂಢಿಯಲ್ಲಿರುವುದು ಕಂಡುಬರುತ್ತದೆ. ಐದು ಗೇಣಿನ ಕುಂಟೆಯನ್ನು ಬಿತ್ತನೆಗೆ ಬಳಸಲಾಗುತ್ತದೆ. ಎರಡು ಎತ್ತುಗಳನ್ನು ಇದಕ್ಕೆ ಬಳಸಲಾಗುತ್ತದೆ.

ಮುಂದೆ ಕೂರಿಗೆಗಳಿಂದ ಬಿತ್ತಿದರೆ ಹಿಂದೆ ಸಾಲಿಗೆ ಮಣ್ಣು ಮುಚ್ಚಲು, ಚಿಕ್ಕಪುಟ್ಟ ಕಳೆಯನ್ನು ನಾಶಪಡಿಸಲು ಬಳಸಲಾಗುತ್ತದೆ.

ದಳೆಕುಂಟೆ ಈ ಕುಂಟೆಗೆ ಎಡೆಕುಂಟೆ ಎಂತಲೂ ಕರೆಯಲಾಗುತ್ತದೆ. ಈ ಕುಂಟೆಗಳಲ್ಲಿ ಮೆಕ್ಕೆಜೋಳ, ಸೂರ್ಯಕಾಂತಿ ಮೊದಲಾದವುಗಳಿಗೆ ಬಳಸುವ ಕುಂಟೆ. ರಾಗಿ ಕುಂಟೆಗಳಿಗಿಂತ ದೊಡ್ಡದಾಗಿರುತ್ತದೆ. ಇದು ಬೆಳೆಯ ಬುಡಕ್ಕೆ ಮಣ್ಣು ಸರಿಸುತ್ತದೆ. ಬೀಜ ಸಾಲಿನಲ್ಲಿರುವ ಕಳೆ ತೆಗೆದು ಮನೆಸಾಲಿಗೆ ಹಾಕುತ್ತದೆ. ಬೀಜ ಸಾಲು ಎಂದರೆ ಎರಡು ಬೆಳೆಸಾಲಿನ ಮಧ್ಯದ ಸಾಲು ಮನೆಸಾಲು ಎಂದರೆ ಬೀಜ ಬಿತ್ತಿದ ಸಾಲು ಎಂದು ಕರೆಯುತ್ತಾರೆ. ಬೋದುಕುಂಟೆಯು ಇದನ್ನು ಸಹ ಪೈರು ತಿಂಗಳಿದ್ದಾಗ ಕಳೆ ನಾಶಮಾಡಲು ಬಳಸುತ್ತಾರೆ. ಈ ಕುಂಟೆಗಳನ್ನು ಒಂದು ಜೊತೆ ಎತ್ತಿಗೆ ಎರಡು ಕುಂಟೆಗಳನ್ನು ಹಾಕಲಾಗುತ್ತದೆ. ಇಬ್ಬರು ವ್ಯಕ್ತಿಗಳು ಈ ಕುಂಟೆಗಳನ್ನು ಹೊಡೆಯುತ್ತಾರೆ.

ಹೀಗೆ ಭೂಮಿಯನ್ನು ಸಮಗೊಳಿಸಲು, ಹುಲ್ಲು ತೆಗೆಯಲು, ಮಣ್ಣನ್ನು ಹಗುರಗೊಳಿಸಲು, ಮಣ್ಣಿನ ಎಂಟೆಗಳನ್ನೊಡೆಯಲು ಬಳಸಲಾಗುತ್ತದೆ.

**ನೊಗ**

ಇದು ಬೇಸಾಯದ ಒಂದು ಉಪಕರಣವಾಗಿದೆ. ನೊಗವನ್ನು ಎತ್ತುಗಳಿಗೆ ಹೊಂದಿಸಿ ನೇಗಿಲನ್ನು ಹೂಡುತ್ತಿದ್ದುದು ವೇದಗಳ ಕಾಲದಲ್ಲಿ ಕಂಡುಬಂದಿದೆ.[೬೯] ನೊಗದ ಪ್ರಾಮುಖ್ಯತೆ ಕೃಷಿಯ ಉಳುಮೆ, ಸಾಗಾಣಿಕೆ ಇಂತಹ ಎಲ್ಲ ಸಂದರ್ಭಗಳಲ್ಲಿ ಇದರ ಕಾರ್ಯವೈಖರಿ ಹಿರಿದಾಗಿರುತ್ತದೆ. ಇದನ್ನು ನೇಗಿಲು, ಕುಂಟೆ, ಎತ್ತಿನ ಬಂಡಿ, ಕೊರಡು, ಕೂರಿಗೆ ಮೊದಲಾದವುಗಳಿಗೆ ನೊಗವನ್ನು ಬಳಸಲಾಗುತ್ತದೆ. ಈ ನೊಗವನ್ನು ಮಾಡಲು ಕಮ್ರದ ಮರ, ಬಾರೆಮರ, ಜಾಲಿಮರ, ಹಲಸು, ಹತ್ತಿ, ತೇಗ ಮುಂತಾದ ಮರಗಳನ್ನು ಬಳಸುತ್ತಾರೆ. ಬಾರೆ, ಜಾಲಿ, ಕಮ್ರದ ಮರಗಳು ಬಾರವೆಂಬ ಕಾರಣಕ್ಕೆ ಸ್ವಲ್ಪ ವಿರಳವಾಗಿ ಬಳಸಲಾಗುತ್ತದೆ. ಉಳಿದಂತೆ ಹಲಸು, ಹತ್ತಿ, ತೇಗದ ಮರಗಳನ್ನು ಹಗುರವೆಂಬ ಕಾರಣಗಳಿಗೆ ಬಳಸಲಾಗುತ್ತದೆ. ಕ್ರಿ.ಶ. ೧೦೮೫ರ ಶಾಸನದಲ್ಲಿ 'ನೊಗನಿಕ್ಕಿ ಉತ್ತು ಹರಗಿ ಬಿತ್ತಿ ಬೆಳೆದು' ಎಂದು ಉಲ್ಲೇಖಿಸುತ್ತದೆ.[೭೦] ಶಾಸನಗಳಲ್ಲಿ ಈ ಉಪಕರಣದ ಮಾಹಿತಿಗಳು ಅತ್ಯಂತ ವಿರಳವಾಗಿ ಕಂಡುಬರುತ್ತವೆ. ಇಂದಿಗೂ ಕೃಷಿಯಲ್ಲಿ ನೊಗದ ಬಳಕೆ ಹೆಜ್ಜೆ ಹೆಜ್ಜೆಗೂ ಕಂಡುಬರುತ್ತದೆ. ನೊಗವನ್ನು ಕುರಿತು ಕೆಲವೊಂದು ನಂಬಿಕೆ ಆಚರಣೆಗಳು ಇಂದಿಗೂ ರೂಢಿಯಲ್ಲಿವೆ. ಪ್ರತಿ ಸೋಮವಾರ ಬಂಡಿಯನ್ನು ಬಿಟ್ಟು ಬೇಸಾಯಕ್ಕೆ ನೊಗ ಹೂಡುವುದಿಲ್ಲ. ಅದರ ಮೇಲೆ ಕುಂಟೆ, ನೇಗಿಲು, ಕೂರಿಗೆ ಇತ್ಯಾದಿಗಳನ್ನು ಊರಿನಿಂದ ಹೊರಗೆ ತೆಗೆದುಕೊಂಡು ಹೋಗಬಹುದು. ಆದರೆ ಅದನ್ನು ಊರಿನ ಒಳಗಡೆ ಬರುವಾಗ ಊರ ಬಾಗಿಲಲ್ಲೆ ಕಳಚಿಕೊಂಡು ತರಬೇಕು. ಯಾರಾದರೂ ಮರೆತು ಊರ ಬಾಗಿಲ ಒಳಗಡೆ ಬಂದರೆ ನೊಗವನ್ನು ಎರಡು ಭಾಗವಾಗಿ ಕತ್ತರಿಸುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಇದರ ಇಂದಿನ ಉದ್ದೇಶ ತಿಳಿಯದು. ಆದರೆ ಊರಿಗೆ, ವ್ಯವಸಾಯ ಬದುಕಿಗೆ ಕೇಡಾಗುತ್ತದೆ ಎಂಬ ನಂಬಿಕೆ ಗ್ರಾಮಗಳ ಜನತೆಯಲ್ಲಿರುವುದು ಮಧ್ಯ ಕರ್ನಾಟಕ ಭಾಗದಲ್ಲಿ ಪ್ರಚಲಿತದಲ್ಲಿದೆ. ಅಲ್ಲದೆ ನೊಗ ಮುರಿದರೆ ಕೇಡಾಗುತ್ತದೆ. ಆ ಮನೆಯ ಯಜಮಾನರಿಗೆ ತೊಂದರೆಯಾಗುತ್ತದೆ ಎಂಬ ವಾಡಿಕೆ ಇದೆ. ಇದರ ಹಿಂದಿನ ಉದ್ದೇಶ ನೊಗದ ಪ್ರಾಮುಖ್ಯತೆ, ಕೃಷಿಯೊಂದಿಗಿನ ನೊಗದ ಸಂಬಂಧವನ್ನು ಸೂಚಿಸುತ್ತದೆ. ಹೀಗೆ ವ್ಯವಸಾಯದಲ್ಲಿ ಕೃಷಿಯ ಪಾತ್ರ ಹಿರಿದಾಗಿ, ವ್ಯವಸಾಯದ ಅತಿಮುಖ್ಯ ಅಂಗವಾಗಿ ನೊಗ ಕಂಡುಬರುತ್ತದೆ.

**ಕುಡುಗೋಲು**

ಕೃಷಿ ಬೆಳೆಗಳನ್ನು ಕತ್ತರಿಸಲು ಅಥವಾ ಕೊಯ್ಲಿಗೆ ಬಳಸುವ ಸಾಧನವಾಗಿ ಕಂಡುಬರುತ್ತದೆ. ಕುಡುಗೋಲಿನ ಇತಿಹಾಸವು ಆದಿಶಿಲಾಯುಗ ಕಾಲದಿಂದ ಆರಂಭಗೊಳ್ಳುತ್ತದೆ. 'ಆದಿಶಿಲಾಯುಗದಲ್ಲಿ ಒಂದು ಕಲ್ಲನ್ನು ಇನ್ನೊಂದು ಕಲ್ಲಿಗೆ ಉಜ್ಜಿ ಅಥವಾ ಬಡಿದು ಅಲಗನ್ನುಳ್ಳ ಅಂಚಿನ ಕಲ್ಲುಗಳನ್ನು ತಯಾರಿಸುತ್ತಿದ್ದರು. ಆಗ ಅಲಗುಗಳು ಅಷ್ಟು ಚೂಪಾಗಿರಲಿಲ್ಲ. ನವಶಿಲಾಯುಗದ ಆರಂಭ ಸು.೧೦.೦೦೦ ವರ್ಷಗಳ ಹಿಂದೆ ಅಲಗುಳ್ಳ ಆಯುಧ ಅಥವಾ ಕೈಗೊಡಲಿ(ಹ್ಯಾಂಡ್ ಆ್ಯಕ್ಸ್)ಯನ್ನು ಮಸೆದು ಚೂಪುಗೊಳಿಸಲು ಕಲಿತನು[ಟಿ೫೧] ಈ ಆಯುಧವನ್ನು ಬಳಸಿ ಮರ ಮೊದಲಾದವುಗಳನ್ನು ಕಡಿದು, ಇದರಿಂದ ಸಾಗುವಳಿ ಮಾಡುವ ಪ್ರವೇಶವನ್ನು ಸ್ವಚ್ಛಗೊಳಿಸಿರುವ ಸಾಧ್ಯತೆಗಳಿವೆ. ಕ್ರಿ.ಪೂ. ೯೦೦೦ದಿಂದ ಕ್ರಿ.ಪೂ. ೭೦೦೦ದ ಅವಧಿಯಲ್ಲಿ ನುಟುಫಿಯನ್ ಎಂಬ ಜನಾಂಗದವರು ಹರಿತವಾದ ಕಲ್ಲಿನ ಧಾರೆಯುಳ್ಳ ಕುಡುಗೋಲನ್ನು ಪೈರುಗಳ ಕೊಯ್ಲಿಗೆ ಬಳಸಿರುವ ಸಾಧ್ಯತೆಗಳಿವೆ. ಋಗ್ವೇದದಲ್ಲಿ ಬೆಳೆಯ ಕೊಯ್ಲನ್ನು ಪ್ರಾರ್ಥನೆ ನಡೆಸಿ ಮಾಡುತ್ತಿದ್ದರು. ಕುಡುಗೋಲನ್ನು ಕೈಗೆ ತೆಗೆದುಕೊಂಡು ಮಾಡುವ ಪ್ರಾರ್ಥನೆಯು ಇದರಲ್ಲಿ ಕಂಡುಬರುತ್ತದೆ. "ವಿಶಾಲವಾದ ಭೂಮಿ ಮತ್ತು ಹುಲ್ಲುಗಾವಲನ್ನು ಧನ ಬಂಡಾರೋಪಾದಿಯಲ್ಲಿ ಇಂದ್ರನು ತನ್ನ ಮಿತ್ರನಿಗೆ ಕೊಟ್ಟಿದ್ದಾನೆ ಎಂಬ ಹೇಳಿಕೆ ಜೊತೆಗೆ ಬೀಜಗಳನ್ನು ಬಿತ್ತಿ, ಬೆಳೆಯುವ ತೆನೆಗಳು ವಿಪುಲವೂ, ಕತ್ತರಿಸಿ ರಾಶಿ ಹಾಕಲು ಕುಡುಗೋಲುಗಳು ಭಾರವಾದವೂ ಆಗಿರಲಿ, ಈ ಪವಿತ್ರವಾದ ಉಳಲು ಬಳಸಿದ ನೇಗಿಲುಗಳು ನಮಗೆ ಒಳ್ಳೆಯ ಆಹಾರದಿಂದ ಹಸುಗಳನ್ನೂ, ಕುರಿಗಳನ್ನೂ, ದಷ್ಟಪುಷ್ಟರಾದ ಮಹಿಳೆಯರನ್ನು ಒದಗಿಸುವಂತಾಗಲಿ ಎಂಬ ಪ್ರಾರ್ಥನೆ ಕಂಡುಬರುತ್ತದೆ.[ಟಿ೫೨] ಇದರಿಂದ ಬೆಳೆದ ಬೆಳೆಗಳು, ತೆನೆಗಳನ್ನು ಕೊಯ್ದುರಾಶಿ ಮಾಡಲು ಭಾರವಾದ ಕುಡುಗೋಲನ್ನು ಬಳಸಲಾಗುತ್ತಿತ್ತು ಎಂದು ತಿಳಿದು ಬರುತ್ತದೆ. ಬಯಲು ಸೀಮೆಯಲ್ಲಿ 'ಕುಡ್ಲು' ಎಂದು ಇದನ್ನು ಕರೆಯಲಾಗುತ್ತದೆ. 'ಕುಡ' ಎಂದರೆ ಕೊಯ್ಲು, ಗೋಲು ಎಂದರೆ ಕೋಲು, ಕೋಲಿನೊಂದಿಗಿರುವ ಕೊಯ್ಲು ಉಪಕರಣ ಎಂದು ಹೇಳಲಾಗುತ್ತದೆ. ಅಥವಾ ಕೂಯ್ಲಿನೊಂದಿಗಿರುವ ಕೋಲು ಇದರಿಂದ ಕುಡುಗೋಲು ಎನ್ನುವರು. ಶಾಸನಗಳಲ್ಲಿ ಕುಡುಗೋಲು ಕುರಿತ ಉಲ್ಲೇಖ ಅತ್ಯಂತ ವಿರಳವಾಗಿ ಕಂಡುಬರುತ್ತದೆ. ಕ್ರಿ.ಶ. ೧೦೮೫ರ ಶಾಸನದಲ್ಲಿ "ಮೃಡ ಮೇಳೇಶಂಗಾಗಳು ದ್ರಿಢಭಕ್ತಿಯಲೊಂಟ ಸಾಸಿರ್ಬ್ಬರುಂ ತಾಂ ಕುಡುಗೋಲ್ಗಳ ಪಾಗಮುಮಂತೆಡೆಯುಡುಗಡೆ ಕೊಟ್ಟರಿಂತು ಅತಿಮುದದಿಂದ"[ಟಿ೫೩] ಇಲ್ಲಿ ಕುಡುಗೋಲುಗಳ ಉಲ್ಲೇಖ ಬಂದಿರುವುದು ಕಂಡುಬಂದಿದೆ. ಕುಡುಗೋಲುಗಳನ್ನು ದಾನಿವಿಟ್ಟಂತೆ ಕಂಡುಬಂದಿದೆ. ಕುಡುಗೋಲುಗಳಲ್ಲಿ ಅರಿವಾಳೆ ಎಂಬ ವಿಧವಿದ್ದು, ಅದನ್ನು ಸಹ ಕೂಯ್ಲಿನಲ್ಲಿ ಬಳಕೆ ಮಾಡಿಕೊಳ್ಳುತ್ತಿದ್ದುದು ಇಂದಿಗೂ ಕಂಡುಬರುತ್ತದೆ. ಕೊಡುಗೋಲಿನ ಆಕಾರದಲ್ಲಿಯೇ 'ಕುರ್ಜಿಗೆ' ಬರುತ್ತದೆ. ಇದನ್ನು ಕಳೆ ಕೀಳಲು ಬಳಸಲಾಗುತ್ತದೆ. ಹೀಗೆ ಕೃಷಿಕಾರ್ಯಗಳಲ್ಲಿ ಕುಡುಗೋಲು ನೆರವಾಗುವುದು ಕಂಡುಬರುತ್ತದೆ. ಇದು ಕಬ್ಬಿಣದ ಬಳಕೆಯಿಂದಾಗಿ ಸಾಧ್ಯವಾಯಿತು. ಇದರಿಂದ ಕೃಷಿಯಲ್ಲಿ ಪೈರುಗಳನ್ನು ಕೊಯ್ಯಲು ಸಹಕಾರಿಯಾದುದು ಕಂಡುಬಂದಿದೆ.

**ಚಲ್ಕಿ**

ಕೃಷಿ ಉಪಕರಣಗಳಲ್ಲಿ ಚಲ್ಕಿ ಒಂದಾಗಿದೆ. ಇದನ್ನು ಚಲುಕಿ, ಸಲ್ಕಿ, ಸನಿಕಿ ಎಂದೂ ಕರೆಯುವುದಿದೆ. ಬಾದಾಮಿ ಚಾಲುಕ್ಯರು ಮೂಲತಃ ಸಲ್ಕಿ ಎಂಬ ಹೆಸರನ್ನು ಹೊಂದಿದ್ದರು. ಸಲ್ಕಿ ಅಥವಾ ಸನಿಕಿ ಎಂಬ ಉಪಕರಣದಿಂದ ಬಂದ ಹೆಸರು ಎಂದು ಡಾ. ಎಸ್.ಸಿ. ನಂದೀಮಠ ಹೇಳಿದ್ದಾರೆ. ಅಲ್ಲದೆ ರಾಷ್ಟ್ರಕೂಟ ಗಂಗ ಮೊದಲಾದವರು ಕೃಷಿ ಮೂಲದಿಂದ

ಬಂದವರೆನ್ನಲಾಗಿದೆ.[೬೫೪] ಇದು ನೆಲ ಬಗೆಯಲು ಬಳಸುವ ಉಪಕರಣವಾಗಿದೆ. ಇದು ನೆಲ ಬಗೆಯುವುದರೊಂದಿಗೆ ಬಗೆದ ಮಣ್ಣನ್ನು ಮತ್ತೊಂದು ಕಡೆಗೆ ರವಾನಿಸುತ್ತದೆ. ಇದಕ್ಕೆ ಬಳಸುವ ಮರದ ದಿಂಡನ್ನು 'ಕಾವು' ಎಂದು ಕರೆಯಲಾಗುತ್ತದೆ. 'ಕೆಲವು ಕಡೆ ಮಣ್ಣೆತ್ತುವ ಗುದ್ದಲಿ ಎಂತಲೂ ಕರೆಯುತ್ತಾರೆ.'[೬೫೫] ಇದನ್ನು ಗೊಬ್ಬರ ಬಗೆಯಲು ಬಳಸಲಾಗುತ್ತದೆ. ಇನ್ನುಳಿದ ಉಪಕರಣಗಳಾದ ಹಾರೆ ಗುದ್ದಲಿಗಳಿಂದ ನೆಲವನ್ನು ಹಗುರ ಮಾಡಿಕೊಂಡು ನಂತರ ಸಲಿಕೆ ಬಳಸಿ ಮಣ್ಣು ಅಥವಾ ಗೊಬ್ಬರ ಮೊದಲಾದವನ್ನು ತುಂಬಲು ಬಳಸುತ್ತಾರೆ.

ಕಾಲುವೆಗಳಂತಹ ನಿರ್ಮಾಣ ಕಾರ್ಯಗಳಲ್ಲಿ, ಕಾಲುವೆಗಳನ್ನು ಸ್ವಚ್ಛಗೊಳಿಸುವಲ್ಲಿ ಈ ಉಪಕರಣ ನೆರವಾಗುತ್ತದೆ. ಸಸಿಗಳನ್ನು ನೆಡುವ ಹಾರೆ, ಗುದ್ದಲಿಗಳೊಂದಿಗೆ ಈ ಉಪಕರಣವು ನೆರವಾಗುವುದು ಕಂಡುಬರುತ್ತದೆ. ಶಾಸನಗಳು ವಿರಳವಾಗಿ ಕೆಲವೊಂದು ಉಪಕರಣಗಳನ್ನು ಉಲ್ಲೇಖಿಸಿವೆ. ಮಚ್ಚು, ಗುದ್ದಲಿ, ಪಿಕಾಸಿ(ಹಾರೆ), ಕೊಡಲಿ, ಮೊದಲಾದ ಕೃಷಿ ಉಪಕರಣಗಳ ದಾಖಲೆಗಳು ಶಾಸನದಲ್ಲಿ ಕಂಡುಬರುವುದಿಲ್ಲ. ಈ ಕೃಷಿ ಉಪಕರಣಗಳು ಕೃಷಿ ಜೀವನಕ್ಕೆ ಭೂಮಿ ಬಗೆಯಲು ಕೊಡಲಿಯಂತಹ ಉಪಕರಣಗಳು ಮರಕಡಿಯಲು ಹೀಗೆ ಹಲವಾರು ಉಪಯೋಗಗಳು ಉಪಕರಣಗಳಿಂದ ಕೃಷಿಗೆ ನೆರವಾಗುವವು.

**ಎತ್ತುಗಳು**

ಕೃಷಿಯಲ್ಲಿ ಉಪಕರಣಗಳ ಜೊತೆಗೆ ಬಹುಮುಖ್ಯ ಪಾತ್ರ ವಹಿಸುವುದು ಎತ್ತುಗಳು. ಉಳುಮೆಯಿಂದ ಸಾಗಾಟದವರೆಗಿನ ಸಂಪೂರ್ಣ ಕಾರ್ಯಗಳು ಎತ್ತುಗಳಿಂದ ಆಗುತ್ತವೆ. ಇವು ಬರೀ ಎತ್ತಲ್ಲ, ಕೃಷಿಕನ ಮನೆತನವನ್ನು ಎತ್ತುವ ಸಾಧನಗಳು. ಪ್ರಾಚೀನ ಕೃಷಿ ಜೀವನದ ಅವಿಭಾಜ್ಯ ಅಂಗಗಳು. ಪ್ರಾಚೀನ ಕೃಷಿಯಲ್ಲಿ ಉಳುಮೆಗೆ ಎತ್ತು ಮತ್ತು ಕೋಣಗಳನ್ನು ಬಳಸಿಕೊಳ್ಳಲಾಗುತ್ತಿತ್ತು. ಇಂದಿಗೂ ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಗದ್ದೆಯ ಉಳುಮೆಗೆ ಕೋಣಗಳನ್ನು ಬಳಸುವುದಿದೆ. ಅರ್ಥಶಾಸ್ತ್ರಕಾರ ಎತ್ತುಗಳಿಗೆ ಕುಸುಬಲಕ್ಕಿ, ಒಂದು ದ್ರೋಣ ಉದ್ದನ್ನಾಗಲಿ, ಎಳ್ಳಿನ ಹಿಂಡಿಯಾಗಲೀ ಹತ್ತು ಹಡಕ ತೌಡನ್ನಾಗಲಿ ಹಾಕಬೇಕು ಎಂದಿದ್ದಾನೆ[೬೫೬] ಅರ್ಥಶಾಸ್ತ್ರಕಾರ ಇದನ್ನು ಹೇಳಿರುವ ಉದ್ದೇಶ ಎತ್ತುಗಳು ದಷ್ಟಪುಷ್ಟವಾಗಿರಲು, ಉಳುಮೆಗೆ ಎತ್ತುಗಳು ಸದೃಢಕಾಯವಾಗಿದ್ದರೆ ಕೃಷಿಯು ಸದೃಢವಾಗಿರುತ್ತದೆ. ಈ ಕಾರಣದಿಂದ ಅವುಗಳಿಗೆ ಸತ್ವಯುತ ಆಹಾರ ನೀಡಬೇಕೆಂದು ತಿಳಿಸಿದ್ದಾನೆ. ಇಂದಿಗೂ ಗ್ರಾಮಗಳಲ್ಲಿ 'ಕತ್ತಿಗ್ಯಾಕೆ ಹತ್ತಿಕಾಳು ಮುಸುರಿ' ಎನ್ನುತ್ತಾರೆ. ಅಂದರೆ ಹೊಲದಲ್ಲಿ ಕಷ್ಟಪಟ್ಟು ದುಡಿಯುವ ಎತ್ತುಗಳಿಗೆ ಹತ್ತಿಕಾಳು, ಮುಸುರಿಯ ಅಗತ್ಯ ಇರುತ್ತದೆ. ಅಲ್ಲದೆ ಹತ್ತಿಕಾಳು ಮುಸುರಿಯ ಅಗತ್ಯವಾಗಲೀ, ಅದರ ರುಚಿಯಾಗಲಿ ಕತ್ತೆಯಂತಹ ಪ್ರಾಣಿಗೆ ತಿಳಿದಿರುವುದಿಲ್ಲ. ಕತ್ತೆ ಭಾರವನ್ನು ಎಳೆಯುತ್ತದೆ. ಆದರೂ ಅದಕ್ಕೆ ಈ ರೀತಿಯ ಹಾರೈಕೆ ಮಾಡುವವರಾರು ಎಂಬ ಅರ್ಥದಲ್ಲಿ ಈ ಮಾತು ಬಳಕೆಯಾಗಿರುವ ಸಾಧ್ಯತೆಗಳಿವೆ.

ಶಾಸನಗಳಲ್ಲಿ ಹಸುಗಳನ್ನು, ದಾನ ನೀಡಿರುವುದೂ, ಹಸುಗಳಿಗಾಗಿ ತುಱುಗೋಳಿನಂತಹ ಯುದ್ಧ ನಡೆದ ಉಲ್ಲೇಖಗಳು ಕಂಡುಬಂದಿವೆ. ಕೃಷಿ ಜೀವನಕ್ಕೆ ಹಸುಗಳು ಎತ್ತುಗಳನ್ನು ಉತ್ಪಾದಿಸುವ ಅಥವಾ ಫಲವಂತಿಕೆಯ ಸಂಕೇತಗಳು. ಇವು ಕೃಷಿಗೆ ಅಗತ್ಯವಾದ ಎತ್ತುಗಳಿಗೆ ಜನ್ಮ ನೀಡುತ್ತವೆ. ಈ ಹಿನ್ನೆಲೆಯಲ್ಲಿ ಹಸುಗಳು ಕೃಷಿಕನ ಜೀವನದ ಒಂದು ಅವಿಭಾಜ್ಯ ಅಂಗಗಳಾಗಿರುತ್ತವೆ. ಶಾಸನಗಳಲ್ಲಿ ಹಸುಗಳ ದಾನವಲ್ಲದೆ ಎತ್ತುಗಳನ್ನು ದಾನನೀಡಿದ ಉಲ್ಲೇಖಗಳಿವೆ. ಕ್ರಿ.ಶ. ೧೨೦೨ರ ಶಾಸನದಲ್ಲಿ ನೂರು ಎತ್ತುಗಳನ್ನು ದಾನ ನೀಡಿದ ಉಲ್ಲೇಖವಿದೆ.[೬೫೭] ಎತ್ತುಗಳನ್ನು ದಾನ ನೀಡಿರುವ ಉದ್ದೇಶ ಕೃಷಿಯನ್ನು ವಿಸ್ತರಿಸಲು, ಕೃಷಿ

ಭೂಮಿಯನ್ನು ಉಳುಮೆಗೊಳಪಡಿಸುವ ಸಲುವಾಗಿ ದಾನನೀಡಿರುವ ಸಾಧ್ಯತೆಗಳಿವೆ. ಆಕಳುಗಳಿಗೆ ಗರ್ಭವನ್ನು ಕಟ್ಟಿಸಲು ಮೀಸಲಿಡುತ್ತಿದ್ದ ಹೋರಿಗಳನ್ನು ವೃಷ ಎಂದು ಮಾಧವಾಚಾರ್ಯರು ತಮ್ಮ ಜೈಮಿನಿ ನ್ಯಾಯಮಾಲೆಯಲ್ಲಿ ತಿಳಿಸಿದ್ದಾರೆ.[೬೫೮] ಅಂದರೆ ಹೋರಿಗಳಿಂದ ಹಸುಗಳು ಗರ್ಭಧರಿಸಲು ಬೀಜೋತ್ಪಾದನೆಯಾಗುತ್ತಿತ್ತು. ಈ ಕಾರಣಕ್ಕೆ ಹೋರಿಗಳನ್ನು ಬಳಸಲಾಗುತ್ತಿತ್ತು. ಈ ಬೀಜಗಳನ್ನು ಕಸಿ ಮಾಡಿದಾಗ ಅವುಗಳಿಗೆ ಎತ್ತುಗಳು ಎಂದು ಕರೆಯಲಾಗುತ್ತಿತ್ತು. ಇವುಗಳನ್ನು ಕೃಷಿಗೆ ಬಳಸಲಾಗುತ್ತಿತ್ತು. ಉಳುಮೆ, ಸಾಗಾಣಿಕೆ, ನೀರಾವರಿಯಲ್ಲಿ ಏತಗಳನ್ನೆಳೆಯಲು ಎತ್ತುಗಳನ್ನು ಬಳಸಲಾಗುತ್ತಿತ್ತು. ಇಂದಿಗೂ ಇದು ಕಂಡುಬರುತ್ತದೆ. ಕ್ರಿ.ಶ. ೧೦೯೭ರ ಶಾಸನದಲ್ಲಿ 'ಎತ್ತಿನ ವಣಿಜ' ಉಲ್ಲೇಖವಿದೆ.[೬೫೯] ಇದನ್ನು ಗಮನಿಸಿದರೆ ಎತ್ತುಗಳ ವ್ಯಾಪಾರ ನಡೆಯುತ್ತಿತ್ತು. ಎತ್ತುಗಳ ವ್ಯಾಪಾರಿಗೆ ಶಾಸನವು ಎತ್ತಿನ ವಣಿಜ ಎಂದು ಕರೆದಿರುವುದು ಕಂಡುಬರುತ್ತದೆ. ಕೃಷಿಕರು ಹಾಗಾಗ ಎತ್ತುಗಳನ್ನು ಮಾರಾಟ ಮಾಡುವ, ಕೊಳ್ಳುವ ಕಾರ್ಯಗಳನ್ನು ಮಾಡುತ್ತಾರೆ. ಕೆಲವೊಮ್ಮೆ ಎತ್ತುಗಳಿಗೆ ವಯಸ್ಸಾಗಿದ ಕಾರಣಕ್ಕೆ, ತನ್ನ ಭೂಮಿಗೆ ಕೆಲವು ಎತ್ತುಗಳು ಸರಿಬರದ ಕಾರಣ ಮೊದಲಾದವುಗಳಿಂದ ಎತ್ತುಗಳನ್ನು ಬದಲಿಸುತ್ತಾರೆ. ಕೆಲವು ಎತ್ತುಗಳ ಪಾದವು ಮೃದುವಾಗಿದ್ದು, ಅವುಗಳಿಗೆ ಪದೇ ಪದೇ ಹಲ್ಲೆ ಅಥವಾ ಹಾವಿಗೆ ಕಟ್ಟಿಸಬೇಕು. ಇಲ್ಲವಾದರೆ ಅವು ಕಲ್ಲು, ಮುಳ್ಳುಗಳಿರುವ ನೆಲಗಳಲ್ಲಿ ಓಡಾಡುವುದಿಲ್ಲ. ಹಾಗೆ ಓಡಾಡಿಸಿದರೆ ಕುಂಟಲಾರಂಭಿಸುತ್ತವೆ. ಈ ಎತ್ತುಗಳು ಮೃದು ನೆಲಗಳಿಗೆ ಸರಿಹೊಂದುತ್ತವೆ. ಈ ಕಾರಣಗಳಿಂದಾಗಿ ಮಣ್ಣಿನ ಗುಣಕ್ಕನುಗುಣವಾಗಿ ಎತ್ತುಗಳನ್ನು ಮಾರಾಟ ಮತ್ತು ಕೊಳ್ಳುವ ಸಂದರ್ಭದಲ್ಲಿ ವ್ಯಾಪಾರಿಗಳು ಮಧ್ಯವರ್ತಿಗಳಾಗಿ ಕೆಲಸ ಮಾಡುತ್ತಿದ್ದರು. ಕ್ರಿ.ಶ. ೧೪ನೆಯ ಶತಮಾನದ ಶಾಸನದಲ್ಲಿ 'ಬಂಡಿ ಎತ್ತಂ ಕಳ್ಳರು ಕೊಂಡುಹೋದಲ್ಲಿ ಎತ್ತಂ ಮಗುರ್ಚ್ಚಿ' ಬಮ್ಮನು ಸುರಲೋಕ ಪ್ರಾಪ್ತನಾದನೆಂದು ತಿಳಿಸಿದೆ.[೬೬೦] ತುರುಗಳ ಕಳ್ಳತನವಷ್ಟೆ ನಡೆಯದೆ ಎತ್ತುಗಳ ಕಳ್ಳತನ ನಡೆಯುತ್ತಿತ್ತು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ. ಕೃಷಿ ಜೀವನಕ್ಕೆ ಎತ್ತುಗಳು ಜೀವಾಳ. ಈ ಕಾರಣದಿಂದ ಅವುಗಳನ್ನು ಅಪಹರಿಸಿದರೆ ಒಂದೆಡೆ ಆ ರೈತನ ಕೃಷಿಯ ಮೇಲೆ ಪೆಟ್ಟು ಬೀಳುತ್ತದೆ. ಎತ್ತುಗಳು ಕೃಷಿ ಜೀವನಕ್ಕೆ, ಆರ್ಥಿಕತೆಯ ಒಂದು ಬಹುಮುಖ್ಯ ಭಾಗಗಳು. ಇವುಗಳಿಲ್ಲದ ಕೃಷಿ ಬದುಕು ವ್ಯರ್ಥ. ಎತ್ತುಗಳಿಂದ ಕೃಷಿ ಜೀವನಕ್ಕೆ ಆಗುವ ಒಳಿತು ಕೆಡುಕುಗಳ ಅಂಶಗಳನ್ನು ತಿಳಿದ ಕಾರಣಕ್ಕಾಗಿಯೇ ಎತ್ತುಗಳ ಕಳ್ಳತನಗಳು ನಡೆಯುತ್ತಿದ್ದವು. ಇಂದಿಗೂ ಎತ್ತುಗಳ ಕಳ್ಳತನ ಕಂಡುಬರುತ್ತದೆ. ಪ್ರಾಚೀನ ಕಾಲದ ಎತ್ತಿನ ಕಳ್ಳರು ಸಿಕ್ಕಿರುವ ಕಾರಣಕ್ಕಾಗಿಯೇ ಯುದ್ಧಗಳು ನಡೆದಿರುವ ದಾಖಲೆ ಲಭಿಸುತ್ತದೆ. ಆದರೆ ಇಂದಿನ ಆಧುನಿಕ ಎತ್ತಿನ ಕಳ್ಳರು ಸಿಗುವುದು ವಿರಳ. ಆಧುನಿಕ ಸೌಲಭ್ಯಗಳು ಹೆಚ್ಚಿದಂತೆ ಅದರ ಅಪಾಯಗಳು ಅದರ ಹಿಂದೆಯೇ ಇರುತ್ತಿವೆ. ಆಗಿನ ಕಳ್ಳರು ನಡೆದೇ ಎತ್ತುಗಳನ್ನು ಕೊಂಡೊಯ್ಯುತ್ತಿದ್ದರು. ಆದರೆ ಇಂದು ವಾಹನಗಳಲ್ಲಿ ಎತ್ತುಗಳನ್ನು ಸಾಗಾಣಿಕೆ ಮಾಡುತ್ತಾರೆ. ಜೊತೆಗೆ ಮಾಂಸಕ್ಕಾಗಿ ಬಳಸುವುದರಿಂದ ಅವುಗಳನ್ನು ಕಡಿದ ಮೇಲೆ ಯಾವ ಎತ್ತುಗಳೂ ಮರಳಿ ಸಿಗಲು ಸಾಧ್ಯವಾಗುವುದಿಲ್ಲ. ಆಧುನಿಕ ಸೌಲಭ್ಯಗಳ ಬಳಕೆಯಿಂದಾಗಿ ಇಂತಹ ವಿಪತ್ತುಗಳು ಇಂದು ಬಂದೊದಗಿವೆ. ಕ್ರಿ.ಶ. ೧೨೭೮ರ ಶಾಸನದಲ್ಲಿ 'ಹೇಱುವ ಸಾಸನದೆತ್ತು ೧೫' ಎಂದಿದೆ.[೬೬೧] ಎತ್ತುಗಳನ್ನು ವಸ್ತುಗಳ ಸಾಗಾಣಿಕೆಗೆ ಬಳಸಲಾಗುತ್ತಿತ್ತು. ಕೃಷಿ ಸಾಮಗ್ರಿಗಳನ್ನು ಕೊಂಡೊಯ್ಯಲು ಬಳಸುವುದಿತ್ತು. ಜೊತೆಗೆ ಇತರ ವ್ಯಾಪಾರಿ ಸಾಮಗ್ರಿಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಕೊಂಡೊಯ್ಯಲು ಬಳಸಲಾಗುತ್ತಿತ್ತು.

ಕೃಷಿ ಬದುಕಿನಲ್ಲಿ ಎತ್ತುಗಳು ಎಷ್ಟು ಪ್ರಾಮುಖ್ಯತೆ ಪಡೆದಿದ್ದವು ಮತ್ತು ಕೃಷಿ ಸಂಪತ್ತಿನ ಭಾಗವಾಗಿದ್ದವು ಎಂಬುದು ಎತ್ತುಗಳ ಮೇಲೆ ವಿಧಿಸಿದ ಸುಂಕಗಳಿಂದ ತಿಳಿಯುತ್ತದೆ.

'ಬಾಲವಣವೆಂಬ' ತೆರಿಗೆಯನ್ನು ಎತ್ತುಗಳ ಮೇಲೆ ಹಾಕಲಾಗುತ್ತಿತ್ತು. ಇದು ಕ್ರಿ.ಶ. ೮೬೦ರ ಶಾಸನದಲ್ಲಿ ಉಲ್ಲೇಖಗೊಂಡಿದೆ[೬೬೨] ಕ್ರಿ.ಶ. ೧೨೩೭ರ ಶಾಸನದಲ್ಲಿಯೂ ಬಾಲವಣದ ಉಲ್ಲೇಖ ಬರುತ್ತದೆ.[೬೬೩] ಇದು ಎತ್ತುಗಳಿಂದ ರಾಜ್ಯದ ಬೊಕ್ಕಸಕ್ಕೆ ತೆರಿಗೆಯ ರೂಪದಲ್ಲಿ ಆದಾಯ ಸಂದಾಯವಾಗುತ್ತಿತ್ತು ಎಂಬುದನ್ನು ತಿಳಿಸುತ್ತದೆ. ಕೃಷಿಕರು ತಾವು ಎಂತಹ ಎತ್ತುಗಳನ್ನು ಕಟ್ಟಬೇಕೆಂಬುದನ್ನು ಹೀಗೆ ನಿರ್ಧರಿಸಿಕೊಂಡಂತಿದ್ದುದನ್ನು ಸರ್ವಜ್ಞ ತನ್ನ ಒಂದು ವಚನದಲ್ಲಿ ಹೀಗೆ ಹೇಳುವನು

ಹಂಡ ಎತ್ತುಗಳಾಗಿ ಮಿಂಡಿ ತಾ ಸೊಸೆಯಾಗಿ
ಕಂಡರ್ತಿಕಾರ ಮಗನಾದಡಾ ಮನೆಗೆ
ದಂಡ ತಪ್ಪದೆಂದ ಸರ್ವಜ್ಞ[೬೬೪]

ಕೃಷಿಕರು ಹಂಡಗುಂಡ ಎತ್ತುಗಳಲ್ಲಿ ವ್ಯವಸಾಯ ಮಾಡಲಾರರು. ಹಾಗೆ ಮಾಡಿದರೆ ಆಗಬಹುದಾದ ಪರಿಣಾಮವನ್ನು ಊಹಿಸಿಕೊಂಡಿರುವರು. ಈ ಕಾರಣದಿಂದಾಗಿ ಸರ್ವಜ್ಞ ಹೀಗೆ ಹೇಳಿರುವನು. ಹಂಡ ಎತ್ತುಗಳಲ್ಲಿ ಬೇಸಾಯ ಹೂಡಿದರೆ ಅವು ಬೆಳೆದ ಪೈರಾಗಿದ್ದರೆ ಪೈರನ್ನು ನಾಶಪಡಿಸುತ್ತವೆ. ಉಳುಮೆಯ ಭೂಮಿಗೆ ಅವುಗಳನ್ನು ಹೂಡಿದರೆ ವ್ಯವಸಾಯದ ಉಪಕರಣಗಳನ್ನು ಮುರಿದು ದಂಡ ತರುತ್ತವೆ. ಈ ಹಿನ್ನೆಲೆಯಲ್ಲಿ ಹಂಡ ಎತ್ತುಗಳಿಂದೊಗಬಹುದಾದ ಪರಿಣಾಮವನ್ನು ಸರ್ವಜ್ಞ ತನ್ನ ಅನುಭವದ ಮೂಸೆಯಲ್ಲಿ ಬಿಚ್ಚಿಟ್ಟಿದ್ದಾನೆ. ಬಿತ್ತುವ ದಿನ ಬಂದಾಗ ಎತ್ತುಗಳಿಗೆ ವಿಶೇಷವಾಗಿ ಹೊಟ್ಟು, ರಾಗಿಹುಲ್ಲು, ಇಂಡಿ ಬೂಸ ಮೊದಲಾದವುಗಳನ್ನು ಹಾಕಿ ತಯಾರು ಮಾಡುವರು. ಅದಕ್ಕೆ ಜನಪದರು ಹೀಗೆ ಹೇಳುವರು.

ಬಿತ್ತುವವ ದಿನ ಬಂತು ಎತ್ತು ತಯ್ಯಾರು ಮಾಡೋ
ಮುತ್ತಿನ ಕೂರಿಗಿ ಹದ ಮಾಡೊ ಎಲೆ ರೈತ
ಮುತ್ತೈದಿ ಅಕ್ಕಡಿಗೆ ಬರುತಾಳೆ[೬೬೫]

ಬಿತ್ತನೆಯ ದಿನಗಳಲ್ಲಿ ಎತ್ತು ಬಲಿಷ್ಠವಾಗಿರಬೇಕು. ಇಲ್ಲವಾದರೆ ಬಿತ್ತನೆಯ ನೆಲ ಸಾಗುವುದಿಲ್ಲ. ರೈತರು ಹದ ಬೆದೆಯರಿತು ಬಿತ್ತುವುದರಿಂದ ಎತ್ತುಗಳು ಹೊಲದಲ್ಲಿ ಸರಿಯಾಗಿ ಎಳೆಯಲಾರದೇ ಹೋದರೆ ಆ ಹದಬೆದೆಗಳು ಕಳೆದು ಹೋಗಿ ಬೆಳೆಯಲ್ಲಿ ವ್ಯತ್ಯಾಸ ಕಂಡುಬರುತ್ತವೆ. ಈ ಅಂಶಗಳನ್ನು ಮನಗಂಡ ರೈತರು ಬಿತ್ತನೆ ಸಂದರ್ಭದಲ್ಲಿ ಎತ್ತನ್ನು ತಯಾರು ಮಾಡುವುದು ಕಂಡುಬರುತ್ತದೆ. ಎತ್ತು ಮೊದಲಾದ ಪಶುಗಳಿಗೆ ಮೇಯಲು ಮೇವಿನ ಸಂಗ್ರಹಣೆಯನ್ನು ಮಾಡಲಾಗುತ್ತಿತ್ತು. ಶಾಸನಗಳು ಹುಲ್ಲಿನ ಬಣವೆ ಮತ್ತು ಹೊಟ್ಟುಗಳನ್ನು ಬಿಟ್ಟಂತೆ ತಿಳಿಸಿವೆ. ಈ ಹಿನ್ನೆಲೆಯಲ್ಲಿ ಬಣವೆಗಳಿಗೆ ತೆರಿಗೆ ವಿಧಿಸಿರುವುದು ಕಂಡುಬರುತ್ತದೆ. ಇದನ್ನು 'ಬಣವೆ' ಕುರಿತಾದ ಉಪಶೀರ್ಷಿಕೆಯಲ್ಲಿ ಚರ್ಚಿಸಲಾಗಿದೆ. ಕ್ರಿ.ಶ. ೧೩ನೆಯ ಶತಮಾನದ ಶಾಸನವು "ನಾಲ್ಕುಮಾರು ನೀಳದೆರಡು ಬಣವೆವೊಟ್ಟು" ಉಲ್ಲೇಖಿಸಿದೆ.[೬೬೬] ಇದನ್ನು ಆಗಲೇ ಉಲ್ಲೇಖಿಸಲಾಗಿದ್ದು, ಇಲ್ಲಿ ಸೂಚಿಸಲಾಗಿದೆ. ಅಲ್ಲದೆ ಕೃಷಿಗೆ ಎತ್ತುಗಳು ಬೆಳ್ಳಗಿದ್ದರೆ, ಸುಂದರವಾಗಿದ್ದರೆ ಸಾಲದು ಹೊಲದಲ್ಲಿ ಯಾವುದಕ್ಕೂ ಹಿಂಜರಿಯದೆ ಜಗ್ಗದೆ ಕೆಲಸ ಮಾಡುಬೇಕು. ಅದಕ್ಕೆ ಸರ್ವಜ್ಞ ಹೀಗೆ ಹೇಳಿರುವನು.

ಏಡೆತ್ತು ತಾ ಹೊಲ್ಲ ಮೇಡುಗದ್ದೆಯ ಹೊಲ್ಲ
ಮೀಟಾದ ಹೆಣ್ಣು ಸೊಸೆಯಾದಡಾ ಮನೆಗೆ
ಕೇಡು ಕಂಡಯ್ಯ ಸರ್ವಜ್ಞ[೬೬೭]

ಇದೇ ರೀತಿಯ ಇನ್ನೊಂದು ವಚನದಲ್ಲಿ ಸರ್ವಜ್ಞನು ಹೀಗೆ ತಿಳಿಸುತ್ತಾನೆ.

ಬೆಳ್ಳಿ ಎತ್ತುಗಳಾಗಿ ಹಳ್ಳಾದ ಹೊಲನಾಗಿ
ಕಳ್ಳಿಗಣ್ಣಿನ ಸೊಸೆಯಾದಡಾ ಮನೆಗೆ
ಕೊಳ್ಳಿ ತಂದಿಕ್ಕು ಸರ್ವಜ್ಞ[೬೬೮]

ಕೃಷಿಗೆ ಎತ್ತುಗಳ ಪ್ರಾಮುಖ್ಯತೆಯನ್ನು ಈ ತ್ರಿಪದಿಗಳು ತಿಳಿಸಿವೆ. ಕೃಷಿ ಭೂಮಿಯಲ್ಲಿ ಉಳುವ ಎತ್ತುಗಳು ನೋಡಲು ಅಂದವಾಗಿ ಬೆಳ್ಳಗಿದ್ದರೆ ಸಾಲದು, ಎಳೆಯಲಾರದೆ ಕಳ್ಳಾಟ ಆಡುವ ಎತ್ತುಗಳು ಕೃಷಿ ಜೀವನಕ್ಕೆ ನಿರರ್ತಕ. ಇವುಗಳಿಂದ ಕೇಡು ಕಟ್ಟಿಟ್ಟ ಬುತ್ತಿ ಎಂಬುದನ್ನು ಸರ್ವಜ್ಞ ಇಲ್ಲಿ ತಿಳಿಸಿರುವುದು ಕಂಡುಬರುತ್ತದೆ. ಹೀಗೆ ಪ್ರಾಚೀನ ಸಂದರ್ಭದಿಂದಲೂ ಕೃಷಿಗೆ ಬಳಕೆಯಾದ ಎತ್ತುಗಳು ಆಧುನಿಕ ತಂತ್ರಜ್ಞಾನದ ಸುಳಿಗೆ ಸಿಕ್ಕು ನಲುಗಿ ಕಣ್ಮರೆಯಾಗುತ್ತಿರುವುದು ಇಂದಿನ ದಿನಗಳಲ್ಲಿ ಕಂಡುಬರುತ್ತಿರುವ ವಿಷಾದದ ಸಂಗತಿಯಾಗಿದೆ.

**ಗುಳ**

ಇದೊಂದು ಕೃಷಿ ಉಪಕರಣವಾಗಿ ಕಂಡುಬರುತ್ತದೆ. ಇದನ್ನು ಕುಂಟೆ ನೇಗಿಲುಗಳಿಗೆ ಬಳಸಲಾಗುತ್ತದೆ. ಕ್ರಿ.ಶ. ೧೨೦೯ರ ಶಾಸನದಲ್ಲಿ 'ಕುಳಮಂ ಕಡಿದು ಬಿಟ್ಟ ಭೂಮಿ' ಎಂದಿದೆ.[೬೬೯] ಗುಳ ಅಥವಾ ಕುಳದ ಬಳಕೆಯ ಪ್ರಾಚೀನ ಕಾಲದಲ್ಲಿ ಭೂಮಿ ವಿಸ್ತರಣೆ ಮತ್ತು ಭೂಮಿಯ ಸಾಗುವಳಿಯನ್ನು ಸೂಚಿಸುತ್ತದೆ. ಈ ಕುಳವನ್ನು ಕಬ್ಬಿಣದಿಂದ ತಯಾರು ಮಾಡಲಾಗುತ್ತದೆ. ಕಬ್ಬಿಣದ ಕೃಷಿ ಉಪಕರಣಗಳು ಕಬ್ಬಿಣದ ಬಳಕೆಯಲ್ಲಾದ ಬಹುದೊಡ್ಡ ಕ್ರಾಂತಿ ಎನ್ನಲಾಗಿದೆ. ಇದರಿಂದ ಕೃಷಿ ವಿಸ್ತರಣೆಯಂತಹ ಚಟುವಟಿಕೆಗಳ ನಾಂದಿಗೆ ಕಾರಣವಾದವು.

**ಬಂಡಿಗಳು**

ಕೃಷಿ ಉಪಕರಣಗಳಲ್ಲಿ ಬಂಡಿಯ ಪಾತ್ರವು ಪ್ರಮುಖವಾದುದು. ಹಳೇ ಮೈಸೂರು ಪ್ರಾಂತದಲ್ಲಿ ಬಂಡಿಗೆ 'ಚಕ್ಕಡಿ ಅಥವಾ ಗಾಡಿ' ಎನ್ನುತ್ತಾರೆ.[೬೭೦] ಮಧ್ಯ ಕರ್ನಾಟಕದಲ್ಲೂ ಬಂಡಿಗೆ 'ಗಾಡಿ' ಎಂದು ಕರೆಯುವುದು ಕಂಡುಬರುತ್ತದೆ. ಬಂಡಿಯನ್ನು ಸಾಮಾನ್ಯವಾಗಿ ಸಾಗಾಣಿಕೆಗೆ ಬಳಸಲಾಗುತ್ತದೆ. ಇಂದಿನ ಬದಲಾದ ಆಧುನಿಕ ತಂತ್ರಜ್ಞಾನಗಳಿಂದಾಗಿ ಸಾಗಾಣಿಕೆಗಳಲ್ಲಿ ಬದಲಾವಣೆ ಕಂಡುಬರುತ್ತವೆ. ಪ್ರಾಚೀನ ಕಾಲದಲ್ಲಿ ಎತ್ತುಗಳನ್ನು ಬಳಸಿ ಗಾಡಿಯ ಮೂಲಕ ಸರಕುಗಳ ಸಾಗಾಣಿಕೆ ನಡೆಯುತ್ತಿತ್ತು. ಇಂದು ಟ್ರಾಕ್ಟರ್, ಲಾರಿ, ಲಗೇಜ್ ಆಟೋಗಳು ಈ ಕೆಲಸವನ್ನು ನಿರ್ವಹಿಸುತ್ತಿವೆ. ಈ ಕಾರಣದಿಂದಾಗಿ ಗ್ರಾಮೀಣ ಪರಿಸರದಲ್ಲಿ ಬಂಡಿ ಸಂಸ್ಕೃತಿ ಕಣ್ಮರೆಯಾಗುತ್ತಿದೆ. ಕ್ರಿ.ಪೂ. ೨೬೦೦–೧೮೦೦ರ ಕಾಲದ ಸಿಂಧೂ ನಾಗರಿಕತೆಯಲ್ಲಿ ಗಾಡಿಯನ್ನು ಎಳೆಯುವುದಕ್ಕಾಗಿ ಎತ್ತುಗಳನ್ನು ಬಳಸುತ್ತಿದ್ದರು.[೬೭೧] ಈ ಬಂಡಿಯನ್ನು ಮರ ಮತ್ತು ಕಬ್ಬಿಣದಿಂದ ತಯಾರು ಮಾಡಲಾಗುತ್ತದೆ. ಇದು ಎರಡು ಗಾಲಿಗಳಿಂದ ಕೂಡಿರುತ್ತದೆ. ಚಕ್ರಗಳು ಹೊರಗೆ ಹೊರಳದಂತೆ ಕೀಲು ಬಳಸಲಾಗುತ್ತದೆ. ಇದಕ್ಕೆ ಬಳಕೆಯಾಗುವ ಎಣ್ಣೆಗೆ 'ಕೀಲೆಣ್ಣೆ' ಎಂದು ಕರೆಯುತ್ತಾರೆ(ಕೀಲುಗಳೆಂದರೆ ಉದ್ದನೆಯ ಸ್ವಲ್ಪ ಬಾಗಿದ ಕಬ್ಬಿಣದ ಮೊಳೆಗಳು). ಮುಂದಿನ ಭಾಗವನ್ನು 'ಮೂಕು' ಎಂದು ಕರೆಯಲಾಗುತ್ತದೆ. ಆ ಮೂಕಿಗೆ ನೊಗ ಹಾಕಿ ಹಗ್ಗ ಬಿಗಿದು ಎತ್ತುಗಳನ್ನು ಹೂಡುವ ಮೂಲಕ ಸಾಗಾಟ ಮಾಡಲಾಗುತ್ತದೆ. ಪ್ರಾಚೀನ ಕಾಲದ ಜನರು ಗಾಡಿಯ ಚಕ್ರಗಳಿಗೆ ಮರ ಬಳಸಿ ಅದರ ಸುತ್ತ ಕಬ್ಬಿಣದ ಬಳೆಯೊಂದನ್ನು ಬಳಸುತ್ತಿದ್ದರು. ನಂತರ ಈ ಗಾಡಿಯ ಬಳಕೆ ಕಡಿಮೆಯಾಯಿತು. ಇದಕ್ಕೆ ಪ್ರಮುಖ ಕಾರಣವೆಂದರೆ ಈ ಗಾಡಿಯ ಚಕ್ರಗಳು ಕಲ್ಲು ಮೊದಲಾದ ದಿನ್ನೆಗಳಲ್ಲಿ ಪಲ್ಟಿ

ಹೊಡೆಯುತ್ತಿದ್ದವು. ಇದಕ್ಕೆ ಪರ್ಯಾಯವಾಗಿ ರೈತರು ಇತ್ತೀಚಿನ ಕೆಲವು ದಶಕಗಳಿಂದ ಗಾಡಿಗಳಿಗೆ ಟೈರುಗಳನ್ನು ಬಳಸಿದರು. ಇದರಿಂದ ಎತ್ತಿನಗಾಡಿಗೆ ಇಂದು 'ಟೈರುಗಾಡಿ ಎಂದು ಕರೆಯಲಾಗುತ್ತಿದೆ.

ಶಾಸನಗಳಲ್ಲಿ ಬಂಡಿಗೆ ಸಂಬಂಧಿಸಿದಂತೆ ಹೇಜೆನ ಸುಂಕಗಳನ್ನು ಉಲ್ಲೇಖಿಸುವಾಗ ಬಂಡಿಗೆ ತೆರಿಗೆ ವಿಧಿಸಿದ ಸಂದರ್ಭದಲ್ಲಿ ಬಂಡಿಗಳ ಉಲ್ಲೇಖ ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಕೃಷಿ ಸಲಕರಣೆಗಳನ್ನು, ಬೆಳೆದ ಪೈರು ಹುಲ್ಲುಗಳನ್ನು ಕಣಗಳಿಗೆ ಸಾಗಿಸುವ ಮೂಲಕ ಬಂಡಿಗಳು ಕೃಷಿಯಲ್ಲಿ ಪಾತ್ರ ನಿರ್ವಹಿಸುತ್ತಿದ್ದವು. ಇಂತಹ ವಸ್ತುಗಳ ಸಾಗಾಣಿಕೆಗೆ ಬಳಸುತ್ತಿದ್ದರಿಂದ ಬಂಡಿಗಳು ಯಾವಾಗಲು ಬಿಡುವಿಲ್ಲದೆ ಕಾರ್ಯನಿರ್ವಹಿಸುತ್ತಿದ್ದವು. ಜೊತೆಗೆ ಇಂತಹ ಸಾಗಾಣಿಕೆಯ ಬಂಡಿಗಳಲ್ಲಿ ಜನರು ಕುಂತು ಪ್ರಯಾಣಿಸುವಾಗ ಜನಪದರು 'ಬಂಡಿ ಬಂಡಾಟ ಕಾಲ್ನಡಿಗೆ ಪರಮಸುಖ' ಎಂದಿದ್ದಾರೆ. ಒಂದು ಕಡೆ ಸಾಗಾಟದಲ್ಲಿ ಬಿಡುವಿರದ ಸಂದರ್ಭ, ಇನ್ನೊಂದೆಡೆ ಬಂಡಿಯ ಪ್ರಯಾಣ ಮನುಷ್ಯರಿಗೆ ಸುಖದಾಯಕವಾಗಿರದುದು ಇದರಿಂದ ಕಂಡುಬರುತ್ತದೆ. ಇದಕ್ಕೆ ಪ್ರಾಚೀನಕಾಲದ ರಸ್ತೆಗಳು ಕಾರಣವಿರುವ ಸಾಧ್ಯತೆಗಳಿವೆ. ದಾರಿ ಡೊಂಕಾಗಿದ್ದಾಗ ಗಾಡಿಯು ಹೊಯ್ದಾಡುತ್ತಾ ಹೋಗುತ್ತಿತ್ತು. ಇದರಿಂದ ಗಾಡಿಯಲ್ಲಿ ಪ್ರಯಾಣಿಸುವ ಜನರಿಗೆ ಮೈಕೈನೋವು ಸಹಜವಾಗಿದ್ದ ಕಾರಣ ಈ ರೀತಿಯ ಮಾತುಗಳು ಪ್ರಚಲಿತದಲ್ಲಿದ್ದಂತೆ ಕಂಡುಬರುತ್ತದೆ. ಹೀಗೆ ಗಾಡಿಗಳು ಸರಕು ಸಾಗಣೆಗೆ ಹೆಚ್ಚು ಉಪಯೋಗ ಮತ್ತು ಸೂಕ್ತ ಎಂಬ ಮಾತುಗಳು ಇದರಿಂದ ಧ್ವನಿತವಾದಂತೆ ಕಂಡುಬಂದಿದೆ. ಹೊಯ್ಸಳರ ಕಾಲದಲ್ಲಿ ಬಂಡಿಗಳನ್ನು ಯುದ್ಧಕ್ಕೆ ಬಳಸುತ್ತಿದ್ದರು. ಗಾಡಿಗಳನ್ನು ಓಡಿಸುವವರಿಗೆ ಗಾಡಿಕಾರರು ಅಥವಾ ಬಂಡಿಕಾರರು ಎಂದು ಕರೆಯಲಾಗುತ್ತಿತ್ತು.[೬೨೨]

ಕ್ರಿ.ಶ. ೧೧೮೧ರ ಶಾಸನದಲ್ಲಿ ಬಂಡಿದಾರಿಯ ಉಲ್ಲೇಖವಿದೆ.[೬೨೩] ಬಂಡಿಗಳಿಗೆ ಪ್ರತ್ಯೇಕ ದಾರಿ ಇದ್ದುದು ಈ ಶಾಸನದಿಂದ ತಿಳಿಯುತ್ತದೆ. ಇಂದಿಗೂ ಬಂಡಿದಾರಿ, ಕಾಲುದಾರಿ ಎಂಬ ಸಾರಿಗೆ ಮಾರ್ಗಗಳು ಕಂಡುಬರುತ್ತವೆ. ಕಾಲುದಾರಿಗೆ 'ಕಾಲ್ಜಾಡು' ಎಂದು ಕರೆಯುವುದಿದೆ. ಈ ಕಾಲುದಾರಿಗಳಲ್ಲಿ ಮನುಷ್ಯರು, ದನಕರುಗಳು ಸಂಚರಿಸಲು ಬಳಸಲಾಗುತ್ತಿತ್ತು. ದನಕರುಗಳೆಂದು ಮಾತ್ರಕ್ಕೆ ಹೆಚ್ಚಿನ ಸಂಖ್ಯೆಯಲ್ಲ. ಒಂದು ಎರಡು ಹಿಡಿದುಕೊಂಡು ಹೋಗಲು ಸ್ಥಳಾವಕಾಶ ಇರುತ್ತದೆ. 'ಬಂಡಿದಾರಿಗೆ' 'ಬಂಡಿಜಾಡು' ಎಂದು ಕರೆಯುತ್ತಾರೆ. ಬಂಡಿಯಂತಹ ವಾಹನಗಳು ಸಾಗಾಟದ ವಸ್ತುಗಳನ್ನು ಸಾಗಿಸಲು ಬಳಸುವ ದಾರಿಯಿದು. ಈ ದಾರಿ ಹಿರಿದಾಗಿರುತ್ತದೆ. ಮತ್ತು ಈ ದಾರಿ ಸುತ್ತು ದಾರಿಯಾಗಿರುತ್ತದೆ. ಕಾಲ್ಜಾಡು ದಾರಿಯಂತೆ ನೇರ ದಾರಿಯಾಗಿರುವುದಿಲ್ಲ. ಕ್ರಿ.ಶ.೧೧೧೩ರ ಶಾಸನದಲ್ಲಿ ಬಂಡಿಯ ಉಲ್ಲೇಖವಿದೆ.[೬೨೪] ಕ್ರಿ.ಶ. ೧೮೪ರ ಶಾಸನದಲ್ಲಿ ಬಂಡಿಯ ಉಲ್ಲೇಖವಿದೆ.[೬೨೫] ಈ ಶಾಸನದಲ್ಲಿ ವ್ಯಾಪಾರಕ್ಕೆ ಬರುವವರು ಕತ್ತೆ, ಕೋಣ, ಬಂಡಿಗಳನ್ನು ಸಾಗಾಟಕ್ಕೆ ತರುತ್ತಿದ್ದರೆಂದು ತಿಳಿಸಿದೆ. ಕ್ರಿ.ಶ. ೧೪ನೆಯ ಶತಮಾನದ ಶಾಸನವು 'ಬಂಡಿಎತ್ತಂ ಕಳ್ಳರು ಕೊಂಡು ಹೋಹಲ್ಲಿ' ಎಂದಿದೆ.[೬೨೬] ಈ ಶಾಸನವು ಬಂಡಿಗೆ ಎತ್ತುಗಳನ್ನು ಬಳಸಿರುವುದರ ಬಗೆಗೆ ಸ್ಪಷ್ಟವಾಗಿ ತಿಳಿಸುತ್ತದೆ. ಬಂಡಿಯನ್ನು ಎತ್ತುಗಳಿಂದ ಎಳೆಸಿ ಸಾಗಾಟಕ್ಕೆ ಬಳಸಿರುವುದು ಶಾಸನಗಳಿಂದ ತಿಳಿಯುತ್ತದೆ. ಕೃಷಿ ಜೀವನಕ್ಕೆ ಅಗತ್ಯವಾಗಿರುವ ಬಂಡಿಯ ಬಗೆಗೆ ಸರ್ವಜ್ಞ ಹೀಗೆ ಹೇಳಿರುವನು.

ದಂಡಿಗೆಯಿಲ್ಲದರಸು ಕುಂಡವಿಲ್ಲದ ಹೋಮ
ಬಂಡಿಯಿಲ್ಲದನ ಆರಂಬ ತಲೆಹೋದ
ಮುಂಡದಂತಕ್ಕು ಸರ್ವಜ್ಞ[೬೨೭]

ಒಕ್ಕಲಿಗನ ಜೀವನಕ್ಕೆ ಬಂಡಿಯ ಅಗತ್ಯತೆಯನ್ನು ಈ ತ್ರಿಪದಿ ತಿಳಿಸಿದೆ. ಕೃಷಿಕನು ಉಳುಮೆಯ ಸಂದರ್ಭದಲ್ಲಿ ಒಂದೇ ಉಪಕರಣ ಬಳಸುವುದಿಲ್ಲ. ಅಲ್ಲದೆ ಪ್ರಾಚೀನ ಕೃಷಿಯಲ್ಲಿ ಏಕ

ಬೆಳೆಯನ್ನು ಬೆಳೆಯುತ್ತಿರಲಿಲ್ಲ. ಬಹುಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಇವುಗಳನ್ನು ಬಿತ್ತುವಾಗ ಉಪಕರಣಗಳನ್ನು ಬದಲಿಸುವ ಸಂದರ್ಭ ಎದುರಾಗುತ್ತಿತ್ತು. ಒಮ್ಮೆ ನೇಗಿಲು, ಮತ್ತೊಮ್ಮೆ ಕುಂಟೆ, ಕೂರಿಗೆ ಹೀಗೆ ಬದಲಿಸಲಾಗುತ್ತಿತ್ತು. ಈ ಉಪಕರಣಗಳೊಂದಿಗೆ ಬಿತ್ತನೆ ಬೀಜಗಳನ್ನು ಹೊಲಗಳಿಗೆ ಕೊಂಡೊಯ್ಯುವ ಅಗತ್ಯ ಎದುರಾಗುತ್ತಿತ್ತು. ಈ ಎಲ್ಲ ಸಾಮಾನು ಸರಂಜಾಮುಗಳನ್ನು ಕೊಂಡೊಯ್ಯಲು ಗಾಡಿಗಳನ್ನು ಬಳಸಲಾಗುತ್ತಿತ್ತು. ಈ ರೀತಿ ಬಿತ್ತನೆ ಸಮಯದಲ್ಲಿ ಒಂದು ಹಂತದಲ್ಲಿ ಬಂಡಿಯ ಉಪಯೋಗ ಆರಂಭದ ಬಿತ್ತನೆಯಲ್ಲಿ ಆಗುತ್ತಿತ್ತು. ಎರಡನೆಯ ಹಂತದಲ್ಲಿ ಪೈರು ಕಟಾವಿನ ಅವಧಿಯಲ್ಲಿ ಪೈರು, ಹುಲ್ಲು, ಹೊಟ್ಟು ಮೊದಲಾದವುಗಳನ್ನು ಕಣಗಳಿಗೆ ಒಂದೆಡೆಯಿಂದ ಮತ್ತೊಂದೆಡೆಗೆ ಕೊಂಡೊಯ್ಯಲು ಗಾಡಿಯನ್ನು ಬಳಸಲಾಗುತ್ತಿತ್ತು. ಈ ಕಾರಣಗಳಿಂದಾಗಿ ಬಂಡಿ ಕೃಷಿ ಜೀವನಕ್ಕೆ ಅನಿವಾರ್ಯವಾಗಿತ್ತು. ಬಂಡಿ ಇಲ್ಲದವನ ಕೃಷಿ ಶಿರವಿಲ್ಲದ ದೇಹವಾಗುತ್ತದೆ ಎಂಬ ಸರ್ವಜ್ಞನ ಮಾತು ಅರ್ಥಪೂರ್ಣವಾಗಿದೆ.

ಹೀಗೆ ಪ್ರಾಚೀನ ಕೃತಿಯಲ್ಲಿ ಕೃಷಿ ಉಪಕರಣಗಳು ಕಾರ್ಯನಿರ್ವಹಿಸಿವೆ. ಅವು ಕೃಷಿ ಬದುಕಿನ ಅವಿಭಾಜ್ಯ ಅಂಗಗಳಂತೆ ಕಂಡುಬರುತ್ತವೆ. ಆದರೆ ಇಂದಿನ ಬದಲಾದ ಆಧುನಿಕ ಸನ್ನಿವೇಶದಲ್ಲಿ ತಂತ್ರಜ್ಞಾನದ ಪ್ರಭಾವದಿಂದಾಗಿ ಉಪಕರಣಗಳ ಬಳಕೆ ಕಡಿಮೆಯಾಗುತ್ತಿವೆ. ಇನ್ನೂ ಕೆಲವು ಉಪಕರಣಗಳು ಸಂಪೂರ್ಣ ಕಣ್ಮರೆಯಾಗಿವೆ. ಇಂತಹ ಕೃಷಿ ಉಪಕರಣಗಳನ್ನು ಬಳಸಿ ಮಾನವನ ಶ್ರಮದ ದುಡಿಮೆಯಿಂದಾದ ಪ್ರಾಚೀನ ಕೃಷಿ ಇಂದಿನ ಕೃಷಿಯಂತೆ ಏಳುಬೀಳನ್ನು ಕಂಡಿರುವ ಪ್ರಮಾಣ ಕಡಿಮೆ. ಜೊತೆಗೆ ವೆಚ್ಚದಾಯಕವಾಗಿರಲಿಲ್ಲ. ಇದರಿಂದ ಕೃಷಿಯು ಬದುಕಿಗೆ ಹೊರೆಯಾಗಿರಲಿಲ್ಲ. ಕೃಷಿ ಉಪಕರಣ ಮತ್ತು ಮಾನವನ ಶ್ರಮದಲ್ಲಾದ ಇಂದಿನ ಬದಲಾವಣೆಗಳಿಂದಾಗಿ ಕೃಷಿ ಕ್ಷೇತ್ರ ಒಳಸಂಕಟಗಳಿಗೆ ಗುರಿಯಾಗಿರುವುದು ಕಂಡುಬರುತ್ತಿದೆ. ಇಂದಿನ ಆಧುನಿಕ ಕೃಷಿಯ ಸೋಲಿಗೆ ಇದೂ ಸಹ ಒಂದು ಪ್ರಬಲ ಕಾರಣವಾಗಿ ನಿಲ್ಲುತ್ತದೆ. ಇಂದಿನ ವೈಜ್ಞಾನಿಕ ಸಂಶೋಧನೆಯಲ್ಲಿ ಟ್ರಾಕ್ಟರ್‌ಗಳಂತಹ ತಂತ್ರಜ್ಞಾನವನ್ನು ಬಳಸುವುದರಿಂದ ಬೆಳೆ ಬೆಳೆಯುವ ಮೇಲ್ಪದರ ಹಾನಿಗೊಳಗಾಗುತ್ತಿದೆ ಎಂದು ದೃಢಪಟ್ಟಿದ್ದರು ಆಧುನಿಕ ಉಪಕರಣಗಳ ಆವಿಷ್ಕಾರ ಮತ್ತು ಬಳಕೆ ಮಾತ್ರ ನಿರಂತರವಾಗಿ ಆಗುತ್ತಲೇ ಇದೆ. ವೈಜ್ಞಾನಿಕ ಕೃಷಿಯ ಹೆಸರಿನಲ್ಲಿ ಕೃಷಿಯು ಇಂದು ಸೋಲನ್ನನುಭವಿಸುತ್ತಿದೆ. ಪುನಃ ದೇಶೀ ಉಪಕರಣಗಳನ್ನು ಬಳಸುವ ಮೂಲಕ ಸುಸ್ಥಿರ ಕೃಷಿಯನ್ನು ಬಲಪಡಿಸುವಲ್ಲಿ ಕೃಷಿಕರು ಕಾರ್ಯಪ್ರವೃತ್ತರಾಗುವ ಅಗತ್ಯತೆ ಇಂದಿನ ಕೃಷಿ ಬದುಕಿಗೆ ಅನಿವಾರ್ಯವನ್ನು ತಂದೊಡ್ಡಿದೆ. ವೈಜ್ಞಾನಿಕತೆಯ ಹೆಸರಿನಲ್ಲಿ ಬಳಸುತ್ತಿರುವ ಟ್ರಾಕ್ಟರ್‌ಗಳು ಹೇಗೆ ಬಿತ್ತನೆ ಮತ್ತು ಉಳುಮೆಗೆ ಮಾರಕ ಎಂಬುದರ ಅರಿವನ್ನು ರೈತ ಸಮುದಾಯಕ್ಕೆ ಮನವರಿಕೆ ಮಾಡಿಕೊಡಬೇಕು. ಭೂಮಿಯ ಫಲವತ್ತತೆ ಮೇಲ್ಪದರದಲ್ಲಿದ್ದು, ಟ್ರಾಕ್ಟರ್‌ಗಳು ಅರ್ಧ ಅಡಿಗೂ ಆಳಕ್ಕೆ ಭೂಮಿಯನ್ನು ಉಳುತ್ತವೆ. ಇದರಿಂದ ಫಲವತ್ತಾದ ಮೇಲ್ಪದರ ಕೆಳಗೆ ಮಗುಚಿಕೊಳ್ಳುವುದು. ಅಲ್ಲದೆ ಛಿದ್ರಗೊಳ್ಳುವುದು. ಇದರಿಂದಾಗಿ ಬೆಳೆ ಕುಂಟಿತವಾಗುತ್ತದೆ. ಇದರ ಅರಿವು ರೈತರಿಗೆ ಮನನವಾಗಬೇಕು. ಸಾಂಪ್ರದಾಯಿಕವಾಗಿ ಬಳಸುವ ನೇಗಿಲುಗಳು ನೆಲವನ್ನು ೪ ಇಂಚು ಉಳುತ್ತವೆ. ಭೂಮಿಯ ಫಲವತ್ತತೆಗೆ ಅನುಗುಣವಾಗಿಯೇ ಈ ನೇಗಿಲು ನಿರ್ಮಾಣ ಮತ್ತು ಉಳುಮೆ ಇರುತ್ತದೆ. ಅಷ್ಟು ಮಾತ್ರ ಭೂಮಿಯನ್ನು ಹಸನು ಮಾಡಲು ಸಹಕರಿಸುತ್ತದೆ. ಇಂದು ಬಿತ್ತನೆಗೂ ಸಹ ಟ್ರಾಕ್ಟರ್ ಬಳಸಲಾಗುತ್ತಿದೆ. ಇದರ ಪರಿಣಾಮದಿಂದಾಗಿ ಒಂದೆಡೆ ನೆಲ ಟ್ರಾಕ್ಟರ್ ಟೈರು ತುಳಿಕೆಯಿಂದಾಗಿ ಬಂಡೆಯಂತಾಗುತ್ತದೆ. ಆ ಜಾಗದಲ್ಲಿ ಹೇರಳವಾಗಿ ಹುಲ್ಲು ಬೆಳೆಯುತ್ತದೆ. ಇದರಿಂದ ರೈತರು ಕಳೆನಾಶಕಗಳ ಮೊರೆ ಹೋಗುತ್ತಿದ್ದಾರೆ. ಕಳೆನಾಶಕವನ್ನು ಒಡೆದ ಒಂದೆರಡು ವರ್ಷ ಹೊಲ ಬೆಳೆಯುತ್ತದೆ. ನಂತರ ನಿಧಾನವಾಗಿ ಭೂಮಿಯು ಭೂಮಿಯ ಸಾರಾಂಶ, ಸತ್ವ, ಎರೆಹುಳುಗಳು,

ಮಣ್ಣಿನ ಫಲವತ್ತತೆಗೆ ಕಾರಣವಾಗುವ ಸೂಕ್ಷ್ಮಜೀವಿಗಳು ಸಾವನ್ನಪ್ಪುತ್ತವೆ. ಇದರಿಂದ ಭೂಮಿ ಬರುಡಾಗುತ್ತದೆ. ಈ ಅಪಾಯಗಳನ್ನು ಆಧುನಿಕ ಉಪಕರಣ ಮತ್ತು ಔಷಧೋಪಚಾರಗಳು ತಂದೊಡ್ಡುತ್ತವೆ. ಇದರಿಂದ ದೂರ ಸರಿಯುವ ವಿವೇಕಯುತ ಪ್ರಜ್ಞೆ ರೈತರಲ್ಲಿ ಬರಬೇಕು. ಟ್ರಾಕ್ಟರ್ ಬದಲು ಎತ್ತುಗಳನ್ನು ಬಳಸಬೇಕು. ಅವು ಬರೀ ಪಶುಗಳಲ್ಲ ಕೃಷಿಕನನ್ನು ಅಭಿವೃದ್ಧಿಯ ಹಾದಿಗೆ ಕೊಂಡೊಯ್ಯುವ ಜೀವಧಾರೆಗಳು. ಜನಪದರು ಎತ್ತು ಇಲ್ಲದವನಿಗೆ ಎದೆಯಿಲ್ಲ' ಎನ್ನುತ್ತಿದ್ದರು. ಮನುಷ್ಯನ ಜೀವಕ್ಕೆ ಹೃದಯ ಎಷ್ಟು ಮುಖ್ಯವೋ ಕೃಷಿಗೆ ಎತ್ತುಗಳು ಹೃದಯವಿದ್ದಂತೆ.

ಸರ್ಕಾರಗಳು, ಬ್ಯಾಂಕುಗಳು ಟ್ರಾಕ್ಟರ್‌ನಂತ ಉಪಕರಣಗಳನ್ನು ಕೊಳ್ಳಲು ಸಾಲ ನೀಡುವ ಬದಲು ಎತ್ತುಗಳನ್ನು ಕೊಳ್ಳಲು ಸಾಲ ನೀಡಬೇಕು. ಇಂದಿನ ದುಬಾರಿಯುಗದಲ್ಲಿ ಎಷ್ಟೋ ರೈತರಿಗೆ ಎತ್ತುಗಳನ್ನು ಕೊಳ್ಳಲು ಶಕ್ತಿಯಿಲ್ಲದಂತಾಗಿದೆ. ಲೇವಾದೇವಿಗಾರರಿಂದ ಸಾಲಕೊಂಡು ಬಿತ್ತುವ ಮುನ್ನ ಸಣ್ಣ ಪುಟ್ಟ ಭೂ ಹಿಡುವಳಿದಾರರು ಎತ್ತುಕೊಳ್ಳುತ್ತಾರೆ. ಬಿತ್ತನೆ ಮುಗಿದ ನಂತರ ಎತ್ತುಗಳನ್ನು ಮಾರಿ ಬಡ್ಡಿ ಕಟ್ಟುವ ಸ್ಥಿತಿ ನಿರ್ಮಾಣಗೊಂಡಿದೆ. ಇಂತಹ ಸ್ಥಿತಿ ಇಂದಿಗೂ ಗ್ರಾಮೀಣ ಪರಿಸರದಲ್ಲಿ ಕಂಡುಬರುತ್ತಿದೆ. ಅಲ್ಲದೆ ಆಧುನಿಕ ಜೀವನ ಶೈಲಿಗೆ ಮಾರು ಹೋಗುತ್ತಿರುವ ರೈತರು ಎತ್ತುಗಳನ್ನು ನಿರ್ಲಕ್ಷಿಸುತ್ತಿರುವುದು ಇನ್ನೊಂದು ಮುಖ. ಇಂತಹ ಸ್ಥಿತಿ ಇನ್ನೂ ಗಂಭೀರವಾದರೆ ಎತ್ತುಗಳನ್ನು ಇತರ ಪ್ರಾಣಿಗಳಂತೆ ಜೂಗಳಲ್ಲಿ ನೋಡುವ ಸ್ಥಿತಿ ನಿರ್ಮಾಣವಾಗುವುದರಲ್ಲಿ ಸಂದೇಹವಿಲ್ಲ. ಇಂತಹ ಅಪಾಯವನ್ನು ತಪ್ಪಿಸುವ ಅಗತ್ಯ ಕೃಷಿಕರ ಮೇಲಿದೆ.

## ಅಡಿಟಿಪ್ಪಣಿಗಳು

೧. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೬.
೨. REV.F.Kittel, Dictionary, A. Kannada-English, p. 464 .
೩. REEVE V., Dictionary Kannada and English, p. 315.
೪. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಸಂ, ೨ ಪು. ೨೦೩.
೫. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗ: ಇತಿಹಾಸ ಅನ್ವೇಷಣೆ, ಪು. ೪.
೬. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೩೫.
೭. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗ: ಇತಿಹಾಸ ಅನ್ವೇಷಣೆ, ಪು. ೪.
೮. ಅದೇ, ಪು. ೫.
೯. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೩೭.
೧೦. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗ: ಇತಿಹಾಸ ಅನ್ವೇಷಣೆ, ಪು. ೭.
೧೧. ಇರ್ಫಾನ್ ಹಬೀಬ್, ಪೂರ್ವೇತಿಹಾಸ. ಪು. ೭೯.
೧೨. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗ: ಇತಿಹಾಸ ಅನ್ವೇಷಣೆ, ಪು. ಸಂ. ೭
೧೩. ಅದೇ, ಪು. ೭.
೧೪. ಅದೇ, ಪು. ೮.
೧೫. ಮನ್ವಾಚಾರ ಕಲವೀರ, ಮಾತೃದೇವತೆ; ಉಗಮ ಮತ್ತು ವಿಕಾಸ, ಪು. ೨೩.
೧೬. ವಿಲ್ ಡ್ಯುರಾಂಟ್, ನಮ್ಮ ಪ್ರಾಚ್ಯ ಪರಂಪರೆ,(ನಾಗರೀಕತೆಯ ಕಥೆ ೧), ಪು. ೮.
೧೭. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗ: ಇತಿಹಾಸ ಅನ್ವೇಷಣೆ, ಪು. ೭.
೧೮. ಅದೇ, ಪು. ೮.
೧೯. ಅದೇ, ಪು. ೮
೨೦. ಇರ್ಫಾನ್ ಹಬೀಬ್, ಪೂರ್ವೇತಿಹಾಸ. ಪು. ೮೩.
೨೧. ಅದೇ, ಪು. ೮೩.
೨೨. ಅದೇ, ಪು. ೮೩.
೨೩. ಅದೇ, ಪು. ೮೩.
೨೪. ಅದೇ, ಪು. ೮೩.
೨೫. ಅದೇ, ಪು. ೮೪.
೨೬. ಅದೇ, ಪು. ೮೪.
೨೭. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೪೨.
೨೮. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗ: ಇತಿಹಾಸ ಅನ್ವೇಷಣೆ, ಪು. ೯.
೨೯. ಅದೇ, ಪು. ೧೫.
೩೦. ಇರ್ಫಾನ್ ಹಬೀಬ್, ಪೂರ್ವೇತಿಹಾಸ, ಪು. ೯೩.
೩೧. ಇರ್ಫಾನ್ ಹಬೀಬ್, ಸಿಂಧೂ ಕಣಿವೆ ನಾಗರೀಕತೆ, ಪು. ೫೮.
೩೨. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗ: ಇತಿಹಾಸ ಅನ್ವೇಷಣೆ, ಪು. ೧೬.
೩೩. ಇರ್ಫಾನ್ ಹಬೀಬ್, ಸಿಂಧೂ ಕಣಿವೆ ನಾಗರೀಕತೆ, ಪು. ೫೮.
೩೪. ಅದೇ, ಪು. ೫೮.
೩೫. ಅದೇ, ಪು. ೫೯.

೩೬. ಅದೇ, ಪು. ೬೦.
೩೭. ಅದೇ, ಪು. ೬೧.
೩೮. ಇತಿಹಾಸ ದರ್ಪಣ, ಚರಿತ್ರಾಸಕ್ತ ಅಂಕಣ, ಪು. ೭೯.
೩೯. ಇರ್ಫಾನ್ ಹಬೀಬ್, ಪೂರ್ವೇತಿಹಾಸ, ಪು. ೯೬.
೪೦. ಅದೇ, ಪು. ೯೬.
೪೧. ಅದೇ, ಪು. ೯೬.
೪೨. ಅದೇ, ಪು. ೯೬.
೪೩. ಅದೇ, ಪು. ೯೯.
೪೪. ಅದೇ, ಪು. ೧೦೦.
೪೫. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೪೫.
೪೬. ಅದೇ, ಪು. ೫೬.
೪೭. ಅದೇ, ಪು. ೫೭.
೪೮. ಕೃಷ್ಣಮೋಹನ್ ಶ್ರೀಮಾಲಿ, ಕಬ್ಬಿಣಯುಗ ಮತ್ತು ಧಾರ್ಮಿಕ ಕ್ರಾಂತಿ, ಪು. ೨೧.
೪೯. ಇತಿಹಾಸ ದರ್ಪಣ, ಚರಿತ್ರಾಸಕ್ತ ಅಂಕಣ, ಪು. ೭೯.
೫೦. ಅದೇ, ಪು. ೭೯.
೫೧. ಅದೇ, ಪು. ೭೯.
೫೨. ವಿಲ್ ಡ್ಯುರಾಂಟ್, ನಮ್ಮ ಪ್ರಾಚ್ಯ ಪರಂಪರೆ,(ನಾಗರೀಕತೆಯ ಕಥೆ ೧), ಪು. ೮.
೫೩. ಅದೇ, ಪು. ೮.
೫೪. ಕೊಸಾಂಬಿ ಡಿ.ಡಿ., ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ, ಪು. ೫೬.
೫೫. ಅದೇ, ಪು. ೫೭.
೫೬. ಅದೇ, ಪು. ೫೬.
೫೭. ಬಾಷಮ್ ಎ.ಎಲ್., ಪ್ರಾಚೀನ ಭಾರತವೆಂಬ ಅದ್ಭುತ, ಪು. ೧೭.
೫೮. ರೊಮಿಲ ಥಾಪರ್, ಪ್ರಾಚೀನ ಭಾರತ, ಪು. ೧೩೧.
೫೯. ಅದೇ, ಪು. ೧೩೧.
೬೦. ಅದೇ, ಪು. ೧೩೧.
೬೧. ಅದೇ, ಪು. ೧೩೧.
೬೨. ಅದೇ, ಪು. ೧೩೧.
೬೩. ಇರ್ಫಾನ್ ಹಬೀಬ್, ವೈದಿಕ ಯುಗ, ಪು. ೫೬.
೬೪. ಮುಜುಂದಾರ್ ಆರ್.ಸಿ.,(ಪ್ರ.ಸಂ) ವೇದ ಯುಗ, ಸಂಪುಟ ೨, ಭಾಗ೨, ಪು. ೧೯೧.
೬೫. ಅದೇ, ಪು. ೨೮೬.
೬೬. ಅದೇ, ಪು. ೨೮೭.
೬೭. ಅದೇ, ಪು. ೨೮೭.
೬೮. ಅದೇ, ಪು. ೨೮೭.
೬೯. ಅದೇ, ಪು. ೨೮೭.
೭೦. ಅದೇ, ಪು. ೩೮೨.
೭೧. ಅದೇ, ಪು. ೩೮೨.
೭೨. ಅದೇ, ಪು. ೩೮೨.

೭೩. ಮುಜುಂದಾರ್ ಆರ್.ಸಿ., ರಾಯಚೌಧರಿ ಎಚ್.ಸಿ., ಕಾಲೀಕಿಂಕರದತ್ತ, ಭಾರತದ ಪ್ರೌಢ ಇತಿಹಾಸ, ಪು. ೧೧೨.

೭೪. ಅದೇ, ಪು. ೧೧೨.

೭೫. ಇರ್ಫಾನ್ ಹಬೀಬ್, ಮೌರ್ಯರ ಕಾಲದ ಭಾರತ, ಪು. ೧೨೪.

೭೬. ಅದೇ, ಪು. ೧೨೫.

೭೭. ಅದೇ, ಪು. ೧೨೬.

೭೮. ಅದೇ, ಪು. ೧೨೬.

೭೯. ಮೊಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೨೧.

೮೦. ಅಣ್ಣಿಗೇರಿ ಎ.ಎಂ., ಶೇಷಶಾಸ್ತ್ರಿ ಆರ್.,(ಸಂ) ಶಾಸನ ಸಂಗ್ರಹ, ಪು. ೧೬,೧೭.

೮೧. ಮೊಹನ್ ಕೃಷ್ಣರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೨೧.

೮೨. EC. Vol. IX, ಬೇಲೂರು ೨೨೫.

೮೩. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೭೭.

೮೪. EC(ರೈ.ಸಂ). Vol. V, ಹಾಸನ ೧೧೬.

೮೫. EC. Vol. IX, ಬೇಲೂರು ೨೪೦.

೮೬. ಮೊಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೨೨.

೮೭. EC. Vol. IX, ಬೇಲೂರು ೪೧೦.

೮೮. ಅದೇ, ೪೩೮.

೮೯. ಮೊಹನ್ ಕೃಷ್ಣರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೨೧.

೯೦. ಕ.ವಿ.ಹಂ.ಶಾ.ಸಂ.೧, ಹಗರಿಬೊಮ್ಮನಹಳ್ಳಿ ೧೭.

೯೧. ಇರ್ಫಾನ್ ಹಬೀಬ್, ವಿವೇಕಾನಂದ ಝಾ.,(ಅನು) ನಗರಗೆರೆ ರಮೇಶ್, ಮೌರ್ಯರ ಕಾಲದ ಭಾರತ, ಪು. ೩೯.

೯೨. ಅದೇ, ಪು. ೪೦.

೯೩. ಅದೇ, ಪು. ೪೦.

೯೪. ಅದೇ, ಪು. ೪೦.

೯೫. ನಂಜುಂಡಸ್ವಾಮಿ ಎ.ಎಸ್., ಕದಂಬ-ಗಂಗರ ಇತಿಹಾಸ, ಪು. ೪೫.

೯೬. ಅದೇ, ಪು. ೪೦.

೯೭. ಅದೇ, ಪು. ೪೬.

೯೮. EC. Vol .XVI, ತುಮಕೂರು ೯೪ ಮತ್ತು ೯೯.

೯೯. ಅದೇ, ೭೪.

೧೦೦. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೫.

೧೦೧. ನಂಜುಂಡಸ್ವಾಮಿ ಎ.ಎಸ್., ರಾಷ್ಟ್ರಕೂಟರ ಇತಿಹಾಸ, ಪು. ೭೭.

೧೦೨. ಬಸವರಾಜ ನೆಲ್ಲಿಸರ, ಶಿವಕುಮಾರಸ್ವಾಮಿ ಸಿ.ಎಸ್., ಜನಪದ ಸಾಹಿತ್ಯ, ಪು. ೧೩೦.

೧೦೩. ಸುಮಂಗಲಾ ಅತ್ತಿಗೇರಿ, ಕೃಷಿ ಜಾನಪದ ಮತ್ತು ಮಹಿಳೆ, ಪು. ೧೦೬.

೧೦೪. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೦೪.

೧೦೫. ಅದೇ, ಪು. ೪೦೪.

೧೦೬. Appadorai A., Economic Condition in South India, I, P. 187.
೧೦೭. EC. Vol. XII, ಕಡೂರು ೨೩೯.
೧೦೮. ಕರ್ನಾಟಕದ ಪರಂಪರೆ–೧, ಪು. ೬೩.
೧೦೯. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಕರ್ನಾಟಕದ ಪರಂಪರೆ–೧, ಪು. ೨೭೩.
೧೧೦. ಅದೇ, ಪು. ೨೪೬.
೧೧೧. EC. Vol. III, ಗುಂಡ್ಲುಪೇಟೆ ೧೮೭.
೧೧೨. ಅದೇ, X, ಕೃಷ್ಣರಾಜನಗರ ೪೯.
೧೧೩. ಕ.ವಿ.ಹಂ.ಶಾ.ಸಂ.೯, ಹುನಗುಂದ ೯೫.
೧೧೪. S11. Vol. IX, Part-1, ೬೦.
೧೧೫. ಅದೇ, XV, ೪೯೨.
೧೧೬. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ, ೭೩.
೧೧೭. ಅದೇ, ೯, ಬಾಗಲಕೋಟೆ ೫೭.
೧೧೮. ಅದೇ, ಹುನಗುಂದ ೧೨೯.
೧೧೯. S11. Vol. IX, Part-1, ೨೦೦.
೧೨೦. ಅದೇ, ೨೨೪.
೧೨೧. ಅದೇ, ೨೨೫.
೧೨೨. ಅದೇ, ೨೩೫.
೧೨೩. ಅದೇ, ೨೬೪.
೧೨೪. ಅದೇ, ೨೯೬.
೧೨೫. ಅದೇ, ೨೯೭.
೧೨೬. ಅದೇ, ೩೨೯.
೧೨೭. EC. Vol. XI, ಚಿಕ್ಕಮಗಳೂರು ೨೦೬.
೧೨೮. ಅದೇ, ಮೂಡಗೆರೆ ೨೫.
೧೨೯. ಅದೇ, ಚಿಕ್ಕಮಗಳೂರು ೧.
೧೩೦. ಅದೇ, ಮೂಡಗೆರೆ ೮೮.
೧೩೧. ಅದೇ, ೯೦.
೧೩೨. ಅದೇ, ೮೭.
೧೩೩. ಅದೇ, ೮೬.
೧೩೪. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೨.
೧೩೫. ಅದೇ, ೨೯.
೧೩೬. ಅದೇ, ೬೯.
೧೩೭. ಅದೇ, ಸಿಂದಗಿ ೭೯.
೧೩೮. ಅದೇ, ಮುದ್ದೆಬಿಹಾಳ ೫೪.
೧೩೯. EC. Vol. XII, ಕಡೂರು ೧.

೧೪೦. ಅದೇ, ೩೮.
೧೪೧. ಅದೇ, ೭೫.
೧೪೨. ಅದೇ, ೭೪.
೧೪೩. ಅದೇ, ೧೦೧.
೧೪೪. ಅದೇ, ೧೩೪.
೧೪೫. ಅದೇ, ೧೮೮.
೧೪೬. ಅದೇ, ೨೩೭.
೧೪೭. ಅದೇ, ತರೀಕೆರೆ ೭೮.
೧೪೮. ಅದೇ, ೮೦.
೧೪೯. ಅದೇ, ೯೩.
೧೫೦. EC. Vol. XIII, ಪ್ರಸ್ತಾವನೆ, Xii.
೧೫೧. ಅದೇ, ಪ್ರಸ್ತಾವನೆ, Xii.
೧೫೨. EC. Vol. XIII, ಶಿವಮೊಗ್ಗ ೧೮.
೧೫೩. ಅದೇ, ಶಿವಮೊಗ್ಗ ೭೪.
೧೫೪. ಅದೇ, ೧೦೪.
೧೫೫. ಕ.ವಿ.ಹಂ.ಶಾ.ಸಂ.೧, ಸಿರಗುಪ್ಪ ೧೮.
೧೫೬. ಅದೇ, ೨೨.
೧೫೭. ಅದೇ, ೪೧.
೧೫೮. ಅದೇ, ಕೂಡ್ಲಿಗಿ ೩.
೧೫೯. ಅದೇ, ೧೭.
೧೬೦. ಅದೇ, ಹಗರಿಬೊಮ್ಮನಹಳ್ಳಿ ೭.
೧೬೧. ಅದೇ, ೧೭.
೧೬೨. ಅದೇ, ೨೧.
೧೬೩. ಅದೇ, ೨೪.
೧೬೪. ಅದೇ, ೨೫.
೧೬೫. ಅದೇ, ೩೦.
೧೬೬. ಅದೇ, ಹೂವಿನಹಡಗಲಿ ೧.
೧೬೭. ಅದೇ, ೬೭.
೧೬೮. ಅದೇ, ಹರಪನಹಳ್ಳಿ ೭೫.
೧೬೯. ಅದೇ, ೯೩.
೧೭೦. ಅದೇ, ೯೫.
೧೭೧. ಅದೇ, ೧೦೫.
೧೭೨. ಅದೇ, ೯೫.
೧೭೩. ಅದೇ, ೧೨೯.
೧೭೪. ಅದೇ, ೧೩೫.
೧೭೫. ಅದೇ, ಕೂಡ್ಲಿಗಿ ೨೮.

೧೭೬. EC. Vol. VIII, ಅರಕಲಗೂಡು ೧೫೭.
೧೭೭. ಅದೇ, ಹಾಸನ ೧೦೨.
೧೭೮. ಅದೇ, ೧೫೫.
೧೭೯. ಅದೇ, ಆಲೂರು ೨೩.
೧೮೦. ಕ.ವಿ.ಹಂ.ಶಾ.ಸಂ.೭, ರಾಯಚೂರು ೧.
೧೮೧. ಅದೇ, ೫೫.
೧೮೨. ಅದೇ, ದೇವದುರ್ಗ ೬.
೧೮೩. ಅದೇ, ೧೮.
೧೮೪. ಅದೇ, ೨೭.
೧೮೫. ಅದೇ, ಲಿಂಗಸುಗೂರು ೨೪.
೧೮೬. ಅದೇ, ಮಾನ್ವಿ ೮೦.
೧೮೭. ಅದೇ, ೧೦೮.
೧೮೮. ಅದೇ, ೧೧೬.
೧೮೯. ಅದೇ, ಸಿಂಧನೂರು ೬.
೧೯೦. ಅದೇ, ೧೬.
೧೯೧. ಅದೇ, ೨೦.
೧೯೨. EC. Vol. XXIV, ತುಮಕೂರು ೬೧.
೧೯೩. ಅದೇ, ಚಿಕ್ಕನಾಯಕನಹಳ್ಳಿ ೬೬.
೧೯೪. ಅದೇ, ೨೪.
೧೯೫. EC(ರೈ.ಸಂ). Vol. XI, ಚಿತದುರ್ಗ ೨೩.
೧೯೬. ಅದೇ, ಹೊಳಲಕೆರೆ ೩೪.
೧೯೭. ಅದೇ, ೫೬.
೧೯೮. EC. Vol. X, ಅರಸೀಕೆರೆ ೪೭.
೧೯೯. ಅದೇ, ೫೯.
೨೦೦. ಅದೇ, ೧೭೦.
೨೦೧. ಅದೇ, ೧೨೮.
೨೦೨. ಅದೇ, ೧೨೯.
೨೦೩. ಅದೇ, ೧೪೦.
೨೦೪. ಅದೇ, ೧೬೧.
೨೦೫. ಅದೇ, ೧೭೯.
೨೦೬. ಅದೇ, ೨೪೧.
೨೦೭. ಅದೇ, ೨೪೯.
೨೦೮. ಅದೇ, ೨೯೧.
೨೦೯. ಅದೇ, ೩೧೯.
೨೧೦. ಅದೇ, ೩೨೫.
೨೧೧. EC. Vol. VI, ಕೃಷ್ಣರಾಜಪೇಟೆ ೬೬.

೨೧೨. ಕ.ವಿ.ಹಂ.ಶಾ.ಸಂ.೨, ಯಲಬುರ್ಗ ೭.
೨೧೩. ಅದೇ, ೩೯.
೨೧೪. ಅದೇ, ೭೦.
೨೧೫. ಅದೇ, ಕುಷ್ಟಗಿ ೩.
೨೧೬. ಅದೇ, ೪.
೨೧೭. S11. Vol. XV, ೧೯೬.
೨೧೮. S11. Vol. XI, BKI, Vol. 1, PART 11, ೧೬೫.
೨೧೯. ಅದೇ, ೧೫೫.
೨೨೦. ಕ.ವಿ.ಹಂ.ಶಾ.ಸಂ.೮, ಹುಮನಾಬಾದ್ ೧೭.
೨೨೧. EC(ರೈ.ಸಂ). Vol. VII, ಶಿಕಾರಿಪುರ ೯೭.
೨೨೨. ಅದೇ, Vol. XI, ದಾವಣಗೆರೆ ೬೧.
೨೨೩. ಅದೇ, ೮೭.
೨೨೪. EC. Vol. IX, ಬೇಲೂರು ೨೪೪.
೨೨೫. S11. Vol. VII, ೩೭೬.
೨೨೬. Ramesh K.V., A History of South Canare, P. 276.
೨೨೭. K .I. ಸಂ. III, ಭಾಗ I, ೭.
೨೨೮. ಅದೇ, ನಂ. ೯೬.
೨೨೯. ಅದೇ, ನಂ. ೨.
೨೩೦. ಅದೇ, ನಂ. ೭.
೨೩೧. ಅದೇ, ನಂ. ೯೬.
೨೩೨. ಅದೇ. ನಂ. ೯೬.
೨೩೩. K. I. ಸಂ. I, ಭಾಗ I ಅನುಬಂಧ II, ೪.
೨೩೪. ಅದೇ, ೪.
೨೩೫. K.I. ಸಂ. I, ೫೫, K.I. ಸಂ. III, ಭಾಗ ೧, ೧೬.
೨೩೬. ಅದೇ, III, ಭಾಗ I, ೧೧.
೨೩೭. ಅದೇ, ೧೧.
೨೩೮. ಅದೇ, I, ಭಾಗ I, ೫೩.
೨೩೯. ಅದೇ, III, ಭಾಗ I, ೭.
೨೪೦. ಅದೇ, ೫೩.
೨೪೧. ಅದೇ, ೫೫.
೨೪೨. ಅದೇ, ೫೩.
೨೪೩. ಅದೇ, ೭.
೨೪೪. ಅದೇ, ೯, K.I. ಸಂ. IV, ೭೦.
೨೪೫. ಅದೇ, VI, ಭಾಗ I, ೭೦.

೨೪೬. ಅದೇ, I, ಭಾಗ I, ೫೩.

೨೪೭. ಅದೇ, VI, ೬೧.

೨೪೮. ಅದೇ, III, ಭಾಗ I, ೫೫.

೨೪೯. ಅದೇ, ನಂ. ೫೫.

೨೫೦. ಅದೇ, III, ಭಾಗ I, ೧೧.

೨೫೧. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೨೨.

೨೫೨. ಅದೇ, ಪು. ೨೨.

೨೫೩. ಅದೇ, ಪು. ೨೧.

೨೫೪. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೮೮.

೨೫೫. Neelakanta Shartri K.A., The cholas, P. 584.

೨೫೬. ಅಣ್ಣಿಗೇರಿ ಎಂ.ಎಂ., ಶೇಷಶಾಸ್ತ್ರಿ ಆರ್.,(ಸಂ) ಶಾಸನ ಸಂಗ್ರಹ, ಪು. ೧೬-೧೭.

೨೫೭. ಮೋಹನ್‌ಕೃಷ್ಣ ರೈ.ಕೆ., ಪ್ರಭುತ್ವ ಮತ್ತು ಜನತೆ, ಪು. ೨೧.

೨೫೮. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೦೪.

೨೫೯. EC. Vol. IX, ಬೇಲೂರು ೪೧೦.

೨೬೦. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೦೪.

೨೬೧. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೭.

೨೬೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೦೪.

೨೬೩. ಮಲ್ಲಣ್ಣ ಶಂಕರಣ್ಣ ನಾಗರಾಳ, ಒಳಬೇಸಾಯ ಪದ್ಧತಿಗಳು, ಪು. ೩.

೨೬೪. ಶರ್ಮಾ ಆರ್.ಎಸ್., ಪ್ರಾಚೀನ ಭಾರತ,(ಕನ್ನಡಕ್ಕೆ ಅನು) ಶಂಕರನಾರಾಯಣ್ ಎನ್.ಪಿ., ಪು. ೧೪೨.

೨೬೫. ಅದೇ, ಪು. ೧೭೦.

೨೬೬. ನಾಗರಾಜು ಡಿ.ಎಂ., ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೫೮.

೨೬೭. ಅದೇ, ಪು. ೫೮.

೨೬೮. ರಾಮಯ್ಯಂಗಾರ್, ಭಾರತ ಹಿಂದೆ ಇಂದು ಮುಂದೆ, ಪು. ೩೬.

೨೬೯. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೬.

೨೭೦. ರಾಗೌ,(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು, ಪು. ೧೯೭.

೨೭೧. ಕೋಸಾಂಬಿ, ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ ಚಾರಿತ್ರಿಕ ರೂಪುರೇಷೆ, ಪು. ೭೯.

೨೭೨. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧.

೨೭೩. ಅದೇ, ಪು. ೨.

೨೭೪. MAR. 1932, p. 240.

೨೭೫. ಕ.ವಿ.ಹಂ.ಶಾ.ಸಂ.೯, ಹುನಗುಂದ ೩೪.

೨೭೬. ಅದೇ, ೯೫.

೨೭೭. ಅದೇ, ಬದಾಮಿ ೧೨.
೨೭೮. ಅದೇ, ಹುನುಗುಂದ ೯೫.
೨೭೯. ಇತಿಹಾಸ ದರ್ಶನ, ೨೦೧೭, ಪು. ೬೫-೬೬.
೨೮೦. MAR. 1936, p.73.
೨೮೧. EC. Vol. X, ಅರಸೀಕೆರೆ ೯೬.
೨೮೨. ಅದೇ, ೯೭.
೨೮೩. ಅದೇ, ೯೭.
೨೮೪. ಅದೇ, ೧೪೦.
೨೮೫. ಅದೇ, ೧೭೪.
೨೮೬. ಅದೇ, ೧೭೬.
೨೮೭. ಷೇಕ್‌ಅಲಿ, ಕರ್ನಾಟಕ ಚರಿತ್ರೆ ಸಂಪುಟ, ಭಾಗ ೧, ಪು. ೩೯೧.
೨೮೮. EC. Vol. X, ಅರಸೀಕೆರೆ ೩೨೫.
೨೮೯. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೨.
೨೯೦. ಈರಯ್ಯ ಕಿಲ್ಲೇದಾರ, ಸಾಂಪ್ರದಾಯಿಕ ಒಕ್ಕಲುತನ, ಪು. ೪.
೨೯೧. ರಾಗೌ,(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು, ಪು. ೧೯೭.
೨೯೨. ಸುಮಂಗಲ ಅತ್ತಿಗೇರಿ, ಕೃಷಿ ಜಾನಪದ ಮತ್ತು ಮಹಿಳೆ, ಪು. ೧೧೧.
೨೯೩. ಅದೇ, ಪು. ೧೦೮.
೨೯೪. ಕ.ವಿ.ಹಂ.ಶಾ.ಸಂ.೭, ಲಿಂಗಸೂಗೂರು ೧೩.
೨೯೫. ಅದೇ, ೩೧.
೨೯೬. EC. Vol.VIII, ಅರಕಲಗೂಡು ೧೩೨.
೨೯೭. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ, ಇತಿಹಾಸ ಅನ್ವೇಷಣೆ, ಪು. ೧೯.
೨೯೮. ಅದೇ, ಪು. ೨೦.
೨೯೯. IA. XIX, p.144.
೩೦೦. EC. Vol. X, ಗುಂಡ್ಲುಪೇಟೆ ೧೮೦.
೩೦೧. ಅದೇ, ೧೯೦.
೩೦೨. EC. Vol. III, ನಂಜನಗೂಡು ೨೧೫.
೩೦೩. ಅದೇ, ಹೆಗ್ಗಡದೇವನಕೋಟೆ ೩೨.
೩೦೪. ಅದೇ, ೬೩.
೩೦೫. ಕ.ವಿ.ಹಂ.ಶಾ.ಸಂ,೧, ಸಿರಗುಪ್ಪ ೫೫.
೩೦೬. ಅದೇ, ಹಗರಿಬೊಮ್ಮನಹಳ್ಳಿ ೧೭.
೩೦೭. ಅದೇ, ಹೂವಿನಹಡಗಲಿ ೧೦೩.
೩೦೮. ಅದೇ, ಹರಪನಹಳ್ಳಿ ೧೩೦.
೩೦೯. ಅದೇ, ೧೦, ಬಿಜಾಪುರ ೭೯.
೩೧೦. ಸುಮಂಗಲಾ ಅತ್ತಿಗೇರಿ, ಕೃಷಿ ಜಾನಪದ ಮತ್ತು ಮಹಿಳೆ, ಪು. ೯೧.
೩೧೧. ಅದೇ, ಪು. ೧೦೮.
೩೧೨. ಅದೇ, ಪು. ೧೦೭.

೩೧೩. EC.Vol. XII, ಕಡೂರು ೧೯೯.
೩೧೪. ಅದೇ, XI, ಚಿಕ್ಕಮಗಳೂರು ೯೪ ಮತ್ತು ೯೬ ಶೃಂಗೇರಿ ೩.
೩೧೫. ಅದೇ, ಚಿಕ್ಕಮಗಳೂರು ೪೯.
೩೧೬. SII.Vol. XV, ೭೩.
೩೧೭. EC.Vol. XII, ಚಿಕ್ಕಮಗಳೂರು ೧೪೮.
೩೧೮. ಅದೇ, IX, ಬೇಲೂರು ೨೨೫.
೩೧೯. ಅದೇ, ೨೩೪.
೩೨೦. ಕರ್ನಾಟಕ ಪರಂಪರೆ ೧, ಪು. ೨೧೫.
೩೨೧. SII. IX, ೬೧.
೩೨೨. MAR. 1936, p.73.
೩೨೩. ಕ.ವಿ.ಹಂ.ಶಾ.ಸಂ.೯, ಬಾಗಲಕೋಟೆ ೪೧.
೩೨೪. ಅದೇ, ಹರಪನಹಳ್ಳಿ ೫.
೩೨೫. EC. Vol.V, ಟಿ.ನರಸೀಪುರ ೩೨೦.
೩೨೬. SII. Vol. XI, ೪೭.
೩೨೭. ಕ.ವಿ.ಹಂ.ಶಾ.ಸಂ.೯, ಬೀಳಗಿ ೧.
೩೨೮. ಅದೇ, ೬.
೩೨೯. ಅದೇ, ಬದಾಮಿ ೬.
೩೩೦. ಅದೇ, ೩೮೩.
೩೩೧. ಅದೇ, ಹುನಗುಂದ ೧೦೩.
೩೩೨. ಅದೇ, ೧೦೪.
೩೩೩. ಅದೇ, ೧೦೮.
೩೩೪. EC. Vol. X, ಅರಸೀಕೆರೆ ೧೬.
೩೩೫. ಅದೇ, ೨೩.
೩೩೬. ಅದೇ, ೩೩.
೩೩೭. ಅದೇ, ೪೪.
೩೩೮. ಘನಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೧೮೯.
೩೩೯. ಅದೇ, ಪು. ೧೮೯.
೩೪೦. ಅದೇ, ಪು. ೧೯೦.
೩೪೧. ಅದೇ, ಪು. ೧೯೦.
೩೪೨. ಕಲಬುರ್ಗಿ ಎಂ.ಎಂ., ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ.೧, ಪು. ೩೩೬.
೩೪೩. EC. Vol. X, ಅರಸೀಕೆರೆ ೫೭.
೩೪೪. ಅದೇ, ೮೫.
೩೪೫. ಅದೇ, ೧೦೬.
೩೪೬. ಅದೇ, ೧೨೧.
೩೪೭. ಅದೇ, ೧೨೮.

೩೪೮. ಅದೇ, ೧೩೯.
೩೪೯. ಅದೇ, ೧೫೨.
೩೫೦. ಅದೇ, ೧೫೭.
೩೫೧. ಅದೇ, ೧೬೧.
೩೫೨. ಅದೇ, ೧೭೮.
೩೫೩. ಅದೇ, ೧೮೪.
೩೫೪. ಅದೇ, ೨೪೮.
೩೫೫. ಅದೇ, ೨೮೩.
೩೫೬. ಅದೇ, ೩೧೧.
೩೫೭. ಅದೇ, ೩೧೭.
೩೫೮. ಅದೇ, ಚನ್ನರಾಯಪಟ್ಟಣ ೧೧೨.
೩೫೯. ಅದೇ, ೧೩೪.
೩೬೦. ಅದೇ, ಅರಕಲುಗೂಡು ೪೬.
೩೬೧. EC. Vol.VIII, ಹಾಸನ ೩೫.
೩೬೨. ಅದೇ, ಆಲೂರು ೨೩.
೩೬೩. ಕ.ವಿ.ಹಂ.ಶಾ.ಸಂ.೧, ಹಗರಿಬೊಮ್ಮನಹಳ್ಳಿ, ೨.
೩೬೪. ಅದೇ, ಹರಪನಹಳ್ಳಿ ೧.
೩೬೫. EC. Vol.VI, ಕೃರಾಜಪೇಟೆ ೬೬.
೩೬೬. ಅದೇ, IX, ಬೇಲೂರು ೨೨೨.
೩೬೭. ಅದೇ, ೪೧೦.
೩೬೮. ರಾಗೌ,(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು, ಪು. ೧೪೪.
೩೬೯. ಅದೇ, ಪು. ೧೪೬.
೩೭೦. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೪೦.
೩೭೧. ಅದೇ, ಪು. ೨೩.
೩೭೨. ಅದೇ, ಪು. ೧೮.
೩೭೩. ಅದೇ ಪು. ೨೦.
೩೭೪. EC. Vol. IX, ಬೇಲೂರು ೧೭೫.
೩೭೫. ಅದೇ, ೪೫೯.
೩೭೬. ಅದೇ, ೪೮೪.
೩೭೭. ಅದೇ, XV, ಸಾಗರ ೩.
೩೭೮. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೫.
೩೭೯. ಬಸವರಾಜ ಕುಂಚೂರು, ನಮ್ಮೂರ ಕೆರೆಗಳು, ಪು. ೧೧.
೩೮೦. ಅದೇ, ಪು. ೧೧.
೩೮೧. ವಾಸುದೇನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೬.
೩೮೨. ಅದೇ, ಪು. ೬.

೩೮೩. ಅದೇ, ಪು. ೬.

೩೮೪. ಅದೇ, ಪು. ೭.

೩೮೫. ಅದೇ, ಪು. ೭

೩೮೬. ಅದೇ, ಪು. ೭.

೩೮೭. ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ, ಸಂಪುಟ ೨, ವೇದಯುಗ, ಭಾಗ ೨, ಪು. ೨೮೭.

೩೮೮. ವೀರೇಶ ಬಡಿಗೇರ, ಜಲಶಾಸ್ತ್ರದ ಹಸ್ತಪ್ರತಿಗಳು ಮತ್ತು ದೇಸಿ ವಿವೇಕ, ಪು. ೩.

೩೮೯. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ, ಇತಿಹಾಸ ಅನ್ವೇಷಣೆ, ಪು. ೨೦.

೩೯೦. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೧೧.

೩೯೧. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೨೫.

೩೯೨. ದೀಕ್ಷಿತ್ ಜಿ.ಆರ್., ಕುಪ್ಪಸ್ವಾಮಿ, ಮೋಹನ್ ಎಸ್.ಕೆ., ಕರ್ನಾಟಕದಲ್ಲಿ ಕೆರೆ ನೀರಾವರಿ,(ಅನು) ನೀಲತ್ತಹಳ್ಳಿ ಕಸ್ತೂರಿ, ಪು. ೮.

೩೯೩. ಅದೇ, ಪು. ೮.

೩೯೪. ಅದೇ, ಪು. ೯.

೩೯೫. ಅದೇ, ೯.

೩೯೬. ಅದೇ, ಪು. ೯.

೩೯೭. ಅದೇ, ಪು. ೯.

೩೯೮. ಅದೇ, ಪು. ೯.

೩೯೯. ದೀಕ್ಷಿತ್ ಜಿ.ಆರ್., ಕುಪ್ಪಸ್ವಾಮಿ, ಮೋಹನ್ ಎಸ್.ಕೆ., ಕರ್ನಾಟಕದಲ್ಲಿ ಕೆರೆ ನೀರಾವರಿ,(ಅನು) ನೀಲತ್ತಹಳ್ಳಿ ಕಸ್ತೂರಿ, ಪು. ೨೭

೪೦೦. ಅದೇ, ಪು. ೨೭.

೪೦೧. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೧೨.

೪೦೨. ಅದೇ, ಪು. ೧೨.

೪೦೩. ರಾಜಶೇಖರಪ್ಪ ಬಿ., ದುರ್ಗಶೋಧನ, ಪು. ೨.

೪೦೪. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೧೨.

೪೦೫. ದೀಕ್ಷಿತ್ ಜಿ.ಆರ್., ಕುಪ್ಪಸ್ವಾಮಿ, ಮೋಹನ್ ಎಸ್.ಕೆ., ಕರ್ನಾಟಕದಲ್ಲಿ ಕೆರೆ ನೀರಾವರಿ,(ಅನು) ನೀಲತ್ತಹಳ್ಳಿ ಕಸ್ತೂರಿ, ಪು. ೨೮.

೪೦೬. ಅದೇ, ಪು. ೨೮.

೪೦೭. ಅದೇ, ಪು. ೨೯.

೪೦೮. ಅದೇ, ಪು. ೩೦.

೪೦೯. IA. Vol.7, p.209.

೪೧೦. ಅದೇ, p. 209.

೪೧೧. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೭.

೪೧೨. ಅದೇ. ಪು. ೨೪೮.

೪೧೩. ರಾಮಯ್ಯಂಗಾರ್ ಎಚ್.ಜೆ., ಭಾರತ ಹಿಂದೆ-ಇಂದು ಮುಂದೆ, ಪು. ೪೮.

೪೧೪. EC(ರೈ.ಸಂ). Vol. VII, ಶಿಕಾರಿಪುರ ೧೫೪.

೪೧೫. EC.Vol. VII, ಗುಂಡ್ಲುಪೇಟೆ ೧೯೦.
೪೧೬. ಅದೇ, III, ಹೆಗ್ಗಡದೇವನ ಕೋಟೆ ೩೨.
೪೧೭. MAR. (1912), p. 9.
೪೧೮. EC.Vol. VI, ಪಾಂಡವಪುರ ೧೯.
೪೧೯. ಅದೇ, I, ಮಡಿಕೇರಿ ೧.
೪೨೦. ಅದೇ, XII, ಕಡೂರು ೨೪.
೪೨೧. ಅದೇ, ೩೬.
೪೨೨. SII. Vol. XV. ೪೯೩.
೪೨೩. EC.Vol. IV, ಚಾಮರಾಜನಗರ ೮೧.
೪೨೪. ಅದೇ, ಚಾಮರಾಜನಗರ ೩೫೨.
೪೨೫. ಅದೇ, VIII, ಶ್ರೀರಂಗಪಟ್ಟಣ ೯೪.
೪೨೬. ಅದೇ, ನಾಗಮಂಗಲ ೧೧೭.
೪೨೭. ಅದೇ, IV, ಯಳಂದೂರು ೪೯.
೪೨೮. ಅದೇ, VIII, ಮದ್ದೂರು ೧೧೬ ಮತ್ತು ೧೧೭.
೪೨೯. ಅದೇ, ಮಳವಳ್ಳಿ ೧೨೨.
೪೩೦. ಕ.ವಿ.ಹಂ.ಶಾ.ಸಂ.೯, ಬಾಗಲಕೋಟೆ ೪೧.
೪೩೧. ಅದೇ, ಜಮಖಂಡಿ ೧೦.
೪೩೨. ಅದೇ, ಬಾದಾಮಿ ೧೪.
೪೩೩. ಅದೇ, ಹುನಗುಂದ ೧೦೭.
೪೩೪. ಅದೇ, ೧೨೨.
೪೩೫. ARSIE, 1944-45, N. 25, ಇತಿಹಾಸ ದರ್ಶನ, ೨೦೧೭ ಪು. ೩೬.
೪೩೬. EC. Vol. VIII, ನಾಗಮಂಗಲ ೧೭.
೪೩೭. ಅದೇ, ನಾಗಮಂಗಲ ೮೩.
೪೩೮. ವಾಸುದೇವನ್ ಸಿ.ಎಸ್, ಹಂಪಿ ಪರಿಸರದ ಕೆರೆಗಳು, ಪು. ೩೮.
೪೩೯. KI.Vol.1, p. 24.
೪೪೦. EC(ರೈ.ಸಂ). Vol. VIII, ಸೊರಬ ೩೧೭.
೪೪೧. EC. Vol VIII, ನಾಗಮಂಗಲ ೧೩೦.
೪೪೨. ಅದೇ, ಕೃಷ್ಣರಾಜಪೇಟೆ ೩೭.
೪೪೩. ಅದೇ, ೪೨.
೪೪೪. ಅದೇ, ೬೨.
೪೪೫. ಅದೇ, ೬೬.
೪೪೬. ಅದೇ, ಶ್ರೀರಂಗಪಟ್ಟಣ ೧೨೨.
೪೪೭. EC. Vol. XII, ತರೀಕೆರೆ ೮೩.
೪೪೮. ಅದೇ, ೭೨.
೪೪೯. ಅದೇ, ಕಡೂರು ೬೧.

೪೫೦. EC(ರೈ.ಸಂ). Vol. VII. ಶಿಕಾರಿಪುರ ೧೯೨.
೪೫೧. SII. Vol. XI, BKI, PART II, ೧೭೭.
೪೫೨. EC.Vol. V, ಟಿ.ನರಸೀಪುರ, ೩೯.
೪೫೩. ಅದೇ, X, ಅರಸೀಕೆರೆ, ೧೦.
೪೫೪. ಕ.ವಿ.ಹಂ.ಶಾ.ಸಂ.೧, ಸಂಡೂರು ೧೮.
೪೫೫. ಅದೇ, ಹೂವಿನಹಡಗಲಿ ೧೦.
೪೫೬. ಅದೇ, ಹರಪನಹಳ್ಳಿ ೧೩೬.
೪೫೭. EC.Vol. II, ಶ್ರವಣಬೆಳಗೊಳ ೪೪೩.
೪೫೮. ಅದೇ, ೪೭೬.
೪೫೯. ಅದೇ, ೪೪೩.
೪೬೦. ಅದೇ, ೫೫೮.
೪೬೧. ಅದೇ, IV, ಚಾಮರಾಜನಗರ ೩ ಮತ್ತು ೪.
೪೬೨. ಅದೇ, ಯಳಂದೂರು ೧೫.
೪೬೩. ಅದೇ, VIII, ಹಾಸನ ೫೮.
೪೬೪. ಬಸವರಾಜ ಕುಂಚೂರು, ನಮ್ಮೂರ ಕೆರೆಗಳು, ಪು. ೮.
೪೬೫. EC.Vol. VIII, ಹಾಸನ ೧೧೩.
೪೬೬. ಅದೇ, ಹಾಸನ ೧೧೪.
೪೬೭. ಅದೇ, IX, ಬೇಲೂರು ೧೧೪.
೪೬೮. ಅದೇ, ೨೨೨.
೪೬೯. ಅದೇ, ೨೪೦.
೪೭೦. ಅದೇ, ೨೪೧.
೪೭೧. ಅದೇ, ೨೫೬.
೪೭೨. ಅದೇ, ೩೪೧.
೪೭೩. ಅದೇ, ೪೧೦.
೪೭೪. ಅದೇ, ೪೨೫.
೪೭೫. ಅದೇ, ೪೨೦.
೪೭೬. ಅದೇ, ೪೩೮.
೪೭೭. BKI.I.ii. ೧೫೧.
೪೭೮. ಬಸವರಾಜ ಕುಂಚೂರು, ನಮ್ಮೂರ ಕೆರೆಗಳು, ಪು. ೧೪.
೪೭೯. ಅದೇ, ಪು. ೧೫.
೪೮೦. EC. Vol. IX, ಬೇಲೂರು ೧೩೪.
೪೮೧. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೨೨.
೪೮೨. ರಾಜಾರಾಮ ಹೆಗಡೆ,(ಸಂ) ಕೆರೆ ನೀರಾವರಿ ನಿರ್ವಹಣೆ, ಪು. ೧.
೪೮೩. EC. Vol. XXIV, ಪ್ರಸ್ತಾವನೆ XXXIV.
೪೮೪. ವಾಸುದೇವನ್ ಸಿ.ಎಸ್. ಹಂಪಿ ಪರಿಸರದ ಕೆರೆಗಳು, ಪು. ೪೨.

೪೮೫. EC. Vol. VI, ಕೃಷರಾಜಪೇಟೆ ೨೮.
೪೮೬. ಅದೇ, ೫೯.
೪೮೭. ಅದೇ, III, ನಂಜನಗೂಡು ೩೪೮
೪೮೮. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೪೩-೪೪
೪೮೯. EC. Vol. IX, ಟಿ.ನರಸೀಪುರ ೩೧೩.
೪೯೦. ಅದೇ, XI, ಚಿಕ್ಕಮಗಳೂರು ೭೩.
೪೯೧. ಅದೇ, X, ಅರಸೀಕೆರೆ ೩೮.
೪೯೨. ಅದೇ, VII, ನಾಗಮಂಗಲ ೩೩.
೪೯೩. ಅದೇ, ೬೮.
೪೯೪. ಅದೇ, ೭೨.
೪೯೫. ಅದೇ, ೯೮.
೪೯೬. ಅದೇ, XII, ಕಡೂರು ೩೧.
೪೯೭. ಅದೇ, ೬೧.
೪೯೮. ಅದೇ, ೨೫೦.
೪೯೯. ಅದೇ, X, ಅರಸೀಕೆರೆ ೪೦.
೫೦೦. ಅದೇ, ೫೫.
೫೦೧. ಅದೇ, ೮೫.
೫೦೨. ಅದೇ, ೯೫.
೫೦೩. ಕ.ವಿ.ಹಂ.ಶಾ.ಸಂ.೧, ಹೂವಿನಹಡಗಲಿ ೮೬.
೫೦೪. EC. Vol. XXIV, ಚಿಕ್ಕನಾಯಕನಹಳ್ಳಿ ೮೦.
೫೦೫. ಅದೇ, IV, ಚಾಮರಾಜನಗರ ೧೨೩.
೫೦೬. ಅದೇ, VIII, ಹಾಸನ ೧೦೬.
೫೦೭. ಅದೇ, IX, ಬೇಲೂರು ೧೩೬.
೫೦೮. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೩೦.
೫೦೯. ಅದೇ, ಪು. ೫೦.
೫೧೦. ಕ.ವಿ.ಹಂ.ಶಾ.ಸಂ.೯, ಹುನಗುಂದ ೧೧೪.
೫೧೧. EC. Vol. VII, ನಾಗಮಮಂಗಲ ೧೬೮.
೫೧೨. ಅದೇ, X ಅರಸೀಕೆರೆ ೧೭೮.
೫೧೩. EC(ರೈ.ಸಂ). Vol. XI, ದಾವಣಗೆರೆ ೧೧.
೫೧೪. EC. Vol. XIII, ಶಿವಮೊಗ್ಗ ೬೪.
೫೧೫. ಅದೇ, ಶಿವಮೊಗ್ಗ ೧೪೨.
೫೧೬. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೩೪.
೫೧೭. EC. Vol. VII, ಮಂಡ್ಯ ೬೭.
೫೧೮. ಅದೇ, ನಾಗಮಂಗಲ ೮೩.

೫೧೯. ಅದೇ, VI, ಕೃಷ್ಣರಾಜಪೇಟೆ ೧೧.
೫೨೦. ಅದೇ, XII, ಕಡೂರು ೧೬೩.
೫೨೧. SII. Vol. IX. i, ೨೦೦.
೫೨೨. ಅದೇ, ೨೬೭.
೫೨೩. ಕ.ವಿ.ಹಂ.ಶಾ.ಸಂ.೧, ಹಗರಿಬೊಮ್ಮನಹಳ್ಳಿ ೩.
೫೨೪. EC. Vol. IV, ಯಳಂದೂರು ೬೦.
೫೨೫. ಅದೇ, VIII, ಆಲೂರು ೧೦.
೫೨೬. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪು. ೪೨.
೫೨೭. ಅದೇ, ಪು. ೪೩.
೫೨೮. EC. Vol. VII, ನಾಗಮಂಗಲ ೮೩–೮೪.
೫೨೯. ಅದೇ, ೧೨.
೫೩೦. SII.Vol. IX, ೨೨೬.
೫೩೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೦೮
೫೩೨. EC(ರೈ.ಸಂ). Vol. VIII, ಸೊರಬ ೩೫೯.
೫೩೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೪೦೮
೫೩೪. EC. Vol. VII, ನಾಗಮಂಗಲ ೫೬.
೫೩೫. ಅದೇ, XII, ಕಡೂರು ೧೨೮.
೫೩೬. ಅದೇ, ತರೀಕೆರೆ ೩೪.
೫೩೭. ಅದೇ, ೩೬
೫೩೮. ಅದೇ, XI, ಚಿಕ್ಕಮಗಳೂರು ೧೪.
೫೩೯. ಅದೇ, III, ನಂಜನಗೂಡು ೧೦೩.
೫೪೦. ಅದೇ, VIII, ಹಾಸನ ೭೧.
೫೪೧. ಅದೇ, VII, ನಾಗಮಂಗಲ ೭೪.
೫೪೨. ಅದೇ, X, ಚನ್ನರಾಯಪಟ್ಟಣ ೧೩೪.
೫೪೩. ಪ್ರಜಾವಾಣಿ ದಿನಪತ್ರಿಕೆ, ಮಂಗಳವಾರ ೬, ಮಾರ್ಚ್ ೨೦೧೮.
೫೪೪. ವಿಠಲ ಎಸ್. ಬಡಿಗೇರ, ಹೊಯ್ಸಳ ಕಾಲದ ನೀರಾವರಿ ಪದ್ಧತಿ, ಪು. ೧೨೨.
೫೪೫. ಅದೇ, ಪು. ೧೨೨.
೫೪೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೧೯.
೫೪೭. EC. Vol. I, ಕೊಡಗು ೬೩.
೫೪೮. ಅದೇ, VI, ಶ್ರೀರಂಗಪಟ್ಟಣ ೨೫೨.
೫೪೯. ಅದೇ, XV, ಹೊಸನಗರ ೧೦೬.
೫೫೦. ವಿಠ್ಠಲ ಎಸ್. ಬಡಿಗೇರ, ಹೊಯ್ಸಳ ಕಾಲದ ನೀರಾವರಿ ಪದ್ಧತಿ, ಪು. ೧೨೮.
೫೫೧. ಅದೇ, ಪು. ೧೨೮.
೫೫೨. ಅದೇ, ಪು. ೧೨೮.

೫೫೩. ರಂಗಸ್ವಾಮಿ ಎ., ಚಾವುಂಡರಾಯನ ಲೋಕೋಪಕಾರ ಒಂದು ಅಧ್ಯಯನ, ಪು. ೧೭೪.
೫೫೪. ಅದೇ, ಪು. ೧೭೬.
೫೫೫. ಅದೇ, ಪು. ೧೭೩.
೫೫೬. ಅದೇ, ಪು. ೧೭೯.
೫೫೭. ಅದೇ, ಪು. ೧೭೯.
೫೫೮. ಅದೇ, ಪು. ೧೮೨.
೫೫೯. ಅದೇ, ಪು. ೧೯೦.
೫೬೦. ಅದೇ, ಪು. ೧೯೦.
೫೬೧. ಅದೇ, ಪು. ೧೯೨.
೫೬೨. ಅದೇ, ಪು. ೧೯೨.
೫೬೩. ಅದೇ, ಪು. ೧೯೩.
೫೬೪. ಅದೇ, ಪು. ೧೯೩.
೫೬೫. ಅದೇ, ಪು. ೧೯೪.
೫೬೬. ಅದೇ, ಪು. ೧೯೬.
೫೬೭. ಅದೇ, ಪು. ೭೬.
೫೬೮. SII. Vol. XI, ೪೭.
೫೬೯. ಕ.ವಿ.ಹಂ.ಶಾ.ಸಂ.೯, ಬಾಗಲಕೋಟೆ ೪೧.
೫೭೦. EC. Vol. XII, ಕಡೂರು ೧೪೦.
೫೭೧. ಅದೇ, ತರೀಕೆರೆ ೭೮.
೫೭೨. ಅದೇ, XV, ಹೊಸನಗರ ೫.
೫೭೩. SII. Vol. XV. ೫೩೪.
೫೭೪. ಅದೇ, ೨೬೭.
೫೭೫. ಕ.ವಿ.ಹಂ.ಶಾ.ಸಂ.೭, ಲಿಂಗಸೂಗೂರು ೩೫.
೫೭೬. ಅದೇ, ಮಾನ್ವಿ ೧೦೨.
೫೭೭. ಅದೇ, ೧, ಸಿರಗುಪ್ಪ ೨೨.
೫೭೮. ಅದೇ, ಹಗರಿಬೊಮ್ಮನಹಳ್ಳಿ ೨೫.
೫೭೯. ಅದೇ, ೨೭.
೫೮೦. ಅದೇ, ಹರಪನಹಳ್ಳಿ ೬.
೫೮೧. ಅದೇ, .೧೦, ಮುದ್ದೇಬಿಹಾಳ ೩೦.
೫೮೨. ಅದೇ, ೪.
೫೮೩. ಅದೇ, ೨, ಯಲಬುರ್ಗ ೭.
೫೮೪. EC. Vol. XIII, ಶಿವಮೊಗ್ಗ ೭೨.
೫೮೫. ಅದೇ, IV, ಚಾಮರಾಜನಗರ ೧೪೩.
೫೮೬. ವಿಠ್ಠಲ ಎಸ್. ಬಡಿಗೇರ, ಹೊಯ್ಸಳ ಕಾಲದ ನೀರಾವರಿ ಪದ್ಧತಿ, ಪು. ೧೨೯.
೫೮೭. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೨೧.
೫೮೮. EC. Vol. V, ಟಿ.ನರಸೀಪುರ ೧೪೬.

೫೮೯. ಅದೇ, VII, ನಾಗಮಂಗಲ ೭.

೫೯೦. BK.I. Vol. I. Part II, ೧೩೪.

೫೯೧. EC(ರೈ.ಸಂ). Vol.V, ಹಾಸನ ೧೩೦.

೫೯೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೦೮.

೫೯೩. ಕ.ವಿ.ಹಂ.ಶಾ.ಸಂ.೭, ಲಿಂಗಸೂಗೂರು ೩೫.

೫೯೪. ಅದೇ, ೧೨೩

೫೯೫. ಅದೇ, ಮಾನ್ವಿ ೧೭.

೫೯೬. ಅದೇ, ೧೦೮

೫೯೭. ಅದೇ, ೧೦, ಇಂಡಿ ೪೮.

೫೯೮. ಅದೇ, ಸಿಂದಗಿ ೮.

೫೯೯. ಅದೇ, ೨೮.

೬೦೦. ಅದೇ, ಮುದ್ದೇಬಿಹಾಳ ೪೭.

೬೦೧. EC. Vol. XIII, ಅರಕಲಗೂಡು ೪೬.

೬೦೨. ವಿಠಲ ಎಸ್, ಬಡಿಗೇರ, ಹೊಯ್ಸಳರ ಕಾಲದ ನೀರಾವರಿ ಪದ್ಧತಿ, ಪು. ೧೩೦.

೬೦೩. ಅದೇ, ಪು. ೧೩೦.

೬೦೪. ಅದೇ, ಪು. ೧೩೦.

೬೦೫. ಅದೇ, ಪು. ೧೩೧.

೬೦೬. ಅದೇ, ಪು. ೧೩೧.

೬೦೭. EC. Vol.VI, ಪಾಂಡವಪುರ ೨೨೦.

೬೦೮. ವಿಠಲ ಎಸ್. ಬಡಿಗೇರ, ಹೊಯ್ಸಳರ ಕಾಲದ ನೀರಾವರಿ ಪದ್ಧತಿ, ಪು. ೧೩೨.

೬೦೯. ಇರ್ಫಾನ್ ಹಬೀಬ್, ಭಾರತ ಚರಿತ್ರೆಯಲ್ಲಿ ರೈತ,(ಅನು) ಸುಜ್ಞಾನಮೂರ್ತಿ ಬಿ., ಪು. ೭.

೬೧೦. ಇಂಡಿಯನ್ ಆರ್ಕಿಯಾಲಜಿ, ೧೯೬೮-೬೯.

೬೧೧. ಇರ್ಫಾನ್ ಹಬೀಬ್, ಪೂರ್ವೋಕ್ತ, ಪು. ೮.

೬೧೨. ಇರ್ಫಾನ್ ಹಬೀಬ್, ಅದೇ, ಪು. ೮.

೬೧೩. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೬

೬೧೪. ಅದೇ, ಪು. ೧೮.

೬೧೫. ಅದೇ, ಪು. ೧೮.

೬೧೬. ಮಜುಂದಾರ್ ಆರ್.ಸಿ.,(ಅನು ಸಂಪಾದನೆ) ನರಸಿಂಹಮೂರ್ತಿ ಎ.ವಿ.,(ಸಹಾಯಕ ಸಂ.) ನಾಗರಾಜರಾವ್ ಎಚ್.ಎಂ., ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂ.೨, ವೇದಯುಗ ಭಾಗ.೨.

೬೧೭. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೮೨.

೬೧೮. ಅದೇ, ಪು. ೧೮೨-೧೮೩.

೬೧೯. EC. Vol. VI, ಚಿಕ್ಕಮಗಳೂರು ೭.

೬೨೦. EC(ರೈ.ಸಂ). Vol VII, ಶಿಕಾರಿಪುರ ೩೦೭.

೬೨೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೮೭.

೬೨೨. ಅದೇ, ಪು. ೪೮೭.

೬೨೩. ಘನಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೨೦.

೬೨೪. BKI, I.i, 68

೬೨೫. EC.Vol. XV, ಸಾಗರ ೧೦೯.

೬೨೬. SII.Vol. IX,೮೯.

೬೨೭. BKI Vol. I.ii, ೧೪೫.

೬೨೮. EC.Vol. IV, ಕೊಪ್ಪ ೭೮.

೬೨೯. ಕೋಸಾಂಬಿ ಡಿ.ಡಿ., ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ,(ಅನು) ವೇಣುಗೋಪಾಲ್ ಟಿ.ಎಸ್., ಶೈಲಜಾ, ಪು. ೨೯.

೬೩೦. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೨೩.

೬೩೧. ಅದೇ, ಪು. ೧೧೪.

೬೩೨. ರಾಷ್ಟ್ರಕೂಟರ ಶಾಸನ ಸಂಪುಟ೧, ಸಂ. ೫೩೯.

೬೩೩. ಅದೇ. ಸಂ. ೨೯.

೬೩೪. ಅದೇ. ಸಂ .೩೬.

೬೩೫. ಅದೇ. ಸಂ. ೩೭.

೬೩೬. ಅದೇ. ಸಂ. ೭೮.

೬೩೭. ಅದೇ. ಸಂ. ೨೪೦.

೬೩೮. ಅದೇ. ಸಂ. ೨೦೮.

೬೩೯. ಅದೇ. ಸಂ. ೧೮೪.

೬೪೦. ಅದೇ. ಸಂ. ೧೩೩.

೬೪೧. ಅದೇ. ಸಂ. ೫೩೬.

೬೪೨. ಸುಂದರ ಅ., ಕರ್ನಾಟಕ ಚರಿತ್ರೆ ಸಂಪುಟ, ೧, ಪು. ೩೯೧.

೬೪೩. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೩.

೬೪೪. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೮೨.

೬೪೫. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೨.

೬೪೬. ಮಲ್ಲಣ ಶಂಕರಣ್ಣ ನಾಗರಾಳ, ಒಣಬೇಸಾಯ ಪದ್ಧತಿಗಳು, ಪು. ೨೬.

೬೪೭. ಗಾಣದಾಳು ಶ್ರೀಕಂಠ, ಕೃಷಿ ಉಪಕರಣಗಳು, ಪು. ೯.

೬೪೮. ಅದೇ, ಪು. ೧೦.

೬೪೯. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೮.

೬೫೦. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೩.

೬೫೧. ಸೂರ್ಯನಾಥ ಕಾಮತ್ ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೫.

೬೫೨. ಅದೇ, ಪು. ೨೨೦.

೬೫೩. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೨.

೬೫೪. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೧೪.

೬೫೫. ಗಾಣದಾಳು ಶ್ರೀಕಂಠ, ಕೃಷಿ ಉಪಕರಣಗಳು, ಪು. ೬೦.

೬೫೬. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೫೭.

೬೫೭. EC. Vol. XIII, ಶಿವಮೊಗ್ಗ ೫೯.

೬೫೮. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೧೦.

೬೫೯. ಕ.ವಿ.ಹಂ.ಶಾ.ಸಂ.೮, ಬಸವಕಲ್ಯಾಣ ೧೭.

೬೬೦. EC.Vol.X, ಅರಸೀಕೆರೆ ೩೪.

೬೬೧. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೩.

೬೬೨. SII.Vol. IX, ೫೪.

೬೬೩. EC(ರೈ.ಸಂ). Vol.V, ಹಾಸನ ೯೪.

೬೬೪. ರಾಗೌ,(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು, ಪು. ೧೯೭.

೬೬೫. ಸುಮಂಗಲಾ ಅತ್ತಿಗೇರಿ, ಕೃಷಿ ಜಾನಪದ ಮತ್ತು ಮಹಿಳೆ, ಪು. ೧೦೭.

೬೬೬. SII.Vol. XV, ೩೪.

೬೬೭. ರಾಗೌ,(ಸಂ) ಸರ್ವಜ್ಯನ ಸಮಗ್ರ ತ್ರಿಪದಿಗಳು, ಪು. ೧೯೭.

೬೬೮. ಅದೇ, ಪು. ೧೯೭.

೬೬೯. ಕ.ವಿ.ಹಂ.ಶಾ.ಸಂ.೧, ಹೂವಿನಹಡಗಲಿ ೬೭.

೬೭೦. ಗಾಣದಾಳು ಶ್ರೀಕಂಠ, ಕೃಷಿ ಉಪಕರಣಗಳು, ಪು. ೪೧.

೬೭೧. ಇರ್ಫಾನ್ ಹಬೀಬ್, ಭಾರತ ಚರಿತ್ರೆಯಲ್ಲಿ ರೈತ,(ಅನು) ಸುಜ್ಞಾನಮೂರ್ತಿ ಬಿ., ಪು. ೭.

೬೭೨. ಕರ್ನಾಟಕ ಪರಂಪರೆ ಸಂ.೧ ಪು. ೬೦೧.

೬೭೩. EC.Vol.II, ಶ್ರವಣಬೆಳಗೊಳ ೪೪೪.

೬೭೪. ಕ.ವಿ.ಹಂ.ಶಾ.ಸಂ.೪, ಬೀದರ್ ೬೯.

೬೭೫. KI. ಸಂ I, ಭಾಗ II, ೧೮೧.

೬೭೬. EC Vol. X, ಅರಸೀಕೆರೆ ೩೪.

೬೭೭. ರಾಗೌ,(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು, ಪು. ೧೪೪.

## ಅಧ್ಯಾಯ ಮೂರು

## ಕೃಷಿ ಮತ್ತು ಬೆಳೆಗಳು

## ಅಧ್ಯಾಯ : ಮೂರು

# ಕೃಷಿ ಮತ್ತು ಬೆಳೆಗಳು

ಕೃಷಿಕನ ಶ್ರಮದ ಫಲಶೃತಿಯೇ ಬೆಳೆಗಳು. ಈ ಬೆಳೆಗಳು ಕೃಷಿಯ ಮುಖ್ಯ ಧ್ಯೇಯೊದ್ದೇಶಗಳಾಗಿರುತ್ತವೆ. ಬೇಟೆ ಮತ್ತು ಆಹಾರ ಸಂಗ್ರಹಣೆಯ ಹಂತದಿಂದ ಸಾಗಿ ಬಂದ ಕೃಷಿಯು ಗತಕಾಲದಲ್ಲಿಯೇ ಮುಗಿದು ಹೋದ ಪ್ರಕ್ರಿಯೆಯಲ್ಲ, ಅದು ನಿರಂತರವಾಗಿ ಸಾಗಿಬಂದಿದ್ದು, ಮುಂದೆಯೂ ಜೀವಂತವಾಗಿರುತ್ತದೆ. ಆದರೆ ಸಾಗಿಬರುವ ಹಾದಿಯಲ್ಲಿ ರೂಪಾಂತರಗಳು ಸಹಜವಾಗಿರುತ್ತವೆ. ಸ್ಥಾನಿಕ, ಕುಮ್ರಿಯಂತಹ ಬೇಸಾಯ ಪದ್ಧತಿಗಳನ್ನು ಅನುಸರಿಸಿದ್ದ ಮಾನವನು, ಕಬ್ಬಿಣದ ಬಳಕೆಯಿಂದಾಗಿ ಒಂದೆಡೆ ನೆಲೆನಿಂತು, ಬೆಳೆಗಳನ್ನು ಬೆಳೆಯಲು ಆರಂಭಿಸಿದನು. ಬೇಲಾನ್ ಮತ್ತು ಕಚ್ಚಿ ಬಯಲು ಪ್ರದೇಶದಲ್ಲಿ ಕ್ರಿ.ಪೂ ೬೫೦೦-೪೫೦೦ರ ಕಾಲಕ್ಕೆ ಕಾಡಿನ ಬೆಳೆಗಳನ್ನು ನಾಡಿನ ಬೆಳೆಗಳಾಗಿ ಬೆಳೆದುದನ್ನು ಹೇಳಲಾಗಿದೆ. ಇಲ್ಲಿನ ಮಹಗರ್‌ನಲ್ಲಿ ಬಾರ್ಲಿ(ಎರಡು ಸಾಲು) ಮೂರು ಸಾಲು ಗೋಧಿ ಬೆಳೆದ ಹೊಲಗಳ ಅವಶೇಷಗಳು ದೊರೆತಿವೆ.[೧] ಪ್ರಾಚೀನ ಕಾಲದಲ್ಲಿ ಬೆಳೆ ಬೆಳೆದ ದಾಖಲೆಗಳನ್ನು ಕೆಲವು ಸಾಹಿತ್ಯಿಕ ಆಕರಗಳಿಂದ ಗುರುತಿಸಬಹುದಾಗಿದೆ. 'ವಿನಯ ಪಿಟಕ ಗ್ರಂಥದ ಚುಲ್ಲವಗ್ಗದಲ್ಲಿ ಉಳುಮೆಗೆ ಕಾಸಿ, ಬಿತ್ತನೆಗೆ ವಾಪಿತಂ, ನೀರಾವರಿಗೆ ಉದಕಂ ಅಭಿನೇತಬ್ಬಂ, ಕಳೆಕೀಳುವ ಪ್ರಕ್ರಿಯೆಗೆ ಸಿದ್ಧಪೇತಬ್ಬಂ ಕೊಯಲುಗಳಿಗೆ ಲಾವಾಪೇತಬ್ಬಂ, ಹೊಟ್ಟು ತೂರುವುದಕ್ಕೆ ಓಪುಣಾಪೇತಬ್ಬಂ'[೨] ಎಂದು ಕರೆದಿದೆ.

ಪಾಲಿ ಗ್ರಂಥದಲ್ಲಿ ಕೆಲವು ಧಾನ್ಯ ಮತ್ತು ಕಾಳುಗಳನ್ನು ಉಲ್ಲೇಖಿಸಿದೆ. ಅವುಗಳು 'ಭತ್ತ(ವ್ರೀಹಿ, ಸಾಲಿ), ಗೋಧಿ(ಗೋದಾಮ), ಬಾರ್ಲಿ(ಯವ), ಪಾಲಣ್ಣು(ಈರುಳ್ಳಿ) ನವಣೆ, ಸಿಗಿವೆರ(ಶುಂಠಿ), ನವಣೆ, ಹುರಳಿ(ವರಕ), ಸಣ್ಣ ಗೋಧಿ(ಕುದ್ರುಸಕ), ಹದ್ದಿಲಿ(ಅರಿಶಿಣ), ಅತಿವಿಸ(ಬೆಳ್ಳುಳ್ಳಿ), ತೊಕ್ಕೆ ಗೋಧಿ(ವಿಲಿಂಗ), ಲಿಂಟೆಲ್(ಮುಗ್ಗ ಮತ್ತು ಮಾಸ), ಎಳ್ಳು(ತಿಲ), ಪಿಪ್ಪಲಿ(ಉದ್ದಮೆಣಸು) ಮತ್ತು ಕಬ್ಬು(ಈ ಬೆಳೆಯನ್ನು ಫಲಬೀಜ ವರ್ಗದ ಸಸ್ಯದಲ್ಲಿ, ಅಂದರೆ ಕೀಲುಗಳಿಂದ ಹೊರ ಹೊಮ್ಮುವ ಸಸ್ಯವಾಗಿ ವರ್ಗೀಕರಿಸಿದೆ. ಇದರಿಂದ ಫಣಿತ(ಕಾಕಂಬಿ) ಉತ್ಪನ್ನ ತಯಾರಿಸುತ್ತಾರೆ).'[೩] ಇದರಿಂದಾಗಿ ಈ ವೇಳೆಗೆ ವ್ಯವಸ್ಥಿತವಾಗಿ ಬೆಳೆಗಳನ್ನು ಬೆಳೆಯುತ್ತಿದ್ದರೆಂದು ತಿಳಿದುಬರುತ್ತದೆ.

ಶತಪತ ಬ್ರಾಹ್ಮಣದಲ್ಲಿ 'ಕ್ರಿ.ಪೂ.ಸು. ೭೦೦ರ ಅವಧಿಯಲ್ಲಿ ವ್ರೀಹಿ ಅಥವಾ ಭತ್ತವನ್ನು ಉಲ್ಲೇಖಿಸಿದ್ದು, ಇದು ಶೀಘ್ರದಲ್ಲೇ ಫಲ ನೀಡುವ ಕಸಿ ಮಾಡಿದ ಮಾದರಿ ಎನ್ನಲಾಗಿದೆ.'[೪] ಕೃಷಿಯು ಸಿಂಧೂ ನಾಗರೀಕತೆಯ ವೇಳೆಗೆ ಎಷ್ಟು ಬೆಳದಿತ್ತು ಎಂಬುದು ಪುರಾತತ್ವ ಶೋಧದಲ್ಲಿ ದೊರೆತ ಕುರುಹುಗಳಿಂದ ಸ್ಪಷ್ಟವಾಗುತ್ತದೆ. 'ಕ್ರಿ.ಪೂ. ಹತ್ತರಿಂದ ಎಂಟನೆಯ ಶತಮಾನದ ಅವಧಿಯಲ್ಲಿ ನರ್ಹನ್(ಪೂರ್ವ ಉತ್ತರ ಪ್ರದೇಶ)ದಲ್ಲಿ 'ಅಕ್ಕಿ, ಬಾರ್ಲಿ, ಮೂರು ಮಾದರಿಯ ಗೋಧಿ, ಬಟಾಣಿ, ಹೆಸರುಕಾಳು, ಎಳ್ಳು, ಖೇಸಾರಿ(ಲೆಥಿರಸ್ ಸತಿವಸ್) ಬೆಳೆಗಳು ಕಂಡುಬರುತ್ತವೆ. ಸಾಸಿವೆ, ಅಗಸೆ(ಅಲ್ಸಿ), ಸಬ್ಬಕ್ಕಿ, ಬ್ರೆಡ್‌ಗೋಧಿ, ಹಲಸಿನ ಹಣ್ಣು, ಬೇಳೆ, ಖೇಸಾರಿ, ಕೋದ್ರೊ, ಮಿಲ್ಲೆಟ್, ಅಗಸೆ ಇವೆಲ್ಲವು ಕ್ರಿ.ಪೂ. ೫೦೦-೪೦೦ರ ಅವಧಿಯಲ್ಲಿ ದೊರೆತಿವೆ.'[೫] ಈ ಬೆಳೆಗಳನ್ನು ಗಮನಿಸಿದರೆ ಕಾಡಿನ ಬೆಳೆಗಳನ್ನು ನಾಡಿನ ಬೆಳೆಗಳಾಗಿ ಆಗಲೇ ಪರಿವರ್ತಿಸಿಕೊಂಡಿರುವ ಸಾಧ್ಯತೆಗಳಿವೆ. ಪಾಳಿ ಮತ್ತು ಸಂಸ್ಕೃತ ಭಾಷೆಯ ಗ್ರಂಥಗಳಲ್ಲಿ ಕ್ರಿ.ಪೂ. ೭೦೦-೨೦೦ರ ಅವಧಿಯಲ್ಲಿ 'ಅಕ್ಕಿ, ಸಬ್ಬಕ್ಕಿ, ಗೋಧಿ, ಹೆಸರುಕಾಳು ಅಥವಾ ಮುಂಗ್, ಬೇಳೆ, ಬಟಾಣಿ, ಖೇಸಾರಿ, ಕಬ್ಬು ಮತ್ತು ಸಾಸಿವೆ'[೬] ಬೆಳೆಗಳು ಉಲ್ಲೇಖಗೊಂಡಿವೆ.

ಋಗ್ವೇದ ಕಾಲದಲ್ಲಿ ಉಳುಮೆ ಮಾಡುವ ನೇಗಿಲ ಸಾಲಿಗೆ 'ಸೀತ'[೭] ಎಂದು ಕರೆಯುತ್ತಿದ್ದರು. ಇದು ರಾಮಾಯಣದ ಕಾಲಕ್ಕೂ ಬೆಳೆದು ಬಂದಿದ್ದು, ಉಳುವ ಸಂದರ್ಭದಲ್ಲಿ ಜನಕನಿಗೆ ದೊರೆತ ಮಗುವಿಗೆ ಸೀತಾ ಎಂದು ಹೆಸರಿಟ್ಟದ್ದು ತಿಳಿದುಬರುತ್ತದೆ. ಋಗ್ವೇದ ಮತ್ತು ಅವೆಸ್ತ ಗ್ರಂಥದಲ್ಲಿ ಬಿತ್ತನೆ ಬೀಜವನ್ನು ನೆಲದೊಳಗಿಡುವ ಬಗ್ಗೆ(ಯವಂ ಕೃಷ್, ಅವೆಸ್ತದಲ್ಲಿ ಯವೂ ಕರೆಶ್) ಎಂಬ ಪದಗಳು ಫಲಿತಾಂಶ ರೂಪದ ಕಾಳು(ಸಸ್ಯ, ಅವೆಸ್ತಃಹಹ್ಯ), ಯವ(ಬಾರ್ಲಿ)[೮] ದೊರೆತಿವೆ. ಋಗ್ವೇದದಲ್ಲಿ ಎಲ್ಲಿಯೂ ಗೋಧಿಯ ಪ್ರಸ್ತಾಪ ಬರುವುದಿಲ್ಲ. ಆದರೆ 'ಅವಸ್ತದಲ್ಲಿ ಗಂತುಮ ಸಂಸ್ಕೃತದಲ್ಲಿ ಗೋಧೂಮ ಪದ ದೊರೆತಿದೆ ಇಂಡೋ–ಇರಾನಿಯನ್ನರು ಬೆಳೆದಿದ್ದರಿಂದ ಇರಾನಿನ ಪೂರ್ವ ಭಾಗದಿಂದ ಬಂದಿರಬೇಕು ಎನ್ನಲಾಗಿದೆ.'[೯] ಭತ್ತ ಅಥವಾ ಅಕ್ಕಿಯು 'ಕ್ರಿ.ಪೂ. ೧೮೦೦ರ ವೇಳೆಗೆ ಸ್ವಾತ್‌ಕಣಿವೆ, ಬಲೂಚಿಸ್ತಾನದ ಈಶಾನ್ಯ ಭಾಗ ಮತ್ತು ಹರಪ್ಪಗಳಲ್ಲಿ ಬೆಳೆಯುತ್ತಿದ್ದರು[೧೦] ಎನ್ನಲಾಗಿದೆ. ಹತ್ತಿ ಬೆಳೆಯ ಬೇಸಾಯವು ಸಿಂಧೂ ನಾಗರೀಕತೆಯಲ್ಲಿ ಕಂಡುಬಂದಿದೆ. ಋಗ್ವೇದದ ಕಾಲದಲ್ಲಿ ಬೆಳೆಗಳನ್ನು ಬೆಳೆಯುವ ಭೂಮಿಯನ್ನು ಉಳುಮೆ ಮಾಡುವುದಕ್ಕೆ 'ಉರ್ವರಾ'[೧೧] ಎಂದು ಕರೆಯಲಾಗುತ್ತಿತ್ತು.

ಸಿಂಧೂ ಬಯಲಿನ ನಾಗರೀಕತೆಯ ಕಾಲ ಕ್ರಿ.ಪೂ. ೩೦೦೦ದಲ್ಲಿ ವ್ಯವಸಾಯು ಆಗಲೇ ಅಭಿವೃದ್ಧಿ ಸಾಧಿಸಿತ್ತು ಎಂಬುದು ೧೯೨೨ರಲ್ಲಿ ಹರಪ್ಪ ಮತ್ತು ಮಹೆಂಜೋದಾರೋದಲ್ಲಿ ನಡೆದ ಭೂ ಸಂಶೋಧನೆಯಿಂದ ತಿಳಿಯುತ್ತದೆ.'[೧೨] ವ್ಯಾಪಾರವು ಅಸ್ತಿತ್ವದಲ್ಲಿದ್ದುದರಿಂದ ಕೃಷಿ ಸಾಕಷ್ಟು ಪ್ರಗತಿ ಸಾಧಿಸಿರುವ ಸಾಧ್ಯತೆಗಳಿವೆ. ಇಲ್ಲಿ ಪ್ರಮುಖವಾಗಿ ಗೋಧಿ, ಜವೆ, ಭತ್ತ, ಹತ್ತಿ, ಹಣ್ಣುಗಳನ್ನು[೧೩] ಬೆಳೆಯುತ್ತಿದ್ದರು. ಧರ್ಮಸೂತ್ರ, ರಾಮಾಯಣ, ಮಹಾಭಾರತದ ಕಾಲದಲ್ಲಿ ಜನರ ಪ್ರಮುಖ ಕಸುಬು ವ್ಯಾಪಾರವಾಗಿತ್ತು. 'ಗೋಧಿ, ಭತ್ತ, ಭಾರ್ಲಿ, ಸಾಸಿವೆ, ಎಳ್ಳು, ಎಣ್ಣೆ ಬೀಜಗಳು, ಹಣ್ಣು ಮತ್ತು ತರಕಾರಿಗಳನ್ನು ಬೆಳೆಯುತ್ತಿದ್ದರು. ಫಲವತ್ತಾದ ನದಿಬಯಲಿನಲ್ಲಿ ವರ್ಷಕ್ಕೆ ಎರಡು ಎಳೆ ಬೆಳೆಯುತ್ತಿದ್ದರು. 'ರಾಜಸಾರಿ' ಎಂಬ ಭತ್ತವನ್ನು ಗಂಗಾನದಿ ಬಯಲಿನಲ್ಲಿ ಬೆಳೆಯುತ್ತಿದ್ದರು. ಈ ಬೆಳೆಯನ್ನು ಬೇರೆ ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು.'[೧೪] ಅರ್ಥಶಾಸ್ತ್ರದಲ್ಲಿ 'ಅಕ್ಕಿ, ಭತ್ತ, ರಾಗಿ, ಎಳ್ಳು, ಪ್ರಿಯಾಂಗು, ಉದಾರಕ, ವರಗು(ವರಕ), ತೊಗರಿ, ಉರದ್, ಸನ್‌ವಾಯ್, ಕುಸುಂಬೆ ಲೆಂಟಿಲ್, ಹುರುಳಿ, ಬಾರ್ಲಿ, ಕಲಾಮ, ನಾರಗಸೆ, ಸಾಸುವೆ, ಕಬ್ಬು, ಮೆಣಸು, ಪಿಪ್ಪಲಿ'[೧೫] ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು ಎನ್ನಲಾಗಿದೆ.

ನವಶಿಲಾಯುಗದಿಂದ ಆರಂಭವಾಗಿ ಸಾಗಿ ಬಂದ ಕೃಷಿಯು ಪ್ರಾಚೀನ ಕರ್ನಾಟಕದ ಜನರ ಜೀವನ ವಿಧಾನಗಳಲ್ಲಿ ಒಂದಾಗಿತ್ತು. ಶಾಸನಗಳು ಭೂಮಿಯಿಂದ ಬೆಳೆ ಬೆಳೆಯುವ ರೈತನನ್ನು ಭೂದೇವಿಯ ಮಕ್ಕಳೆಂದು ಹೇಳಿರುವುದಿದೆ. ಕ್ರಿ.ಶ. ೧೧೫೬ರ ಶಾಸನವೊಂದು 'ಅನ್ನದಾನ ಸಂಪೂರ್ಣರುಂ ಭೂಮಿ ಪುತ್ರ ಕರುಮಪ್ಪ ಚಂದಗೌಡ'[೧೬] ಎಂದಿದೆ. ಜನಸಾಮಾನ್ಯರಿಗೆ ಕೃಷಿಯ ಮಹತ್ವ ಎಷ್ಟಿತ್ತೆಂಬುದು ಶಾಸನಗಳಲ್ಲಿನ ಉಲ್ಲೇಖಿತ ಸಾಲುಗಳಿಂದ ತಿಳಿಯುತ್ತದೆ. ಕ್ರಿ.ಶ. ೬೮೫ರ ಶಾಸನವು ಒಕ್ಕಲ್ತನಂ ಕೆಯ್ವೊನ್ ವಿತ್ತಿದಲ್ಲಿ ವೆಳೆಯಾಗದೆ ಕೆಡುಗೆ,'[೧೭] 'ಯಸ್ಯ ಯಸ್ಯಯದಾ ಭೂಮಿ ತಸ್ಯ ತಸ್ಯ ತದಾ ಫಲಂ'[೧೮] ಎಂಬ ಮಾತುಗಳು ಕೃಷಿ ಬದುಕು ಮತ್ತು ಬೆಳೆಗಳ ಬಗೆಗೆ ತಿಳಿಸುತ್ತವೆ. ಬೆಳೆಗಳನ್ನು ಬೆಳೆಯುವ, ಆವಿಷ್ಕರಿಸುವ ಅನಿವಾರ್ಯತೆಯ ಹಿಂದೆ ಮಾನವನ ಸತತ ಪರಿಶ್ರಮ ಅಡಗಿದೆ. ಇದರ ಅನಿವಾರ್ಯತೆ ಏನಿತ್ತು? ಎಂದು ಗಮನಿಸಿದಾಗ ಬೇಟೆ ಆಡುವ ಮಾನವನಿಗೆ ವರ್ಷದ ಎಲ್ಲ ಋತುಗಳಲ್ಲೂ ಬೇಟೆ ಸಿಗುತ್ತಿರಲಿಲ್ಲ. ಸಿಗದ ಅನಿವಾರ್ಯತೆಯಲ್ಲಿ ಬೆಳೆಗಳ ಆವಿಷ್ಕಾರಗಳಾಗಿರುವ ಸಾಧ್ಯತೆಗಳಿವೆ. ಆದರೆ ಅವುಗಳು ಭೂಮಿಯ ಅಳತೆ, ಮಣ್ಣಿನ ವಿಧಗಳು,

ವ್ಯಾಪಾರ, ವಾಣಿಜ್ಯ ಮತ್ತು ತೆರಿಗೆ ಮೊದಲಾದವುಗಳೊಂದಿಗೆ ತಳುಕು ಹಾಕಿಕೊಂಡಿರುವುದು ಕಂಡುಬರುತ್ತದೆ. ಶಾಸನಗಳನ್ನು ಆಧರಿಸಿ ಬೆಳೆಗಳನ್ನು ಆಹಾರದ ಬೆಳೆಗಳು, ತೋಟಗಾರಿಕಾ ಬೆಳೆಗಳು, ವಾಣಿಜ್ಯ ಬೆಳೆಗಳೆಂದು ವಿಂಗಡಿಸಲಾಗಿದೆ. ಈ ಬೆಳೆಗಳನ್ನು ಭೂಮಿ ಮತ್ತು ಹವಾಮಾನಕ್ಕೆ ಅನುಗುಣವಾಗಿ, ಋತುಮಾನಗಳಿಗೆ ಅನುಗುಣವಾಗಿ ಬೆಳೆಯಲಾಗುತ್ತದೆ. ಬೆಳೆ ಬೆಳೆಯುವ ಮುನ್ನ ಪ್ರಾಚೀನ ಕೃಷಿಕರು ತಾವೇ ಬೀಜ ಸಂಸ್ಕರಣ ಮಾಡಿಕೊಳ್ಳುತ್ತಿದ್ದರು. ಶಾಸನಗಳಲ್ಲಿ ಈ ಕುರಿತ ಮಾಹಿತಿ ಲಭ್ಯವಾಗುವುದಿಲ್ಲ. ಆದರೆ ಪ್ರಾಚೀನ ಸಾಹಿತ್ಯ ಕೃತಿಗಳು ಈ ಕುರಿತು ಮಾಹಿತಿಯನ್ನು ಒದಗಿಸುತ್ತವೆ. ಕೌಟಿಲ್ಯನು ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ ಹೀಗೆ ಹೇಳಿದ್ದಾನೆ. "ಬಿತ್ತನೆಯ ಬೀಜಗಳನ್ನು ರಾತ್ರಿ ಕಾಲದಲ್ಲಿ ಹಿಮದಲ್ಲಿಯೂ, ಹಗಲಿನಲ್ಲಿ ಬಿಸಿಲಿನಲ್ಲಿಯೂ ಏಳೂ ದಿನಗಳವರೆಗೆ ಇಡಬೇಕು. ಹೆಸರು, ಉದ್ದೇ(ಉದ್ದು) ಮುಂತಾದುವನ್ನು ಹಿಮಬಿಸಿಲುಗಳಲ್ಲಿ ಮೂರು ಅಥವಾ ಐದು ದಿನಗಳವರೆಗಿಟ್ಟರೆ ಸಾಕು. ಜೇನು, ತುಪ್ಪ ಮತ್ತು ಹಂದಿಯ ಕೊಬ್ಬುಗಳನ್ನು ಹಸುವಿನ ಸಗಣಿಯೊಡನೆ ಬೆರಸಿ ಬೀಜಕ್ಕಾಗಿ ಕತ್ತರಿಸಿದ ಕಟ್ಟಿನ ಭಾಗಕ್ಕೆ ಹಚ್ಚಬೇಕು. ಬೀಜಕ್ಕಾಗಿ ಕತ್ತರಿಸಿದ ಚೂರ್ಣವೇ ಮುಂತಾದ ಗೆಡ್ಡೆ ಗೆಣಸುಗಳ ಭಾಗಕ್ಕೆ ತುಪ್ಪ ಜೇನುಗಳನ್ನು ಬೆರಸಿ ಹಚ್ಚಬೇಕು. ಹತ್ತಿಯ ಬೀಜವೇ ಮುಂತಾದವನ್ನು ಸಗಣಿಯಿಂದ ಲೇಪಿಸಬೇಕು. ಮಾವು, ಹಲಸು ಮೊದಲಾದ ಗಿಡಗಳನ್ನು ನೆಡುವ ಗುಂಡಿಗಳನ್ನು ಸುಡಬೇಕು. ಹಸುವಿನ ಮೂಳೆ, ಸಗಣಿ ಮುಂತಾದ ಗೊಬ್ಬರವನ್ನು ಹಾಕಬೇಕು. ಅದಕ್ಕೆ ದೋಹವನ್ನೆಸಬೇಕು(ಹಾಲು). ಆ ಮರಗಳು ಚಿಗುರಿಟ್ಟೊಡನೆ ಅವುಗಳ ಬುಡದಲ್ಲಿ ಸಣ್ಣ ಹಸಿಯ ಮೀನುಗಳನ್ನು ಹಾಕಿ ಕಳ್ಳಿ(ಸ್ನುಪಿ)ಯ ಹಾಲಿನಿಂದ ತೊಯ್ಯಿಸಬೇಕು."[೧೯] ಈ ಪದ್ಧತಿ ಕೆಲವು ಗ್ರಾಮೀಣ ಪರಿಸರದಲ್ಲಿ ಇಂದಿಗೂ ಕಂಡುಬರುತ್ತದೆ. ಆದರೆ ಕೆಲವು ಬೆಳೆಗಳ ಬೀಜಗಳಿಗೆ ಮಾತ್ರ ಈ ರೀತಿಯ ಸಂಸ್ಕರಣೆ ಮಾಡುವುದು ಕಂಡುಬರುತ್ತದೆ. ಅಡಕೆ ಗೋಟು, ತೆಂಗಿನ ಗೋಟು, ಮಾವು, ಹುಣಸೆ, ಹಲಸು ಮೊದಲಾದ ಬೀಜಗಳಿಗೆ ಸಗಣಿಯ ಗೊಬ್ಬರ ಮಾಡಿ ಅವುಗಳಲ್ಲಿ ನೆನೆಸಿಡುವ ವಿಧಾನ ರೂಢಿಯಲ್ಲಿದೆ. ಬಹುಬೇಗನೆ ಹುಳು ಹಿಡಿಯುವ ಧಾನ್ಯಗಳಾದ ತೊಗರಿ, ಅವರೆ, ಅಲಸಂದಿ, ಉದ್ದು, ಹೆಸರು, ಜೋಳ ಮೊದಲಾದ ಧಾನ್ಯಗಳಿಗೆ ಹರಳೆಣ್ಣೆ ಬೆರಸಿ ಬೇವಿನ ಹೊಟ್ಟು ಮತ್ತು ಎಣ್ಣೆಯನ್ನು ಹಾಕಿಡುವ ಕ್ರಮವಿದೆ. ಹೀಗೆ ಮಾಡಿದರೆ ಧಾನ್ಯಗಳು ಹುಳು ಹಿಡಿಯುವುದಿಲ್ಲ. ಕಳ್ಳಿಯ ಹಾಲು ವಿಷಪೂರಿತವಾಗಿರುತ್ತದೆ. ಅದನ್ನು ಬಳಸಿದರೆ ಕೀಟಬಾಧೆ ತಗಲುವುದಿಲ್ಲ ಎಂಬ ಕಾರಣದಿಂದಾಗಿ ಕಳ್ಳಿಯ ಹಾಲನ್ನು ಚಿಗುರಿದ ಬುಡಗಳಿಗೆ ತೊಯ್ಯಿಸಿರುವ ಸಾಧ್ಯತೆಗಳಿವೆ.

ಕಾರ್ಪಾಸಸಾರಂ ನಿರ್ಮೋಕಂ ಸರ್ಪಸ್ಯ ಚ ಸ್ತಮಾಹರೇತ್
ನ ಸರ್ಪಾಸ್ತತ್ರತಿಷ್ಠಂತಿ ಧೂಮೋಯತ್ರೈಷತಿಷತಿ[೨೦]

ಹತ್ತಿಯ ಬೀಜದ ಸಾರ ಮತ್ತು ಹಾವಿನ ಪೊರೆ ಎರಡನ್ನು ಸೇರಿಸಿ ಸುಡುವುದು. ಸುಟ್ಟ ಈ ಹೊಗೆಯಿಂದ ಬೆಳೆಗಳಲ್ಲಿ ಹಾವು, ಕೀಟಗಳ ಬಾಧೆಯನ್ನು ತಪ್ಪಿಸಬಹುದು ಎಂದು ಕೌಟಿಲ್ಯ ಹೇಳಿದ್ದಾನೆ. ಬಿತ್ತನೆಯ ಬೀಜಗಳನ್ನು ಸುವರ್ಣಯುಕ್ತ ನೀರಿನಲ್ಲಿ ನೆನೆಸಿ ಮೊದಲೊಂದು ಮುಷ್ಟಿ ಬಿತ್ತುವಾಗ ದೇವರನ್ನು ಸ್ತುತಿಯಬೇಕೆಂದು ಹೇಳುವಾಗ

ಪ್ರಜಾಪತಯೇ ಕಾಶ್ಯಪಾಯದೇವಾಯ ಚ ನಮಸ್ಸದಾ।
ಸೀತಾಯೇ ಋಧ್ಯತಾ ದೇವೀ ಬೀಜೇಷು ಚ ಧನೇಷ ಚ॥[೨೧]

ಪ್ರಜಾಪತಿ, ಕಾಶ್ಯಪನೆನಿಸಿದ ಪರ್ಜನ್ಯನಿಗೆ(ಮಳೆಸುರಿಸುವ ರಾಮನಿಗೆ) ಕೃಷಿಯು ವೃದ್ಧಿಸಲಿ, ಬೀಜಗಳಲ್ಲಿಯೂ, ಐಶ್ವರ್ಯದಲ್ಲಿಯೂ ನೆನಸಲಿ ಎಂದು ಪ್ರಾರ್ಥಿಸಬೇಕೆಂದು ತಿಳಿಸಿದ್ದಾನೆ. ಇಂದಿಗೂ ಬಿತ್ತುವ ಮುನ್ನ ಭೂಮಿತಾಯಿಗೆ, ಮಳೆರಾಯನಿಗೆ ಪೂಜೆಯ ಮೂಲಕ ನಮಸ್ಕರಿಸಿ

ವಂದಿಸುವುದಿದೆ. ಐಶ್ವರ್ಯ ನೆಲೆಸಲಿ ಎಂದು ಹೇಳಿರುವುದನ್ನು ಗಮನಿಸಿದರೆ ಬೆಳೆಗಳು ಆರ್ಥಿಕತೆಯ ಭಾಗಗಳಾಗಿದ್ದಿರುವ ಸಾಧ್ಯತೆಗಳಿವೆ. ವ್ಯವಸಾಯವನ್ನು ನೀರಿನ ಅಗತ್ಯತೆಗೆ ಅನುಗುಣವಾಗಿ ಬೆಳೆಯಬೇಕು. ಆಯಾ ಋತುಗಳಿಗೆ ಅನುಗುಣವಾಗಿ ಹೇಮಂತ ಋತು, ಬೇಸಗೆ ಮೊದಲಾದ ಸಮಯಗಳಲ್ಲಿ ಬೆಳೆಗಳನ್ನು ಹವಾಮಾನಗಳಿಗೆ ಅನುಗುಣವಾಗಿ ಬೆಳೆಯಬೇಕೆಂಬ ಸೂಚನೆಯಿದೆ. ಕೌಟಿಲ್ಯ 'ಭತ್ತ ಶ್ರೇಷ್ಠ, ಬಾಳೆ ಮಧ್ಯಮ, ಕಬ್ಬು ನಿಕೃಷ್ಟ'[೨೨] ಎಂದಿದ್ದಾನೆ. ಈ ಮಾತುಗಳು ಆರ್ಯಸಿದ್ಧಾಂತವನ್ನು ಪ್ರತಿಪಾದಿಸಿದಂತಿದೆ. ಹಾಗೆಯೇ ಸಾಂಸ್ಕೃತಿಕ ರಾಜಕಾರಣದ ಸೂಕ್ಷ್ಮತೆಗಳಿವೆ. ಕಬ್ಬನ್ನು ಬೆಳೆಯುವುದು ಹೆಚ್ಚು ವೆಚ್ಚ ಮತ್ತು ಶ್ರಮದಾಯಕವೇ ಸರಿ. ಆದರೆ ಭತ್ತವನ್ನು ಶ್ರೇಷ್ಠವೆಂದಿರುವುದು ಏತಕ್ಕಾಗಿ ಎಂದು ಗಮನಿಸಿದರೆ, ಭತ್ತ ಬ್ರಾಹ್ಮಣರ ಆಹಾರ ಪದ್ಧತಿಯಾಗಿತ್ತು. ಈ ಕಾರಣಗಳಿಂದಾಗಿ ಭತ್ತವು ಶ್ರೇಷ್ಠ ಬೆಳೆ. ಈ ಬೆಳೆಯೂ ಶ್ರಮದಾಯಕವೇ ಎಂಬ ಅಂಶವು ಸಹ ಗಮನಾರ್ಹ. ಯಾವ ಬೆಳೆಯನ್ನು ಎಲ್ಲಿ ಬೆಳೆಯಬೇಕೆಂಬ ಸೂಚನೆಗಳು ಅರ್ಥಶಾಸ್ತ್ರ ಕೃತಿಯಲ್ಲಿವೆ. ಬಳ್ಳಿಗಳಲ್ಲಿ ಬಿಡುವ ಕುಂಬಳಕಾಯಿ, ಸೌತೆಕಾಯಿ ಮೊದಲಾದವುಗಳನ್ನು ಜಲಪರ್ಯಂತ ಭೂಮಿಯಲ್ಲಿ ಬೆಳೆಯಬೇಕು. ನೀರು ಮೇಲೇರಿ ಬರುವ ಪ್ರದೇಶಗಳಲ್ಲಿ ಹಿಪ್ಪಲಿ(ಮೆಣಸಿನ ಒಂದು ಜಾತಿ), ದ್ರಾಕ್ಷಿ, ಕಬ್ಬು ಬೆಳೆಗಳನ್ನು ಬೆಳೆಯಲು ಯೋಗ್ಯವಾಗಿರುತ್ತದೆ. ಬಾವಿ ಮೊದಲಾದ ನೀರಿನ ಸಂಗ್ರಹದ ಸಮೀಪ ತರಕಾರಿ ಗೆಡ್ಡೆಗೆಣಸು ಬೆಳೆಗಳನ್ನು ಬೆಳೆಯಲು ಸಾಧ್ಯವಾಗುತ್ತದೆ. ಕಾಲುವೆಗಳ ಸಮೀಪ 'ಹುಲ್ಲೇ'[೨೩] ಮೊದಲಾದವುಗಳನ್ನು ಬೆಳೆಯಬಹುದಾಗಿದೆ. ಮಧ್ಯದಲ್ಲೆಸಗಿದ ಸೇತುವೆಯ ಬಳಿ 'ಕೊಯ್ದು ಜಟಾಮಾಂಸಿ ಕಾಡುಸಬ್ಬಸಿಗೆ, ಲಾವಂಚ, ಹ್ರೀಬೇರ ಮತ್ತು ರೋಮಕಂದಗಳಂತಹ ಬೀಜಗಳನ್ನು ಬಿತ್ತಲು ಯೋಗ್ಯ. 'ಸ್ಥಲಜಲ ಪ್ರದೇಶಗಳಲ್ಲಿ ಆಯಾ ಪ್ರದೇಶಗಳಿಗೆ ಅನುಗುಣವಾಗಿ ಔಷಧಿ ಬೆಳೆಗಳನ್ನು ಬೆಳೆಸಬೇಕು.'[೨೪] ಎಂದು ತಿಳಿದುಬರುತ್ತದೆ.

ಬೀಜ ಸಂಸ್ಕರಣೆ ಕುರಿತಂತೆ ಗಂಗ ದೊರೆ ನಾಲ್ಕನೆಯ ರಾಚಮಲ್ಲನ ಮಂತ್ರಿ ಚಾವುಂಡರಾಯನು ತನ್ನ ಲೋಕೋಪಕಾರ ಕೃತಿಯಲ್ಲಿ ಪ್ರಸ್ತಾಪಿಸಿದ್ದಾನೆ. ವರಾಹಮಿಹಿರನು ವೃಕ್ಷಾಯುರ್ವೇದ ಅಧ್ಯಾಯದಲ್ಲಿ ಬಿತ್ತನೆಗೆ ಮೊದಲು ಬೀಜೋಪಚಾರ ಮಾಡುವ ಕ್ರಮದ ಕುರಿತು ಹೀಗೆ ಹೇಳುತ್ತಾನೆ.

ವಾಸರಾಣಿ ದಶ ದುಗ್ಧಬಾವಿತಂ ಬೀಜಮಾಜ್ಯಯುತ ಹಸ್ತ ಯೋಜಿತಮ್।
ಗೋಮಯೇನ ಬಹುಶೋ ವಿರೂಕ್ಷಿತಂ ಕ್ರೌಢಮಾರ್ಗ ಪಿಶಿತೈಶ್ಚ ಧೂಪಿತಮ್॥
ಮಾಂಸ ಸೂಕರವ ಸಾಸಮನಿತ್ವಂ ರೋಪಿತಂ ಚ ಪರಿಕರ್ಮಿತಾವಸೌ
ಕ್ಷೀರ ಸಂಯುತ ಜಲಾವಸೇಚಿತಂ ಜಾಯತೇ ಕುಸುಮ ಯುಕ್ತಮೇವತತ್[೨೫]

ಚಾವುಂಡರಾಯನು ವರಾಹಮಿಹಿರ ಹೇಳಿರುವ ಬೀಜೋಪಚಾರ ಕ್ರಮಕ್ಕೆ ಹಿಂಬು ಕೊಡುವಂತೆ ಹೀಗೆ ಹೇಳುತ್ತಾನೆ.

ಸ್ವಯಂ ಪತಿತ ಸಾರಪಕ್ವಫಳ ಬೀಜಮಂಕೊಂಡು
ಗೋಮಯಂ ಬೊರೆದು ಪಂಚರಾತ್ರಿಯೊಳಗಣಂಗೆ ಸಪ್ತಾಹಮಂ
ಪಯಃ ಪ್ರಯುತಮಾಗೆ ಮಾಡಿ ಬೃಹತೀತ ಫಳಕ್ಷಾರ ವಾ
ರಿಯೊಳ್ ಪುದಿದುಕೊಂಡು ಧೂಪಿಸಿ ವಿಳಂಗದಿಂ ತುಪ್ಪದಿಂ
ಅವನಿಂಬಾಗಿರೆ ಪರಮೋ
ತ್ಸವದಿಂ ಶುಭಲಗ್ನಮೊಂದಿ ಬರೆ ಕುಟಿಯೊಳ್ ಬಿ

ತ್ತುವುದೊಯ್ಯನೆ ತಿಳಿವುದು ಮಾಂ
ಸವಾರಿಯಂ ಸಸಿಗಳೊದವಿದಾಂಗುಡಿ ವಿಡುಗಂ[೨೬]

ಅರ್ಥಶಾಸ್ತ್ರಕಾರನ ಮಾತುಗಳು ಇಲ್ಲಿಯೂ ಮುಂದುವರೆದಿರುವುದು ಕಂಡುಬರುತ್ತದೆ. ತುಪ್ಪಸವರಿದ ಬೀಜಗಳನ್ನು ಅಂಗೈಯಲ್ಲಿ ತೆಗೆದುಕೊಂಡು ಹಾಲಿಗೆ ಹಾಕುವುದು. ಮರುದಿನ ಬೆಳಗ್ಗೆ ಜಿಡ್ಡು ಸವರಿದ ಕೈಗಳಿಂದಲೇ ಬೀಜಗಳನ್ನು ಹಾಲಿನಿಂದ ತೆಗೆಯಬೇಕು. ಬೀಜಗಳು ಹಾಲಿನಲ್ಲಿ ಇದ್ದ ಕಾರಣದಿಂದಾಗಿ ಒಂದಕ್ಕೊಂದು ಅಂಟಿಕೊಂಡಿರುತ್ತವೆ. ಅಂಟಿಕೊಂಡಿರುವ ಆ ಬೀಜಗಳನ್ನು ಬೇರ್ಪಡಿಸಬೇಕು. ಈ ರೀತಿಯಾಗಿ ಹತ್ತು ದಿನಗಳವರೆಗೆ ಇಡೀ ಕ್ರಮವನ್ನು ಮುಂದುವರಿಸಬೇಕು. ನಂತರ ಎಚ್ಚರಿಕೆಯಿಂದ ಬೀಜಗಳನ್ನು ಸಗಣಿಯಲ್ಲಿ ಉಜ್ಜಿ ಹಂದಿ ಇಲ್ಲವೇ ಜಿಂಕೆಯ ಮಾಂಸವಿರುವ ಪಾತ್ರೆಗೆ ಹಾಕಬೇಕು ತದನಂತರ ಆವಿಯಲ್ಲಿ ಬೇಯಿಸಬೇಕು. ಹೀಗೆ ಮಾಡಿದ ಬೀಜಗಳನ್ನು ಮಾಂಸದ ಕೊಬ್ಬಿನೊಂದಿಗೆ ಮಣ್ಣಿನಲ್ಲಿ ಬಿತ್ತಬೇಕು. ಬಿತ್ತುವುದಕ್ಕೂ ಮೊದಲು ಆ ನೆಲದಲ್ಲಿ ಎಳ್ಳಿನ ಬೆಳೆ ತೆಗೆದಿರಬೇಕು. ಇಲ್ಲವೆ ನೆಲವನ್ನು ಉಳುಮೆಮಾಡಿ ಬಿಟ್ಟಿರಬೇಕು. ನಿತ್ಯವೂ ಹಾಲು ಬೆರೆಸಿದ ನೀರನ್ನು ಚಿಮುಕಿಸುತ್ತಿರಬೇಕು. ಎಳ್ಳುಬೀಜಗಳನ್ನು ಬಿತ್ತಿದ ನೆಲವು ವಿಷಯುಕ್ತವಾಗಿರುತ್ತದೆ. ಈ ಭೂಮಿಯಲ್ಲಿ ನಂತರ ಬೆಳೆಯುವ ಬೆಳೆಗೆ ಕಳೆಯ ಪ್ರಮಾಣ ಕಡಿಮೆ ಇರುತ್ತದೆ. ಭೂಮಿಯು ಹಸನಾಗಿ ಬಿತ್ತಲು ಯೋಗ್ಯವಾಗಿರುತ್ತದೆ.

ಸೊಂಪಾಗಿ, ಸಮೃದ್ಧಿಯಾಗಿ ಬೆಳೆದು ಬಲಿತು ತಾವಾಗಿಯೇ ಉದುರಿಬಿದ್ದ ಹಣ್ಣಿನ ಜೀಜಗಳನ್ನು ತೆಗೆದುಕೊಂಡು ಸಗಣಿಯಲ್ಲಿ ಕಲಸುವುದು, ಆ ಬೀಜಗಳನ್ನು ಐದು ದಿನ ಒಣಗಿಸಿ ಬಳಿಕ ಹಾಲಿನಲ್ಲಿ ನೆನೆಸುವುದು. ನಂತರ ತೆಗೆದು ಗುಳ್ಳದ ಹಣ್ಣಿನ ರಸ ಮತ್ತು ಎಳ್ಳು ನೀರು ಬೆರಸಿ ವಾಯುವಿಳಂಗ, ತುಪ್ಪದ ಧೂಪ ಕೊಡಬೇಕು. ಇಂತಹ ಬೀಜಗಳನ್ನು ಶುಭಲಗ್ನದಲ್ಲಿ ಬಿತ್ತುವುದು. ಅವುಗಳಿಗೆ ಮಾಂಸೋದಕ ತಳಿಯಲು ಗಿಡಗಳು ಚೆನ್ನಾಗಿ ಕುಡಿಚಾಚಿ ಬೆಳೆಯುತ್ತವೆ. ಚಾವುಂಡರಾಯನ ಬೀಜೋಪಚಾರ ಅಥವಾ ಬೀಜ ಸಂಸ್ಕರಣಾ ವಿಧಾನ ಏಕೆ ಸೂಕ್ತ ಎಂಬುದನ್ನು ಗಮನಿಸಿದರೆ ಬೀಜಗಳು ಜಿಡ್ಡಿನ ಪದಾರ್ಥದಲ್ಲಿ ಮಿಶ್ರಣಗೊಳ್ಳುವುದರಿಂದ ಬೀಜಗಳು ಹುಳು ಹಿಡಿಯದಂತೆ ಸುರಕ್ಷಿತವಾಗಿರುತ್ತವೆ. ಬೀಜ ಮೊಳೆಯುವಾಗ ಕೀಟ ಬಾಧೆ ತಪ್ಪುತ್ತದೆಂಬ ಸೂಕ್ಷ್ಮತೆಯ ಅಂಶಗಳು ಅಡಗಿರುವ ಸಾಧ್ಯತೆಗಳಿವೆ. ಇಂದು ಸಹ ಕೆಲವು ಬೀಜಗಳನ್ನು ಬಿತ್ತನೆಯ ಹಿಂದಿನ ದಿನ ಅಥವಾ ಕೆಲವು ಗಂಟೆಗಳ ಕಾಲ ನೀರಿನಲ್ಲಿ ತೊಯ್ಸಿಡಲಾಗುತ್ತಿದೆ. ಭೂಮಿಯಲ್ಲಿ ಕೆಲವೊಮ್ಮೆ ಮಳೆ ಕಡಿಮೆಯಾದ ಸಂದರ್ಭದಲ್ಲಿ ತೇವಾಂಶ ಕಡಿಮೆಯಿರುತ್ತದೆ. ಬಿತ್ತಿದ ನಂತರ ಸಾಲುಮುಚ್ಚಲು ಸಮಯ ತೆಗೆದುಕೊಳ್ಳುವ ಸಂದರ್ಭಗಳು ಎದುರಾಗುತ್ತವೆ. ಇಂತಹ ಸಂದರ್ಭದಲ್ಲಿ ಹಸಿಬೀಜಗಳು ಭೂಮಿ ಸೇರುವುದರಿಂದ ಹಸಿಗೆ ಹಸಿಗೂಡಿಕೊಂಡು ಬೇಗ ಮೊಳಕೆಯೊಡೆಯಲು ಸಾಧ್ಯವಾಗುತ್ತದೆ. ಕೌಟಿಲ್ಯ, ವರಾಹಮಿಹಿರ ಹಾಗೂ ಚಾವುಂಡರಾಯರು ನೀಡಿರುವ ಬೀಜ ಸಂಸ್ಕರಣ ವಿಧಾನಗಳನ್ನು ಇಂದಿನ ಕೃಷಿ ಬದುಕಿಗೆ ಅನ್ವಯಿಸಿಕೊಳ್ಳುವ ಅಗತ್ಯತೆಗಳಿವೆ. ಪರಂಪರಾನುಗತವಾಗಿ ಬಂದಿರುವ ಪ್ರಾಚೀನ ಬೀಜ ಸಂಸ್ಕರಣ ವಿಧಾನಗಳ ಜ್ಞಾನವನ್ನು ಕೃಷಿಕರು ಮರು ಪರಿಶೀಲನೆ ಮತ್ತು ಪರೀಕ್ಷೆಗೊಳಪಡಿಸಬೇಕು. ಈ ಜ್ಞಾನವನ್ನು ಬಳಸಿಕೊಂಡು ಆಧುನಿಕತೆಯಿಂದ ಪರಾವಲಂಬನೆಗೆ ಸರಿದಿರುವ ಬಿತ್ತನೆ ಬೀಜಗಳನ್ನು ದೇಶೀ ಜ್ಞಾನದ ಮೂಲಕ ತಾವೇ ಸಂಸ್ಕರಿಸಿಕೊಂಡು ಸ್ವಾವಲಂಬಿಗಳಾಗುವ ಅಗತ್ಯವಿದೆ. ಇದರಿಂದಾಗಿ ರಾಸಾಯನಿಕ ವಸ್ತುಗಳು ಮಣ್ಣು ಸೇರಿಕೊಂಡು ಅಳಿವಿನಂಚಿನಲ್ಲಿರುವ ಭೂಮಿಯನ್ನು ರಕ್ಷಿಸಲು ಸಹಾಯವಾಗುತ್ತದೆ. ಬೆಳೆಗಳಿಗೆ ಸಂಬಂಧಿಸಿದಂತೆ ಮೇಲೆ ಪ್ರಸ್ತಾಪಿಸಲಾಗಿದ್ದು, ಬೆಳೆಗಳ ವಿಧಗಳನ್ನು ಕುರಿತು ಈ ಕೆಳಗೆ ಚರ್ಚಿಸಲಾಗಿದೆ.

## ೨.೧ ಬೆಳೆಗಳ ವಿಧಗಳು

### ೨.೧.೧. ಆಹಾರ ಬೆಳೆಗಳು

ಜನರು ತಮ್ಮ ದಿನನಿತ್ಯದ ಜೀವನಾವಶ್ಯಕತೆಗಾಗಿ, ಹಸಿವಿನ ಇಂಗಿತವನ್ನು ನೀಗಿಸುವ ಸಲುವಾಗಿ ಬೆಳೆಯುವ ಬೆಳೆಗಳು ಆಹಾರದ ಬೆಳೆಗಳಾಗಿರುತ್ತವೆ. ಈ ಬೆಳೆಗಳನ್ನು ಆಯಾ ಪ್ರದೇಶದ ಆಹಾರ ಸಂಸ್ಕೃತಿ ಮತ್ತು ಪ್ರಾಕೃತಿಕ ಲಕ್ಷಣಗಳಿಗೆ ಅನುಗುಣವಾಗಿ ಬೆಳೆಯಲಾಗುತ್ತದೆ. ಈ ಬೆಳೆಗಳನ್ನು ಮುಂಗಾರಿನ ಬೆಳೆಗಳು ಮತ್ತು ಹಿಂಗಾರಿನ ಬೆಳೆಗಳೆಂದು ವರ್ಗೀಕರಿಸಲಾಗಿದೆ. ಬೇಸಿಗೆ ಕಾಲದ ಬೆಳೆಗಳನ್ನು 'ಖಾರಿಫ್' ಬೆಳೆಗಳೆಂದು ಕರೆಯಲಾಗುತ್ತದೆ. ಮಾಗಿಯ ಬೆಳೆಗಳು ಅಥವಾ ಚಳಿಗಾಲದ ಹಿಂಗಾರಿನ ಬೆಳೆಗಳನ್ನು 'ರಬಿ' ಬೆಳೆಗಳೆಂದು ಕರೆಯಲಾಗುತ್ತದೆ. ಮುಂಗಾರು ಮತ್ತು ಹಿಂಗಾರಿನ ಬೆಳೆಗಳನ್ನು ಮಳೆಯಾಶ್ರಿತ ಬೆಳೆಗಳು ಮತ್ತು ನೀರಾವರಿ ಆಶ್ರಿತ ಬೆಳೆಗಳೆಂದು ವರ್ಗೀಕರಿಸಲಾಗುತ್ತದೆ. ಬೆಳೆಗಳನ್ನು ಬೆಳೆಯವುದಕ್ಕೆ ಅನುಕೂಲಕರವಾದ ಮಳೆಗಳ ಕುರಿತ ಮಾಹಿತಿಯು ಈ ರೀತಿ ತಿಳಿದುಬಂದಿದೆ. ಅದನ್ನು ಈ ಕೆಳಗೆ ಗಮನಿಸಬಹುದಾಗಿದೆ.

ತ್ರಯಸ್ಸಾಪ್ತಾಹಿಕಾ ಮೇಘಾಃ ಅಶೀತಿಃ ಕಣಶೀಕರಾಃ।
ಷಷ್ಟಿರಾತಪ ಮೇಘಾನಾಂ ಏಷಾವೃಷ್ಟಿಸ್ಸಮಾಹಿತಾ॥[೨೭]

ಮೂರು ಮೇಘಗಳು ಏಳು ದಿನಗಳ ಕಾಲ ಹಗಲಿರುಳೆನ್ನದೆ ಮಳೆ ಸುರಿಸುವವು. ಎಂಭತ್ತು ಮೋಡಗಳು ತುಂತುರು ಮಳೆಯನ್ನು ಸುರಿಸುವವು. ಅರವತ್ತು ಮೋಡಗಳು ಬಿಸಿಲಿನಿಂದ ಕೂಡಿದವು. ಇಂಥ ಮೇಘಗಳಿಂದ ಲೋಕಕ್ಕೆ ಶ್ರೇಯಸ್ಸಾಗುತ್ತದೆ[೨೮]. ಮಳೆಯ ಬಗೆಗಿನ ಜ್ಞಾನವನ್ನು ಮಳೆಬೀಳುವ ಕಾಲ ಮೊದಲಾದವುಗಳನ್ನು ಆಧರಿಸಿ ಉಲ್ಲೇಖಿಸಿರುವುದು ಕಂಡುಬರುತ್ತದೆ.

ವಾತಮಾ ತಪಯೋಗಂ ಚ ವಿಭಜಿನ್ ಯತ್ರವರ್ಷತಿ।
ತ್ರೀನ್‌ಕರ್ಷಕಾಂಶ್ಚಜನಯನ್ ತತ್ರಸಸ್ಯಾಗಮೋಧುವಃ॥[೨೯]

ಗಾಳಿ ಬಿಸಿಲುಗಳ ಸಂಪರ್ಕವಿಲ್ಲದೆ ಮಳೆಯು ಸುರಿದು ಮೂರು ಕೃಷಿಗಳನ್ನು ಮಾಡಲು ಸಾಧ್ಯವಾಗುವ ಪ್ರದೇಶಗಳಲ್ಲಿ ಸಸ್ಯಗಳು ಬೆಳೆಯುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಮೇಲೆ ತಿಳಿಸಿದ ಸಾಲುಗಳಲ್ಲಿ ಹೇಳಿರುವ ಅಂಶಗಳನ್ನು ಪ್ರತಿ ವರ್ಷ ಸೂಕ್ಷ್ಮವಾಗಿ ಗಮನಿಸಬೇಕು. ಹಾಗೆ ಮಾಡಿ ಅದಕ್ಕನುಗುಣವಾಗಿ ಬಹುಜಲ ಸಾಧ್ಯತೆ ಮತ್ತು ಅಲ್ಪಜಲ ಸಾಧ್ಯತೆಯ ಬೆಳೆಗಳನ್ನು ಬೆಳೆಯಲು ಸಾಧ್ಯವಾಗುತ್ತದೆ. ಅರ್ಥಶಾಸ್ತ್ರಕಾರನು ಮೊದಲು ಮಧ್ಯ ಮತ್ತು ಕೊನೆಯಲ್ಲಿ ಬಿತ್ತುವ ಬೆಳೆಗಳನ್ನು ಉಲ್ಲೇಖಿಸಿದ್ದಾನೆ. "ಭತ್ತ, ಕೆಂಭತ್ತ, ಹಾರಕ, ಎಳ್ಳು, ನವಣೆ, ವರಕಗಳನ್ನು ಮೊದಲು, ಹೆಸರು, ಉದ್ದು, ಶೇಂಬ್ಯ ಮಧ್ಯಕಾಲದಲ್ಲಿ, ಕುಸುಂಬ, ಕಡಲೆ, ಹುರುಳಿ, ಹೊಟ್ಟೆಗೋಧಿ, ನೆಲಗಡಲೆ, ಅಗಸೆ ಮತ್ತು ಸಾಸಿವೆಗಳನ್ನು ಕೊನೆಯಲ್ಲಿ ಬಿತ್ತಲಾಗುವುದೆಂದು"[೩೦] ಹೇಳಿದ್ದಾನೆ.

### ಮುಂಗಾರಿನ ಬೆಳೆಗಳು

ಮುಂಗಾರಿನ ಬೆಳೆಗಳಲ್ಲಿಯೂ ಕೆಲವು ನೀರಾವರಿ ಆಶ್ರಿತ ಬೆಳೆಗಳು ಕಂಡುಬರುತ್ತವೆ. ಎಲ್ಲ ಸಂದರ್ಭದಲ್ಲೂ, ಮಳೆಯು ನಿಯತವಾಗಿ ಬಾರದ ಸಂದರ್ಭದಲ್ಲಿ ಪರ್ಯಾಯವಾಗಿ ಸಂಗ್ರಹವಾದ ನೀರಿನಿಂದ ಬೆಳೆಯುವ ಬೆಳೆಗಳು ನೀರಾವರಿ ಬೆಳೆಗಳಾಗಿರುತ್ತವೆ.

**ನೀರಾವರಿ ಆಶ್ರಿತ ಆಹಾರ ಬೆಳೆಗಳು**

ನೀರಾವರಿ ಆಶ್ರಿತ ಬೆಳೆಗಳು ಸಹಜವಾಗಿಯೇ ಕೆರೆ, ಬಾವಿ, ಕಾಲುವೆ, ಅಣೆಕಟ್ಟು ಮೊದಲಾದ ನೀರಿನ ಆಶ್ರಯದಲ್ಲಿ ಬೆಳೆಯುತ್ತವೆ. ಅವುಗಳಲ್ಲಿ ಪ್ರಮುಖ ಬೆಳೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಭತ್ತ**

ಈ ಬೆಳೆಯು ಪ್ರಾಚೀನ ಬೆಳೆಗಳಲ್ಲಿ ಒಂದಾಗಿದೆ. ಇದನ್ನು ಕವಳಿ, ಕಳವೆ, ಕಳವಿ, ಕವಳೆ, ಕಳೆವೆ, ನೆಲ್ಲು, ವ್ರೀಹಿ, ಸಾಲಿ, ಶಾಲಿ ಎಂದೆಲ್ಲ ಕರೆಯುತ್ತಾರೆ. ಪುರಾತತ್ವ ಶೋಧದ ಪ್ರಕಾರ 'ಭತ್ತದ ಕೃಷಿಯು ಕ್ರಿ.ಪೂ. ೬೦೦೦ದ ಸುತ್ತಿನಲ್ಲಿ ಅಲಹಾಬಾದ್ ಜಿಲ್ಲೆಯ ನಿವೇಶನಗಳಲ್ಲಿ ನಡೆಯುತ್ತಿತ್ತು.[೩೧] ಸಿಂಧೂ ಬಯಲಿನಲ್ಲಿ ಕ್ರಿ.ಪೂ. ೩೦೦೦ದ ವೇಳೆಗೆ 'ಭತ್ತ' ಬೆಳೆದಿರುವ ಉಲ್ಲೇಖವಿದೆ.[೩೨] ಧರ್ಮಶಾಸ್ತ್ರ, ರಾಮಾಯಣ, ಮಹಾಭಾರತದ ಕಾಲಗಳಲ್ಲಿ ಫಲವತ್ತಾದ ನದಿಬಯಲು ಪ್ರದೇಶದಲ್ಲಿ 'ರಾಜಸಾರಿ' ಎಂಬ ಭತ್ತವನ್ನು ಬೆಳೆಯುತ್ತಿದ್ದರು.[೩೩] ಅರ್ಥಶಾಸ್ತ್ರದಲ್ಲಿ ಭತ್ತದ ಬೆಳೆಯನ್ನು ಮೊದಲು ಬೆಳೆಯಬೇಕೆಂದು ಸೂಚಿಸಿದೆ. ಇದನ್ನು ಮಳೆಗಾಲದಲ್ಲಿ ಮಳೆಯಾಶ್ರಿತವಾಗಿಯೂ ಬೆಳೆಯಲಾಗುತ್ತದೆ. 'ಸ್ಟ್ರಾಬೋ ಎಂಬುವವನು ಕ್ರಿ.ಶ. ೨೩ಕ್ಕಿಂತಲೂ ಹಿಂದಿನ ತನ್ನ ಕೃತಿ ಮೆಗಿಲ್ಲಸ್ ಎಂಬುದರಲ್ಲಿ ಉಲ್ಲೇಖಿಸುತ್ತಾ 'ಭಾರತದಲ್ಲಿ ಭತ್ತವು ನೀರಾವರಿ ಮತ್ತು ನಾಟಿ ಮಾಡುವುದರ ಆಧಾರದ ಮೇಲೆ ಬೆಳೆಯುತ್ತಿದೆ ಎಂದಿದಾನೆ.[೩೪] ಕ್ರಿ.ಪೂ. ಒಂದನೆಯ ಶತಮಾನದ ವೇಳೆಗೆ ಭಾರತದಲ್ಲಿ ಭತ್ತದ ನಾಟಿ ಪ್ರಕ್ರಿಯೆ ಆರಂಭವಾಗಿದೆ ಎಂದು ಇದರಿಂದ ತಿಳಿಯುತ್ತದೆ. ಇದರಿಂದಾಗಿ ಮೌರ್ಯರ ಕಾಲದಲ್ಲಿ 'ಭತ್ತ' ನಾಟಿ ಮಾಡುವ ವಿಧಾನವಿದ್ದಿರುವ ಸಾಧ್ಯತೆಗಳಿವೆ. ಪಾಲಿ ಮತ್ತು ಪ್ರಾಕೃತ ಗ್ರಂಥಗಳಲ್ಲಿ ಕಸಿಮಾಡಿ ಬೆಳೆದ ಭತ್ತದ ಉಲ್ಲೇಖ ದೊರೆಯುತ್ತದೆ.[೩೫] ಹಾಗೆ ಬೆಳೆದಾಗ ಅಂದರೆ ಬೀಜ ಬಿತ್ತಿ ಬೆಳೆದಾಗ ಹತ್ತು ತಿಂಗಳಿಗೆ ಬರುವ ಬೆಳೆ ಕಸಿ ಮಾಡಿ ಬೆಳೆದರೆ ಆರು ತಿಂಗಳಿಗೆ ಫಲ ನೀಡುತ್ತಿತ್ತು ಎಂದು ತಿಳಿದು ಬರುತ್ತದೆ. ಶಾತವಾಹನರ ಕಾಲದಲ್ಲಿ ಭತ್ತವನ್ನು ಬೆಳೆಯುತ್ತಿದ್ದರು. 'ಹಳ್ಳಿಗಳು ವರ್ಷ ವರ್ಷವು ಬೆಳೆವ ಭತ್ತ, ಬಾರ್ಲಿ, ಗೋಧಿ, ದ್ವಿದಳ ಧಾನ್ಯಗಳಿಂದ ತುಂಬಿದ ಗದ್ದೆಗಳ ಸೊಬಗಿನಿಂದ ಕೂಡಿದ್ದವು'[೩೬] ಎಂದು ಉಲ್ಲೇಖಿಸಿರುವುದು ಕಂಡುಬಂದಿದೆ. ಭತ್ತವನ್ನು ಗದ್ದೆಗಳಲ್ಲಿ ಬೆಳೆಯಲಾಗುತ್ತದೆ. ಕ್ರಿ.ಶ.ದ ಮೊದಲೆರಡು ಶತಮಾನಗಳಲ್ಲಿ ಗೋದಾವರಿ ಮತ್ತು ಕೃಷ್ಣಾ ನದಿಗಳ ನಡುವೆ ಮುಖ್ಯವಾಗಿ ಮುಖಜ ಭೂಮಿಯು ಭತ್ತದ ದೊಡ್ಡ ಕಣಜವಾಗಿತ್ತು. ದಖನ್ನಿನ ಜನರು ಭತ್ತದ ನಾಟಿಯನ್ನು ತಿಳಿದಿದ್ದರು.[೩೭] ಈ ಭಾಗದಲ್ಲಿ ಇಂದಿಗೂ ಭತ್ತವನ್ನು ಬೆಳೆಯಲಾಗುತ್ತಿದೆ. ಆದರೆ ಮೊದಲಿನ ಪ್ರಮಾಣಕ್ಕಿಂತ ಕಡಿಮೆಯಾಗಿದೆ.

'ಕ್ರಿ.ಶ. ೬ನೆಯ ಶತಮಾನದ ಶಾಸನದಲ್ಲಿ ಪದಿನೆಟ್ಕ್ಕಾಣ್ಟ ಭತ್ತದ'[೩೮] ಉಲ್ಲೇಖವಿದೆ. ಕ್ರಿ.ಶ. ೮೨೫ರ ಶಾಸನವು 'ಬೆದೆನೆಲ್ಮಣ್'[೩೯] ಎಂದು ಉಲ್ಲೇಖಿಸಿದೆ. ಈ ಪದವನ್ನು ವಿಂಗಡಿಸಿದಾಗ ಬೆದೆ+ನೆಲ್+ಮಣ್= ಬೆದೆನೆಲ್ಮಣ್ ಎಂದು ಆಗುತ್ತದೆ. 'ನೆಲ್ಲು' ಎಂದರೆ ಭತ್ತ. ಗದ್ದೆಗಳಿಗೆ ಕಟ್ಟೆಗಳನ್ನು ಕಟ್ಟಿ, ಅದರೊಳಗೆ ಭತ್ತವನ್ನು ಬೆಳೆದರೆ ಅವುಗಳನ್ನು ಗದ್ದೆಗಳೆಂದು ಕರೆಯುವರು. ಕೆಲವು ಕಡೆ ನೀರು ಸಂಗ್ರಹಿಸಿ ಭತ್ತವನ್ನು ನಾಟಿ ಮಾಡಿ ಬೆಳೆಯುತ್ತಾರೆ. ಅವುಗಳು ತಾತ್ಕಾಲಿಕವಾಗಿರುತ್ತವೆ. ಕಟ್ಟೆ ಕಟ್ಟದೆ ಕೆಲವೆಡೆ ಭತ್ತವನ್ನು ಬೆಳೆಯುತ್ತಾರೆ. ಅವುಗಳನ್ನು ಬೆದ್ದಲ ಭೂಮಿಯ ಭತ್ತದ ಬೆಳೆಗಳೆನ್ನುವರು. ತಗ್ಗು ಪ್ರದೇಶದಲ್ಲಿ ಹೀಗೆ ಬೆಳೆಯುವುದುಂಟು. ಅಂತಹ ಕಡೆ ಕೆಂಪಕ್ಕಿ ಇರುವ 'ಕರೆಮಲ್ಲಿಗೆ' ಭತ್ತ ಬೆಳೆಯುತ್ತಾರೆ. 'ನಾಗರಘಟ್ಟದ ವಿಷ್ಣುವರ್ಧನನ ಶಾಸನದಲ್ಲಿ ಸೇನಾಪತಿ ಕೇರಾಳಾನಾಯಕಂ ಬಿಟ್ಟ ಗದ್ದೆ ಹತ್ತು ಸಲಗೆ ಗದೆ 'ಕಾಡಕ್ಕಿ' ಮೂವತ್ತು ಕೊಳಗ ಮಹಾದೇವರಿಗೆ'[೪೦] ಬಿಟ್ಟರೆಂದಿದೆ. ಗದ್ದೆ ಭೂಮಿಯಲ್ಲಿ ಕಾಡಕ್ಕಿ ಬೆಳೆದಿರುವ ಸಾಧ್ಯತೆಗಳಿವೆ. ಇದು ಒಂದು ಜಾತಿಯ ಭತ್ತದಂತಿದೆ. ಮೊದಲು

ಕಾಡಿನಲ್ಲಿ ಬೆಳೆದು, ನಂತರ ಊರಿನಲ್ಲಿ ಬೆಳೆದಿರುವ ಸಾಧ್ಯತೆಯಿಂದಾಗಿ ಅದೇ ಹೆಸರು ಮುಂದುವರಿದಂತಿದೆ.

ಕ್ಯಾತನಹಳ್ಳಿಯ ಕ್ರಿ.ಶ. ೯-೧೦ನೆಯ ಶತಮಾನದ ಶಾಸನದಲ್ಲಿ 'ಕೊಮಾರಸೇನ ಭಟಾರರ್ ಪಡೆದ ಸ್ತಿತಿ ಬಿಳಿಯಕ್ಕಿಯುಂ'[೪೧] ಭತ್ತದಿಂದ ಹೊರ ಹೊಮ್ಮುವ ಅಕ್ಕಿಯಾಗಿದೆ. ಇದನ್ನು ದಾನ ನೀಡಿದ ಉಲ್ಲೇಖವು ಇಲ್ಲಿ ಕಂಡುಬಂದಿದೆ. ಬನ್ನೂರು ಗ್ರಾಮದ ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ಎಣ್ಣೆ, ಅಕ್ಕಿ, ತುಪ್ಪ, ಎಳ್ಳುಂ ಪೊನ್ನದೊಡೆಲ್ಲಂ ದೇವರಭಣ್ಡಾರ ದೇವ......ಇರ್ಕೊಳಂ ಭತ್ತಂ'[೪೨] ಎರಡು ಕೊಳಗ ಭತ್ತವನ್ನು ಉಲ್ಲೇಖಿಸಿದೆ. ಇಮ್ಮಡಿ ರಾಚಮಲ್ಲನ ಶಾಸನದಲ್ಲಿ 'ಬೆಟ್ಟಿಯ ಭತ್ತದಲ್ಲಿ ನೂರುಭತ್ತವನ್ನು ಕೊಟ್ಟರು'[೪೩] ಎಂದಿದೆ. ನೂರುಭತ್ತ ವೆಂಬುದು ಅಳತೆಯ ಮಾನವಾಗಿರುವ ಸಾಧ್ಯತೆಗಳಿದ್ದು, ನೂರುಸಾಲು ಭತ್ತವಿರುವಂತಿದೆ. ಸೋಮನಾಥಪುರದ 'ಕ್ರಿ.ಶ. ೧೨೮೧ರ ಶಾಸನದಲ್ಲಿ ದೇವರುಗಳ ಅಮೃತಪಡಿಗೆ ಅಳವನೆಲ್ಲು, ದೇವರ ಕೊಠಾರಕ್ಕೆ ಕೊಡೆ ಕೆಯ್ಯಂಗಳ ಬೆಳೆಯ ಕಾಲಂಗಳಲಿ ಅಳವನೆಲ್ಲು ಅಯಿದು ಸಾಸಿರದ ಮುನ್ನೂಱು ಸಲಗೆಯನು ವರ್ಷಂಪ್ರತಿ'[೪೪] ಕೊಡುವುದೆಂದಿದೆ. ಎಲ್ಲೂರು ಗ್ರಾಮದ 'ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಕೆಱೆಗಟ್ಟಲ್ಸಲ್ವುದು ಊರೊಳಗೆ ಒಕ್ಕಮೆಗೊಳ ಭತ್ತಮಂ ಪನ್ನಿರ್ವ್ವರು ಕೊಟ್ಟರು'[೪೫] ಪನ್ನಿರ್ವರು ಕೆರೆಯ ಕೆಲಸಕ್ಕೆ ಭತ್ತ ನೀಡಿರುವುದನ್ನು ಶಾಸನವು ತಿಳಿಸಿದೆ. 'ಕ್ರಿ.ಶ. ೧೦೪೯ರ ಶಾಸನದಲ್ಲಿ ಕೇಸವ ಭಟ್ಟನು ದೇವಾಲಯವನ್ನು ಕಟ್ಟಿಸಿ 'ನೂಱು ಭತ್ತದ ಮಣ್ಣು ಮಾಱುಪಸುವಂ'[೪೬] ದೇವರಿಗೆ ಬಿಟ್ಟನೆಂದಿದೆ. ನೂರು ಭತ್ತದ ಸಾಲನ್ನು ಬೆಳೆಯುವ ಭೂಮಿಯನ್ನು ಮತ್ತು ಆರು ಹಸುಗಳನ್ನು ದಾನ ನೀಡಿರುವುದನ್ನು ತಿಳಿಸುತ್ತದೆ. ಎರೆಮಾರು ಗ್ರಾಮದ 'ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ಇಟಿಸ್ಮೂಱು 'ಭತ್ತದ ಮಣ್ಣು ಮಹಾದೇವರ್ಗ್ಗೆ ಬಿಟ್ಟಂ'[೪೭] ಎಂದಿದೆ. ಭತ್ತ ಬೆಳೆಯುವ ಭೂಮಿಯನ್ನು ದಾನ ನೀಡಿರುವುದನ್ನು ತಿಳಿಸುತ್ತದೆ.

ಶಿರೂರು ಗ್ರಾಮದ 'ಕ್ರಿ.ಶ. ೧೦೪೯ರ ಶಾಸನದಲ್ಲಿ ಎರಡು ನಿವರ್ತನ ಭತ್ತದ ಗದ್ದೆಯನ್ನು'[೪೮] ದಾನ ನೀಡಿದ್ದನ್ನು ಹೇಳಿದೆ. ಕಣ್ಣೂರು 'ಕ್ರಿ.ಶ. ೧೧೮೮ರ ಶಾಸನದಲ್ಲಿ ಭತ್ತದ ಮೇಲಿನ ಆದಾಯದ ತೆರಿಗೆಯನ್ನು'[೪೯] ದಾನಬಿಟ್ಟರೆಂದಿದೆ. 'ಕ್ರಿ.ಶ. ೧೧೭೬ರ ಶಾಸನದಲ್ಲಿ ನಾಗೇಶ್ವರ ದೇವರಿಗೆ ಭತ್ತ ಕೊಟ್ಟಲ್ಲಿ ಅರೆವಾನ'[೫೦] ಭತ್ತ ಮಾರಿದಾಗ ಕೊಡಬೇಕಾದ ತೆರಿಗೆಯನ್ನು ಇಲ್ಲಿ ತಿಳಿಸುತ್ತದೆ. ಭತ್ತವು ಪ್ರಮುಖ ಬೆಳೆಯಾಗಿದ್ದು, ಇದರ ವ್ಯಾಪಾರ ೧೨ನೆಯ ಶತಮಾನದಲ್ಲಿ ಹೇರಳವಾಗಿರಬೇಕು. ಅಲ್ಲದೆ ಈ ವೇಳೆಗೆ ಆರ್ಥಿಕ ಬೆಳೆಯಾಗಿರುವ ಸಾಧ್ಯತೆಗಳಿವೆ.

'ಕ್ರಿ.ಶ. ೧೨೩೪ರ ಶಾಸನದಲ್ಲಿ ದೇವರ ಕಂಮತ ಯಾವ ವೂರಲಿ ಮಾರಿದಡಂ ಆಭತ್ತ ಭಂಡಿ ಎತ್ತಿನಲಿ ಬಂದಂತಹ ಹಾವಕ್ಕೆ ಸುಂಕಬಾಹಿರ ಸೀಮೆ ಎಂದೆನಬಾರದು.'[೫೧] ದೇವರಿಗೆ ಸಂಬಂಧಿಸಿದ ಭತ್ತದ ಬಂಡಿಯನ್ನು ಯಾವ ಊರಿನಲ್ಲಿ ಮಾರಾಟ ಮಾಡಿದರೂ ಅದಕ್ಕೆ ಸುಂಕವಿಲ್ಲವೆಂದು ಶಾಸನವು ಹೇಳುತ್ತದೆ. ಘಾಟಬೋರಳದ 'ಕ್ರಿ.ಶ. ೧೧೨೦ರ ಶಾಸನದಲ್ಲಿ ಕಣನ ಎತಿನ ಭತ್ತ ಒಂದು ಕೊಟ್ಟ[೫೨] ಎಂಬ ಉಲ್ಲೇಖವಿದೆ. ಗಬ್ಬೂರು ಗ್ರಾಮದ ಕ್ರಿ.ಶ. ೧೧೧೮ರ ಶಾಸನದಲ್ಲಿ 'ಮುನ್ತೆ ವೊಕ್ಕಲುಗಳ ಮೇಂಟಿಯಲೊಂದೊಂದು ಕೊಳಗಭತ್ತಯಂ[೫೩] ಕೊಳಗ ಭತ್ತವನ್ನು ದಾನ ನೀಡಿದ್ದನ್ನು ಹೇಳಿದೆ. ಕ್ರಿ.ಶ. ೧೦೯೭ರ ಶಾಸನದಲ್ಲಿ 'ಹೊನ್ನಿಗೆ ಒಂದು ಮಾನ ಬತ್ತ.'[೫೪] ಕ್ರಿ.ಶ. ೧೨೦೭ರ ಶಾಸನದಲ್ಲಿ ಸುಟ್ಟುಗಭತ್ತ'[೫೫]ದ ಉಲ್ಲೇಖವಿದೆ. 'ಕ್ರಿ.ಶ. ೧೨೮೨ರ ಶಾಸನದಲ್ಲಿ ದೇವರ ನೈವೇದ್ಯಕೆಂದು ಧಾನ್ಯಗಳನ್ನು ಕೊಂಡು ಮಾರುವವರಲ್ಲಿ ಸೊಲ್ಲುಗೆ ಭತ್ತವನ್ನು[೫೬] ತೆರಿಗೆ ರೂಪದಲ್ಲಿ ಪಡೆದದ್ದನ್ನು ಹೇಳಿದೆ. ಕ್ರಿ.ಶ. ೧೧೫೪ರ ಶಾಸನದಲ್ಲಿ ಭತ್ತ,[೫೭] ಕ್ರಿ.ಶ. ೧೨೪೧ರ

ಶಾಸನದಲ್ಲಿ ದೇವರ ಭೂಮಿಯನ್ನು ವ್ಯವಸಾಯ ಮಾಡಿದಾಗ ಅದರ ಭಾಗವಾಗಿ ಬರುವ 'ಕಬ್ಬು, ಕಳಮೆ, ಭತ, ಗಮತ, ಬಾಡುಕಾಯಿ ಏನು ಬಾಹಡಂ ಸುಂಕ ಪರಿಹಾರವಿಲ್ಲ'[೫೮] ದೇವರ ಭೂಮಿಯ ಉತ್ಪನ್ನಗಳನ್ನು ಮಾರಿದರೆ ಅದಕ್ಕೆ ತೆರಿಗೆ ಇಲ್ಲವೆಂದು ಈ ಶಾಸನವು ತಿಳಿಸುತ್ತದೆ. ಗಬ್ಬೂರು ಗ್ರಾಮದ ಕ್ರಿ.ಶ. ೧೧೦೭ ಮೇಳೇಶ್ವರ ದೇವರಿಗೆ ಭತ್ತದಾನ'[೫೯] ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೧೫೩ರ ಶಾಸನದಲ್ಲಿ ಕೊಣ್ಡ ಭತ್ತದಲ್ಲಿ ಹೊಂಗೆ ಕಾಣಿಯನು'[೬೦] ಕೊಟ್ಟಿರುವುದನ್ನು ತಿಳಿಸಿದೆ. ಕ್ರಿ.ಶ ೧೧೫೭ರ ಶಾಸನದಲ್ಲಿ 'ಭತ್ತದ ಸುಂಕ'ವನ್ನು ದೇವರ ಕಾರ್ಯಗಳಿಗೆ ಬಿಟ್ಟರೆಂದಿದೆ'[೬೧]. ಕ್ರಿ.ಶ ೧೧೦೦ರ ಶಾಸನದಲ್ಲಿ ವ್ಯಾಪಾರಿಗಳು ಮಾರಿದ ದವಸದ ಹೇರಿಂಗೆ ಕೊಟ್ಟ ಭತ್ತಮಾನ೧'[೬೨] ದೇವರ ಪೂಜೆಗೆ ಬಿಟ್ಟರೆಂದಿದೆ. ತೆನೆಹಳ್ಳಿಯ ಕ್ರಿ.ಶ ೧೧೭೬ರ ಶಾಸನದಲ್ಲಿ[೬೩] ೩೬ ಬಾಡದ ಗ್ರಾಮಗಳ ತೆರಿಗೆಗಳನ್ನು ಸೊಮನಾಥ ದೇವರಿಗೆ ಬಿಟ್ಟಾಗ ಅಲ್ಲಿ ಬೆಳೆಯುವ 'ಭತ್ತ' ಮೊದಲಾದ ಬೆಳೆಗಳನ್ನು ಮಾರಿದರೆ ಕೊಂಡರೆ ತೆರಿಗೆ ಭತ್ತದಲ್ಲಿ ಮಾರಿದರೆ ೧ ಮಾನ ಕೊಂಡರೆ ೧ ಮಾನ' ಸೊಲ್ಲಗೆ ಹಗರಣದ ಭತ್ತ ರಾಸಿಯ ಸಟ್ಟುಗ ೧ ಎಂದಿದೆ. ಕ್ರಿ.ಶ. ೧೧೮೪ರ ಶಾಸನದಲ್ಲಿ ಭತ್ತ ಹಟ್ಟಿಯ ಸ್ಥಳದಲುಂ, ನೆಲ್ಲಕಟ್ಟೆಯಲ್ಲಿ ಹಣ ೧'[೬೪]ರ ಉಲ್ಲೇಖವಿದೆ. ಕಾತವಳಿಯ ಕ್ರಿ.ಶ. ೧೩೦೦ರ ಶಾಸನದಲ್ಲಿ ಕಟ್ಟಿದ ಕೆರೆಗೆ ಬತ್ತದಿಂದ ಬಂದ ಗದ್ಯಾಣ ೧೦'[೬೫]ನ್ನು ಬಿಟ್ಟರೆಂದಿದೆ. ಹೆಬ್ಬೈಲು ಕ್ರಿ.ಶ. ೧೦೫೩ರ ಶಾಸನದಲ್ಲಿ 'ಪೊಂಬುಚ್ಚನಾಡೊಳೆ ಭತ್ತಗಾವೆ'[೬೬] ಉಲ್ಲೇಖವಿದೆ. ಆಚಾಪುರದ ಕ್ರಿ.ಶ. ೧೦೪೨ರ ಶಾಸನದಲ್ಲಿ 'ಕಳಿವೆ'[೬೭]ಯ ಉಲ್ಲೇಖವಿದೆ. ಹೊಂಬಲದ 'ಕ್ರಿ.ಶ. ೧೧೮೯ರ ಶಾಸನದಲ್ಲಿ ಸಟ್ಟುಗಭತ್ತ'[೬೮] ಉಲ್ಲೇಖವಿದೆ. ಹರಿಹರದ ಕ್ರಿ.ಶ. ೧೧೬೭ರ ಶಾಸನವು ಭತ್ತಾಯನಿಷ್ಕಳ'[೬೯]ರ ಉಲ್ಲೇಖವಿದೆ. ಕುಂದವಾಳ ಕ್ರಿ.ಶ. ೧೨೪೦ರ ಶಾಸನದಲ್ಲಿ ದೇವರಿಗೆ ಬಿಟ್ಟ ಆಯ ಬಂಡಿ ಭತ್ತ ಪಡಿ'[೭೦] ಎಂದಿದೆ. ಸಾಲೋಟಗಿಯ ೧೨ನೆಯ ಶತಮಾನದ ಶಾಸನದಲ್ಲಿ 'ಭತ್ತದ ಗದ್ದೆಗೆ ಶಾಲಿವನಾಳಿ'[೭೧] ಎಂದು ಉಲ್ಲೇಖಿಸಿದೆ. ಬೆಂಗಳೂರು ಮ್ಯೂಸಿಯಂನಲ್ಲಿರುವ 'ಕ್ರಿ.ಶ. ೧೨೪೩ರ ಶಾಸನದಲ್ಲಿ ಭತ್ತ ಸ ೬'[೭೨]ರ ಉಲ್ಲೇಖವಿದೆ. ಲಕ್ಕುಂಡಿಯ 'ಕ್ರಿ.ಶ. ೧೧೭೯ರ ಶಾಸನವು ಭತ್ತವಟ್ಟಿಯಂಗಡಿಯ ನಖರಂಗ ಹೆಜವರ ಪೆಳಿಯಲ್ಲಿ ಬಿಟ್ಟ ಪಣ ೨ ಭಳ್ಳ ಭತ್ತಂ'[೭೩] ಭತ್ತದ ಬೆಳೆಯಲ್ಲಿ ಬಳ್ಳಬತ್ತವನ್ನು ದಾನ ನೀಡಿದ್ದನ್ನು ಹೇಳಲಾಗಿದೆ. ಬೊಕ್ಯಾಪುರದ ಕ್ರಿ.ಶ. ೧೧೬೩ರ ಶಾಸನದಲ್ಲಿ ಕೆಜೆಯ ಕೆಳಗಿನ ಭತ್ತದ ಗದ್ದೆ'[೭೪] ಉಲ್ಲೇಖವಿದೆ. ಮುಂಡರಗಿಯ ಕ್ರಿ.ಶ. ೧೨೧೩-೧೬ರ ಶಾಸನದಲ್ಲಿ ನಾಲ್ಕು ಭಂಡಿ ಭತ್ತದಗದ್ದೆ[೭೫]ಯ ಉಲ್ಲೇಖವಿದೆ. ಹನಶಿಯ ಕ್ರಿ.ಶ. ೧೧೧೧ರ ಶಾಸನದಲ್ಲಿ ದೇವರ್ಗ್ಗೆ ದೇವಗೊಳಗ ಧರ್ಮಗೊಳಗ ಮೇಂಟಿಯಿಂ ಸೊಡುಗುಯ್ಯಲ ಭತ್ತ ಒನ್ದು'[೭೬] ಎಂದಿದೆ. ಕ್ರಿ.ಶ. ೧೧೪೪ರ ಶಾಸನದಲ್ಲಿ ಅರವಾನಭತ್ತ'[೭೭]ದ ಉಲ್ಲೇಖವಿದೆ. ಕ್ರಿ.ಶ. ೧೨೭೨ರ ಶಾಸನ 'ಭತ್ತ'[೭೮]ವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೨೮೧ರ ಶಾಸನದಲ್ಲಿ ಭತ್ತ ಮೂಡೆ ೩೨ ದೇವರಿಗೆ ಮೂಗಂಡುಗದಲು ಭತ್ತ ಮೂಡಿ ೩೨'[೭೯] ಎಂದಿದೆ. ಕ್ರಿ.ಶ. ೧೧೨೧ರ ಶಾಸನದಲ್ಲಿ ಕೊಳಗಭತ್ತವಂ,'[೮೦] ಸಿರೂರು ಶಾಸನದಲ್ಲಿ ಬತ್ತಾಯ'[೮೧] ಎಂದಿದೆ. ನಿಲವಂಜಿಯ 'ಕ್ರಿ.ಶ. ೧೧೭೭ ಶಾಸನದಲ್ಲಿ ಭತ್ತ ಮಾಜಿದಲ್ಲಿ ಮಾನ೧ ಕೊಂಡಲ್ಲಿ ಮಾನ ೧'[೮೨] ಎಂದಿದೆ. ಕ್ರಿ.ಶ ೧೨ನೆಯ ಶತಮಾನದ ಶಾಸನದಲ್ಲಿ ಭತ್ತ ಮಾಜಿದರೆ ಹೊಂಗೆ ಕೊಟ್ಟಲಿ ಕಾಣಿ ೨, ಕೊಂಡಲ್ಲಿ ಕಾಣೆ ೨'[೮೩] ಎಂದಿದೆ. ಕ್ರಿ.ಶ. ೧೦೨೯ರ ಶಾಸನದಲ್ಲಿ ಎಡದೊರೆ ೨೦೦೦ದ ನಾಡಿನ ಭತ್ತಗ್ರಾಮ'[೮೪]ದ ಉಲ್ಲೇಖವಿದೆ. ಬದಾಮಿ ಚಾಲುಕ್ಯರ ಕಾಲದಲ್ಲಿ ದುರ್ಲಭಾದೇವಿಯು ಮಕುಟೇಶ್ವರ ದೇವಾಲಯಕ್ಕೆ ದತ್ತಿ ನೀಡಿದ ಗ್ರಾಮಗಳಲ್ಲಿ 'ವ್ರೀಹಿಮುಖ' ಗ್ರಾಮ ಎಂಬ ಊರನ್ನು ದಾನ ನೀಡುತ್ತಾಳೆ. ವ್ರೀಹಿ ಎಂದರೆ ಭತ್ತ, ನೆಲ್ಲು, ನೆಲ್ಮಗದಂತಿರುವ ಗ್ರಾಮ ಎಂದರ್ಥ.[೮೫] ಈ ಗ್ರಾಮಕ್ಕೆ ಈಗಲೂ ನೆಲುವಿಗೆ ಎಂದು ಕರೆಯುವುದಿದೆ. ಕ್ರಿ.ಶ. ೧೨೧೮ರ ಶಾಸನದಲ್ಲಿ ಬತಪಲ್ಲ ಹೇರಿಂಗೆ ೧೦೦.'[೮೬] ಕ್ರಿ.ಶ. ೧೧೨೧ರ ಶಾಸನದಲ್ಲಿ ಹೊಜಗಣ ಭತ್ತವಂ ತನ್ದಟಿವಲ್ಲಿ ಮೂಲೆವತ್ತ ಹೇಜೆಂಗೊಬ್ಬಳ ಪುಳಗಣ ಭಣ್ಡಿಗೆ ಮೂಗುವಿ ವೊರಲುತುಕೃಷ್ಟವಪ್ಪುದು.[೮೭] ಹೊರಗಿನ ಭತ್ತವನ್ನು

ತಂದಾಗ ನೀಡಬೇಕಾದ ಸುಂಕವನ್ನು ಕುರಿತು ಹೇಳಿದೆ. ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ನೆಲ್ಲಕ್ಕಿ'[೮೮] ಯ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೧೨೮ರ ಶಾಸನದಲ್ಲಿ ದೇವರ ನೈವೇದ್ಯಕ್ಕೆ ಹತ್ತುಮಾನ ಅಕ್ಕಿ'[೮೯] ನೀಡಿದಂತೆ ಹೇಳಿದೆ. ದೊಡ್ಡ ಹೊಮ್ಮದ ಕ್ರಿ.ಶ. ೯೭೭ರ ಶಾಸನದಲ್ಲಿ 'ಪದಿಕ್ಕೊಳಂ ಭತ್ತಮುಂ'[೯೦]ಉಲ್ಲೇಖಿಸಿದೆ. 'ಕ್ರಿ.ಶ. ೧೦೭೧ರ ಶಾಸನದಲ್ಲಿ ದೇವರ ನಿವೇದ್ಯಕೆ ಖ ೩ ನೆಲ್ಲುಕೊಳ ೧೨ ಕೊಂಡಲ್ಲಿ ಮಾನ ೧ ಕೊಟ್ಟಲಿ ಮಾನ ೧'[೯೧] ಎಂದಿದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ 'ಭತ್ತಾಯ'[೯೨]ವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೨೧೮ರ ಶಾಸನದಲ್ಲಿ 'ಭತ್ತ ಭಾಗದನಿತುವೊಲು'[೯೩] ಎಂದಿದೆ. ಸೀಗೆಯ ಕ್ರಿ.ಶ. ೯-೧೦ನೆಯ ಶತಮಾನದ ಶಾಸನದಲ್ಲಿ 'ಪಡಿಯಕ್ಕಿ'[೯೪] ಉಲ್ಲೇಖವಿದೆ. 'ಕ್ರಿ.ಶ. ೧೧೪೯ರ ಶಾಸನದಲ್ಲಿ ಮೂಗುಳ ಭತ್ತ'[೯೫]ದ ಉಲ್ಲೇಖವಿದೆ. ಕ್ರಿ.ಶ. ೧೩ನೆಯ ಶತಮಾನದ ಶಾಸನ ನಾಲ್ಲಾವು, ನಲ್ಲೆತ್ತು, ಭತ್ತಸಲಗೆ'[೯೬]ಯನ್ನು ಉಲ್ಲೇಖಿಸಿದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನವು ಭೆಯದ ಭತ್ತ, ಮಕ್ಕಿಯ ಗಳ್ದೆ, ಕಡಂಬಗದ್ದೆ ಸನ್ಧಿ'[೯೭]ಯನ್ನು ಉಲ್ಲೇಖಿಸಿದೆ. ಗಡಿಹಳ್ಳಿಯ ಕ್ರಿ.ಶ. ೧೨೭೮ ಶಾಸನದಲ್ಲಿ ಸಂಥೆಗೆ ಬಂದ ಭಂಡರ ವೊಳಗೆ.....ದವಸದ ರಾಸಿಗೆಯಿಂ ಮಾನಭತ್ತ'[೯೮] ಸಂಥೆಯಲ್ಲಿ ಮಾರುವ ವಸ್ತುಗಳಿಗೆ ತೆರಿಗೆ ಅಥವಾ ಜಕಾತಿ ರೂಪದಲ್ಲಿ ಹಣದ ಬದಲು ದೇವಾಲಯಕ್ಕೆ ಧಾನ್ಯಗಳನ್ನು ಕೊಡಲಾಗುತ್ತಿತ್ತು. ಕ್ರಿ.ಶ. ೧೧೫೮ರ ಶಾಸನದಲ್ಲಿ 'ಹೇಜೆಂಗೊಬ್ಬಳ ಭತ್ತ' ದೇಶಿ ಬಣಂಜಿಗರು'[೯೯] ನೀಡಿದ ಉಲ್ಲೇಖವಿದೆ.

ಕ್ರಿ.ಶ. ೯೫೯ರ ಶಾಸನದಲ್ಲಿ ಅಮ್ಮೆಳಿಯ ಪತ್ತಣ್ಡುಬುವ ಅಯ್ಯೂಣಭತ್ತ ಪಡಿಯಂ[೧೦೦] ಎಂದು ಉಲ್ಲೇಖಿಸಿದೆ. ಕ್ರಿ.ಶ. ೧೦೫೮ರ ಶಾಸನದಲ್ಲಿ ಹುಡಿಕೆ ಬತ್ತಕ್ಕೆ ಬಿಟ್ಟ ದೇವದಾನ'[೧೦೧] ಎಂದಿದೆ. ಕ್ರಿ.ಶ ೧೧ನೆಯ ಶತಮಾನದ ಶಾಸನದಲ್ಲಿ ಸಾಸಿರ್ವ್ವರುಂ ಗಟ್ದೆಯ ಮೇಗೆ ಮೂಗಣ್ಡುಗ ಭತ್ತ, ನಾಲ್ಗಂಡಗ ಭತ್ತ'[೧೦೨] ಎಂದಿದೆ. 'ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ ಕಾಲುರ ಭತ್ತ ಸಲಿಕೆ ಪತ್ತು ಗದ್ಯಾಣ ನೂಱುಭತ್ತಗೊಂಡವ ಕಾಲು ಭತ್ತ ಗುಡುವುದು.'[೧೦೩] ನೂರು ಭತ್ತವನ್ನು ಕೊಂಡಾಗ ಅದರ ಕಾಲುಭಾಗವನ್ನು ತೆರಿಗೆಯಾಗಿ ಕೊಡುವುದು ಎಂದು ಹೇಳಿದೆ. 'ಕ್ರಿ.ಶ. ೧೧೮೮-೮೯ರ ಶಾಸನದಲ್ಲಿ ಭತ್ತ ದಾನ'[೧೦೪] ದ ಉಲ್ಲೇಖವಿದೆ. ಕ್ರಿ.ಶ. ೧೦೬೩ರ ಶಾಸನದಲ್ಲಿ ಭತ್ತ ಖ ೪೦೦'[೧೦೫] ಎಂದಿದೆ. 'ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ 'ಹೊಸ ಮಾಟದ ಗದ್ದೆಯ ಮೇಲೆ ಅಕ್ಕಿಮಾನ ೧'[೧೦೬] ಹೊಸದಾಗಿ ಗದ್ದೆಯನ್ನು ಮಾಡಿದಾಗ ಅದಕ್ಕೆ ಒಂದು ಮಾನ ಅಕ್ಕಿ ಕೊಡಬೇಕೆಂದು ಈ ಶಾಸನವು ತಿಳಿಸಿದೆ. 'ಕ್ರಿ.ಶ. ೧೧೭೬ರ ಶಾಸನದಲ್ಲಿ ನಖರಂಗಳು ಹೊಂಗಳದಲ್ಲಿ ಕೊಟ್ಟಲ್ಲಿ ಭತ್ತ ಸೊಳಸ ೨ ಕೊಂಡಲ್ಲಿ ಸೊಳಸ ೨'[೧೦೭] ಕ್ರಿ.ಶ. ೧೨೨೬ರ ಶಾಸನದಲ್ಲಿ ಪಡಿಕೇಣಿಸ್ಥಳದ ದವಸಾಯದೊಳಗೆ ವರಿಶಂಪ್ರತಿ ನಿಭಂದಿಯಾಗಿ ಸಲುವ ಗದ್ಯಾಣವೆರಡು ನೆಲ್ಲಕೊಳ ಮಾದಯ್ಯಂಗಳುಂ ಆ ವ್ಯವಸಾಯದಲು ಕೊಟ್ಟ ಗದ್ಯಾಣಮೆರಡು'[೧೦೮] ಗೇಣಿ ನೀಡಿದ ಭೂಮಿಯಲ್ಲಿ ಬರುವ ದವಸದ ಆದಾಯದಲ್ಲಿ ಪ್ರತಿವರ್ಷ ದವಸಾಯದಲ್ಲಿ ೨ ಗದ್ಯಾಣ ನೀಡಬೇಕೆಂದಿದೆ. ವೀರಬಲ್ಲಾಳನ ಶಾಸನದಲ್ಲಿ 'ಎರೆಕಡಬಗೆಯ್ಯಂ ಬತ್ತಪಲ್ಲ ಹೇಜೆಂಗೆ ೧೦೦'[೧೯] ಎಂದಿದೆ. ಎರೆ ಭೂಮಿಯನ್ನು ಉಳುಮೆ ಮಾಡಿದಾಗ ಕೊಡಬೇಕಾದ ಬತ್ತವನ್ನು ಹೇಳಿದೆ. ಕ್ರಿ.ಶ. ೧೧೪೦ರ ಶಾಸನದಲ್ಲಿ ಭತ್ತವಂ ಮಾಜಿದ ಹೊಂಗೆ ಕೊಟ್ಟಲ್ಲಿ ಮಾನ೧ ಕೊಂಡಲ್ಲಿ ಮಾನ ೧'[೧೧೦] ಎಂದಿದೆ 'ಕ್ರಿ.ಶ. ೧೧೩೪ರ ಶಾಸನದಲ್ಲಿ ಬತದಗಟ್ದಿ'[೧೧೧]ಯನ್ನು ಉಲ್ಲೇಖಿಸಿದೆ.

ಕಿ.ಶ. ೧೨೪೮ರ ಶಾಸನದಲ್ಲಿ ಸಾಯಿರ ೧೦೦೦ ಖಾಣನೆಲ್ಲು[೧೧೨] ಉಲ್ಲೇಖವಿದೆ. ಕ್ರಿ.ಶ. ೧೨೩೪ರ ಶಾಸನದಲ್ಲಿ ತಾವೇ ಮಾಡಿ ಭತ್ತ ಭಾಗವನಿಕ್ಕುವರು[೧೧೩] ಮಾರಗವುಡನೆಂಬುವವ ಕನ್ನೆಗೆರೆ (ಹೊಸಕೆರೆ)ಯನ್ನು ಕಟ್ಟಿದಾಗ ಕೆಜಿಗೆ ಕೆಜಿಗೂಡುಗೆಯಾಗಿ ನೀಡಿದ ಐದು ಮಾರು ಫಳೆಯಭೂಮಿಯಲ್ಲಿ ತಾವೇ ಉಳುಮೆ ಮಾಡಿ ಭತ್ತವನ್ನು ಸುಂಕವಾಗಿ ನೀಡಿದ ಉಲ್ಲೆಖವಿದೆ.

ಮೇಲೆ ಉಲ್ಲೇಖಿಸಿದ ಶಾಸನಗಳನ್ನು ಗಮನಿಸಿದಾಗ, ಕ್ರಿ.ಶ. ೭ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೂ ಸಹ ಶಾಸನಗಳಲ್ಲಿ ಎಲ್ಲಿಯೂ ಬೆಳೆ ಬೆಳೆದ ಉಲ್ಲೇಖ ದೊರೆಯದು. ಆದರೆ 'ಬತ್ತದ ಗಳ್ದೆ' ಎಂದು ಹೇಳುವಾಗ ಗದ್ದೆಯಲ್ಲಿ ಕಬ್ಬು ಬೆಳೆಯನ್ನು ಬೆಳೆದರೂ ಸಹ ಹೇರಳವಾಗಿ ಭತ್ತವನ್ನು ಬೆಳೆದಿರುವ ಸಾಧ್ಯತೆಗಳಿವೆ. ಇದಕ್ಕೆ ಪ್ರಮುಖ ಕಾರಣ ಭತ್ತವು ಉನ್ನತ ವರ್ಗದವರ ಪ್ರಮುಖ ಆಹಾರ ವಿಧಾನವಾಗಿತ್ತು. ಶಾಸನಗಳಲ್ಲಿ ಭತ್ತವು ಭೂಮಿಯೊಂದಿಗೆ, ಸುಂಕದೊಂದಿಗೆ, ಮಾರುವಾಗ, ಕೊಳ್ಳುವಾಗ, ದೇವಾಲಯಗಳಿಗೆ, ಕೆರೆಗಳಿಗೆ, ಬ್ರಾಹ್ಮಣರಿಗೆ ಹಣದ ಬದಲು ಭತ್ತವನ್ನು ದಾನ ನೀಡಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಭತ್ತವು ಜನರ ಪ್ರಧಾನ ಆಹಾರವಾಗಿರುವುದು ಕಂಡುಬಂದಿದೆ. ಇಂದಿಗೂ ಇದು ಪ್ರಧಾನ ಆಹಾರ ಪದ್ಧತಿಯಾಗಿದೆ. ಆದರೆ ಆಹಾರ ಸಂಸ್ಕೃತಿಯು ಸ್ಥಳದಿಂದ ಸ್ಥಳಕ್ಕೆ ಪ್ರಾಕೃತಿಕ ಲಕ್ಷಣ, ಶ್ರಮ ಸಂಸ್ಕೃತಿಗನುಗುಣವಾಗಿ ಅಲ್ಪ ಪ್ರಮಾಣದಲ್ಲಿ ಬದಲಾವಣೆಗೊಂಡು ಸಾಗುತ್ತಿದೆ. ಏತಕ್ಕಾಗಿ ಭತ್ತವನ್ನು ಪಡಿಯಾಗಿ ದಾನ ನೀಡುತ್ತಿದ್ದರೆಂದು ಗಮನಿಸಿದರೆ, ದೇವಾಲಯಗಳಲ್ಲಿ ಕಾರ್ಯ ನಿರ್ವಹಿಸುವ ಬ್ರಾಹ್ಮಣ ಅಥವಾ ಉನ್ನತ ವರ್ಗದ ಆಹಾರ ಕ್ರಮದಲ್ಲಿ ಭತ್ತ ಪ್ರಧಾನ. ಉಳಿದ ಆಹಾರ ಧಾನ್ಯಗಳಿಗಿಂತ ಭತ್ತದ ಮೇಲಿನ ಸುಂಕ ಸಾರ್ವತ್ರಿಕವಾಗಿ ಕಂಡುಬರುತ್ತದೆ. ಆ ಕಾಲದ ಜನರ ವ್ಯಾಪಾರ, ತೆರಿಗೆ ಮೊದಲಾದವುಗಳೆಲ್ಲ ಭತ್ತವನ್ನು ಅವಲಂಬಿಸಿವೆ. ಬಹುತೇಕ ಎಲ್ಲ ಜನರ ಆಹಾರ ಕ್ರಮ ಭತ್ತವೇ ಆದುದರಿಂದ ಸುಲಭವಾಗಿ ಮಾರಾಟವಾಗುವ ಸರಕಾಗಿ ಕಂಡುಬಂದಿದೆ. ಕೆಲವು ಪ್ರದೇಶಗಳಲ್ಲಿ ಭತ್ತದ ಬೆಳೆಯ ಉಲ್ಲೇಖಗಳು ದೊರೆಯುವುದಿಲ್ಲ. ಹಾಗೆ ತಿಳಿಸಿದಂತೆ ಭತ್ತದ ಬೆಳೆಯು ಇಲ್ಲವೆಂದಲ್ಲ. ಶಾಸನಗಳು ಗದ್ದೆ ಭೂಮಿಯನ್ನು ಉಲ್ಲೇಖಿಸಿವೆ. ಗದ್ದೆ ಉಲ್ಲೇಖವಿದೆ ಎಂದಾಗ ಅಲ್ಲಿ ಭತ್ತ ಬೆಳೆಯುತ್ತಿದ್ದರೆಂದು ಅರ್ಥ. ಕೆಲವು ಕಡೆ ಮಾವಿನ ಗದ್ದೆಯ ಉಲ್ಲೇಖಗಳು ಬರುವುದಿದೆ. ಆದರೆ ಆಗೆ ಬಂದಾಗ ಶಾಸನಗಳು ಮಾವಿನ ಗದ್ದೆ ಎಂದೆ ಉಲ್ಲೇಖಿಸಿವೆ. ಚಿತ್ರದುರ್ಗ ಭಾಗದಲ್ಲಿ ವಿರಳವಾಗಿ ಗದ್ದೆಯ ಉಲ್ಲೇಖವಿದೆ. ಭತ್ತದ ಉಲ್ಲೇಖಗಳೂ ಸಹ ದೊರೆಯುವುದು ತೀರ ಅಪರೂಪ. ಆದರೆ ಸಣ್ಣ ಪ್ರಮಾಣದಲ್ಲಿ ಮಳೆಗಾಲದಲ್ಲೋ ಅಥವಾ ಕೆರೆ, ಬಾವಿ, ನೀರುಗಳನ್ನು ಆಶ್ರಯಿಸಿ ಬೆಳೆದುದಿದೆ. ಇಂದು ಸಂಪೂರ್ಣ ಈ ಭಾಗದಲ್ಲಿ ಭತ್ತದ ಬೆಳೆಯನ್ನು ಕಾಣಲು ಸಾಧ್ಯವಾಗುವುದಿಲ್ಲ. ಪ್ರಾಚೀನ ಕಾಲದಲ್ಲಿ ಸಾರ್ವತ್ರಿಕವಾಗಿರುವ ಈ ಬೆಳೆ ಇಂದು ಅನೇಕ ಕಡೆ ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಕಣ್ಮರೆಯಾಗಿದೆ. ದಕ್ಷಿಣ ಕರ್ನಾಟಕದ ಜನರ ಆಹಾರ ಸಂಸ್ಕೃತಿಯ ಅವಲಂಬನೆ ಮತ್ತು ಪ್ರಾಕೃತಿಕ, ನೀರಿನ ಸಮೃದ್ಧತೆಯ ಕಾರಣಗಳಿಂದಾಗಿ ಇಂದೂ ಸಹ ಪ್ರಮುಖ ಬೆಳೆಯಾಗಿದೆ.

ವಿಜಯನಗರ ಕಾಲದಲ್ಲಿ ಬಂದಿದ್ದ ಪೋರ್ಚುಗೀಸ್ ಪ್ರವಾಸಿ ಬರ್ಬೋಸ ಭತ್ತದ ಬೆಳೆ ಕುರಿತು ಹೀಗೆ ಉಲ್ಲೇಖಿಸಿ, ಭತ್ತದಲ್ಲಿ 'ಹೊಟ್ಟೆ, ಕೆಂಬೂತಿ, ಅರಸಿನ ಕೆಂಬೂತಿ, ಸುಚದಾಸ, ಮೂರರ್ಗಿಳ್ಳಿ, ಎಲಿಚರಾಜ, ಸೋನಾವಳಿ, ಬಿಳಿಸಣ್ಣಬತ್ತ, ಪುಟ್ಟಭತ್ತ ಎಂಬ ಭತ್ತಗಳಿದ್ದು ಇದಕ್ಕೆ ಪುಣಜಿ ಮತ್ತು ಮೊಳ ಎಂಬ ನಾಟಿ'[೧೧೪] ವಿಧಾನಗಳಿವೆ. ಈ ವಿಧಾನಗಳು ಮೈಸೂರು ಶ್ರೀರಂಗಪಟ್ಟಣದ ಕಡೆ ಕಂಡುಬರುತ್ತವೆ. ಇವುಗಳಲ್ಲಿ ದೊಡ್ಡ ಭತ್ತವನ್ನು ಆರು ತಿಂಗಳಿಗೆ ಬೆಳೆಯುತ್ತಾರೆ. ಬಿಳಿಭತ್ತ ಪುಟ್ಟ ಭತ್ತಗಳು, ಐದರಿಂದ ಆರು ತಿಂಗಳಲ್ಲಿ ಬೆಳೆಯುತ್ತವೆ. ಕಾರಕಲ್ಲು ಬತ್ತವೂ ಸಹ ಈ ಭಾಗದಲ್ಲಿ ಬೆಳೆಯುತ್ತದೆ. ಇದು ಕಾರು ಬೆಳೆಯಾಗಿ ಕಂಡುಬರುತ್ತದೆ. 'ಅರಸಿನ ಕೆಂಬೂತಿ, ಪುಟ್ಟಬತ್ತ, ಯಲಿಚ್‌ರಾಜ ಮತ್ತು ಸುಚದಾಸು'[೧೧೫] ಎಂಬ ಬೆಳೆಗಳನ್ನು ಬೆಂಗಳೂರು, ತುಮಕೂರು ಭಾಗದಲ್ಲಿ ಬೆಳೆಯುತ್ತಾರೆ. 'ಗುತ್ತಿಸಣ್ಣ, ಬಿಳಿಸಣ್ಣ, ಮುರಾರ್ಜಿಲ್ಲ, ಪುನೋಚ್‌ರಾಜ, ಗರುಡನೆಲ್ಲು, ತೋಚನೆಲ್ಲು, ಕರಿತೋಕನೆಲ್ಲು, ಗನಿಸಾಲಿ ಚಾಲಿಯುಗ, ಗಿಡ್ಡಬೈರ, ಕರಿಬೋಳಚರಿ'[೧೧೬]

ಮುಂತಾದ ಬೆಳೆಗಳು ಕೋಲಾರ ಭಾಗದಲ್ಲಿ ಕಂಡುಬರುತ್ತವೆ. ಇವುಗಳನ್ನು ನಾಲ್ಕು ಅಥವಾ ಐದು ತಿಂಗಳಲ್ಲಿ ಬೆಳೆಯುತ್ತಾರೆ. ಈ ಭಾಗಗಳಲ್ಲಿ ಬೆಳೆಯುವ ಬೆಳೆಗಳಿಗೆ 'ವೈರಾರಂಭ ಮತ್ತು ನೀರಾರಂಭ'[೧೧೭] ಬೆಳೆಗಳೆಂದು ಗುರುತಿಸಲಾಗಿದೆ. ಭತ್ತದ ವಿಧಗಳು ವಿಜಯನಗರ ಪೂರ್ವದಲ್ಲಿ ಈ ರೀತಿ ಹೇರಳವಾಗಿ ದೊರೆಯುವುದಿಲ್ಲ. ಆ ಕಾರಣದಿಂದಾಗಿ ನಂತರದ ಬೆಳವಣಿಗೆಯನ್ನು ಇಲ್ಲಿ ಗಮನಿಸಲಾಯಿತು. ಭತ್ತವನ್ನು 'ತೋಟದ ನೆಲ್ಲು'[೧೧೮] ಎಂದು ಕರೆಯಲಾಗುತ್ತದೆ. ಅಂದರೆ ಗಟ್ಟಿಭತ್ತ ಎಂದರ್ಥ. ಇನ್ನೂ ಕೆಲವು ಭತ್ತದ ತಳಿಗಳು ಕಂಡುಬರುತ್ತವೆ. ಅವುಗಳು ಗಂಧಸಾಲೆ, ಅಯ್ಯರ್‌ಟೊಂಟಿ, ಏಲಕ್ಕಿರಾಜ, ಕರಿಯನೆಲ್ಲು(ಕರಿಮಲ್ಲಿಗೆ), ಕರಿಕಣಿವಿ, ಕುಂಕುಮನೆಲ್ಲು, ಗಂಡುಭತ್ತ, ಗುಂಡನಾಳಭತ್ತ, ಬಂಗಾರತೋಬಿ, ರಾಮಸಾಲೆ, ರಾಜಭತ್ತ'[೧೧೯] ಪಂಪನು ಆದಿಪುರಾಣದಲ್ಲಿ '...ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪವು ಗಂದಶಾಲಿ ವನಂಗಳು'[೧೨೦] ಗಂಧಸಾಲಿ ಎಂಬ ಭತ್ತವನ್ನು ಪಂಪನು ವರ್ಣಿಸಿರುವುದು ಕಂಡುಬರುತ್ತದೆ. 'ಮುಗ್ಗಲಕ್ಕಿ(ತಿಮಿತ), ಜಳ್ಳುಭತ್ತದಕ್ಕಿ, ಮೊಳವೆ, ಭತ್ತದಕ್ಕಿ, ಶಾಲಿ, ಆಢಕಶಾಲಿ, ಕುಸುಬಲಕ್ಕಿ'[೧೨೧] ಇವುಗಳು ಅರ್ಥಶಾಸ್ತ್ರದಲ್ಲಿ ಕಂಡುಬರುವ ಭತ್ತದ ವಿಧಗಳಾಗಿವೆ. ತಮಿಳು ಪ್ರಾಚೀನ ಕೃತಿಯಾದ ಸಿಲಪ್ಪದಿಗಾರಂನಲ್ಲಿ 'ಐವನ'[೧೨೨]ವೆಂಬ ಬಿಳಿನೆಲ್ಲು. ಅಂದರೆ ಇದು ಕಾಡಿನಲ್ಲಿ ಬೆಳೆಯುವ ಭತ್ತದ ಪೈರು ಎಂದು ಹೇಳಲಾಗುತ್ತದೆ. ವಿಷ್ಣುವರ್ಧನನ ಶಾಸನದಲ್ಲಿ 'ಕಾಡಕ್ಕಿ' ಮೂವತು ಕೊಳಗ[೧೨೩] ಇದನ್ನು ಕೆಲವು ಕಡೆ ಬಿದಿರಕ್ಕಿ ಎಂದು ಕರೆಯುವುದಿದೆ. ಆದರೆ ಇದು ಹೊಲಗಳಲ್ಲಿ ಬೆಳೆಯಬಹುದಾದ ಒಂದು ಜಾತಿಯ ಭತ್ತದಕ್ಕಿ(ಅಕ್ಕಿ) ಇರುವ ಸಾಧ್ಯತೆಗಳಿವೆ. 'ಕೊಂಕಣ ಮತ್ತು ಕೆನರಾದ ಸಮುದ್ರ ತೀರಗಳಲ್ಲಿ ಭತ್ತದ ವ್ಯವಸಾಯ ಹೆಚ್ಚಾಗಿತ್ತು. ಅಲ್ಲಿನ ಅಕ್ಕಿಯನ್ನು ಮಲಬಾರ್ ಮತ್ತು ಹಾರ್‌ಜೋಮ ಪ್ರದೇಶಗಳಿಗೆ ರಪ್ತು ಮಾಡಲಾಗುತ್ತಿತ್ತು.[೧೨೪]

ಸೋಮೇಶ್ವರನು ತನ್ನ ಮಾನಸೋಲ್ಲಾಸ ಕೃತಿಯಲ್ಲಿ ಭತ್ತದ ವಿಧಗಳನ್ನು ಹೀಗೆ ಸೂಚಿಸಿದ್ದಾರೆ. ತೃತೀಯ ವಿಂಶತಿಯ ಪುತ್ರಭೋಗದಲ್ಲಿ ಮುಂಡಶಾಲಿ, ಸ್ಥೂಲಶಾಲಿ, ಸೂಕ್ಷ್ಮಶಾಲಿ, ಸಪಷ್ಠಿಶಾಲಿ ಅನ್ನವನ್ನು ಭೋಗಿಸಬೇಕು. ಅರಸನು ರಕ್ತಶಾಲಿ, ಮಹಾಶಾಲಿ, ಗಂಧಶಾಲಿ, ಕಲಿಂಗಕ ಭತ್ತದ ಅಕ್ಕಿಯನ್ನು ಬೋಜನಮಾಡಬೇಕು[೧೨೫] ರಕ್ತಶಾಲಿ ಎಂದರೆ ಕೆಂಪುಬಣ್ಣದ ಅಕ್ಕಿ, ಮಹಾಶಾಲಿ ಭತ್ತವು ಗಾತ್ರದಲ್ಲಿ ದೊಡ್ಡದು. ಗಂಧಶಾಲಿಯು ಸುವಾಸನೆಯುಕ್ತವಾಗಿರುತ್ತದೆ. ಸ್ಥೂಲಶಾಲಿ ಆಕಾರದಲ್ಲಿ ದೊಡ್ಡದು, ಸೂಕ್ಷ್ಮಸಾಲಿ ಸಣ್ಣಕ್ಕಿಯಾಗಿರುತ್ತದೆ. ಇವಲ್ಲದೆ 'ಶ್ಯಾಮಕ(ಸಾವೆ) ಜವೆಗೋಧಿ, ರೋಹಿಣಿ(ಬಿಳಿ ಕಗ್ಗಲಿ) ಅಥವಾ ಅಳಲೆಕಾಯಿ ಕುರಿತು ಉಲ್ಲೇಖಿಸಿದ್ದಾರೆ.[೧೨೬] ಪೆರಿಯಾ ಪುರಾಣದಲ್ಲಿ ಕೆಂಪು ನೆಲ್ಲು, ಕೆಪ್ಪಕ್ಕಿ ಅಥವಾ ಕೆಂಪಾದ ನೆಲ್ಲಕ್ಕಿಯನ್ನು ಉಲ್ಲೇಖಿಸಿದೆ.[೧೨೭]

ಭತ್ತವನ್ನು ಬೆಳೆಯುವಾಗ ಒಣ ಪ್ರದೇಶದ ಕೆಲಭಾಗಕ್ಕೆ ಭತ್ತವನ್ನು ಬಿತ್ತನೆ ಮಾಡುತ್ತಾರೆ ಅಥವಾ ಚೆಲ್ಲುತ್ತಾರೆ. ಅನಂತರ ಗದ್ದೆಗಳನ್ನು ಉಳುಮೆ ಮಾಡಿ ಹದಗೊಳಿಸಿ ನೀರು ನಿಲ್ಲಿಸಿ ನಾಟಿ ಮಾಡಿ ಭತ್ತ ಬೆಳೆಯಲಾಗುತ್ತದೆ. ಭತ್ತದ ಬೇಸಾಯದ ಬಗೆಗೆ ಸರ್ವಜ್ಞ ಕವಿಯು ತನ್ನ ತ್ರಿಪದಿಯಲ್ಲಿ ಹೀಗೆ ತಿಳಿಸಿದ್ದಾನೆ.

ಉತ್ತೊಮ್ಮೆ ಹರಗುವುದು ಬಿತ್ತೊಮ್ಮೆ ಹರಗುವುದು
ಮತ್ತೊಮ್ಮೆ ಹರಗಿ ಕಳೆದೆಗೆದು ಬೆಳೆದೆಡೆ
ಬತ್ತದ ಮೊತ್ತ ಸರ್ವಜ್ಞ!![೧೨೮]

ಪ್ರಾಚೀನ ಕಾಲದಲ್ಲಿ ಸಾಂಪ್ರದಾಯಿಕ ಕೃಷಿ ರೂಢಿಯಲ್ಲಿತ್ತು. ಆಗ ಕೊಟ್ಟಿಗೆ ಗೊಬ್ಬರದ ಸಹಾಯದಿಂದ ಬೆಳೆಯುತ್ತಿದ್ದರು. ಇಂದು ವಿಪರೀತ ಔಷಧ, ರಾಸಾಯನಿಕಗಳಿಲ್ಲದೆ ಭತ್ತ

ಬೆಳೆಯಲಾಗದ ಸ್ಥಿತಿಗೆ ಬಂದು ತಲುಪಿದೆ. ಭತ್ತವು ತೇವಾಂಶದಲ್ಲಿ ಬೆಳೆಯುವ ಧಾನ್ಯವೆಂಬ ಕಾರಣಕ್ಕೆ ನೀರು ನಿಲ್ಲಿಸಿ ಬೆಳೆಯಲಾಗುತ್ತದೆ. ಭತ್ತದ ಬೆಳೆಯಲ್ಲಿ ನೀರು ನಿಲ್ಲಿಸುವುದರಿಂದ, ಅನಗತ್ಯವಾಗಿ ಬೆಳೆಯುವ ಕಳೆಯ ಪ್ರಮಾಣ ಕಡಿಮೆಯಾಗುತ್ತದೆ. ಈ ಕಾರಣಕ್ಕಾಗಿ ಗದ್ದೆಯಲ್ಲಿ ನೀರು ನಿಲ್ಲಿಸಿ ಭತ್ತ ಬೆಳೆಯಲಾಗುತ್ತದೆ. ಭತ್ತ ಬೆಳೆಯುವ ಕೆಲವು ಪ್ರದೇಶದಲ್ಲಿ ಭತ್ತ ಬಿಟ್ಟರೆ ಕಬ್ಬು ಬೆಳೆಯಲು ಮಾತ್ರ ಸಾಧ್ಯ. ಉಳಿದ ಬೆಳೆಗಳನ್ನು ಬೆಳೆಯಲು ಸಾಧ್ಯವಿಲ್ಲ. ಏಕೆಂದರೆ ಜೌಗು ಪ್ರದೇಶ, ಹೆಚ್ಚು ನೀರಿರುವ ಪ್ರದೇಶಗಳಲ್ಲಿ ಭತ್ತ ಬೆಳೆಯಲಾಗುತ್ತದೆ. ಭತ್ತದ ಬೆಳೆಯು ಪ್ರಾಕೃತಿಕ, ಭೌಗೋಳಿಕ ಅಂಶದ ಪ್ರಭಾವಕ್ಕೊಳಪಟ್ಟಿದೆ.

ಈ ಕಾರಣದಿಂದಾಗಿ ಭತ್ತ ಬೆಳೆಯುವ ಪ್ರದೇಶದಲ್ಲಿ ಬೇರೆ ಬೆಳೆ ಬೆಳೆದರೆ ಅದು ಜೌಗು ಅಥವಾ ನೀರು ಹಿಡಿದು ಹೋಗುತ್ತದೆ. ಇದರಿಂದಾಗಿ ಕೆಲವು ಪ್ರದೇಶಗಳಲ್ಲಿ ಬೆಳೆ ಬದಲಿಸಲು ಸಾಧ್ಯವಾಗುವುದಿಲ್ಲ. ಆದರೆ ಮಣ್ಣನ್ನು ಬದಲಿಸಿ ಅಂದರೆ ಹೊರಭಾಗಗಳಿಂದ ಗದ್ದೆಗಳಿಗೆ ಮಣ್ಣು ಹಾಕಿಸುವ ಕ್ರಮವಿದೆ. ಮಣ್ಣು ಫಲವತ್ತತೆ ಕಳೆದುಕೊಂಡಿದೆ ಎಂದು ಭಾವಿಸಿದಾಗ ಗದ್ದೆಯ ಮಣ್ಣನ್ನು ತೆಗೆಸಿ ಹೊಸ ಮಣ್ಣು ಹಾಕಿಸಲಾಗುತ್ತದೆ. ನಂತರ ಅದರಲ್ಲಿ ಬೆಳೆ ಬೆಳೆಯುವ ಕ್ರಮವಿದೆ. ಇಂದು ರಾಸಾಯನಿಕಗಳನ್ನು ಸಿಂಪಡಿಸಿ ಬೆಳೆಯುವುದರಿಂದ ಮಣ್ಣಿನ ಆರೋಗ್ಯದೊಂದಿಗೆ ಮನುಷ್ಯರ ಆರೋಗ್ಯದ ಮೇಲು ದುಷ್ಪರಿಣಾಮ ಉಂಟುಮಾಡುತ್ತಿದೆ. ಪುನಃ ಭತ್ತದ ಬೇಸಾಯದಲ್ಲಿ ಪಾರಂಪರಿಕ ಕೃಷಿಯನ್ನು ಅನುಷ್ಠಾನಗೊಳಿಸಿ ಕೊಟ್ಟಿಗೆ ಗೊಬ್ಬರ, ದೇಶಿ ಬಿತ್ತನೆ ಬೀಜ ಬಳಸುವುದರಿಂದ ಭೂಸ್ವಾಸ್ಥ್ಯದೊಂದಿಗೆ ಸಮಾಜವೂ ಸ್ವಾಸ್ಥ್ಯವಾಗಿರಲು ಸಾಧ್ಯವಾಗುತ್ತದೆ

**ಮಳೆಯಾಶ್ರಿತ ಮುಂಗಾರು ಮತ್ತು ಹಿಂಗಾರು ಆಹಾರ ಬೆಳೆಗಳು:**

**ಗೋಧಿ**

ಈ ಬೆಳೆಯನ್ನು 'ಗೋಧುಮಾ' ಎಂತಲೂ ಕರೆಯುತ್ತಾರೆ. 'ಗೋಧುಮಾ(ಗೋಧಿ) ಪದವನ್ನು ಋಗ್ವೇದದಲ್ಲಿ ಉಲ್ಲೇಖಿಸಿಲ್ಲ.' ಯಜುರ್ವೇದದಲ್ಲಿ ಉಲ್ಲೇಖಿಸಿರುವಂತೆ ಇದನ್ನು ನಂತರದ ಯುಗದಲ್ಲಿ ಬೇರೆಡೆಯಿಂದ ಪರಿಚಯಿಸಿರಬೇಕು ಎನ್ನಲಾಗಿದೆ.[೧೨೯] ಋಗ್ವೇದದಲ್ಲಿ ಗೋಧಿಯನ್ನು ಬಳಸಿರುವ ಸಾಧ್ಯತೆಗಳು ಕಡಿಮೆ ಇರುವ ಕಾರಣ ಮತ್ತು ಬೆಳೆಯದಿರುವ ಕಾರಣದಿಂದ ಉಲ್ಲೇಖಗಳು ದೊರೆಯದ ಸಾಧ್ಯತೆಗಳಿವೆ. "ನವಶಿಲಾಯುಗದ ಸಂಸ್ಕೃತಿ ಕ್ರಿ.ಪೂ. ೧೦,೦೦೦ ದಿಂದ ೯೦೦೦ದ ನಾಗರೀಕತೆ ಪೂರ್ವದ ಮೊದಲ ಮೆಸಪಟೋಮಿಯಾದಿಂದ ಭಾರತಕ್ಕೆ ಗೋಧಿಯ ಕೃಷಿಯ ಜ್ಞಾನ ಬಂದಿರಬಹುದು"[೧೩೦] ಇರಾನ್ ಮತ್ತು ಇರಾನಿನ ಗಡಿಯ 'ಅಲಿಕೋಶ್ ಎಂಬಲ್ಲಿ ಎನ್‌ಕಾರ್ನ್ ಎಂಬ ವರ್ಗದ ಗೋಧಿ ಎಮ್ಮಾರ ಗೋಧಿ ಹಾಗೂ ಕಾಡು ಜಾತಿಯ ಬಾರ್ಲಿ ಬೆಳೆಯುತ್ತಿದ್ದರು ಎನ್ನಲಾಗಿದೆ.[೧೩೧] ಈ ಬೆಳೆಯು ಮೆಡಿಟರೇನಿಯನ್ ಪ್ರದೇಶದಲ್ಲಿ ಎಲ್ಲೋ ಇತ್ತು, ಹೆರ್ಮನ್ ಪರ್ವತದ ನೆರೆಹೊರೆಯಲ್ಲಿ ಕಾಡು ರೂಪದಲ್ಲಿ ಬರುತ್ತದೆ.[೧೩೨] ಸ್ವಿಡ್ಜರ್‌ಲ್ಯಾಂಡಿನಲ್ಲಿ ಸರೋವರದ ನಿವಾಸಿಗಳು ಗೋಧಿಯನ್ನು ಬಿತ್ತುತ್ತಿದ್ದರು.[೧೩೩] ಇದನ್ನು ಗಮನಿಸಿದರೆ ಬೀಜಗಳನ್ನು ಸಂಗ್ರಹಿಸಿ ಪ್ರಸರಣ ಮಾಡಿರುವ ಮತ್ತು ಗೋಧಿ ಬೆಳೆ ಅಭಿವೃದ್ಧಿ ಸಾಧಿಸಿರುವ ಸಾಧ್ಯತೆಗಳಿವೆ. 'ಕ್ರಿ.ಪೂ. ೫೦೦೦ ದಿಂದ ೪೦೦೦೦ದ ಅವಧಿಯಲ್ಲಿ ಆಗ್ನೇಯ ಭಾಗದಲ್ಲಿ ಬೆಳೆದಿರಬೇಕು. ಕ್ಯಾಂಡೋಲ್ ಅವರು ಯುಫ್ರಟಿಸ್ ಮತ್ತು ಟೈಗ್ರಿಸ್ ಜಿಲ್ಲೆಗಳಲ್ಲಿ ಮಾತ್ರ ಕಾಡು ಗೋಧಿಯನ್ನು ಬೆಳೆಯುತ್ತಿದ್ದರು[೧೩೪] ಎಂದಿದ್ದಾರೆ. ಇದಕ್ಕೂ ಪೂರ್ವದಲ್ಲಿ ಅಂದರೆ ಕ್ರಿ.ಪೂ. ೭೦೦೦ದಲ್ಲೆ ಗೋಧಿಯ ಕಾಡು ಬೆಳೆಗಳು ಕಂಡುಬರುವುದನ್ನು ಗಮನಿಸಲಾಗಿದೆ. 'ಎಚ್‌ಜಿ.ವೇಲ್ಸ್ ಅವರು ತಮ್ಮ Out line

of History ಎಂಬ ಕೃತಿಯಲ್ಲಿ ಸರೋವರದ ಬಳಿ ವಾಸಮಾಡುವ ವಾಸಸ್ಥಳದಲ್ಲಿ ಕಾಡು ಗೋಧಿ ರೂಪ ಬೆಳೆದಿರುವುದು ಕಂಡುಬರುತ್ತದೆ. ಇದು ಮೆಸಪಟೋಮಿಯಾದಿಂದ ಕೇಂದ್ರವಾಗಿ, ಗೋಧಿಯ ಕೃಷಿ ಪೂರ್ವಗೋಳಾರ್ಧದಲ್ಲಿ ಹರಡಿಕೊಂಡಿರಬಹುದು. ಇದು ಅಟ್ಲಾಂಟಿಕ್‌ನಿಂದ ಫೆಸಿಫಿಕ್‌ಗೆ ವಿತರಣೆಯೊಂದಿದೆ.[೧೩೫] ಭಾರತೀಯ ಕೃಷಿಯಲ್ಲಿ ಗೋಧಿಯ ಮೂಲ ಮತ್ತು ಇತಿಹಾಸವನ್ನು ಸುಮಾರು ೧೦ ಸಾವಿರ ವರ್ಷಗಳ ಹಿಂದಕ್ಕೆ ತೆಗೆದುಕೊಳ್ಳಲಾಗಿದೆ. 'ಸು. ೧೦ ಸಾವಿರ ವರ್ಷಗಳ ಹಿಂದೆ ನೈರುತ್ಯ ಏಷ್ಯಾದಲ್ಲಿ ಆಹಾರ ಉತ್ಪಾದಿಸುವ ಮಾನವನ ಮೊದಲ ಯಶಸ್ಸು.'[೧೩೬] ಕಾಡುಗೋಧಿಯನ್ನು ಪಳಗಿಸುವ ಸಂದರ್ಭದಲ್ಲಿ ಗೋಧಿಯ ಸಸ್ಯವು ತನ್ನ ಬೀಜಗಳನ್ನು ಪರಿಣಾಮವಾಗಿ ಹರಡುವ ಸಾಮರ್ಥ್ಯವನ್ನು ಕಳೆದುಕೊಂಡಿರುವ ಸಾಧ್ಯತೆಗಳಿವೆ. ಈ ಕಾರಣದಿಂದಾಗಿ ಗೋಧಿ ಬೀಜದ 'ಪ್ರಸರಣ ಕಾರ್ಯವು ಸಂಪೂರ್ಣವಾಗಿ ಮನುಷ್ಯನನ್ನು ಅವಲಂಬಿಸಿದೆ.'[೧೩೭] ಫೆಲ್ಡ್ಮನ್ ೧೯೭೬ರ ಪ್ರಕಾರ ಇವರು ಹೀಗೆ ಹೇಳಿದ್ದಾರೆ. 'ಗೋಧಿಯನ್ನು ಮಾನವನು ಎಷ್ಟರ ಮಟ್ಟಿಗೆ ಬೆಳೆಸಿದ್ದಾನೆಂದರೆ ವಿಶ್ವದಲ್ಲೇ ಪ್ರಸಿದ್ಧಿ ಬೆಳೆಯಾಗಿದೆ ಎಂದಿದ್ದಾರೆ.[೧೩೮] ಕಂಚು ಮತ್ತು ಕಬ್ಬಿಣ ಯುಗದ ಸಂಸ್ಕೃತಿಗಳು ಕ್ರಿ.ಪೂ. ೩೦೦೦ ದಿಂದ ಕ್ರಿ.ಪೂ. ೧೦೦೦ದ ನಡುವೆ ಕಂಡುಬಂದಿವೆ. ಈ ಅವಧಿಯಲ್ಲಿ ಅಂದರೆ ಇತಿಹಾಸ ಪೂರ್ವಕಾಲದಲ್ಲಿ ಬೆಳೆದ ಗೋಧಿಗಳು ಏಷ್ಯಾ, ಆಫ್ರಿಕಾ, ಯುರೋಪಿನ ಪುರಾತತ್ವಶಾಸ್ತ್ರದ ಪ್ರಕಾರ 'ದಪ್ಪ, ಗಟ್ಟಿಯಾದ, ಬಿಗಿಯಾದ, ಗ್ಲೂಮ್‌ಗಳಲ್ಲಿ ಧಾನ್ಯಗಳನ್ನು ಸುತ್ತುವರೆಯಲ್ಪಟ್ಟಿದ್ದವು. ಇವುಗಳನ್ನು ನೂಲುವುದು ಕಷ್ಟಕರವಾಗಿತ್ತು. ಗೋಧಿಯ ಬುಡ್ಡುಗಳನ್ನು ಬೆಂಕಿಯ ಮೇಲೆ ಅಥವಾ ಬಿಸಿ ಕಲ್ಲಿನ ಮೇಲ್ಮೈಯಲ್ಲಿ ಬಿಸಿ ಮಾಡಿದಾಗ ಅಂಟುಗಲು ಸುಲಭವಾಗಿ ಆಗಿರಬಹುದಾದ ಸಾಧ್ಯತೆಗಳಿವೆ. ನವ ಶಿಲಾಯುಗದ ಕಾಲದಲ್ಲಿ ಧಾನ್ಯಗಳನ್ನು ಎಸೆಯುವ ಮೂಲಕ ಕಾಳುಗಳನ್ನು ತೆಗೆಯುತ್ತಿದ್ದರೆನ್ನಲಾಗಿದೆ.[೧೩೯] 'ಮೌಂಟ್ ಕಾರ್ಮೆಲ್ಕಲ್ಲಿರುವ ಪ್ರಸಿದ್ಧ ಗುಹೆಗಳ ಉತ್ಖನನವು ಪರೋಕ್ಷ ಸಾಕ್ಷ್ಯಗಳನ್ನು ಒದಗಿಸಿವೆ. ಇಲ್ಲಿ ಫ್ಲಿಂಟ್ನಿಂದ ಮಾಡಿದ ಕುಡುಗೋಲು ದೊರೆತಿದೆ. ಇದನ್ನು ಹುಲ್ಲು ಕತ್ತರಿಸಲು ಬಳಸಿರುವ ಸಾಧ್ಯತೆಗಳಿವೆ. ಈ ಪ್ರದೇಶದಲ್ಲಿ ಈಗಲೂ ಕಾಡುಗೋಧಿ ಮತ್ತು ಬಾರ್ಲಿ ಬೆಳೆಯುತ್ತಾರೆ.[೧೪೦] ಪುರಾತತ್ವಶಾಸ್ತ್ರದ ಪ್ರಕಾರ ೭೮೦೦ರ ಹೊತ್ತಿಗೆ ನೈರುತ್ಯ ಏಷ್ಯಾದಿಂದ ಡಿಂಕೊಯಿಡ್ಸ್ ಮತ್ತು ಟಿ ಲೂಟಿಕಮ್ ಎಂಬ ಎರಡು ಗೋಧಿ ಪ್ರಬೇಧಗಳನ್ನು ಮನುಷ್ಯನು ಸಾಕುತ್ತಿದ್ದನು[೧೪೧] ಎನ್ನಲಾಗಿದೆ. ಇದರಿಂದ ಮಾನವನ ವಲಸೆಯು ಏಷ್ಯಾ ಮತ್ತು ಯುರೋಪ್‌ನಿಂದ ಹರಡಿತು ಎನ್ನಲಾಗಿದೆ. 'ಭಾರತಕ್ಕೆ ಗೋಧಿ ಹರಡುವಿಕೆಯು ೫ನೆಯ ಸಹಸ್ರಮಾನದಿಂದ ಹರಡಿತು'[೧೪೨] ಎನ್ನಲಾಗಿದೆ. ಕ್ರಿ.ಪೂ. ೩೦೦ರ ವರೆಗೆ ಮುಖ್ಯವಾಗಿ ಎಮ್ಮರ್ ಗೋಧಿ ಮತ್ತು ಬಾರ್ಲಿಯಂತಹ ಕೃಷಿ ನಡೆದಿರುವ ಸಾಧ್ಯತೆಗಳಿವೆ. ಆನಂತರದಲ್ಲಿ ಇವುಗಳು ವಿರಳವಾಗಿ ಕಂಡುಬರುತ್ತವೆ. ಈ ಬೆಳೆಗಳನ್ನು ಆಧರಿಸಿದ 'ಆರಂಭಿಕ ಕೃಷಿಯು ಕಬ್ಬಿಣಯುಗದ ವಸಾಹತುಗಳು, ಸಿಂಧೂ ಕಣಿವೆ ಅಥವಾ ಭಾರತದಲ್ಲಿ ೫ನೇ ಸಹಸ್ರಮಾನದ ಆರಂಭದಲ್ಲಿ ಹರಡಿತು.'[೧೪೩] 'ಗೋಧೂಮ ಮತ್ತು ಬ್ರೀಹಿ ಪದಗಳು ಋಗ್ವೇದದಲ್ಲಿ ಕಂಡುಬರುವುದಿಲ್ಲ. ಆದರೆ ಪಂಜಾಬ್‌ಗೆ ಸ್ಥಳೀಯವಾಗಿದ್ದವು. ಆಗ ಇದನ್ನು 'ವಾಜ್' ಎಂದು ಕರೆಯಲಾಗುತ್ತಿತ್ತು. ಪೊಲಾಕ್ ಗೋಧಿ ಮತ್ತು ಬಾರ್ಲಿ. ಮಸೂರ, ಅಗಸೆ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಕ್ರಿ.ಪೂ. ೪೦೦೦ದ ವೇಳೆಗೆ ಗೋಧಿ ಏಕ ಮುಖ ಬೆಳೆಯಾಗಿತ್ತು.[೧೪೪] 'ರಾಮಾಯಣ, ಮಹಾಭಾರತ ಧರ್ಮಶಾಸ್ತ್ರಗಳ ಕಾಲದಲ್ಲಿ ಭತ್ತ ಬಾರ್ಲಿಯೊಂದಿಗೆ ಗೋಧಿ ಪ್ರಮುಖ ಆಹಾರ ಧಾನ್ಯವಾಗಿತ್ತು.[೧೪೫]

ಕುಂಬಾರಿಕೆ ಮುಂತಾದ ಅವಧಿಯಲ್ಲಿ ಪಶ್ಚಿಮ ಭಾರತದಲ್ಲಿ ಗೋಧಿ ಹಾಗೂ ಬಾರ್ಲಿ ಕಂಡುಬರುತ್ತದೆ.[೧೪೬] 'ಪಾಲಿಗ್ರಂಥದಲ್ಲಿ ಗೋಧಿ(ಗೋಧೂಮ), ಸಣ್ಣಗೋಧಿ(ಕುದ್ರುಸಕ),

ತೊಕ್ಕೆಗೋಧಿ(ವಿಲಂಗ),[೧೪೭] ಬೆಳೆಯುತ್ತಿದ್ದರು ಎಂದು ತಿಳಿಸುತ್ತದೆ. 'ಅರ್ಥಶಾಸ್ತ್ರಕಾರನು ಗೋಧಿಯನ್ನು ಕೊನೆಯಲ್ಲಿ ಬಿತ್ತುವ ಬೆಳೆ[೧೪೮] ಎಂದು ತಿಳಿಸಿದ್ದಾನೆ. ಈ ಕೃತಿಯಲ್ಲಿ ಹೊಟ್ಟೆಗೋಧಿ, ಜವೆಗೋಧಿ, ಗೋಧಿ, ಗೋಧೂಮ[೧೪೯] ಎಂಬ ಗೋಧಿಯ ವಿಧಗಳನ್ನು ತಿಳಿಸಿದೆ. ಈ ಧಾನ್ಯಗಳಿಗೆ ನೀರನ್ನು ಚುಮುಕಿಸಿ ಹಿಟ್ಟು ಮಾಡಿದಾಗ ಅದೇ ಪ್ರಮಾಣದಲ್ಲಿ ಇರುತ್ತದೆ ಎಂಬ ಅಂಶವನ್ನು ಕೌಟಿಲ್ಯನು ತಿಳಿಸಿದ್ದಾನೆ. ಸೋಮೇಶ್ವರನು ತನ್ನ ಮಾನಸೋಲ್ಲಾಸ ಕೃತಿಯಲ್ಲಿ ಗೋಧಿಯನ್ನು ಉಲ್ಲೇಖಿಸಿದ್ದಾನೆ.[೧೫೦]

ಶಾಸನಗಳಲ್ಲಿ ಗೋಧಿಯ ಉಲ್ಲೇಖಗಳ ಪ್ರಮಾಣ ವಿರಳವಾಗಿ ದೊರೆಯುತ್ತದೆ. ಭತ್ತ ಸಾರ್ವತ್ರಿಕ ಬೆಳೆಯಾಗಿದ್ದ ಕಾರಣದಿಂದಾಗಿ ಗೋಧಿಯ ಬೆಳೆಯ ವಿರಳತೆ ಕಂಡುಬಂದಿರುವ ಸಾಧ್ಯತೆಗಳಿವೆ. ನಿಂಬರಗಿಯ ಕ್ರಿ.ಶ. ೧೧೩೪ರ ಶಾಸನದಲ್ಲಿ ಬೆಳೆಗಳನ್ನು ಕುರಿತಾದ ವರ್ಗೀಕರಣವನ್ನು ಕುರಿತು ಹೇಳಿದೆ. "ಆಲಂದ ಸಾಸಿರನಾಡಿನ ವಿವಿಧ ಬೆಳೆಗಳನ್ನು ಜೋಳ ಗೋದುಮೆಯಂತಹ ಅನ್ನಾಹಾರ ಬೆಳೆಗಳು ಮತ್ತು ಹಣದ ಬೆಳೆಗಳ ಕುರಿತಾಗಿ ಹೇಳಿದೆ."[೧೫೧] ಈ ಶಾಸನದಲ್ಲಿನ ಹಣದ ಬೆಳೆಗಳು ತೋಟದ ಬೆಳೆಗಳಾಗಿ ಕಂಡುಬರುತ್ತವೆ. ಮೊದಲನೆಯ ಪುಲಿಕೇಶಿಯ ಅಳ್ತೆಂ ಶಾಸನದಲ್ಲಿ ಭತ್ತ, ಕಬ್ಬು, ಬಟಗಡ್ಲಿ, ನವಣೆ, ಗೋಧಿ ಮೊದಲಾದ ಧಾನ್ಯಗಳಿಂದ ಸಮೃದ್ಧವಾಗಿತ್ತೆಂದು ಹೇಳಿದೆ.[೧೫೨] ಭತ್ತ, ರಾಗಿ, ಜೋಳ, ಗೋಧಿ, ಬೆಳೆಗಳನ್ನು ಸಹ ಇವರ ಕಾಲದಲ್ಲಿ ಬೆಳೆಯುತ್ತಿದ್ದೆನ್ನಲಾಗಿದೆ.[೧೫೩]

ಕ್ರಿ.ಶ. ೧೧೭೭ರ ಶಾಸನದಲ್ಲಿ ಗೋಧುವೆಯ ಉಲ್ಲೇಖವಿದೆ[೧೫೪].ಕ್ರಿ.ಶ. ೧೨೦೦ರ ಶಾಸನದಲ್ಲಿ ಕಣಿಕ(ಗೋಧಿ), ತೊಗರಿಯ ಉಲ್ಲೇಖ ಕಂಡುಬರುತ್ತದೆ.[೧೫೫] ಕ್ರಿ.ಶ. ೧೨೯೬ರ ಶಾಸನವು ಗೋಧಿಯ ನಾಚಂಣ್ಣಂ ಎಂದು ಹೆಸರಿಸಿದೆ.[೧೫೬] ಕ್ರಿ.ಶ. ೧೦೯೯ರ ಶಾಸನದಲ್ಲಿ ಕಡೆಲೆ, ಗೋಧುಮೆ(ಗೋಧಿ)ಯ ಉಲ್ಲೇಖವಿದೆ.[೧೫೭] ಕ್ರಿ.ಶ. ೧೩೮೨ರ ಶಾಸನದಲ್ಲಿ ಗೋಧಿ ಬೆಳೆಯ ಉಲ್ಲೇಖವಿದೆ.[೧೫೮] ನುಗೇಹಳ್ಳಿಯ ಶಾಸನವೊಂದರಲ್ಲಿ 'ಗೋಧಿ' ಉಲ್ಲೇಖವಿದೆ.[೧೫೯] ಕ್ರಿ.ಶ. ೧೧೭೮ರ ಶಾಸನದಲ್ಲಿ 'ಗೋಧಿಯ ಕೆಯು' ಎಂದಿದೆ.[೧೬೦] ಈ ಶಾಸನದಲ್ಲಿ ಗೋಧಿ ಬೆಳೆಯುವ ಭೂಮಿಯ ಉಲ್ಲೇಖ ಕಂಡುಬಂದಿದೆ.

ಭತ್ತದ ನಂತರದ ಸ್ಥಾನ ಗೋಧಿ ಮತ್ತು ಜೋಳದ ಬೆಳೆಗೆ ಇದ್ದಂತೆ ಶಾಸನಗಳಿಂದ ಕಂಡುಬರುತ್ತದೆ. ಗೋಧಿಯು ನೀರಾವರಿ ಮತ್ತು ಬೆದ್ದಲು ಎರಡು ಭೂಮಿಗಳಲ್ಲೂ ಮುಂಗಾರು ಮತ್ತು ಹಿಂಗಾರು ಎರಡು ಸಮಯಗಳಲ್ಲಿ ಬೆಳೆಯುವ ಬೆಳೆಯಾಗಿದೆ. "ಹ್ಯೂಯೆನ್‌ತ್ಸಾಂಗನು ತನ್ನ ಬರವಣಿಗೆಯಲ್ಲಿ ಎಲ್ಲ ಪ್ರದೇಶಗಳಲ್ಲೂ ಅಕ್ಕಿ, ಗೋಧಿ, ಶುಂಠಿ, ಸಾಸುವೆ, ಕಲ್ಲಂಗಡಿ, ಕುಂಬಳಗಳನ್ನು ಹೇಳಿ ಈರುಳ್ಳಿ, ಬೆಳ್ಳುಳ್ಳಿ ಸೇವಿಸುವವರನ್ನು ರಾಜ್ಯದಲ್ಲಿ ಬಹಿಷ್ಕರಿಸುತ್ತಾರೆ, ದಾಳಿಂಬಿ, ಕಿತ್ತಳೆ ಎಲ್ಲ ಪ್ರದೇಶಗಳಲ್ಲಿ ಬೆಳೆಯುತ್ತಿದ್ದರು ಎಂದಿದ್ದಾನೆ.[೧೬೧] ಇದರಿಂದ ಬದಾಮಿ ಚಾಲುಕ್ಯರ ಕಾಲದಲ್ಲಿ ಬೆಳೆಯುತ್ತಿದ್ದ ಬೆಳೆಯ ಕುರಿತು ಮಾಹಿತಿಯನ್ನು ಒದಗಿಸಿರುವುದು ಕಂಡುಬರುತ್ತದೆ. ಸೋಮೇಶ್ವರನು ಮಾನಸೋಲ್ಲಾಸ ಕೃತಿಯಲ್ಲಿ ಹೆಸರು, ಬಿಳಿಅವರೆ, ಕಡಲೆ, ಬಟಾಣಿ, ಬೇಳೆ, ಕಪ್ಪುಉದ್ದು, ಕಾಡುಕಡಲೆ, ಅಲಸಂದೆ ಬೆಳೆಗಳ ಕುರಿತು ತಿಳಿಸಿದ್ದಾನೆ[೧೬೨]

**ಇನ್ನಿತರ ಆಹಾರದ ಬೆಳೆಗಳು**

'ಅರ್ಥಶಾಸ್ತ್ರದ ಕಾಲಕ್ಕೆ ಆಹಾರದ ಧಾನ್ಯಗಳ ವ್ಯಾಪಾರ ನಡೆದಂತೆ ತಿಳಿದುಬರುತ್ತದೆ. "ಧಾನ್ಯ ವಿಕ್ರಯದಿಂದ(ಮಾರಿದಾಗ)ಬಂದ ಹಣ, ಕೊಂಡ ಮಾಲು ವೃದ್ಧಿ ಪ್ರಯುಕ್ತ ಕೈಸೇರಿದ ಧಾನ್ಯವನ್ನು

ಕ್ರಯಿಮ ಎಂದು ಕರೆದಿರುವರು.[೧೬೩] ಧಾನ್ಯಗಳನ್ನು ಭಿನ್ನ ಬೆಲೆಯಿಂದ ವಿನಿಮಯ ಮಾಡಿಕೊಳ್ಳುವುದು ಪರಿವರ್ತಕ."[೧೬೪] ಪುನಃ ಹಿಂತಿರುಗಿಸಲು ಸಾಧ್ಯವಿಲ್ಲವೆಂದು ಮಿತ್ರನಲ್ಲಿ ಬೇಡುವ ಧಾನ್ಯ ಪ್ರಾಮಿತ್ಯಕ. ಸಮೃದ್ಧಿಕವಾಗಿ ಕೊಡುವೆನೆಂದು ಧಾನ್ಯಗಳನ್ನು ಪಡೆಯುವುದು ಆಪಮಿತ್ಯಕ.[೧೬೫] ಧಾನ್ಯ ಕುರಿತಾದ ಕೊಡುಗೊಳುಗೆ, ವ್ಯಾಪಾರಕ್ಕೆ ಸಂಬಂಧಿಸಿದ ಅಂಶಗಳ ಬಗೆಗೆ ಅರ್ಥಶಾಸ್ತ್ರಕಾರ ಮಾಹಿತಿ ನೀಡಿದ್ದಾನೆ. ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ ಒಂದು ಮತ್ತರಿಗೆ ಇಕ್ಕುಳ ಜೋಳ'[೧೬೬] ಒಂದು ಮತ್ತರು ಭೂಮಿಗೆ ಎರಡು ಕೊಳಗ ಜೋಳ' ಕೊಡಬೇಕು ಎಂದು ಹೇಳಿದೆ. ಕ್ರಿ.ಶ. ೯೮೨ರ ಶಾಸನದಲ್ಲಿ "ನಿಜಾಧಿಪಂಬೆಸಸಿದೇಬ್ರ್ಬಸನಂ ಕುಸಿದಿರ್ಮ್ಮ ಕೇಳ್ದು ಬಾಟ್ವೊಜಿಪನನವ್ಯವಸ್ಥಿತನನೊಬ್ರ್ಬಸಕಳ್ಳುವ 'ಜೋಳಗಳ್ಳರಂ' ಪಟಿಯೆಡೆಯಿಲ್ಲದೊಳ್ಪಲೆಯುತಿರ್ಪ್ಪುದು ಮಾನವ ಹಸ್ತಿಯಿಂ"[೧೬೭] ಎಂದಿದೆ. ಇಲ್ಲಿ ಜೋಳಗಳ್ಳರೊಂದಿಗೆ ಹೋರಾಡಿದುದರ ಬಗೆಗೆ ಶಾಸನವು ತಿಳಿಸಿದೆ. ಜೋಳವನ್ನು ಕದಿಯುವ ಕಳ್ಳರಿದ್ದುದನ್ನು ಗಮನಿಸಿದರೆ ಈ ಕಾಲಕ್ಕೆ ಇದು ಆರ್ಥಿಕ ಬೆಳೆಯಾಗಿದ್ದಿರುವ ಸಾಧ್ಯತೆಗಳಿವೆ. ಅಲ್ಲದೆ ಈ ಭಾಗದ ಪ್ರಮುಖ ಬೆಳೆಯಾಗಿರುವ ಸಾಧ್ಯತೆಗಳೂ ಇವೆ. ಕ್ರಿ.ಶ. ೧೧೧೪-೧೫ರ ಶಾಸನದಲ್ಲಿ ವೈಗುಳ ಬಿಟ್ಟ ಜೋಳದ ಮಣ್ಣು'[೧೬೮] ಎಂದಿದೆ. ಜೋಳ ಬೆಳೆಯುವ ಭೂಮಿಯನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೬೬ರ ಶಾಸನದಲ್ಲಿ ಎಳ್ಳು, ತೊಗರಿ, ಅರಿಸಿನ, ಏಲಕ್ಕಿ, ಬೇಳೆ, ಮೆಣಸುಗಳನ್ನು ಉಲ್ಲೇಖಿಸಿದೆ.[೧೬೯]

'ಬಾದಾಮಿಯ ಪುರಾತತ್ವ ಸಂಗ್ರಹಾಲಯದಲ್ಲಿನ ಒಂದು ವೀರಗಲ್ಲಿನಲ್ಲಿ ಜೋಳದ ಪೈರನ್ನು ಯೋಧನ ಹಿಂದೆ ಕೆತ್ತಲಾಗಿದೆ.[೧೭೦] ಇದು ಜೋಳವಾಳಿ ವೀರಗಲ್ಲಾಗಿರುವ ಸಾಧ್ಯತೆಯಿದೆ. ಜೋಳದ ಅಥವಾ ಅನ್ನದ ಋಣಕ್ಕಾಗಿ ಹೋರಾಡಿದ ವೀರನ ನೆನಪಿಗೆ ಹಾಕಿರುವುದಿದೆ. ಆದರೆ ಜೋಳದ ಪೈರು ಇರುವುದು ವಿಶೇಷ. ಈ ಶಾಸನದಿಂದ ಅಂದು ಯಥೇಚ್ಛವಾಗಿ ಜೋಳ ಬೆಳೆಯುತ್ತಿದ್ದರೆಂದು ತಿಳಿಯುತ್ತದೆ. ಇಂದಿಗೂ ಆ ಭಾಗದ ಪ್ರಮುಖ ಬೆಳೆ ಜೋಳವಾಗಿದೆ. ಜನರ ಪ್ರಮುಖ ಆಹಾರವೂ ಸಹ ಜೋಳದ ರೊಟ್ಟಿಯಾಗಿರುವುದು ಕಂಡುಬರುತ್ತದೆ.

ಕ್ರಿ.ಶ. ೧೧೪೯ರ ಶಾಸನದಲ್ಲಿ ಜೋಳ ದವಸಧಾನ್ಯವಾವುದಾದಡಂ ಮಾಜಿದವರಲ್ಲಿ ಹೊಂಗೆಮಾನ ೧ ಮಾಱುಗೊಂಡವರಲ್ಲಿ ಪೊಂಗೆ ಮಾನ ೧[೧೭೧] ಎಂದಿದೆ. ಜೋಳದ ಬೆಳೆಯು ಈ ಭಾಗದಲ್ಲಿ ಇಂದಿಗೂ ಪ್ರಮುಖ ಬೆಳೆಯಾಗಿದೆ. ಜೋಳ ಮತ್ತಿತರ ಧಾನ್ಯಗಳನ್ನು ಮಾರುವವರು ಮತ್ತು ಕೊಳ್ಳುವವರಿಗೆ ಸುಂಕ ವಿಧಿಸಿರುವುದನ್ನು ಶಾಸನವು ತಿಳಿಸಿದೆ. ಆಹಾರದ ಬೆಳೆಗಳು ರಾಜ್ಯದ ಬೊಕ್ಕಸಕ್ಕೆ ಯಾವ ರೀತಿ ಆದಾಯಗಳಾಗಿದ್ದವು ಎಂಬುದನ್ನು ಇಲ್ಲಿ ತಿಳಿಯಲಾಗಿದೆ. ಕ್ರಿ.ಶ. ೧೦೭೫ರ ಶಾಸನದಲ್ಲಿ ಬೇಳೆಯ ಉಲ್ಲೇಖವಿದೆ.[೧೭೨] ಕ್ರಿ.ಶ. ೧೧೯೯ರ ಶಾಸನದಲ್ಲಿ ಜೋಳ ಕೊಳಗ ೩ ಕಾಪಿಂಗೆ ಬೇಳೆ, ಸಂಕ್ರಾನ್ತಿಯ ಬೇಳೆ ಉಳ್ಳಿಯ[೧೭೩] ಉಲ್ಲೇಖವಿದೆ. ಕ್ರಿ.ಶ. ೧೧೬೫ರ ಶಾಸನದಲ್ಲಿ ದೇವರ ಪೂಜಾ ಕಾರ್ಯಗಳಿಗೆ 'ಜೋಳ' ಬಿಟ್ಟದ್ದನ್ನು ತಿಳಿಸಿದೆ.[೧೭೪] ಅಂದಿನ ಜನರ ಈ ಭಾಗದ ಪ್ರಮುಖ ಬೆಳೆಯಾಗಿಯೂ ಮತ್ತು ಇಂದಿಗೂ ಕಂಡುಬರುವುದನ್ನು ಗಮನಿಸಬಹುದಾಗಿದೆ.. ಕ್ರಿ.ಶ. ೧೧೮೪ರ ಶಾಸನದಲ್ಲಿ ಹೊಂಗೆಜೋಳದ[೧೭೫] ಉಲ್ಲೇಖವಿದೆ.

ಕ್ರಿ.ಶ. ೧೨೦೨ರ ಶಾಸನದಲ್ಲಿ 'ರಾಗಿಯಲು ದೇವಗೊಳಗ' ಎಂದಿದೆ.[೧೭೬] ರಾಗಿಯನ್ನು ಬಡವರ ಧಾನ್ಯವೆಂದು ಕರೆಯುವರು. ಶ್ರಮಿಕ ವರ್ಗದವರು ಪ್ರಧಾನ ಆಹಾರವಾಗಿ ಈ ಧಾನ್ಯವನ್ನು ಬಳಸುವರು ಎಂಬ ಕಾರಣಕ್ಕೆ, 'ಬಡಮಳೆ' ಅಂದರೆ ಕಡಿಮೆ ಮಳೆ ಬೀಳುವ ಪ್ರದೇಶದಲ್ಲೂ ಬೆಳೆಯುತ್ತದೆ ಎಂಬ ಕಾರಣಕ್ಕೆ ಬಡವರ ಧಾನ್ಯವೆಂದು ಕರೆಯುವುದಿದೆ. ಈ ಬೆಳೆಯನ್ನು ಹೇರಳವಾಗಿ ದಕ್ಷಿಣ ಕರ್ನಾಟಕ ಮತ್ತು ಮಧ್ಯ ಕರ್ನಾಟಕ ಭಾಗಗಳಲ್ಲಿ ಬೆಳೆಯುತ್ತಾರೆ. ಹಾಗೆಯೇ

ಈ ಭಾಗದ ಪ್ರಮುಖ ಆಹಾರ ಬೆಳೆಯಾಗಿಯು ಇದು ಕಂಡುಬರುತ್ತದೆ. ಶಾಸನಗಳು ಭತ್ತವನ್ನು ಉಲ್ಲೇಖಿಸಿದಷ್ಟು ರಾಗಿ ಧಾನ್ಯವನ್ನು ಉಲ್ಲೇಖಿಸಿರುವುದು ಕಂಡುಬರುವುದಿಲ್ಲ. ಇದಕ್ಕೆ ಭೌಗೋಳಿಕ ಮತ್ತು ಪ್ರಾಕೃತಿಕ ಕಾರಣಗಳಿರುವ ಸಾಧ್ಯತೆಗಳಿವೆ. ಭತ್ತದಿಂದ ಬರುವ ಆದಾಯಕ್ಕೂ ರಾಗಿಯಿಂದ ಬರುವ ಆದಾಯಕ್ಕೂ ವ್ಯತ್ಯಾಸಗಳಿವೆ. ಭತ್ತ ಶ್ರೀಮಂತ ಅಥವಾ ಉನ್ನತ ವರ್ಗವೆಂದು ಕರೆಸಿಕೊಂಡ ಬ್ರಾಹ್ಮಣರ ಉಪಭೋಗದ ಆಹಾರವಾಗಿರುವ ಕಾರಣಕ್ಕೆ ಇದನ್ನು ವಿರಳವಾಗಿ ಬೆಳೆಯದಿರುವ ಸಾಧ್ಯತೆಗಳಿವೆ. ಕರ್ನಾಟಕದಲ್ಲಿ ರಾಗಿಯ ಪ್ರಾಚೀನತೆ ಸುದೀರ್ಘವಾಗಿದೆ. 'ಕ್ರಿ.ಪೂ. ೧೮೦೦ರಷ್ಟು ಹಳೇಯದಾದ ರಾಗಿಯು ಹಾವೇರಿ ಜಿಲ್ಲೆಯ ಹಳ್ಳೂರಿನಲ್ಲಿ ದೊರೆತಿದೆ. ಬಳ್ಳಾರಿ ಜಿಲ್ಲೆಯ ತೆಕ್ಕಲುಕೋಟೆಯಲ್ಲಿ ಹುರುಳಿಕಾಳುಗಳು ದೊರೆತಿವೆ. ಅದಕ್ಕು ಹಿಂದೆಯೇ ಕರ್ನಾಟಕದಲ್ಲಿ ರಾಗಿ ಬೆಳೆಯುತ್ತಿದ್ದರೆಂದು ರಾಂಧಾವಾ ಅವರು ತಮ್ಮ ಎ ಹಿಸ್ಟರಿ ಆಫ್ ಎಗ್ರಿಕಲ್ಚರ್ ಎಂಬ ಕೃತಿಯಲ್ಲಿ ಹೇಳಿದ್ದಾರೆ.[೧೭೭] ರಾಗಿಯ ಹಿಂದೆಯೇ ಆಫ್ರಿಕಾದಿಂದ ಬಂದು ದಖ್ಖನ್ ಪ್ರಸ್ಥಭೂಮಿಯಲ್ಲಿ 'ಜೋಳ' ಜನಪ್ರಿಯವಾಯಿತು[೧೭೮.] ಸು. ೫೦೦೦ರಷ್ಟು ಹಳೆಯದಾದ ವೇದಗಳಲ್ಲಿಯೂ ಅಕ್ಕಿ, ಗೋಧಿ, ಬಾರ್ಲಿ, ಉದ್ದು, ಹೆಸರು, ಹತ್ತಿ, ಕಬ್ಬು, ಎಳ್ಳು ಮೊದಲಾದ ಧಾನ್ಯಗಳ ಬಳಕೆಯಿತ್ತೆಂದು ತಿಳಿದುಬರುತ್ತದೆ.[೧೭೯]

ಕ್ರಿ.ಶ. ೧೧೪೧ರ ಶಾಸನವು ಹೊಲದ ಬೆಳೆಗಳನ್ನು ಕ್ರಯಕ್ಕೆ ಕೊಂಡು ಬೆಳೆ ವ್ರಿತ್ತಿಯ ಸಮಸ್ತ ಬಳಿಸಹಿತ ಆಗಾಮಿ ಭೂಮಿಲಾಭಾರ್ಥ[೧೮೦] ಎಂದಿದೆ. ಯಾವ ಬೆಳೆಗಳೆಂದು ಇದರಲ್ಲಿ ಉಲ್ಲೇಖಿಸಿಲ್ಲ. ಆದರೆ ಅದರಿಂದ ಬಂದ ಲಾಭವನ್ನು ದಾನ ನೀಡಿದಂತೆ ಶಾಸನವು ತಿಳಿಸಿದೆ. ಇವು ಮಳೆಯಾಶ್ರಿತ ಬೆಳೆಗಳು ಎಂಬುದು ಸ್ಪಷ್ಟ.

ಕ್ರಿ.ಶ. ೧೧೪೪ರ ಶಾಸನದಲ್ಲಿ ಸತ್ರಕ್ಕೆ ಜೋಳವನ್ನು ಬಿಟ್ಟರು.[೧೮೧] ಏಕೆ ಇಲ್ಲಿ ಜೋಳ ದಾನದ ಉಲ್ಲೇಖವಿದೆ ಎಂದರೆ ಈ ಭಾಗದಲ್ಲಿ ಅಂದಿನ ಪ್ರಮುಖ ಬೆಳೆ ಜೋಳವಾಗಿ ಕಂಡುಬರುತ್ತದೆ. ಅದು ಇಂದಿಗೂ ಮುಂದುವರೆದುಕೊಂಡು ಬಂದಿರುವುದು ಕಾಣಬರುತ್ತದೆ. ಕ್ರಿ.ಶ. ೧೧೯೦ರ ಶಾಸನದಲ್ಲಿ 'ಖಂಣ್ಡುಗ ಜೋಟಿದ ಬೆದಯುಂ ತೋಟ್ಟ'[೧೮೨.] ಎಂದು ಉಲ್ಲೇಖಿಸಿದೆ.

ಕ್ರಿ.ಶ. ೧೫ನೆಯ ಶತಮಾನದ ಶಾಸನದಲ್ಲಿ ಉದ್ದಿಯಗಣದಮೇಗೆ[೧೮೩]ಯ ಉಲ್ಲೇಖವಿದೆ. ಕ್ರಿ.ಶ. ೧೨೬೧ರ ಶಾಸನದಲ್ಲಿ ಭತ್ತ, ಎಳ್ಳು, ಜೋಳ, ಕಾರುಂಣ್ಯ ಬಿಟ್ಟಿಯಭಂಡಿ[೧೮೪] ಉಲ್ಲೇಖವಿದೆ. ಕ್ರಿ.ಶ. ೧೫೮೨ರ ಶಾಸನದಲ್ಲಿ ಮಳವೆ ಒಂದಕ್ಕಂ ಹಾಗ ಧಾನ್ಯನೆಲ್ಲು ಜೋಳರಾಗಿ ನವಣೆ ಬರಗು ಸಾವೆ ಅಂತು ಧಾನ್ಯವಾಜಿಕಂ ಪ್ರತಿ ಹೇಜಿಒಂದಕ್ಕಂ ಬೇಳೆ ವಿದಲೆ ಪೈಕ ಗೋಧಿ ಕಡಲೆ ಎಳ್ಳು ಅಗಸೆ ಕುಸುಬೆ ಹೆಸರು ಉದ್ದು ತೊಗರು ಹುರುವಲ್ಲಿ ಮುಂತಾದ ಧಾನ್ಯಕ್ಕೆ ಪ್ರತಿ ಹೇಜಿಒಂದಕ್ಕೆ ಹಾಗ ಅಕ್ಕಿಯ ಹೇಜಿಒಂದಕ್ಕಂ ಬೇಳೆ ಪರದೇಶದಿಂದ ಬಹ ಮನ್ಯದ ಎತ್ತಿಂಗೆ ಹಾಗ[೧೮೫] ಎಂದು ಉಲ್ಲೇಖಿಸಿದೆ. ಆಹಾರದ ಬೆಳೆಗಳೊಂದಿಗೆ, ಎಣ್ಣೆಯ ಕಾಳುಗಳನ್ನು ಈ ಶಾಸನ ತಿಳಿಸುತ್ತದೆ. ಇಂದು ಸಿರಿಧಾನ್ಯಗಳೆಂದು ಕರೆಯುವ ರಾಗಿ, ಜೋಳ, ನವಣೆ, ಬರುಗು, ಸಾವೆ, ಧಾನ್ಯಗಳನ್ನು ಶಾಸನದಲ್ಲಿ ಉಲ್ಲೇಖಿಸಿರುವುದು ಕಂಡುಬಂದಿದೆ. ಕಡಿಮೆ ಮಳೆಯಾದರೂ ಬೆಳೆಯುವ ಬೆಳೆಗಳಿವು. ಸಾಮಾನ್ಯವಾಗಿ ಹಿಂಗಾರು ಧಾನ್ಯಗಳಾಗಿ ಬೆಳೆಯುತ್ತಾರೆ. ಯಾವುದೇ ರಾಸಾಯನಿಕ ಗೊಬ್ಬರಗಳ ಸಹಾಯವಿಲ್ಲದೆ ಬೆಳೆಯಬಹುದಾದ ಧಾನ್ಯಗಳಾಗಿವೆ. ಆದರೆ ವರ್ಷ ವರ್ಷಕ್ಕೂ ಆವರ್ತನ ಬೆಳೆ ಬೆಳೆಯುವುದು ಅಗತ್ಯ. ಕ್ರಿ.ಶ. ೧೨೨೧-೨೨ರ ಶಾಸನದಲ್ಲಿ 'ಹೆಸರು' ಬೆಳೆಯ[೧೮೬.] ಉಲ್ಲೇಖವಿದೆ.

ಕ್ರಿ.ಶ. ೧೧೬೨ರ ಶಾಸನದಲ್ಲಿ ಜೋಳವಾಳಿಯ[೧೮೭.] ಉಲ್ಲೇಖವಿದೆ. ಆಶ್ರಯದಾತನ ಅನ್ನದ ಋಣ ತೀರಿಸಲು ಯುದ್ಧದಲ್ಲಿ ಹೋರಾಡಿ ಮಡಿದುದಕ್ಕೆ ಜೋಳವಾಳಿ ಎಂದು ಕರೆಯುತ್ತಾರೆ. ಯಾಕೆ ಜೋಳ ಪದವನ್ನು ಬಳಸಿದ್ದಾರೆ? ಎಂದು ಗಮನಿಸಿದರೆ ಆ ಕಾಲದ ಜನರ ಪ್ರಮುಖ ಆಹಾರ

ಜೋಳವಾಗಿರುವ ಸಾಧ್ಯತೆಗಳಿವೆ. ಈ ಕಾರಣದಿಂದಾಗಿ ಜೋಳ ಬೆಳೆಯುತ್ತಿದ್ದರೆಂದು ತಿಳಿಯುತ್ತದೆ. ಕ್ರಿ.ಶ. ೧೨೪೩ರ ಶಾಸನದಲ್ಲಿ 'ಜೋಳ'[೧೮೮] ಉಲ್ಲೇಖವಿದೆ. ಕ್ರಿ.ಶ. ೧೨೪೦ರ ಶಾಸನದಲ್ಲಿ ರಾಮನಾಯಕನ ಜೋಳವಾಳಿಗೆಗೆ ಮೆಚ್ಚಿ ಕುಮಾರ ಬೀರದೇವರಸನು ಹಲೆಯ ಅಂಬಡೆಯ ಕೆಯಹಳಿ ಭೂಮಿದಾನ ಕೊಟ್ಟನೆಂದಿದೆ.[೧೮೯] ಕ್ರಿ.ಶ ೧೧೭೦ರ ಶಾಸನದಲ್ಲಿ 'ಜೋಳದ ಪಾಳಿಯರಿಯಣಮಂ'[೧೯೦] ಎಂದಿದೆ. ಕ್ರಿ.ಶ. ೧೨೧೬ರ ಶಾಸನದಲ್ಲಿ ಜೋಳವಾಳಿಯ[೧೯೧] ಉಲ್ಲೇಖವಿದೆ. ಈ ಭಾಗದಲ್ಲಿ ಜೋಳವಾಳಿಯ ಶಾಸನಗಳು ದೊರೆತಿರುವುದನ್ನು ಗಮನಿಸಿದರೆ, ಈ ಭಾಗದ ಪ್ರಮುಖ ಆಹಾರದ ಬೆಳೆ ಜೋಳವಾಗಿರುವ ಸಾಧ್ಯತೆಗಳು ಕಂಡುಬರುತ್ತವೆ. ತ್ರಿಭುವನಮಲ್ಲನ ಶಾಸನವೊಂದರಲ್ಲಿ ನೆಲ್ಲು ನವಣೆಯ ಉಲ್ಲೇಖವಿದೆ.[೧೯೨]

ಕ್ರಿ.ಶ. ೧೧೯೦ರ ಶಾಸನದಲ್ಲಿ 'ಕಾರಜೋಳಂ'[೧೯೩] ಉಲ್ಲೇಖವಿದೆ. ಜೋಳದ ವಿಧಗಳಲ್ಲಿ ಒಂದು ಬಗೆಯ ಜೋಳವಾಗಿದ್ದು, ಗದಗ ಪರಿಸರದಲ್ಲಿ ಕಂಡುಬರುವ ಪ್ರಮುಖ ಆಹಾರ ಬೆಳೆಯಾಗಿದೆ. ಕ್ರಿ.ಶ. ೧೨೩೬ರ ಶಾಸನದಲ್ಲಿ ವೊಕಲಲಿ ಹೊಣೆವೊಂದು 'ವೊಕುಳಜೋಳ' ಎಂದು ಉಲ್ಲೇಖಿಸಿದೆ.[೧೯೪] ಕ್ರಿ.ಶ. ೧೨೭೬ರ ಶಾಸನದಲ್ಲಿ ಬೇಳೆ, 'ತೊಗರಿ' ಯ ಉಲ್ಲೇಖವಿದೆ.[೧೯೫] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಒಂದು ಮಾನ 'ಹೆಸರು'[೧೯೬] ಎಂದಿದೆ. ಕ್ರಿ.ಶ. ೧೨೮೪ರ ಶಾಸನದಲ್ಲಿ ಎಳ್ಳು, ಹೆಸರು, ತೊಗರಿಗಳ[೧೯೭] ಉಲ್ಲೇಖವಿದೆ. ನುಗ್ಗೇಹಳ್ಳಿಯ ಶಾಸನವೊಂದರಲ್ಲಿ ಕಡಲೆ,[೧೯೮] ಉಲ್ಲೇಖವಿದೆ. ಕ್ರಿ.ಶ. ೧೨೪೮ರ ಶಾಸನದಲ್ಲಿ ಖಾಣನೆಲ್ಲು, ಜೋಳವಂ ಬೇಜೌತಿಜುವರು'[೧೯೯] ಎಂದಿದೆ.

ಭತ್ತವನ್ನು ಬಿಟ್ಟರೆ ನಂತರದ ಸ್ಥಾನ ಜೋಳದ ಬೆಳೆಯದ್ದಾಗಿದೆ. ಪ್ರಾಚೀನ ಜನಸಾಮಾನ್ಯರ ಬಹುತೇಕ ಆಹಾರವು ಜೋಳದ ಬೆಳೆಯಾದಂತೆ ಕಂಡುಬಂದಿದೆ. ಇದು ಉಲ್ಲೇಖಿತ ಶಾಸನಗಳಿಂದ ತಿಳಿಯುತ್ತದೆ. ಇವುಗಳ ಮೇಲೆ ತೆರಿಗೆ ಹಾಕಿರುವುದು ರಾಜ್ಯದ ಆದಾಯಕ್ಕೆ ಆರ್ಥಿಕ ಮೂಲಗಳಲ್ಲಿ ಒಂದಾಗಿತ್ತು ಎಂದು ತಿಳಿದುಬರುತ್ತದೆ. ರಾಗಿ, ನವಣೆ, ಸಾಮೆಯಂತಹ, ಸಿರಿಧಾನ್ಯಗಳೆಂದು ಕರೆಯಲ್ಪಡುವ ಧಾನ್ಯಗಳ ಬೆಳೆಯುವಿಕೆಯ ಸಂಖ್ಯೆ ಇಂದು ಗಣನೀಯವಾಗಿ ಕಡಿಮೆಯಾಗುತ್ತಿದೆ. ಪುನಃ ಈ ಬೆಳೆಗಳನ್ನು ಹೆಚ್ಚಾಗಿ ಬೆಳೆಯುವ ಮೂಲಕ ಪುನಶ್ಚೇತನಗೊಳಿಸುವ ಅಗತ್ಯವಿದೆ. ಆದರೆ ಈ ಧಾನ್ಯಗಳಿಂದ ಬರುವ ಇಳುವರಿ ಕಡಿಮೆಯಾಗಿರುವುದರಿಂದ ರೈತರು ಇವುಗಳನ್ನು ಬೆಳೆದರೆ ಸಂಕಷ್ಟಕ್ಕೀಡಾಗುತ್ತಾರೆ. ಸರ್ಕಾರದಿಂದ ನಿಗದಿತ ಬೆಲೆ ದೊರೆತರೆ ಮಾತ್ರ ಈ ಬೆಳೆಗಳು ಲಾಭದಾಯಕವಾಗಲು ಸಾಧ್ಯವಾಗುತ್ತದೆ.

**ತರಕಾರಿಗಳು**

ಈ ಬೆಳೆಗಳನ್ನು ಬೆದ್ದಲು ಮತ್ತು ನೀರಾವರಿ ಎರಡು ಭೂಮಿಗಳಲ್ಲಿ ಬೆಳೆಯಲಾಗುತ್ತದೆ. ಮಳೆಗಾಲದಲ್ಲಿ ಒಣಭೂಮಿಯಲ್ಲಿ, ಬೇಸಿಗೆ ಕಾಲದಲ್ಲಿ ನೀರಾವರಿ ಆಶ್ರಯದಲ್ಲಿ ಈ ಬೆಳೆಗಳನ್ನು ಬೆಳೆಯಲಾಗುತ್ತದೆ. ತರಕಾರಿಗಳನ್ನು ಆಹಾರಕ್ಕಾಗಿ, ಅಡುಗೆಗೆ ಬಳಕೆ ಮಾಡಲಾಗುತ್ತದೆ. ಅರ್ಥಶಾಸ್ತ್ರಕಾರನು ತರಕಾರಿಗಳನ್ನು 'ಶಾಕವರ್ಗಗಳೆಂದು ಕರೆದು' ಗೆಡ್ಡೆಗೆಣಸು, ಆಷಾಢೀಬೇರು, ಬದನೆಕಾಯಿ, ಚಕ್ಕೋತ ಮುಂತಾದ ಸೊಪ್ಪುಗಳ ಕುರಿತು ಹೇಳುತ್ತಾನೆ[೨೦೦] ಕ್ರಿ.ಪೂ. ೫೦೦ರಷ್ಟು ಹಳೆಯದಾದ ವೇದಗಳಲ್ಲಿ ಕುಂಬಳ, ಸೌತೆ, ಸೋರೆ, ಬೆಂಡೆ, ಅವರೆ, ಹಾಗಲ, ಹೀರೆ, ತೊಂಡೆ ಮುಂತಾದ ತರಕಾರಿಗಳನ್ನು ಉಲ್ಲೇಖಿಸಿದೆ.[೨೦೧]

ಕ್ರಿ.ಶ. ೧೨೩೪ರ ಶಾಸನದಲ್ಲಿ ದೇವರ 'ಪೂಜಾರಿಗಳು ಆವ ತೋಟವ ಮಾಡಿ ಬಾಡುಕಾಯ ಮಾಜಿದಡಂ ಸುಂಕ ಪರಿಹಾರ[೨೦೨] ಎಂದಿದೆ. ದೇವರಿಗೆ ಬಿಟ್ಟ ತೋಟದಲ್ಲಿ ಪೂಜಾರಿ ಉಳುಮೆ ಮಾಡಿ ತರಕಾರಿ ಬೆಳೆಗಳನ್ನು ಮಾರಿದರೆ ಸುಂಕವಿಲ್ಲವೆಂದು ಶಾಸನವು ತಿಳಿಸಿದೆ.

ಕ್ರಿ.ಶ. ೧೨೪೧ರ ಶಾಸನದಲ್ಲಿ ಬಾಡುಕಾಯಿಯ ಉಲ್ಲೇಖವಿದ್ದು, ದೇವರ ವ್ಯವಸಾಯದ ಭೂಮಿಯಲ್ಲಿ ಬೆಳೆದುದೆಂದು, ಇದಕ್ಕೆ ಸುಂಕವಿಲ್ಲವೆಂದಿದೆ.[೨೦೩] ಕ್ರಿ.ಶ. ೧೨-೧೩ನೆಯ ಶತಮಾನದ ಶಾಸನದಲ್ಲಿ ಬದನೆಕಾಯಿ, ಹಿರೇಕಾಯಿ, ಹಾಗಲಕಾಯಿ, ಸೌತೆಕಾಯಿ ಇತರೆ ತರಕಾರಿಗಳ ಉಲ್ಲೇಖವಿದೆ.[೨೦೪] ಕ್ರಿ.ಶ. ೧೨೪೫ರ ಶಾಸನದಲ್ಲಿ 'ಹೆಡಗೆಗೊಪ್ಪಡಿ ಬಾಡು ಹೇಜಿಂಗೆ ಒಂದುಮಾನ ಉಪ್ಪು'[೨೦೫] ಎಂದಿದೆ. ಕ್ರಿ.ಶ. ೧೧೬೯ರ ಶಾಸನದಲ್ಲಿ ಬೇರೆ ಊರಿಂದ ಬಂದ ಬಾಡುಕಾಯಿಗೆ ಸುಂಕ ವಿಧಿಸಿದ್ದನ್ನು ಹೇಳಿದೆ.[೨೦೬] ಕ್ರಿ.ಶ. ೧೮೯ರ ಶಾಸನದಲ್ಲಿ 'ತೃಣಕಾಷ್ಠ ಶಾಕಫಳ' ಮೊದಲಾಗಿ ಬರುವ ವಸ್ತುಗಳಿಗೆ ಸುಂಕ ಕೊಟ್ಟರು.[೨೦೭] ಅಂದರೆ ಚಿಕ್ಕದಾಗಿ ಬರುವ ಅಡುಗೆಗೆ ಸಂಬಂಧಿಸಿದ ಫಲಗಳಾದ ತರಕಾರಿಗಳಿಗೂ ಸುಂಕ ಕೊಡಬೇಕು ಎಂದು ಉಲ್ಲೇಖಿಸಿದೆ. ಕ್ರಿಶ ೧೧೪೪ರ ಶಾಸನದಲ್ಲಿ ಬಾಡುಕಾಯಿ ಮಾರಿದ ಹೆಡಗೆಗೆ ಅರವಾನ ಭತ್ತ ನೀಡಬೇಕೆಂದಿದೆ. ಇದನ್ನು ಹೊರಗೆ ಮಾರಿದರೆ ಬಿಲ್ಲಕಾಯಿ ಹೆಡಗೆಗೆ ಒಮ್ಮಾನ[೨೦೮] ಎಂದಿದೆ. ತರಕಾರಿಗಳನ್ನು ಹೊರಗೆ ಮಾರಿದಾಗ ಕೊಡಬೇಕಾದಾಗ ಕೊಡುವ ಸುಂಕಕ್ಕು, ಒಳಗೆ ಮಾರಿದಾಗ ಪಾವತಿಸುವ ಸುಂಕಕ್ಕೂ ವ್ಯತ್ಯಾಸವಿರುವುದು ಈ ಶಾಸನದಿಂದ ಕಂಡುಬರುತ್ತದೆ. ಕ್ರಿ.ಶ. ೧೨೨೧-೨೨ರ ಶಾಸನದಲ್ಲಿ 'ಬಾಳುಕಾಯಿ'[೨೦೯] ಉಲ್ಲೇಖವಿದೆ.

ತರಕಾರಿ ಬೆಳೆಗಳು ಶಾಸನದಲ್ಲಿ ವಿರಳವಾಗಿಯೇ ಕಂಡುಬರುತ್ತವೆ. ಈ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ ದೇವಾಲಯಗಳ, ದೇವರ ಕಾರ್ಯಗಳಿಗೆ ಕೊಡುವ ಸಂದರ್ಭದಲ್ಲಿ ಮಾತ್ರ ಇವುಗಳ ಉಲ್ಲೇಖ ಸಿಗುತ್ತದೆ. ಈ ಕಾರಣದಿಂದಾಗಿ ತರಕಾರಿ ಬೆಳೆಗಳನ್ನು ಧಾರ್ಮಿಕ ಕಾರ್ಯಗಳ ಹಿನ್ನೆಲೆಯಲ್ಲಿ ಉಲ್ಲೇಖಿಸಲಾಗಿದೆ. ಉಳಿದಂತೆ ಈ ಉಲ್ಲೇಖಗಳನ್ನು ಗಮನಿಸಿದರೆ, ಪ್ರಾಚೀನ ಕಾಲದಿಂದಲೂ ಈ ಬೆಳೆಗಳು ಬಳಕೆಯಲ್ಲಿದ್ದವೆಂದು ತಿಳಿಯುತ್ತದೆ. ದೇವರ ಬೆಳೆಗಳನ್ನು ಹೊರತುಪಡಿಸಿ ಇವುಗಳ ಮೇಲೂ ಸುಂಕ ವಿಧಿಸಿರುವುದು ಮೇಲಿನ ಶಾಸನಗಳಿಂದ ತಿಳಿಯುತ್ತದೆ. 'ಸೋಮೇಶ್ವರನು ಸೌತೆಕಾಯಿ, ಕೆಂಪಾಗಿರುವ ಬದನೆ, ಹಣ್ಣು, ಬೆಳ್ಳುಳ್ಳಿ, ಪಡುವಲ, ಬೆಳೆವಲಕಾಯಿ ಉಲ್ಲೇಖವನ್ನು ತನ್ನ ಕೃತಿಯ ಪಂಚಮವಿಶಂತಿಯಲ್ಲಿ ತಿಳಿಸಿದ್ದಾನೆ.'[೨೧೦] ಕೃಷಿ ಇಂದು ಕೇವಲ ಲಾಭಗಳಿಕೆಯ ಉದ್ಯಮವಾಗುತ್ತಿದೆ. ಅದರ ದುಷ್ಪಾರಿಣಾಮವನ್ನು ರೈತರು ಗಮನಿಸದಿರುವುದು ವಿಷಾದದ ಸಂಗತಿಯಾಗಿದೆ. ಆಹಾರದ ಬೆಳೆಗಳ ಬದಲಿಗೆ ಹೆಚ್ಚು ಹೆಚ್ಚು ವಾಣಿಜ್ಯ ಬೆಳೆಗಳನ್ನು ಬೆಳೆಯುವ ಕಡೆಗೆ ಆಕರ್ಷಿತರಾಗಿದ್ದಾರೆ. ಇದರ ಅರ್ಥ ವಾಣಿಜ್ಯ ಬೆಳೆಗಳು ಮಾರಕವೆಂದಲ್ಲ. ವಾಣಿಜ್ಯ ಬೆಳೆಯೊಂದಿಗೆ ಆಹಾರ ಬೆಳೆಗಳನ್ನು ಬೆಳೆಯುವುದರೊಂದಿಗೆ ಬೆಳೆ ಮತ್ತು ಭೂಮಿಯ ಸಮತೋಲನವನ್ನು ಕಾಯ್ದಿರಿಸಬೇಕಾದ ಅಗತ್ಯವಿದೆ.

**೨.೧.೨. ತೋಟದ ಬೆಳೆಗಳು**

ತೋಟವೆಂದರೆ ನೀರಾವರಿ ಆಶ್ರಿತ ಬೇಸಾಯ ವಿಧಾನದಿಂದ ಬೆಳೆಯುವ ಬೆಳೆಗಳು. ತೋಟ ಎಂದರೆ ಹಿತ್ತಲು, ಉದ್ಯಾನ, ಸಸಿಗಳನ್ನು ನೆಟ್ಟು ಬೆಳೆಸಿದ ಗಿಡಮರಗಳ ಸಮೂಹ ಎಂದು ತಿಳಿಯಲಾಗಿದೆ. 'ಕನ್ನಡ ವಿಷಯ ವಿಶ್ವಕೋಶ ಜಾನಪದದಲ್ಲಿ ತೋಟವನ್ನು ಕುರಿತು ಹೀಗೆ ತಿಳಿಸಿದೆ. ಬಾಳೆ, ತೆಂಗು, ಅಡಕೆ ಮುಂತಾದ ದೀರ್ಘ ಕಾಲದವರೆಗೆ ಬಾಳಿಕೆ ಬರುವ ಬೆಳೆಗಳನ್ನು ಬೆಳೆಯುವ ಪ್ರದೇಶ ಎಂದಿದೆ.'[೨೧೧] 'ಕೃಷಿಜ್ಞಾನ ಪ್ರದೀಪಿಕೆಯಲ್ಲಿ ತೋಟದ ಶಬ್ಧವು ಫಲಪ್ರದವಾಗಿದ್ದು,

ಮುಖ್ಯವಾಗಿ ಪ್ರತ್ಯಕ್ಷಫಲವನ್ನು ಕಾಣಬೇಕೆಂಬ ರಾಜ ಬುದ್ಧಿಯುಳ್ಳ ಕೃಷಿಕರು ತೋಟವನ್ನು ಮಾಡಿದ್ದಾರೆ.[೨೧೨] ತೋಟದಲ್ಲಿ ಬೆಳೆಯುವ ಬೆಳೆಗಳನ್ನು ಬಾಗಾಯ್ತು ಎಂದು ಕರೆಯಲಾಗುತ್ತದೆ. ತೋಟದ ಬೆಳೆಗಳಲ್ಲಿ ಕಬ್ಬು, ಅಡಕೆಗಳಂತಹ ಬೆಳೆಗಳು ವಾಣಿಜ್ಯ ಬೆಳೆಗಳಾಗಿ ಕಂಡುಬರುತ್ತವೆ.

ತೋಟದ ಬೆಳೆಗಳಲ್ಲಿ ಉದ್ಯಾನವನಗಳೂ ಸಹ ಒಂದು ಭಾಗವಾಗಿ ಬರುತ್ತವೆ. 'ಅಶೋಕನು ಗುಂಡುತೋಪುಗಳನ್ನು, ಉದ್ಯಾನವನಗಳನ್ನು ಬೆಳೆಸುವ ಬಗ್ಗೆ ಮಹತ್ವ ನೀಡಿದ. ಬೌದ್ಧ ಮತೀಯನಾಗಿ ಪಶುಗಳ, ಕಾಡುಮೃಗಗಳ ರಕ್ಷಣೆಗೂ ಕ್ರಮ ಕೈಗೊಂಡ. ಅರಣ್ಯಗಳಿಗೆ ಬೆಂಕಿ ಇಕ್ಕುವುದನ್ನು ನಿಷೇಧಿಸಿದನು. ನೈಸರ್ಗಿಕ ವನಗಳ ರಕ್ಷಣೆಕಾರ್ಯ ಕೈಗೊಂಡನು. ಆ ಕಾಲದ ಶಿಲ್ಪಗಳಲ್ಲಿ ಮರಗಳು, ಬಳ್ಳಿಗಳು, ಪ್ರಾಣಿ–ಪಕ್ಷಿಗಳ ಚಿತ್ರಗಳು ಸಾಂಚಿ ಮುಂತಾದ ಕಡೆ ದೊರೆತಿವೆ. ಬೌದ್ಧ ಧರ್ಮವು ಕೃಷಿಯ ಜನಪ್ರಿಯತೆಗೂ, ವೃಕ್ಷ ಮತ್ತು ತೋಟಗಳ ಬಗೆಗೂ ಒಲವಿಗೂ ಕಾರಣವಾಯಿತು'. ಎಂದು ರಾಂಧಾವಾ ಹೇಳಿದ್ದಾರೆ. ಅಶ್ವತ್ಥ(ವಿಷ್ಣು), ಆಲ(ವಿಷ್ಣು), ಬೇವು(ಶಕ್ತಿ), ಬನ್ನಿ(ಶಕ್ತಿ), ಅತ್ತಿ(ದತ್ತಾತ್ರೇಯ), ಬಿಲ್ವ(ಶಿವ) ಈ ಮರಗಳು ದೇವತಾ ಸ್ವರೂಪಗಳೆಂಬ ಭಾವನೆಯಿಂದ ಬೆಳೆಸಿದರು.[೨೧೩] ಮರಗಳನ್ನು, ಉದ್ಯಾನವನಗಳನ್ನು ಬೆಳೆಸುವ ಆಸಕ್ತಿ ಅಶೋಕ ಚಕ್ರವರ್ತಿಯಲ್ಲಿ ಕಂಡುಬರುತ್ತದೆ. ಅರಣ್ಯ ನಾಶದಿಂದ ಮುಂದಾಗುವ ಪರಿಣಾಮಗಳನ್ನು ಅಶೋಕನು ಅಂದೇ ಭಾವಿಸಿದಂತೆ ಇದರಿಂದ ತಿಳಿದುಬರುತ್ತದೆ

ಕ್ರಿ.ಶ. ೭೯೫ರ ಶಾಸನದಲ್ಲಿ ನೇರಲೆ ಮರ, ಪುಣಸೆಮರಗಳ ಉಲ್ಲೇಖವಿದೆ.[೨೧೪] ಪುರದ ಶಾಸನವೊಂದರಲ್ಲಿ ದೇವರಿಗೆ ಅರ್ಪಿಸಬಾರದ ಫಲ ಪುಷ್ಪಗಳನ್ನು ಕುರಿತು ಶಾಸನದಲ್ಲಿ ತಿಳಿಸಲಾಗಿದೆ. ಬಾಳೆ, ತೆಂಗು, ಹಲಸು, ಮಾವು, ನಿಂಬೆ, ಹೆಜೇಳು, ಅರ ನೇರಿಲು, ಕಿತ್ತಳೆಯನಿಕ್ಕಿದರೆ ಪಾಪ. ಸಂಪಿಗೆ, ಸೇವಂತಿಗೆ, ಇರುವಂತಿಗೆ, ಮಲ್ಲಿಗೆ, ಜಾಜಿ ಇವನ್ನಿಟ್ಟರೂ ಪಾಪ. ಕಣಗಿಲೆ ಕೊಂಚಿವಾಳ ಬೆಲ್ಲವತ್ತ ಹಾದರಿಯಿವನಿಕ್ಕಿದವರಿಗೆ ಪುಣ್ಯ ಎಂದಿದೆ.

"ಯೀಳೆ ಬಾಳೆ ತೆಂಗು ಹಲಸು ಮಾವು ನಿಂಬೆ ಹೆಜೇಳು ಅರನೆಜಿಲು ನಾರಂಗಯಿವನಿಕ್ಕಿದಂಗೆ ಪಾಪ ಸಂಪಿಗೆ ಸೇವನ್ತಿಯಿರುವನ್ತಿ ಮಲ್ಲಿಗೆ ಜಾಜಿ ಯಿವನಿಕ್ಕಿದಡಂ ಪಾಪ ಕಣಗಿಲೆಕೊಂಚಿವಾಳ ಬೆಲ್ಲವತ್ತ ಹಾದರಿಯಿವನಿಕ್ಕಿದಂಗೆ ಪುಣ್ಯ' ಎಂದಿದೆ.[೨೧೫]

ಮೇಲೆ ಉಲ್ಲೇಖಿಸಿದ ಹಣ್ಣುಗಳು ತಿನ್ನಲು ರುಚಿಭರಿತ. ಜೊತೆಗೆ ಮಾನವ ಆರೋಗ್ಯವಾಗಿ ಜೀವಿಸಲು ನೆರವಾಗುತ್ತವೆ. ದೇವರ ಹೆಸರಿನಲ್ಲಿ ವ್ಯರ್ಥ ಮಾಡಬಾರದೆಂಬ ಉದ್ದೇಶವಿರಬೇಕು. ಹೂವುಗಳು ಸುವಾಸನೆ ಭರಿತ. ಅವು ಸ್ತ್ರೀಯರ ಮುಡಿಗೇರಿದರೆ ಲಕ್ಷಣ. ಅಲ್ಲದೆ ಆ ಹೂವುಗಳ ವಾಸನೆ ಮತ್ತು ಮಕರಂದಕ್ಕೆ ಹುಳು, ಇರುವೆಗಳು ಹೆಚ್ಚು ಬರುತ್ತವೆ. ಈ ಕಾರಣದಿಂದ ದೇವರಿಗೆ ಹಾಕಬಾರದೆಂದು ಹೇಳಿರುವ ಸಾಧ್ಯತೆಯಿದೆ. ಕಣಗಿಲೆ ಔಷಧಿ ಸಸ್ಯ. ಹುಳು ಹಿಡಿಯುವ ಸಂಭವ ಕಡಿಮೆ. ಈ ಕಾರಣಕ್ಕೆ ಪುಣ್ಯ ಬರುತ್ತದೆಂದು ಹೇಳಿರುವ ಸಾಧ್ಯತೆ ಇದೆ. ಕ್ರಿ.ಶ ೧೧೩೪ರ ಶಾಸನದಲ್ಲಿ ತೋಟದ ಬೆಳೆಗಳನ್ನು ಕುರಿತು ಹೀಗೆ ಹೇಳಿದೆ.

ಜೀರಿಗೆ ಖರ್ಬು ಸಂಪಿಗೆ ತಳಿರ್ತೆಳೆವಳ್ಳಿಕವುಂಗು ತೆಂಗು ಪಂ
ಕೇರುಹವುರಲ್ದ ಹೊಸ ಮಲ್ಲಿಗೆ ಪಾದರಿ ಬಾಳೆಯೀಳೆ(ವುಳ್ಳಿ) ಖ
ರ್ಜೂರ ರಳಂಬುವಲ್ಲರಸಿನಂಗಳ ತೋಂಟದಿ ನೋಳ್ಪನಾಳ್ದು ವಿ
ಸ್ತಾರದಿನಿಂತು ನಿಂಬರಗೆ ದೇವಪುರಕೆಣಿಯಾಗಿ ತೋಱುಗುಂ[೨೧೬]

ಜೀರಿಗೆ, ಖರ್ಜೂರ, ಸಂಪಿಗೆ, ಎಲೆಬಳ್ಳಿ, ಕವುಂಗು(ಅಡಕೆ), ತೆಂಗು, ಮಲ್ಲಿಗೆ, ಪಾದರಿ, ಬಾಳೆ, ಯೀಳೆ, ಖರ್ಜೂರ ಮೊದಲಾದ ತೋಟದ ಬೆಳೆಗಳನ್ನು ಉಲ್ಲೇಖಿಸಿದೆ. ನಿಂಬರಗಿಯ ಶಾಸನವೊಂದರಲ್ಲಿ ಜೀರಿಗೆ ಕರ್ಬು, ಎಲೆವಳ್ಳಿ, ಕೌಂಗು(ಅಡಕೆ), ತೆಂಗು, ಅಲ್ಲ, ಅರಿಷಿಣ, ಬಾಳೆ, ಈಳೆ, ಖರ್ಜುರ, ಪಂಕೇರುಹ, ಪಾದರಿ, ಮಲ್ಲಿಗೆ ಮೊದಲಾದವುಗಳನ್ನು ಉಲ್ಲೇಖಿಸಿದೆ.[೨೧೭] ಹಿರೇ ಬೇವಿನೂರು ಗ್ರಾಮದ ಕ್ರಿ.ಶ. ೧೧೯೦ರ ಶಾಸನದಲ್ಲಿ ಸಿರಿದೇವಿ ಎಂಬುವವಳು ಮಾಡಿಸಿದ ಧರ್ಮದ ಕಾರ್ಯಗಳನ್ನು ಉಲ್ಲೇಖಿಸಿದೆ. ತೋಟಗಳನ್ನು ಬೆಳೆಸಿದ ಇವಳನ್ನು 'ಕ್ಷಿತಿರುಹನೋಂಪಿ' ಎಂದು ಶಾಸನವು ಕರೆದಿದೆ. ಈ ಶಾಸನದ ಪಾಠ ಇಂತಿದೆ.

ವೃತಸಾರ ಸಮುಚ್ಚಯದೊ
ಳ್ಸ್ವತಿಯೊಳ್ಕೇಳೆನಿತು ನೋಂಪಿಯೊಳವೆನಿತನಿತಂ
ಸತತಂ ನೋನ್ತೊಲವಿಂದಂ
ಕ್ಷತಿರುಹ ವಿದುವೊನ್ದು ನೋಂಪಿಯುಂಟೆನೆ ಕೇಳ್ದಳು
ಪರಮಾನನ್ದದೆ ಕೇಳ್ದು ಭೂತಳದ ಕಟ್ಪೋರ್ಬ್ಬಿಜವೆನ್ದೆನ್ದುಮಾ
ಮರನಂ ನೇಜಿಲೆ ನೀಳೆಯಂ ಪಲಸುಮಂ ಖರ್ಜೂರಮಂತೆಂಗುಮಂ
ವರಪೂಗಿತರುಮಂ ವನಸ್ಪತಿಯನತ್ಯಾನಂದದದಿಂದಿಟ್ಟುಂತಾಂ
ಧರೆ ಮೆಚ್ಚುತ್ತಿರೆ ಮಾಯದೇವನೆ ಸೇವಿ ಧಂರ್ಮ್ಮಂದಿದಿಕ್ಕಂದದಂ.[೨೧೮]

ಸಿರಿದೇವಿಯು ಮಾವು, ನೇರಳೆ, ಈಳೆ, ಹಲಸು, ಖರ್ಜೂರ, ತೆಂಗು ಪೂಗೀತರು, ವನಸ್ಪತಿಗಳನ್ನು ಆನಂದದಿಂದ ಬೆಳೆಸಿದಳು. ಇವಳ ಸಾಮಾಜಿಕ ಕಾಳಜಿ, ಧಾರ್ಮಿಕ ಕಾಳಜಿಗಳು ಶಾಸನದಲ್ಲಿ ಮೇಲ್ನೋಟಕ್ಕೆ ವ್ಯಕ್ತವಾಗುತ್ತಿವೆ. ಈ ತೋಟದ ಬೆಳೆಗಳು ಆಹಾರದ ಬೆಳೆಗಳೊಂದಿಗೆ, ತೋಟದ ಬೆಳೆ ಮತ್ತು ವಾಣಿಜ್ಯ ಬೆಳೆಗಳೂ ಆಗಿವೆ. ಒಂದು ಕಡೆ ಪರಿಸರ ಪ್ರಜ್ಞೆ, ಇನ್ನೊಂದೆಡೆ ಆರ್ಥಿಕ ಅಭಿವೃದ್ಧಿಯ ಅಂಶಗಳು ಸೂಚ್ಯವಾಗಿ ಕಂಡುಬರುತ್ತವೆ. ಜೊತೆಗೆ ಈ ಭಾಗದಲ್ಲಿ ತೋಟದ ಬೆಳೆಗಳು ಇದ್ದವೆಂಬುದನ್ನು ತಿಳಿಸುತ್ತವೆ.

ಕ್ರಿ.ಶ. ೧೦೭೦ರ ಶಾಸನದಲ್ಲಿ ಹೂವಿನ ತೋಟವನ್ನು ಉಲ್ಲೇಖಿಸಿದೆ.[೨೧೯] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ 'ಹೂವಿನ' ಪಡಿಗೆ ಹೂವಿನ ತೆರಿಗೆ ವಿಧಿಸಿದ್ದನ್ನು ತಿಳಿಸಿದೆ. ಇದೇ ಕಾಲದ ಇನ್ನೊಂದು ಶಾಸನವು ಹೂವಿನ ಪಡಿಗೆ ಎಂದು ಉಲ್ಲೇಖಿಸಿದೆ.[೨೨೦] ಆಸಂದಿಯ ಕ್ರಿ.ಶ. ೧೨೦೬ರ ಶಾಸನವು 'ಮಾವಿನಗದ್ದೆ'ಯನ್ನು ಉಲ್ಲೇಖಿಸಿದೆ.[೨೨೧] ಗದ್ದೆಗಳಲ್ಲಿ ಮಾವಿನ ಬೆಳೆ ಬೆಳೆಯುತ್ತಿದ್ದರೆಂಬ ಉಲ್ಲೇಖ ಈ ಶಾಸನದಲ್ಲಿದೆ. ಕ್ರಿ.ಶ. ೧೧೪೧ರ ಶಾಸನದಲ್ಲಿ ಕೌಂಗಿನ ಸಸಿ ತೋಟವೊನ್ದು, ಪೂದೋಟವನ್ನು ಯಂಚಿದೇವರಸ ಬಿಟ್ಟರೆಂದಿದೆ.[೨೨೨] ಕೌಂಗಿನ ತೋಟವೆಂದರೆ ಅಡಿಕೆ ತೋಟದ ದಾನದ ಬಗೆಗೆ ಹೇಳಿದೆ. ಕ್ರಿ.ಶ. ೧೧೨೩ರ ಶಾಸನದಲ್ಲಿ ತೋಟಿಗ ಮೊದಲಾದವರಿಗೆ ನೀಡಬೇಕಾದ ಪಡಿಯನ್ನು ಕುರಿತು ಹೇಳಿದೆ.[೨೨೩] ಅದರೊಂದಿಗೆ ಷರತ್ತು ಕೂಡ ವಿಧಿಸಿರುವುದು ಕಂಡುಬರುತ್ತದೆ. ಸಮೃದ್ಧ ಮತ್ತು ಅಲ್ಪ ಬೆಳೆಯನ್ನು ಪರಿಗಣಿಸಿ ಅದಕ್ಕನುಗುಣವಾದ ಪ್ರಮಾಣದಲ್ಲಿ ಅಂತಹ ಪಡಿ ನೀಡಬೇಕೆಂದು ಹೇಳಿದೆ. 'ತೋಟಿಗ' ಎಂದರೆ ದೇವರ ತೋಟಗಳನ್ನು ನೋಡಿಕೊಳ್ಳುವವರು. ಅವರಿಗೆ ಕೊಡುವ ಪಡಿಯನ್ನು 'ತೋಟಿಗ ಸಮಯ' ಎಂದು ಕರೆಯಲಾಗುತ್ತದೆ. ಕ್ರಿ.ಶ. ೧೧೩೦ರ ಶಾಸನದಲ್ಲಿ ತೆಂಗಿನ ತೋಂಟ, ಆತೋಂಟದಿಂ ತೆಂಕಲು ಅಡಕೆಯ ತೋಂಟ ಹೂದೋಂಟ,

ಕೌಂಗಿನ ತೋಂಟಕಂಭ ೭ ಉಲ್ಲೇಖವಿದೆ. ಸರ್ವಜ್ಞ ತನ್ನ ಒಂದು ವಚನದಲ್ಲಿ ತೋಟವನ್ನು ಕುರಿತು ಹೀಗೆ ಹೇಳುವನು.

ಪುಷ್ಪವಿಲ್ಲದ ತೋಟ ತುಪ್ಪವಿಲ್ಲದ ಊಟ
ಒಪ್ಪವಿಲ್ಲದವಳ ನಗೆ ನುಡಿಯು ಇವು ಮೂರು
ನಿಷ್ಫಲವಯ್ಯ ಸರ್ವಜ್ಞ[೨೨೪]

ತೋಟದಲ್ಲಿ ಪುಷ್ಪದ ಪ್ರಾಮುಖ್ಯತೆಯನ್ನು ಕುರಿತು ಹೇಳಿರುವುದು ಕಂಡುಬರುತ್ತದೆ. ಶಾಸನಗಳಲ್ಲಿ ಏಕೆ ಹೆಚ್ಚಾಗಿ ಹೂದೋಟಗಳಿಗೆ ದಾನ ನೀಡಿರುವ ಉಲ್ಲೇಖಗಳು ಕಂಡುಬರುತ್ತವೆ. ಎಂದನ್ನು ಗಮನಿಸಿದರೆ ಹೂವುಗಳನ್ನು ದೇವರಕಾರ್ಯಗಳಿಗೆ ಬಳಸುವ ಕಾರಣಕ್ಕಾಗಿ ಕಂಡುಬರುತ್ತವೆ. ಕ್ರಿ.ಶ. ೧೧೩೦ರ ಶಾಸನದಲ್ಲಿ ತೆಂಗಿನ ತೋಟ ಆ ತೋಂಟದಿಂ ತೆಂಕಲು ಅಡಕೆಯತೋಂಟ ಹೂದೋಂಟ ಕೌಂಗಿನ ತೋಂಟ ಕಂಭ ೭ ಹೂದೋಂಟ ಕಂಭ ೬ರ ಉಲ್ಲೇಖವಿದೆ.[೨೨೫] ಮೇಲೆ ಹೇಳಿದ ಸರ್ವಜ್ಞನ ವಚನವು ಈ ಶಾಸನಕ್ಕೆ ಕೈಗನ್ನಡಿಯಂತಿದೆ. ತೋಟದಲ್ಲಿ ಹೂವಿನ ಮಹತ್ವವೇನು ಎಂಬುದು ತೋಟದಲ್ಲಿ ಪುಷ್ಪವಿಲ್ಲದಿದ್ದರೆ ಏಕೆ ನಿಷ್ಫಲ ಎಂಬುದನ್ನು ಗಮನಿಸಬೇಕು.

ಹೂದೋಟವು ಸೌಂದರ್ಯವನ್ನು ಹೆಚ್ಚಿಸಿ ಸೊಬಗನ್ನು ಸೂರೆಮಾಡುತ್ತದೆ. ಮಾನವರ ಜೀವನದಲ್ಲಿ ಧಾರ್ಮಿಕ ಆಚರಣೆಗಳು ಒಂದು ಭಾಗವಾಗಿ ಹಾಸು ಹೊಕ್ಕಾಗಿವೆ. ಅವುಗಳ ಆಚರಣೆಯಲ್ಲಿ ಹೂವಿನ ಪಾತ್ರ ಅಗ್ರಗಣ್ಯ. ಈ ಕಾರಣಕ್ಕೆ ಪುಷ್ಪಗಳ ತೋಟಗಳು ಪ್ರಾಮುಖ್ಯತೆ ಪಡೆದಂತಿದೆ. ಕ್ರಿ.ಶ. ೧೧೭೬ರ ಶಾಸನದಲ್ಲಿ ಭತ್ತಕೊಟ್ಟಲ್ಲಿ ಅರೆವಾನ ಕೊಂಡಲ್ಲಿ ಅರೆವಾನ, ಎಲೆಕೊಂಡಲ್ಲಿ ೨೫ ಕೊಟ್ಟಲ್ಲಿ ೨೫ ಅಡಕೆ ಹೊಂಗೆ ಕೊಟ್ಟಲ್ಲಿ ೫ ಕೊಂಡಲ್ಲಿ ೮ ಬಿಟ್ಟಂತಿದೆ.[೨೨೬] ಅಡಕೆ ಮತ್ತು ಎಲೆಗಳು ರಾಜ್ಯದ ಆದಾಯದ ಪ್ರಮುಖ ಮೂಲಗಳಾಗಿ ಕಂಡುಬರುತ್ತವೆ. ಉಳಿದ ಬೆಳೆಗಳಿಗಿಂತ ಅಧಿಕ ತೆರಿಗೆಯನ್ನು ಈ ಬೆಳೆಗಳಿಗೆ ವಿಧಿಸಿರುವುದು ಕಂಡುಬರುತ್ತದೆ. ಮೈಸೂರಿನ ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ ಆಲದಮರ, ನೇರಲು, ಹುಣುಸೆ ಮರಗಳನ್ನು ಉಲ್ಲೇಖಿಸಿದೆ.[೨೨೭] ಈ ಮರಗಳ ಉಪಯೋಗವನ್ನು ಚಾವುಂಡರಾಯ ಹೀಗೆ ಹೇಳುತ್ತಾನೆ.

ಬೇವಿನ ಪುಣಿಸೆಯ ತಾಜೆಯ
ಮಾವಿನ ಮುಳ್ಮರನ ಪಾಲ್ಮರಂಗಳ ಸುರಗೇ
ಹಾವಳಿಯ ಮರಂ ಕರವಂಶು
ಭಾವಹಮಕ್ಕುಂ ಗೃಹಕ್ಕೆ ಗೃಹ ಶಲ್ಯಂಗಳ್[೨೨೮]

ಹತ್ತಿ, ಆಲದಮರ, ಹುಣಸೆ, ತಾರಿಗೋಣಿ ಮರಗಳು ಮನೆ ನಿರ್ಮಾಣಕ್ಕೆ ಯೋಗ್ಯವಲ್ಲ. ಬೇವು, ಹಲಸು, ಮಾವುಮರಗಳು ಸೂಕ್ತವೆಂದು ಮರಗಳ ಉಪಯೋಗವನ್ನು ತಿಳಿಸಿದ್ದಾನೆ. ಹುಣಸೆ ಮೊದಲಾದ ಮರಗಳು ಕಟ್ಟಿಗೆಗೆ ಬಳಕೆಯಾಗುತ್ತವೆ.

'ಬದಾಮಿ ಚಾಲುಕ್ಯರ ಮಹಾವಿಷ್ಣು ಗೃಹದ ಸಾಲಭಂಜಿಕಾ ಶಿಲ್ಪಗಳಲ್ಲಿ ಮಾವು, ಹಲಸು ಮೊದಲಾದ ಮರಗಳನ್ನು ಕಾಣಬಹುದುದಾಗಿದೆ.'[೨೨೯] ಚಾಲುಕ್ಯರ ಕಾಲದಲ್ಲಿ ಮಾವು, ಹಲಸು, ಹುಣಸೆ, ದಾಳಿಂಬೆ, ತೆಂಗು, ಖರ್ಜೂರ ಮೊದಲಾದವುಗಳನ್ನು ಬೆಳೆಯುತ್ತಿದ್ದರು.[೨೩೦] ಅರ್ಥಶಾಸ್ತ್ರಕಾರನು ಮರಗಳ ಉಲ್ಲೇಖ ನೀಡುವಾಗ ಹಣ್ಣಿನ ವರ್ಗವನ್ನು ಕುರಿತು ಹೇಳುತ್ತಾನೆ.

ನೇರಳೆ, ಹಲಸು, ಮೇಷಶೃಂಗೀ, ಹಿಪ್ಪಲಿಗಳ ರಸವು ಆವಸವರ್ಗವೆಂದು ಕರೆದಿರುವನು. ಇದಕ್ಕೆ ಚಿಧ್ಭಿಟ, ಉರ್ವಾಕುರ, ಕಬ್ಬು, ಮಾವಿನ ಹಣ್ಣು, ನೆಲ್ಲಿಕಾಯಿ ರಸಗಳನ್ನು ಸೇರಿಸಬಹುದು. ಅಥವಾ ಬಿಡಬಹುದು.[೨೩೧] ಹಣ್ಣುಗಳಿಂದ ರಸ ತಯಾರಿಸುವ ಬಗೆಗೆ ಕುರಿತು ಮಾಹಿತಿ ನೀಡಿರುವುದು ಕಂಡುಬರುತ್ತದೆ.

ಹುಣಸೆ, ಕಮ್ಮರಿಕೆಹಣ್ಣು(ಕರಮರ್ದ), ಮಾವು, ದಾಳಿಂಬೆ, ಮಾದಳ(ಮಾತಲುಂಗ), ಕಿಬ್ಬೋರೆ, ಹೆಬ್ಬೋರೆ, ಸಿಡಿಬೋರೆ(ಸೌವೀರಕ) ಈ ಹಣ್ಣುಗಳು ಪರೂಪಕಗಳು. ಅಂದರೆ ಹುಳಿಹಣ್ಣಿನ ವರ್ಗಕ್ಕೆ ಸೇರಿದವುಗಳು[೨೩೨] ಎಂದು ಕಂಡುಬರುತ್ತದೆ. 'ಕ್ರಿ.ಶ. ೧೩ನೆಯ ಶತಮಾನದ ಶಾಸನವು ಹುಣಿಸೆಯ ಮಾಜು ಗುಂಡಿಗೆ'[೨೩೩] ಯನ್ನು ಉಲ್ಲೇಖಿಸಿದೆ. ಹುಣಸೆ ಹಣ್ಣು ಪ್ರಾಚೀನ ಕಾಲದಿಂದ ಇಂದಿನವರೆಗೂ ಹುಳಿ ಪ್ರಧಾನತೆ ಹೊಂದಿದ ಬೆಳೆಯಾಗಿದೆ. ಈ ಬೆಳೆಗಳು ಏಕೆ ಕಂಡುಬರುತ್ತವೆ? ಇದಕ್ಕಿದ್ದ ಪ್ರಾಮುಖ್ಯತೆ ಏನು ಎಂಬುದನ್ನು ಗಮನಸಿದರೆ ಪ್ರಧಾನವಾಗಿ ಹುಣಸೆಹಣ್ಣಿನ ಹುಳಿಯನ್ನು ಅಡುಗೆಗಳಲ್ಲಿ ಆಹಾರಕ್ಕೆ ಬಳಸುವವರು. ಇದನ್ನು ಕೆಲವು ಭಾಗಗಳಲ್ಲಿ 'ಕಲ್ಪವೃಕ್ಷ'ವೆಂದು ಕರೆಯುವುದಿದೆ. ಕಾರಣ ಜನರ ಬಾಯಿಗೆ ಹಿತಕೊಡುವ ಪದಾರ್ಥವಿದು. ಇದನ್ನು ಹಾಕದಿದ್ದರೆ ಅಡುಗೆ ರುಚಿಸದು. ಆದರೆ ಇಂದು ಇದರ ಬಳಕೆ ವಿರಳವಾಗಿದೆ. ಅದರ ಜಾಗದಲ್ಲಿ ಹೇರಳವಾಗಿ ಟಮಾಟೋ ಬಳಸುವರು. ಆದರೂ ಇದನ್ನು ಬಳಸಿದಾಗಲು ಹುಣಸೆ ಹುಳಿಯ ಬಳಕೆ ಕಂಡುಬರುತ್ತದೆ. ಇದರ ಬೀಜವು ಕಡತ ಮಾಡಲು ಬಳಕೆಯಾಗುತ್ತಿತ್ತು. ಈ ಮರದ ಸೌದೆಗಳು ಉರುವಲುಗೆ ತುಂಬ ಉತ್ತಮ. ಇವುಗಳಿಂದ ಇಟ್ಟಿಗೆ ಭಟ್ಟಿ ಸುಡಲಾಗುತ್ತಿತ್ತು. ಇಂದಿಗೂ ಇದರ ಬಳಕೆಯಿದೆ. ಇದರ ನಾರು ಸಹ ಬಳಕೆಯಾಗುವುದಿದೆ. ಈ ಕಾರಣಕ್ಕೆ ಕಲ್ಪವೃಕ್ಷವೆಂದು ಕರೆದಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೧೮೫ರ ಶಾಸನದಲ್ಲಿ ಶಿವಾಲಯವೊಂದರಲ್ಲಿ ಸುತ್ತಲೂ ಕಿತ್ತಳೆ, ವಕುಳ, ಹಲಸು, ಹೊಂಗೆ, ಬಾಳೆಗಿಡಗಳಿಂದ ಕೂಡಿದ ಉದ್ಯಾನವನ[೨೩೪] ಹೂದೋಂಟ ಕಂಭ ೬[೨೩೫] ಎಂದಿದೆ. ಅಂಬಳೆಯ ಕ್ರಿ.ಶ. ೧೧೭೮ರ ಶಾಸನದಲ್ಲಿ ಕೊಂಗು ಸುಕ್ರವಾರದ ಮಘಾನಕ್ಷತ್ರದಲಂ ಮಳೆಯಲ್ಲಿ ...ಅಂ ಮೆಳೆಯಲುತ್ತಮ ಪಡಿಗಂ ಶ್ರೀ ತೊಳಸಿಯ ಬನಕ್ಕವಾಗಿ ಗವುಡುಗೊಡಗೆಯಲು ಗದ್ಯಾಣವಯ್ವತ್ತಂ ಕೊಟ್ಟು[೨೩೬] ಎಂದಿದೆ. ಈ ಶಾಸನದಲ್ಲಿ ಸೊಂಪಾಗಿ ಬೆಳೆದ ಕೌಂಗಿನ ತೋಟದ ಗುಂಪು ಮತ್ತು ತುಳಸಿ ಬನದ ಉಲ್ಲೇಖವಿದ್ದು, ಇದಕ್ಕೆ ದಾನ ನೀಡಿದುದನ್ನು ಶಾಸನವು ತಿಳಿಸುತ್ತದೆ. ಕ್ರಿಶ ೧೪ನೆಯ ಶತಮಾನದ ಶಾಸನದಲ್ಲಿ ದೇವರ ರುದ್ರಾಭಿಷೇಕಕ್ಕೆ ಮೂಜು 'ಎಳೆನೀರು' ಬಳಸಿದ ಉಲ್ಲೇಖವಿದೆ.[೨೩೭]

ಕ್ರಿ.ಶ. ೧೨೦೫ರ ಶಾಸನದಲ್ಲಿ ಹೂದೋಟವನ್ನು ತಿಳಿಸಿದೆ. ಇದನ್ನು ನೋಡಿಕೊಳ್ಳುವ ತೋಟಿಗನ ಜೀವಿತಕ್ಕೆ ೩೦ಕೊಳಗ ತೋಟ ಮತ್ತು ತೋಟಿಗನ ಜೀವಿತಕ್ಕೆ ಕೆಲವು ತಿಂಗಳ ಮನೆಯ ತೆರಿಗೆಯನ್ನು ಮಾನ್ಯ ಮಾಡಲಾಯಿತು. ಹೂದೋಟಕ್ಕೆ ನೀರುಣಿಸಲು ಬಳಸುವ ರಾಟಣಕ್ಕೆ ಹೂಡಿದ ಎತ್ತುಗಳ ಮೇವಿಗಾಗಿ ವರಗುಳಿಯ ವಾರ್ಷಿಕ ಸಿದ್ಧಾಯದಿಂದ ೩ ಗದ್ಯಾಣ ಮುಂತಾದ ತೆರಿಗೆ ಬಿಟ್ಟರೆಂದಿದೆ.[೨೩೮] ಹೂದೋಟಗಳಿಗೆ ಬಾವಿಯಿಂದ ನೀರು ಉಣಿಸುತ್ತಿದ್ದರು. ಇದರ ಜವಾಬ್ದಾರಿ ತೋಟಿಗನಿಗೆ ಸೇರಿತ್ತು. ಇದಕ್ಕೆ ಪ್ರತಿಯಾಗಿ ಅವನು ಸಂಭಾವನೆ ಪಡೆಯುತ್ತಿದ್ದನೆಂದು ಈ ಶಾಸನವು ತಿಳಿಸುತ್ತದೆ.

**ತೆಂಗು**

ಈ ಬೆಳೆಯು ಕ್ರಿ.ಶ. ಒಂದನೆಯ ಶತಮಾನಗಳಲ್ಲಿ ಪಡುವಣದ ಕೋಸ್ತಾ ಪ್ರಾಂತದೊಳಗೆ ತೆಂಗಿನ ಬೆಳೆ ಪ್ರವೇಶ ಪಡೆಯಿತು.[೨೩೯] ಕ್ರಿ.ಶ. ೧೧೪೧ರ ಶಾಸನದಲ್ಲಿ 'ತೆಂಗಿನಕಾಯಿ'

ಉಲ್ಲೇಖವಿದೆ.[೨೪೦] ತೆಂಗಿನ ಮರವು ಒಂದು ಹುಲ್ಲು ಜಾತಿಯಲ್ಲಿ ಕಾಣಿಸಿಕೊಳ್ಳುವ ಮರ. ತೆಂಗಾಯ್=ತೆಂಗಿನಕಾಯಿ, ನಾರಿಕೇಳ ಎಂಬ ಅರ್ಥವಿದೆ. ತೆಂಗು, ಟೆಂಗು, ಕಾಯಿ ಎಳೆನೀರ್, ಎಳೆದೆಂಗೆ, ಕೆಂದೆಗು[೨೪೧] ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಅದರಲ್ಲೂ ದಕ್ಷಿಣ ಮತ್ತು ಮಧ್ಯ ಕರ್ನಾಟಕದ ಪ್ರಮುಖ ಬೆಳೆಗಳಲ್ಲಿ ಒಂದಾಗಿದೆ. ಇದನ್ನು 'ಕಲ್ಪವೃಕ್ಷ' ಎಂದು ಕರೆಯುತ್ತಾರೆ. ಈ ಭಾಗದ ಜನರು 'ಇಂಗು ತೆಂಗು ಇದ್ದರೆ ಮಂಗವೂ ಅಡಿಗೆ ಮಾಡುತ್ತದೆ' ಎಂದು ಹೇಳುತ್ತಾರೆ. ಆದರೆ ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಇದನ್ನು ವಿರಳವಾಗಿ ಬಳಸುತ್ತಾರೆ ಮತ್ತು ಬೆಳೆಯುತ್ತಾರೆ. ಎಣ್ಣೆಯ ಉತ್ಪನ್ನವಾಗಿಯೂ ಪ್ರಮುಖವಾಗಿ ಬಳಕೆಯಾಗುತ್ತದೆ. ಲೋಕೋಪಕಾರದಲ್ಲಿ ತೆಂಗಿನ ಫಲವನ್ನು ಕುರಿತು ಹೀಗೆ ಹೇಳಿದೆ.

ತಿಲಮಗಸೆ ವಿಳಂಗಂ ಸಿಂ

ಧುಲವಣಮಿವನೆರೆದು ಜೇನ ಘೃತ ಮಧ್ಯಮುವಂ

ಕಲಸಿ ನಿಶಾಮುಖದೊಳ್ ಮೂ

ಲಲೇಪನಂಗೆಯ್ಯ ತೆಂಗು ಬಹುಫಲಮಕ್ಕುಂ[೨೪೨]

ತೆಂಗಿನಮರದ ಹಾರೈಕೆಯನ್ನು ಕುರಿತು ಶಾಸ್ತ್ರಕಾರನು ಎಳ್ಳು, ಅಗಸೆ, ವಿಳಂಗ, ಉಪ್ಪುಗಳನ್ನು ನುಣ್ಣಗೆ ಪುಡಿಮಾಡಿ ಜೇನುತುಪ್ಪ ಮಧ್ಯದಲ್ಲಿ ಬೆರೆಸಿ, ಚೆನ್ನಾಗಿ ಕಲೆಸಿ ತೆಂಗಿನ ಮರದ ಬುಡಕ್ಕೆ ಲೇಪಿಸಿದರೆ ತೆಂಗಿನ ಮರ ಸಮೃದ್ಧ ಫಲನೀಡುತ್ತದೆ ಎಂದು ಹೇಳಿರುವುದು ಗಮನಾರ್ಹ. ಇಂದು ತೆಂಗು ಬೆಳೆಗಳು ನುಸಿರೋಗದಿಂದ ತುಂಬಿ ಹೋಗಿವೆ. ಈ ಜ್ಞಾನವನ್ನು ಪ್ರಯೋಗಿಸುವುದರಿಂದ ರೋಗ ಬಾಧೆಯಿಂದ ಅಲ್ಪ ಮಟ್ಟಿಗಾದರೂ ಮುಕ್ತಿ ಹೊಂದಲು ಸಾಧ್ಯವಿದೆ. ತೆಂಗಿನ ಸಸಿಗಳನ್ನು ತಯಾರಿಸುವಾಗ ಸುಮಾರು ಐವತ್ತರಿಂದ ಅರವತ್ತು ವರ್ಷದ ಹಳೇ ಮರಗಳಲ್ಲಿ ಅವುಗಳು ತಾವಾಗಿಯೇ ಹಣ್ಣಾಗಿ ಹುದುರಿದ ಬೀಜಗಳನ್ನು ಆಯ್ಕೆ ಮಾಡಿಕೊಳ್ಳಬೇಕು. ಅಂತಹ ಬೀಜಗಳನ್ನು ಒಂದು ವಾರ ಸಗಣಿ ನೀರಿನಲ್ಲಿ ನೆನೆಸಬೇಕು. ತದನಂತರ ಭೂಮಿಯಲ್ಲಿ ಹಾಕಿದರೆ ಸ್ವಲ್ಪ ದಿನಗಳಲ್ಲಿ ಮೊಳಕೆಯೊಡೆಯುತ್ತವೆ. ಆಗ ಅವುಗಳನ್ನು ತೋಟಮಾಡುವ ಸ್ಥಳಗಳಿಗೆ ತೆಗೆದುಕೊಂಡು ಹೋಗಿ ಸಸಿನೆಡಬೇಕು. ಘನಮಠದ ಶಿವಯೋಗಿಗಳು ತೋಟದಲ್ಲಿ ಸಸಿಹಾಕುವ ವಿಧಾನವನ್ನು ಹೀಗೆ ಹೇಳಿರುವರು. "ನಾಲ್ಕು ಮಾರಿಗೆ ಒಂದರಂತೆ ಚಚ್ಚೌಕು ಒಂದೂವರೆ ಗಜ ಅಗಲ, ಒಂದೂವರೆ ಗಜ ಉದ್ದವಾಗಿ ಮತ್ತು ಒಂದುವರೆ ಗಜ ತಗ್ಗು ಆಗುವ ಹಾಗೆ ಅವುಗಾಸ, ಚವುರಾಸ, ಪೂರ್ವ, ಪಶ್ಚಿಮ ಮತ್ತು ಉತ್ತರ, ದಕ್ಷಿಣಕ್ಕೆ ಸಾಲು ಸಾಲಾಗಿ ಕಾಣುವ ಹಾಗೆ ಸಹಸ್ರ ಅಥವಾ ಐದುನೂರು ಇಲ್ಲವೇ ನಾನೂರು ಮಟ್ಟಿಗೂ ತಗ್ಗುಗಳನ್ನು ತೆಗೆಸಿ, ಆ ತಗ್ಗುಗಳಲ್ಲಿ ಉಸುಕು, ಕೆಮ್ಮಣ್ಣು ಸಮಾನವಾಗಿ ಕಲಸಿ ತುಂಬಿ ಬರಿಮಾಡಿ ಯಾವತ್ತೂ ತಗ್ಗುಗಳನ್ನು ತಯಾರು ಮಾಡಬೇಕು. ಈ ತಗ್ಗಿನಲ್ಲಿ ಗಡ್ಡೆ ಹಿಡಿಯುವ ಹಾಗೆ ಕೆದರಿ ಅದರ ತಳಕ್ಕೆ ಉಪ್ಪು, ಮೊಸರನ್ನು ಚೆಲ್ಲಿ ಅದರ ಮೇಲೆ ಈ ಸಸಿಯನ್ನು ನಿಲ್ಲಿಸಿ, ಸುತ್ತಲೂ ಬಗಲು ಗಟ್ಟಿಯಾಗಿ ತುಳಿದು ನೀರು ಉಣಿಸುವುದು.[೨೪೩] ಜನಪದರು 'ತೆಂಗು ತೇಲಿಸಿಡು ಬಾಳೆ ಬಗೆದಿಡು" ಎಂಬ ಮಾತನ್ನು ಹೇಳಿರುವುದಿದೆ. ತೆಂಗಿನ ಸಸಿ ನಿಲ್ಲಿಸಲು ಆಳ ತಗ್ಗು ತೋಡುವ ಅಗತ್ಯವಿರುವುದಿಲ್ಲ. ಕಾಯಿ, ಮುಚ್ಚುವಷ್ಟು ಗುಂಡಿಗಿಂತ ಸ್ವಲ್ಪ ಹೆಚ್ಚಿದ್ದರೆ ಸಾಕಾಗುತ್ತದೆ. ತೆಂಗನ್ನು ಕಲ್ಪವೃಕ್ಷವೆಂದಿರುವುದರ ಹಿಂದೆ ತೆಂಗಿನ ಪ್ರಯೋಜನಗಳು ಅಡಗಿವೆ. ತೆಂಗಿನ ಗರಿಯಿಂದ ಚಾಪೆ, ಕಡ್ಡಿಯಿಂದ ಪೊರ್ಕೆ, ಕಾಯಿಸಿಪ್ಪೆಯಿಂದ ನಾರು, ಮಟ್ಟೆ, ಕುರುವೊಂಬಾಳೆಗಳು ಉರುವಲು, ಬಲಿತ ಮರ ಮನೆಗೆ ತೀರು, ಕಾಯಿ, ಕೊಬ್ಬರಿ, ಎಳನೀರನ್ನು ಜನರು ಆಹಾರ ತಯಾರಿ ಮತ್ತು ಪಾನಿಯ, ಎಣ್ಣೆ ತಯಾರಿ ಮೊದಲಾದ ಉಪಯೋಗಗಳಿಗೆ ಬಳಕೆಯಾಗುತ್ತದೆ. ಕರ್ನಾಟಕ ಕಾದಂಬರಿಯಲ್ಲಿ ನಾಗವರ್ಮ

"ತಿಲಕಾಶೋಕ ತಮಾಳ ತಾಳ ವಕುಳಾಲಂಕಾರ ಮೇಲ್ಲಾಲತಾಕುಲ ಪೊಗದ್ರುಮ ನಾಳಿಕೇರ"[೨೪೪] ಪಂಚತಂತ್ರ ಕೃತಿಯ ೧೭೯ನೇ ಪದ್ಯದಲ್ಲಿ "ಪನಸಾಮ್ರ ಜಂಬು ಜಂಬೀರ ನಾರಿಕೇಳಿ ಕಪಿಸ್ಥಾ ಕದಳೀನಾರಂಗ" ಎಂದು[೨೪೫] ಉಲ್ಲೇಖಿಸಿರುವುದು ಕಂಡುಬರುತ್ತದೆ. ಪ್ರಾಚೀನ ಕಾವ್ಯ ಕೃತಿಗಳಲ್ಲೂ ತೆಂಗಿನ ಕುರಿತಾದ ಮಾಹಿತಿಗಳು ಹೇರಳವಾಗಿ ಕಂಡು ಬಂದಿವೆ ಎಂಬುದು ಇದರಿಂದ ತಿಳಿಯುತ್ತದೆ.

ಕ್ರಿ.ಶ. ೮೮೦ರ ಶಾಸನದಲ್ಲಿ ಕೊಡೆಸೀಗೆಯ, ಕಲ್ಪವೃಕ್ಷ, ಕಡಿವೆಕೊಳ, ನರೂವೆ ಕುಮ್ಮರಿಕೊಳ, ಜಂಬುವೃಕ್ಷ, ಬೋದಿ ಮತ್ತು ವೇಣುವೃಕ್ಷ, ಪುಣಸೆಕೊಳ[೨೪೬] ವೃಕ್ಷಗಳ ಉಲ್ಲೇಖವಿರುವುದು ಕಂಡುಬಂದಿದೆ ಕ್ರಿ.ಶ. ೧೧೮೧ರ ಶಾಸನದಲ್ಲಿ ಮೂಡಲಾಲದಮರ, ಆಲದಮರ, ಹುಣಿಸೆಯಗುಂಡು, ಕೆರೆಯತೋಟ[೨೪೭] ಉಲ್ಲೇಖವಿದೆ ಈ ಆಲದ ಮರವು ನೆರಳಿಗೆ, ಕಾಡಿದ್ದರೆ ನಾಡು ಎಂಬ ಅರ್ಥದಲ್ಲಿ ಬೆಳೆಸಿರುವ ಸಾಧ್ಯತೆಯಿದೆ. ಕ್ರಿ.ಶ. ೧೧೬೦ರ ಶಾಸನದಲ್ಲಿ ಹೂವಿನ ತೋಟದ[೨೪೮] ಉಲ್ಲೇಖವಿದೆ. ಕ್ರಿ.ಶ. ೧೦೫೩ರ ಶಾಸನದಲ್ಲಿ ತೋಟದ ಕೆಲವು ಭಾಗಗಳನ್ನು ದಾನ ನೀಡಿದ್ದನ್ನು ಹೇಳಿದೆ[೨೪೯] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ 'ತೆಂಗಿನ ತೋಟವಂ ಬಿಟ್ಟರ್'[೨೫೦] ಎಂದಿದೆ. ಕ್ರಿ.ಶ. ೧೨೫೦ರ ಶಾಸನದಲ್ಲಿ ಜಕ್ಕಿಯಂವೆಯ ಕೆಱೆಯ ಹಿಂದಣ ನಂದನಬನದೊಳಗೆ ಗದೆ ಸಲಗೆ'[೨೫೧] ಎಂದು ಉಲ್ಲೇಖಿಸಿದೆ. ಕ್ರಿ.ಶ. ೧೧೭೩ರ ಶಾಸನದಲ್ಲಿ ಮಾವಿನಮರ, ತವಸಿಯಮರ, ಅತ್ತಿಯಮರ, ಹುಣಿಸೆಯ ಮರ, ತೆಳದ ಮರ, ನೇಱಿಲಮರ, ಬಸುರಿಯಮರ[೨೫೨] ತವಸಿಮರ ವೆಂದರೆ ಹುಲಿಗನ ಮತ್ತಿಯಂತಹ ಮರ. ಇಂತಹ ಮರಗಳು ಇಂದು ವಿಸ್ಮೃತಿಗೆ ಸರಿಯುತ್ತಿವೆ. ಮಲೆನಾಡಿನಲ್ಲಿ ಈ ಮರಗಳು ಕಂಡುಬರುತ್ತವೆ. ಆದರೂ ಇವುಗಳನ್ನು ದಾಖಲಿಸುವ ಅಗತ್ಯತೆ ಇಂದಿನ ಅಧ್ಯಯನಗಳಿಗಿದೆ. ಕ್ರಿ.ಶ. ೧೧೯೦ರ ಶಾಸನದಲ್ಲಿ ಬೇವಿನೂರ ತಲೆಯಕಾವ ದೇವರ್ಗೆ ಮೂರು ಮಾವಿನಮರ ಒಂದು ಹುಣಸೆ, ಒಂದು ನೇರಳೆಮರ, ರೇವಣೇಶ್ವರ ದೇವರಿಗೆ ೩ ಮಾವಿನಮರ, ಹುಣಸೆ ಮತ್ತು ನೇರಳೆಯ ಒಂದೊಂದು ಮರ ದಾನ ಬಿಟ್ಟಂತೆ[೨೫೩] ಉಲ್ಲೇಖಿಸಿದೆ.

ಕ್ರಿ.ಶ. ೧೧೬೫ರ ಶಾಸನವು ತೋಟದ ಬಣ್ಣಿದೆಱೆಯನ್ನು ದೇವರಿಗೆ ಬಿಟ್ಟದ್ದನ್ನು ಹೇಳಿದೆ.[೨೫೪] ಹೊಟ್ಟೆಯ ಬಮ್ಮನು ತೋಟದ ಅರಣಿಗೆ ಗುತ್ತಿಗೆಯನ್ನು ಬ್ರಹ್ಮಪುರಿಯ ಮಹಾಜನರಿಂದ ಪಡೆದನು. ಪ್ರತಿದಿನವೂ ದೇವರಿಗೆ ಹೂವಿನ ದಂಡೆಯನ್ನು ಪೂರೈಸದಿದ್ದರೆ ಅರಣಿಗೆ ಗುತ್ತಿಗೆಯನ್ನು ಕೊಡಕೂಡದೆಂದು ಹೇಳಿದೆ ಶಾಸನದಲ್ಲಿ ಕಂಡುಬರುವ ಹೂವಿನ ತೋಟಗಳನ್ನು ದೇವರ ಪೂಜೆಗಾಗಿ ಬಿಡುತ್ತಿದ್ದರು. ಇದಕ್ಕಾಗಿ ಭೂದಾನ ನೀಡಲಾಗುತ್ತಿತ್ತು. ತೋಟ ನೋಡಿಕೊಳ್ಳುವವರು ಪೂಜೆಗೆ ಹೂ ಕೊಡದಿದ್ದರೆ ಉಂಬಳಿಯಾಗಿ ಕೊಟ್ಟದ್ದನ್ನು ಹಿಂಪಡೆಯಬೇಕೆಂದು ಶಾಸನನಗಳು ತಿಳಿಸಿರುವುದು ಈ ಶಾಸನದಲ್ಲಿದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ 'ನಾಗರಬಾವಿಯಿಂ ಪಡುವ ತೋಂಟ೧'ರ ಉಲ್ಲೇಖವಿದೆ.[೨೫೫] ತೋಟಗಳಿಗೆ ಬಾವಿಯ ನೀರನ್ನು ಬಳಸಿ ಬೆಳೆಯಲಾಗುತ್ತಿತ್ತು. ಆದ್ದರಿಂದ ತೋಟಗಳ ಬಳಿ ಬಾವಿ ಇರುವುದು ಇಲ್ಲಿ ಕಂಡುಬಂದಿದೆ. ತೋಟದ ಬೆಳೆಗಳನ್ನು ಬಾಗಾಯ್ತು ಬೆಳೆಗಳು ಎಂತಲೂ ಪದಕೋಶಗಳು ಅರ್ಥೈಸುತ್ತವೆ. ಘನಮಠದ ಶಿವಯೋಗಿಗಳು ತೋಟವನ್ನು ಕುರಿತು ಹೀಗೆ ಹೇಳಿರುವುದು ಕಂಡುಬರುತ್ತದೆ. "ತನ್ನ ಸ್ವಾಧೀನದಲ್ಲಿರುವ ಹೊಲದಲ್ಲಿ ಅಥವಾ ಅದರ ಬಳಿಯಲ್ಲಿ ನೀರಿರುವಂತಹ ಹಳ್ಳದ ಆಸ್ಪದವಿದ್ದರೆ, ಆ ಹಳ್ಳದ ಸಮೀಪದಲ್ಲಿ ಬಾವಿಗಳನ್ನು ತೆಗಿಸಬೇಕು" ಜಲಶಿಲ್ಪಿಯ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ನೀರಿನ ಸೂಚನೆಯ ಗಿಡಗಳನ್ನು ಅಥವಾ ಹುತ್ತುಗಳನ್ನು ಇಲ್ಲವೆ ಹುಲ್ಲು ಕರಿಕೆಯನ್ನು ಮತ್ತು ಕೊಳೆತ ಎಲೆಗಳನ್ನು ಮುದಿಯ ಹುಲ್ಲು, ಆಪು ಬಹುದಿವಸದ

ದಾಗಡಿಯ ಬಳ್ಳಿಗಳನ್ನು ಅಥವಾ ತುಂಗಿ ಮೊದಲಾದ ಅನೇಕ ಸೂಚನೆಗಳನ್ನು ಒಂದಾದರು ಪೂರ್ಣ ಜಲದ ಸೂಚನೆಯಾದ ಮೂಲಿಕೆಯ ಗಿಡಗಳು ಯಾವ ಸ್ಥಳದಲ್ಲಿ ಕಾಣುತ್ತವೆಯೋ ಅಂತ ಸ್ಥಳದಲ್ಲಿ ಬಾವಿಯನ್ನು ತೆಗಿಸಬೇಕು ಎಂದು ಸೂಚಿಸುತ್ತಾರೆ[೨೫೬] ಘನಮಠದ ಶಿವಯೋಗಿಗಳು ಹೇಳಿರುವುದು ಸರಿ. ಅಂದಿನ ಕಾಲದಲ್ಲಿ ಅಂತರ್ಜಲದ ಪ್ರಮಾಣ ಅಧಿಕವಾಗಿತ್ತು. ಮೇಲೆ ಸೂಚಿಸಿದ ಕಡೆಯಲ್ಲೆಲ್ಲ ನೀರು ದೊರೆತಿರುವುದಿದೆ. ಆದರೆ ಬದಲಾದ ಇಂದಿನ ಅಂತರ್ಜಲದ ಸ್ಥಿತಿಯಲ್ಲಿ ಬದಲಾವಣೆಗಳ ಪ್ರಮಾಣ ಹೆಚ್ಚಾಗಿದೆ. ಅಂತರ್ಜಲ ಬರಿದಾಗುತ್ತಾ ಬಂದಿರುವುದರಿಂದ ಮೇಲಿನ ನೀರು ದೊರೆಯುವ ಸೂಚನೆಗಳಲ್ಲಿ ಬಾವಿ ತೆಗೆಸಿದರೂ ನೀರು ಸಿಗುವ ಸಾಧ್ಯತೆಗಳ ಪ್ರಮಾಣ ಇಂದು ಕಡಿಮೆಯಾಗಿದೆ.

ಘನಮಠದ ಶಿವಯೋಗಿಗಳು ತೋಟದ ಸುತ್ತಲೂ "ಹಾಕಿಸಿದ ಒಡ್ಡಿನ ಹೊರಗಿನ ಮೈಯಲ್ಲಿ ಮೃಗಶಿರ ಕಾಲದಲ್ಲಿ ಹನಿಯಾದ ಸಮಯವನ್ನು ನೋಡಿ ಸಾಲಾಗಿ ಕಳ್ಳಿಯನ್ನು ಹಚ್ಚಬೇಕು. ಹೊರಗಿನ ಮೈಯಲ್ಲಿ ಕಳ್ಳಿಯ ಹಿಂದೆ ಹುಚ್ಚು ಕೇದಿಗೆಯನ್ನು ಹಚ್ಚಿ, ಆ ಕೇದಿಕೆಯ ಹೊಂದಿಗೆ ಸೀಗೆಯ ಬೀಜವನ್ನು ಗಜ, ಎರಡು ಗಜಕ್ಕೆ ಒಂದರಂತೆ ಹಾಕಿ. ಅದರ ಹಿಂದೆ ಚೆನ್ನಾಗಿ ಜಾಲಿಯ ಮುಳ್ಳನ್ನು ಅಥವಾ ಬೋರೆಯ ಮುಳ್ಳನ್ನು ಅಥವಾ ಇಂಗಳಿ ಮುಳ್ಳನ್ನು ಇದರಲ್ಲಿ ಯಾವ ಪ್ರಕಾರದ ಮುಳ್ಳುಗಳನ್ನು ಹಚ್ಚಿ ಬಂದೋಬಸ್ತ್ ಮಾಡಬೇಕು[೨೫೭] ಬೇಲಿ ಹಾಕುವ ಉದ್ದೇಶ ಕಬ್ಬು, ಎಲೆಬಳ್ಳಿ, ಬಾಳೆ, ಮೆಣಸು ಮೊದಲಾದ ಬೆಳೆಗಳಿಗೆ ಪಶು, ಕಳ್ಳರು, ಕಾಡು ಪ್ರಾಣಿಗಳ ಆಟವನ್ನು ತಪ್ಪಿಸಲು ತೋಟಗಳಿಗೆ ಬೇಲಿಯ ಅಗತ್ಯವಿರುತ್ತದೆ. ಶಾಸನಗಳು ತೋಟದ ಮೇರೆಗಳನ್ನು ಹೇಳಿವೆ. ಆ ಮೇರೆಯೊಳಗಡೆ ಬೇಲಿಗಳನ್ನು ಹಾಕಿಕೊಂಡಿರುವ ಸಾಧ್ಯತೆಗಳಿವೆ. ಇಂದಿನ ಆಧುನಿಕ ದುಬಾರಿ ತಂತಿ ಬೇಲಿಯಂತೆ ಪ್ರಾಚೀನ ಕೃಷಿಯಲ್ಲಿ ಬೇಲಿಯು ಸಹ ವ್ಯಚ್ಚದಾಯಕವಾಗಿರಲಿಲ್ಲ. ಕೃಷಿಕರು ತಮ್ಮ ಪಾರಂಪರಿಕ ಜ್ಞಾನದ ಬಲದಿಂದ ಶ್ರಮವಿನಿಯೋಗದ ಮೂಲಕ ಬೇಲಿಗಳನ್ನು ಹಾಕಿಕೊಂಡು ತೋಟ ಮತ್ತು ಹೊಲಗಳನ್ನು ಸಂರಕ್ಷಿಸಿಕೊಳ್ಳುತ್ತಿದ್ದರು. ತೋಟಗಳಲ್ಲಿ ಕಿರುದೋಟ ಮಾಡಬಾರದು. ಹೀಗೆ ಮಾಡುವುದರಿಂದ ಬೆಳೆ ಹೆಚ್ಚಾಗಿ ಬರುವುದಿಲ್ಲ. ಈ ಕುರಿತು ಪಾಲ್ಕುರಿಕೆ ಸೋಮನಾಥ ಹೀಗೆ ಹೇಳಿರುವನು.

ಕಿರಿದೋಟಂ ಕಡೆವಳ್ಳಿ ಬೀದಿ ಮನೆ ಮುಂಗೈಯ್ಯಾ
ರ್ಭಟಂ ಸಾಲದ ದೊರೆಗಾರ್ಯಂ ಘೃತಮಿಲ್ಲದೊ
ಟವ ಸುಖಂ ಮುಗ್ಧಾಂಗನಾಸಂಗಯಂ ಬರಿಗೈಯ್ಯಂ
ಸುರಿದಂದವೈ ಹರಹರ ಶ್ರೀ ಚನ್ನ ಸೋಮೇಶ್ವರ[೨೫೮]

ತೋಟದಲ್ಲಿ ಸಸಿಗಳನ್ನು ಹಾಕುವಾಗ ಕಿರುದಾಗಿ ಇಡಬಾರದು. ಹೀಗೆ ಮಾಡುವುದರಿಂದ ಹಣ, ಶ್ರಮ, ಸಮಯಗಳು ವ್ಯರ್ಥವಾಗುತ್ತವೆ. ಯಾವುದೇ ಲಾಭ ಬಾರದೆ ರೈತರು ಬರಿಗೈ ಆಗುವುದು ಖಚಿತವೆಂದು ಸೋಮನಾಥ ಹೇಳಿರುವುದು ಇಂದಿಗೂ ಅನ್ವಯಿಸುತ್ತದೆ. ತೋಟದಲ್ಲಿ ಗಿಡಗಳ ಹಿಂಬುವಿಕೆ ಹೆಚ್ಚಾದರೆ ಸ್ವಾಲೆಯಾಗಿ ಬೆಳೆ ಬರುವುದಿಲ್ಲ. ನಯಸೇನ ತನ್ನ ಧರ್ಮಾಮೃತದಲ್ಲಿ "ಪದವಜೆದು ಬಿತ್ತದ ಬೆಳಸುಂ......ಪೊಲನರಿಯದ ತೋಟಂ"[೨೫೯] ಹದ ಬೆದೆಯನರಿತು ಬಿತ್ತಬೇಕು. ಭೂಮಿಯ ಯೋಗ್ಯತೆಯನ್ನು ನೋಡಿ ತೋಟ ಮಾಡಬೇಕು. ಸರ್ವಜ್ಞನು ತನ್ನ ವಚನದಲ್ಲಿ

ತೋಟದ ಬೆಳೆಯನ್ನು। ದಾಟಿ ನೋಡದರಾರು

ಮೀಟು ಜವ್ವನದ ಸೊಬಗಿಯರ ನೆರೆಕಂಡು।

ದಾಟದವರಾರು? ಸರ್ವಜ್ಞ[೨೬೦]

ಮೇಲೆ ಉಲ್ಲೇಖಿಸಿರುವ ಶಾಸನಗಳಲ್ಲಿ ಹೂದೋಟ, ತೆಂಗು, ಅಡಕೆ, ಬಾಳೆ, ವೀಳೆದೆಲೆ, ಮೆಣಸು, ಕಬ್ಬು, ಹಲಸು, ಮಾವು, ನೇರಳೆ ಮೊದಲಾದ ತೋಟಗಳ ಸಾರ್ಥಕತೆಯನ್ನು ಈ ವಚನ ಬಿಂಬಿಸುತ್ತದೆ. ತೋಟದ ಬೆಳೆಗಳ ಹಿಂದೆ ಸೌಂದರ್ಯ ಪ್ರಜ್ಞೆ ಇರುತ್ತದೆ. ಅದರೊಂದಿಗೆ ಅದು ಆರ್ಥಿಕತೆಯ ಭಾಗವೂ ಸಹ ಆಗಿರುತ್ತದೆ. ಕ್ರಿ.ಶ ೧೧೯೭ರ ಶಾಸನದಲ್ಲಿ ಕಲಿದೇವರಿಗೆ "ಕೌಂಗಿನಮರ ಸಾಲು ಸಾಸಿರಂ ಮತ್ತವಿಂಬಳ ಸಿಂ ಮಾವೆಳೆವಾಳೆ ತೆಂಗು ಮೊದಲಾಗಿರ್ದ್ದೊಳ್ ಮರಂ ಸುತ್ತಲುಂ ಫಲವೊಂಟಾದೆಳ ದೋಂಟವೊಪ್ಪುವ ಮೊದಲಾಗಾದೊಳ್‌ಮಜನಕುತ್ತರ ಸ್ಥಳದೊಳು"[೨೬೧] ಕೌಂಗು, ತೆಂಗು ಮಾವು, ಬಾಳೆಗಳ ಉಲ್ಲೇಖವಿದೆ. ಕ್ರಿ.ಶ. ೧೧೭೫ರ ಶಾಸನದಲ್ಲಿ ಮಾವು ಬಾಳೆಯ ಉಲ್ಲೇಖವಿದೆ.[೨೬೨] ಮಾವು ಮತ್ತು ಬಾಳೆಬೆಳೆಗಳು ಹಣ್ಣುಗಳಾಗಿದ್ದು, ಆಹಾರದ ಪದಾರ್ಥಗಳಾಗಿ ಕಂಡುಬರುತ್ತವೆ. ಉಳಿದಂತೆ ಮಾವಿನ ಮರವನ್ನು ಮರಮುಟ್ಟಿಗೆ ಬಳಸಿದರೆ ಹಲಗೆಗಳು ಕುಗ್ಗುವುದು, ಹಿಗ್ಗುವುದು ಕಂಡುಬರುತ್ತದೆ. ಆದರೂ ಕೆಲವರು ಇದರ ಹಲಗೆಗಳನ್ನು ಮನೆ ಮುಟ್ಟಿಗೆ ವಿರಳವಾಗಿ ಬಳಸುತ್ತಾರೆ.

**ಬಾಳೆ**

ಬಾಳೆಯನ್ನು ಕದಳಿ, ಕದಲಿ, ಬಾಳೆ ಎಂದೆಲ್ಲ ಶಾಸನಗಳು ಉಲ್ಲೇಖಿಸಿವೆ. ಇದನ್ನು ಆಹಾರ ಬೆಳೆಯಾಗಿ ಉಪಯೋಗಿಸುತ್ತಾರೆ. ಇದೊಂದು ನೀರಾವರಿ ಆಶ್ರಿತ ಬೆಳೆಯಾಗಿದೆ. ಇದು ಹಣ್ಣಿನ ಜಾತಿಯದ್ದಾಗಿದೆ. ಬಾಳೆಗಳಲ್ಲಿ 'ಏಲಕ್ಕಿಬಾಳೆ, ಒಣಬಾಳೆ, ಕಪ್ಪುರಬಾಳೆ, ಕರಿಬಾಳೆ, ರಸಬಾಳೆ, ನಂಜನಗೂಡುಬಾಳೆ, ಜವಾರಿಬಾಳೆ, ಚಂದ್ರಬಾಳೆ, ಗುಜರಾತಿಬಾಳೆ, ಪುಟ್ಟಬಾಳೆ[೨೬೩] 'ಬಡವನಿಗೆ ಬಾಳಿ ಬಲವಂತನಿಗೆ ಕಬ್ಬು' ಎಂಬ ಗಾದೆ ಮಾತಿದೆ. ಕಬ್ಬು ಬಹಳ ವೆಚ್ಚದಾಯಕವೆಂಬ ಕಾರಣಕ್ಕೆ ನಿಕೃಷ್ಟವೆಂದು ಕೌಟಿಲ್ಯ ಕರೆದುದನ್ನು ಗಮನಿಸಿದ್ದೇವೆ. ಬಾಳೆ ಬಡವನಿಗೂ ಒಲಿಯುತ್ತದೆ. ಇದು ವೆಚ್ಚದಾಯಕವಲ್ಲ. ಇದನ್ನು ಎರಡು ರೀತಿಯಲ್ಲಿ ಬೆಳೆಯುತ್ತಾರೆ. ಮಿಶ್ರ ಬೆಳೆಯಾಗಿ, ಏಕ ಬೆಳೆಯಾಗಿ ಬೆಳೆಯುವುದಿದೆ. ಇದು ಒಂದು ವರ್ಷದ ದೀರ್ಘ ಬೆಳೆ. ಮೊದಲ ಬಾರಿಗೆ ಒಂದು ಕೊಯ್ಲು, ನಂತರ ಎರಡು ಕೊಯ್ಲು ಬರುತ್ತದೆ. ಶ್ರೀ ಘನಮಠ ಶಿವಯೋಗಿಗಳು ರಸಬಾಳೆ, ಸುಗಂಧಿ, ಕರಿಬಾಳೆ, ಕಲ್ಯಾಣಿ, ಬೂದಿಬಾಳೆ, ಸೊನ್ನಿಬಾಳೆ, ಏಣುಬಾಳೆ ಮೊದಲಾದವುಗಳನ್ನು ಉಲ್ಲೇಖಿಸಿದ್ದಾರೆ[೨೬೪] ಬಾಳೆಗಿಡವನ್ನು ಕೃಷಿ ಮಾಡುವಾಗ ನೇಗಿಲಿನಿಂದ ಉತ್ತು ರಂಟೆಯಲ್ಲಿ ಹರಗಿ ಹದಗೊಳಿಸಿಟ್ಟುಕೊಳ್ಳಬೇಕು.

"ಐದು ಮೊಳಕ್ಕೊಂದು ಅಥವಾ ನಾಲ್ಕು ಮೊಳಕ್ಕೊಂದು ಗಿಡಗಳು ನಿಲ್ಲುವ ಹಾಗೆ ಅಜಮಾಸು ನೋಡಿ, ಮಡಿಗಳನ್ನು, ಕಾವಲಿಯನ್ನು ಚೆನ್ನಾಗಿ ಮಾಡಿಕೊಂಡು ಪ್ರತಿಯೊಂದು ಮಡಿಯ ಮಧ್ಯಭಾಗದಲ್ಲಿ ಗೇಣು, ಒಂದೂವರೆ ಗೇಣು ಚಚ್ಚೌಕು ಅಗಲ ಮತ್ತು ಒಂದು ಕಾಲು ಮೊಳ ತಗ್ಗಾಗಿರುವ ತಗ್ಗುಗಳನ್ನು ತೆಗೆಸಿ, ಅವುಗಳಲ್ಲಿ ಗೇಣುದ್ದ ಹಳೆಯ ಗೊಬ್ಬರವನ್ನು ಹಾಕಿ. ಆರು ತಿಂಗಳಿನ ಬಾಳೆಯ ಸಸಿಗಳನ್ನು ತೆಗ್ಗಿನಲ್ಲಿ ನಿಲ್ಲಿಸಿ, ಮೇಲೆ ಹಳೆಯ ಗೊಬ್ಬರವನ್ನು ಹಾಕಿ, ಚೆನ್ನಾಗಿ ಬಗಲು ತುಳಿದು, ಗಟ್ಟಿಯಾಗಿ ಸಸಿಗಳನ್ನು ಕೂರಿಸಿ, ನೀರು ಕಟ್ಟಬೇಕು.[೨೬೫]

ಶಿವಯೋಗಿಗಳು ಹೇಳಿರುವುದಕ್ಕೆ ನಿದರ್ಶನವೆಂಬಂತೆ ಜನಪದರು 'ಬಾಳೆ ಬಗಿದಿಡು ತೆಂಗು ತೇಲಿಸಿಡು' ಎಂದು ಹೇಳಿದ್ದಾರೆ. ಜನರಿಗೆ ಇದು ಪಾರಂಪರಿಕ ಜ್ಞಾನ. ಎರಡು ಅಡಿ ಉದ್ದ, ಎರಡು ಅಡಿ ಅಗಲ ಗುಂಡಿಗಳನ್ನು ತೋಡಿ ಒಂದು ಪುಟ್ಟಿ ಫಲವತ್ತಾದ ಮಣ್ಣು, ಒಂದು ಪುಟ್ಟಿ ಕೊಟ್ಟಿಗೆ ಗೊಬ್ಬರ ಹಾಕಿ ಹಳೇ ಬಾಳೆಯ ಕಂದುಗಳನ್ನು ಬಗಿದು ತಂದು ಇಡುತ್ತಾರೆ. ಗುಂಡಿಗೆ (ಕುಣಿಗಳಿಗೆ) ಹಾಕಿ ಅದರ ಮೇಲೆ ಗೊಬ್ಬರ ಹಾಕಿ ಗಟ್ಟಿಯಾಗಿ ತುಳಿಯುವ ವಿಧಾನ ಇಂದಿಗೂ ರೂಢಿಯಲ್ಲಿದೆ. ಇದು ಪಾರಂಪರಿಕ ಬಾಳೆಬೀಜ ಮತ್ತು ನೆಡುವ ವಿಧಾನ. ಆದರೆ ಇಂದಿನ ಆಧುನೀಕರಣ ಪ್ರಭಾವದಿಂದಾಗಿ ದೇಸಿ ವಿಧಾನ ಮತ್ತು ತಳಿಗಳು ಕಣ್ಮರೆಯಾಗುತ್ತಿವೆ. ಬಾಳೆ ಸಸಿ ಮತ್ತು ಬೀಜಗಳನ್ನು ಉತ್ಪಾದಿಸಲಾಗುತ್ತಿದೆ. ಅದು ಇಂದು ಬಳಕೆಯಾಗುತ್ತಿದೆ. ಲೋಕೋಪಕಾರದ ಅಧ್ಯಾಯ ೬ ರಲ್ಲಿ ಅಧಿಕ ಇಳುವರಿಗಾಗಿ ಹೇಳಿರುವ ವಿಧಾನ ಹೀಗಿದೆ.

ಕುದುರೆಯ ಪಂದಿಯ ವಿಷ್ಠೆಯೊ।

ಳೊದವಿದ ಕಿರ್ಚಿಂದೆ ಸುಜಿಯಂ ಕಾಸಿ ಬೞಿ

ಕ್ಕದಲಱೊಳ್ ಬಾೞಿಯ ಗೊನೆ ಪು

ಟ್ಟಿದೆಡೆಯನಱಿದೊೞ್ ಪಿರಿಯ ಬಿಣ್ಗೊನೆಯಕ್ಕುಂ[೨೬೬]

ಕುದುರೆ, ಕಾಡುಹಂದಿಯ ಲದ್ದಿಯನ್ನು ಚೆನ್ನಾಗಿ ಕಲಸಿ ಕಿಚ್ಚನ್ನು ಹಚ್ಚಿಸಿ, ಅಂದರೆ ಉರಿಹಾಕಿ ಅದರಲ್ಲಿ ಚೆನ್ನಾಗಿ ಒಂದು ಸೂಜಿಯನ್ನು ಕಾಯಿಸಿ ಬಾಳೆಗೊನೆ ಹೊಂಬಾಳೆ ಹೊಡೆಯುವ ಜಾಗಕ್ಕೆ ಸೂಜಿಯನ್ನು ನೆಡಿಸಿದರೆ ಗೊನೆಯು ದೊಡ್ಡ ಗಾತ್ರದಲ್ಲಿ ಬರುತ್ತದೆ ಎಂದಿದ್ದಾರೆ. ಈ ಜ್ಞಾನವನ್ನು ಮರು ಪರೀಕ್ಷಿಸಿ ಪ್ರಯೋಗಕ್ಕೊಳಪಡಿಸಿ ಬಳಸುವ ಅಗತ್ಯವಿದೆ. ಅದೇ ಅಧ್ಯಾಯ ಆರರಲ್ಲಿ,

ಮೊದಲಲ್ಲಿ ಬಾೞೆಗಂ ಕೋ

ಲದ ಜಲಮಂ ಕ್ರೋಡವಸೆಯುಮಂ ರುಧಿರಮುವಂ॥

ಕುದಿಯಿಸಿ ಪೊಯ್ದೊಡೆ ದಾಳಿಂ

ಬದ ಫಲದಾಕೃತಿಯ ಫಲಮನದ ತಳಿದಿರ್ಕ್ಕುಂ।[೨೬೭]

ಬಾಳೆ ಸಸಿಯನ್ನು ತುಳಿಯುವ ಮೊದಲು ಅಂಕೋಲೆಯ ಬೀಜದ ರಸ, ಹಂದಿಯ ಮಾಂಸ, ರಕ್ತಕುದಿಸಿ ಆ ರಸವನ್ನು ಹೊಯ್ದರೆ ದಾಳಿಂಬೆಯಂತೆ ಬಾಳೆ ಕಾಯಿಗಳು ದುಂಡಾಗಿ ಬರುತ್ತವೆ. ಇಂದು ಬಾಳೆಗಳು ರೋಗ ಪೀಡಿತವಾಗುತ್ತಿವೆ. ರಾಸಾಯನಿಕ ರಸಗೊಬ್ಬರ ಆಧುನಿಕ ಬೀಜಗಳು ಇದಕ್ಕೆ ಕಾರಣಗಳಾಗುತ್ತಿವೆ. ಮೇಲೆ ತಿಳಿಸಿದ ದೇಶಿ ಜ್ಞಾನದ ಬೆಳೆಯಿಂದ ಇಂತಹ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಸಾಧ್ಯತೆಗಳಿವೆಯೇ ಎಂಬುದು ಇಂದು ದೊಡ್ಡ ಸವಾಲಿನ ಸಂಗತಿಯಾಗಿದೆ. ಜನಪದರು 'ಬಾಳೆ ಹಾಕಿದವನು ಬಾಳಿಯಾನು, ಬಾಳೆ ಇದ್ದವನ ಬಾಳುವೆ ಉತ್ತಮ ಎಂದೆಲ್ಲ" ಹೇಳಿರುವುದು ಸರಿಯಷ್ಟೆ. ಆದರೆ ಆಧುನಿಕತೆಗೆ ಸಿಕ್ಕಿರುವ ಕೃಷಿ ಬದುಕು ಮತ್ತು ಬೆಳೆಗಳು ತತ್ತರಿಸಿ ನಲುಗುತ್ತಿರುವುದು ವಾಸ್ತವ ಸಂಗತಿಯಾಗಿದೆ. ಕ್ರಿ.ಶ. ೧೨೩೦ರ ಶಾಸನವು ತೋಟ ತುಡಿಕೆಯ ನಿಕ್ಕಿಸಿದರು[೨೬೮] ಎಂದಿದೆ. ಅಂದರೆ ತೋಟ ಮತ್ತು ಹಣ್ಣಿನ ತೋಟ ಮಾಡಿಸಿರುವ ಸಾಧ್ಯತೆಗಳಿವೆ. ಕ್ರಿ.ಶ. ೯೦೦ರ ಶಾಸನದಲ್ಲಿ ಸಾರ್ವಜನಿಕರಿಗಾಗಿ ಉದ್ಯಾನವನವನ್ನು ಕಟ್ಟಿಸಿ ಬಿಟ್ಟಿದ್ದನ್ನು ಹೇಳಿದೆ. ಇದರಲ್ಲಿ ಸ್ವಸ್ತಿ ಶ್ರೀ ಉರಾ ಅಯ್ಯ ದೇವಪರ ವಿಟ್ಟ ತೊಡಿಕೆ ಅಱವಿಟ್ಟೊರ್'[೨೬೯] ಎಂದಿದೆ. ಇವುಗಳು ಸಾರ್ವಜನಿಕರ ವಿಹಾರೊದ್ಯಾನವನಗಳಾಗಿ ಕಂಡುಬರುತ್ತವೆ. ಊರುಗಳಲ್ಲಿ ಇಂತಹ ಉದ್ಯಾನವನಗಳಿದ್ದರೆ ಆ ಊರು ಕಂಗೊಳಿಸುತ್ತದೆ. ಜನರಿಗೆ ಶಾಂತಿ ನೆಮ್ಮದಿಯನ್ನು ನೀಡುತ್ತದೆ

ಎಂಬ ಭಾವನೆ ಇದೆ. ತೋಟ ತುಡಿಕೆ ಎಂದು ಬಳಸುವಾಗ ತುಡಿಕೆ ಎಂಬುದು ಉದ್ಯಾನವನವನ್ನು ಸೂಚಿಸುತ್ತದೆ. ಇಂದು ಪ್ರತಿ ಪಟ್ಟಣ, ನಗರಗಳಲ್ಲಿಯೂ ಬೀದಿಗೊಂದು ಉದ್ಯಾನವನಗಳನ್ನು ಮಾಡುವಂತೆ ಸರ್ಕಾರದ ಸೂಚನೆಯಿದೆ. ಇವುಗಳು ನಗರಗಳಲ್ಲಿ ಇಂದು ಕಾಣಬರುತ್ತಿವೆ. ಕ್ರಿ.ಶ. ೧೨೨೬ರ ಶಾಸನದಲ್ಲಿ ......ಸಾಗರದಂತಜಸ್ರ ಜಳಪೂರ್ಣ ತಟಾಕ ಚಯಂಗಳಿಂವನಂ ಪೂಗ ಮಹೀರುಹಂ ಕದಳಿ ತೆಂಗು ಲವಂಗ ತಮಾಳ ಜಾಳದಿಂದೆ ಬಾಗಿ ಫಲಂಗಳಿದೆಸೆವ ಕಯ್ವೊಲನೊಪ್ಪುವ ಗಂಧಶಾಳಿಯಿಂದಾಗಳು ಬೆಂಣ್ಣೆಕಲ್ಲೆಸೆದು ತೋರ್ಪ್ಪುದು ಕೋಗಳಿ ನಾಡೊಳರ್ತ್ಥಿಯಿಂ॥ಮತ್ತಂ॥ ಸಿರಿಸಂ ಕಮ್ಮರ ನೀಳೆ ಬಾಳೆವಳುಳಂ ದಾಳಿಂಬ ವಶ್ಯಾಭದತಾಳಗೆ ನೇಜಿಲ್ಭನ ಸಾಂಬ್ರವತ್ತಿ ತಿಳಕಂ ಕಂಕೆಲ್ಲ ಪು(೦)ನ್ನಾಗ ಪಾದರಿ ಪೂಗದ್ರುಮ ಕೌಂಗು ತೆಂಗು ಬದರಿ ಖರ್ಜ್ಜೂರ ನಾರಂಗ ಕೇಸರಮೆಂದಿಂತಿವಜೆಂದ ರಂಜಿಸುವುದುದ್ಯಾನಂ ಪುರೋಪಾಂತದೊಳು”[೨೭೦] ಕದಳಿ(ಬಾಳೆ), ತೆಂಗು, ಲವಂಗ, ತಮಾಳ (ಹೊಂಗೆ ಅಥವಾ ಕತ್ತಲೆ), ಈ ಬೆಳೆಗಳ ಗುಂಪುಗಳು ಬಾಗಿ ಫಲಗಳನ್ನು ಬಿಡುತ್ತವೆ. ಗಂಧಶಾಳಿ (ಒಂದು ಬಗೆಯ ಸುವಾಸನೆ ಭರಿತ ಭತ್ತ), ಕಮ್ಮರ ನೀಳೆ(ಕಂಚಿನಿಂಬೆಯ ಮರ ಅಥವಾ ನಿಂಬೆಮರ), ಬಾಳೆ, ವಕುಳ(ಬಕುಳದ ಮರ ಮತ್ತು ಹೂವು), ದಾಳಿಂಬ, ತಾಳೆ, ನೇರೆಲು, ಪುನ್ನಾಗ, ಪಾದರಿ, ಪೂಗದ್ರುಮ, ಕೌಂಗು (ಅಡಕೆ) ತೆಂಗು, ಬದರಿ, ಖರ್ಜ್ಜೂರ, ನಾರಂಗ(ಕಿತ್ತಳೆ) ಇವುಗಳಿಂದ ಉದ್ಯಾನವನ ರಂಜಿಸುತ್ತದೆ ಎಂದು ಇದರ ಅಗತ್ಯತೆಗಳನ್ನು ಸೂಕ್ಷ್ಮವಾಗಿ ಹೇಳಲಾಗಿದೆ. ಅಲ್ಲದೆ ಉದ್ಯಾನವನಗಳು ಸೌಂದರ್ಯವನ್ನು ಹೆಚ್ಚಿಸುವ ಆಗರಗಳು. ಪ್ರಾಚೀನ ಕಾಲದಲ್ಲಿ ಉದ್ಯಾನವನದ ಕೃಷಿ ನಡೆದಿರುವುದನ್ನು ಗಮನಿಸಿದರೆ, ರಾಜಪ್ರಭುತ್ವದಲ್ಲಿ ಬೇಟೆಯಾಡುವುದು ಹವ್ಯಾಸವಾಗಿತ್ತು. ಈ ಬೇಟೆಯಿಂದ ದಣಿದು ಬಂದವರು ವಿಶ್ರಾಂತಿ ಪಡೆಯುವ ಸಲುವಾಗಿ ನಿರ್ಮಿಸಲಾಗಿತ್ತು. ಮಾನವನು ಪ್ರಕೃತಿಯ ಕೂಸು. ಪ್ರಕೃತಿ ಮಾನವನ ಮನಸ್ಸಿಗೆ ಮುದ ನೀಡುವುದರೊಂದಿಗೆ ಆಹ್ಲಾದವನ್ನು ಉಂಟುಮಾಡಿ, ದುಃಖ ದುಮ್ಮಾನಗಳನ್ನು ದೂರಮಾಡುವ ಅಭೂತಪೂರ್ವ ಶಕ್ತಿಯನ್ನು ಹೊಂದಿದೆ. ಇದರಿಂದ ದೈಹಿಕ ಮತ್ತು ಮಾನಸಿಕ ನೆಮ್ಮದಿ ದೊರೆಯುತ್ತದೆ. ಇದನ್ನು ಮನಗಂಡ ಪ್ರಾಚೀನರು ಈ ಹಿನ್ನೆಲೆಯಲ್ಲಿ ಉದ್ಯಾನವನಗಳನ್ನು ನಿರ್ಮಿಸಿರುವ ಸಾಧ್ಯತೆಗಳಿವೆ. ಉದ್ಯಾನವನಗಳಲ್ಲಿ ಬೆಳೆಸುವ ಹೂದೋಟಗಳು ಸಾರ್ವಜನಿಕರ ಮನಸ್ಸಿಗೆ ಆನಂದವನ್ನು ಉಂಟುಮಾಡುತ್ತವೆ. ಅಲ್ಲದೆ ದೇವಾಲಯಗಳಲ್ಲಿ ನಡೆಯುವ ಪೂಜೆ, ಪುನಸ್ಕಾರ ಇತ್ಯಾದಿ ಧಾರ್ಮಿಕ ಕಾರ್ಯಗಳ ಆಚರಣೆಯಲ್ಲಿ ಹೂಗಳ ಬಳಕೆಗಾಗಿ, ಫಲಪುಷ್ಪಗಳಿಗಾಗಿ ಇವುಗಳ ನಿರ್ಮಾಣಗಳ ಸಾಧ್ಯತೆಗಳು ಕಂಡುಬರುತ್ತವೆ. ಕ್ರಿ.ಶ. ೧೦೮೩ರ ಶಾಸನದಲ್ಲಿ ದೇವರ ನೈವೇದ್ಯಕ್ಕೆಂದು

> ಪರಿಸೂತ್ರದ ತೆಂಕಲ್ಪತ್ತಿದೆ ನಾಗಲತಾದ ವಿರಾಜಿಪ ಪೊಗಿತರು
> ಸಂಕುಳದೋಂಟಂ ಬಿತ್ತರಿಸಲ್ಮೂನೂಱು ಕಮ್ಮಮಂ ಸಲೆ
> ಬಿಟ್ಟರು ಶ್ರೀ ಕಲಿದೇವಸ್ವಾಮಿಯ ವೀಳೆಯದ
> ಪುಣ್ಯದಿಂದಲು ತಿಂಗಳಿಗೊಂದೆ
> ಲೆಯ ಹೇಱ ಪಂನ್ನಯದ ಸುಂಕಮಂ[೨೭೧].

ಈ ಶಾಸನದಲ್ಲಿ ದೇವರ ನೈವೇದ್ಯಕ್ಕೆಂದು ಬೆಳೆಸಿದ ಹೂವಿನ ತೋಟದ ವರ್ಣನೆ ಮತ್ತು ಅದಕ್ಕೆ ದಾನ ನೀಡಿದ ಎಲೆಯ ಮೇಲಿನ ಪನ್ನಾಯ ಸುಂಕವನ್ನು ಕುರಿತು ಹೇಳಿರುವುದು ಕಂಡುಬರುತ್ತದೆ. ಕ್ರಿ.ಶ. ೧೦೩೮ರ ಶಾಸನದಲ್ಲಿ ಪಿರಿಯ ಮಾವಿನಮರ ಬಳ್ಳಿಯ ತೋಂಟದ ಉಲ್ಲೇಖವಿದೆ.[೨೭೨]

ಕ್ರಿ.ಶ. ೧೧೭೦ರ ಶಾಸನದಲ್ಲಿ ಲಕ್ಷುಮಕ್ಕ ಎಂಬುವವಳು "ತಂಮ್ಮಯ್ಯಂಗಳ ದೆಸೆಯಿಂ ತನಗೆ ಸೊಂಮ್ಮಾಗಿ ಬಂದ ಬೆಳವ್ರಿತ್ತಿಯನು ಸಮಸ್ತ ಬಳಿ ಸಹಿತಂ......ದಾನ ನೀಡಿದಳೆಂದಿದೆ.[೨೬೩] ಆದರೆ ಯಾವ ಬೆಳೆಗಳನ್ನು ದಾನ ನೀಡಿದಳೆಂದು ಹೇಳಿರುವುದು ಕಂಡುಬಂದಿಲ್ಲ. ಕ್ರಿ.ಶ. ೧೩೮೭ರ ಶಾಸನವು ನಾರಿವಣದ ಕಾಯ ಹೇಱಿಒಂದಕ್ಕಂ ಹಾಗ ಕಾಯಿ ಮೇಲೋಗರದ ಭಂಡಿ ಒಂದಕ್ಕಂ ಹಾಗ ಆ ಹೊಱೆ ಒಂದಕ್ಕಂ ಹುಲುವೀಸ ಫಲವಸ್ತು ಕಾಯಿ ಮೇಲೋಗರ ಹೊಱೆ ಒಂದಕ್ಕ ಬೇಳೆ[೨೬೪] ಎಂದು ಉಲ್ಲೇಖಿಸಿದೆ. ತೆಂಗಿನ ಕಾಯಿ ಮಾರಾಟಕ್ಕೆ ಹಾಕುವ ಸುಂಕಗಳು ಒಂದು ಹೇರು, ಮೇಲೋಗರ ಭಂಡಿ, ತಲೆಯ ಮೇಲೆ ಹೊತ್ತು ತರುವ ಹೊರೆಗಳಿಗೆ ತೆರಿಗೆಗಳು ಭಿನ್ನವಾಗಿದ್ದವು. ವಸ್ತುಗಳ ಪ್ರಮಾಣಕ್ಕೆ ಅನುಗುಣವಾಗಿ ತೆರಿಗೆ ವಿಧಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೮೦ರ ಶಾಸನದಲ್ಲಿ ಬಾಳೆಯಹಂಣುಮಧುರ ಎಲೆಅಡಕೆ ತೋಟದ ಪಲದೊಳಗೆ[೨೬೫] ಎಂದು ಉಲ್ಲೇಖಿಸಿದೆ. ಈ ಮೂರು ಬೆಳೆಗಳನ್ನು ಮಿಶ್ರ ಬೆಳೆಗಳಾಗಿ ಒಮ್ಮೆಲೆ ಬೆಳೆಯುವುದಿದೆ. ಪ್ರಾಚೀನ ಸಂದರ್ಭಗಳನ್ನು ತೋಟಗಳಲ್ಲಿ ಮಿಶ್ರಬೆಳೆ ಬೆಳೆಯುತ್ತಿದ್ದರು. ಇದರಿಂದಾಗಿಯೇ ಪ್ರಾಚೀನ ಕೃಷಿ ಇಂದಿನಷ್ಟು ನಷ್ಟವನ್ನು ಎದುರಿಸಿರುವ ಪ್ರಮಾಣಗಳು ವಿರಳ. ಆದರೆ ಇಂತಹ ಪ್ರಯತ್ನಗಳಲ್ಲಿ ರೈತರು ಮರೆಗುಳಿಗೆ ಸರಿದಿದ್ದಾರೆ. ಜೊತೆಗೆ ಬಾಳೆಯಂತಹ ಬೆಳೆ ಬೆಳೆಯಲು ಹೇರಳವಾಗಿ ನೀರಿನ ಅಗತ್ಯವಿದೆ. ವೈಜ್ಞಾನಿಕ ಬೆಲೆಯ ಕೊರತೆಯಿದಾಗಿ ರೈತರು ಬೆಳೆದ ಬೆಳೆಗಳು ನಷ್ಟ ಅನುಭವಿಸುತ್ತಿವೆ. ಇದು ಒಂದು ಕಡೆಯಾದರೆ ಮಾರುಕಟ್ಟೆಗಳಲ್ಲಿ ಮಧ್ಯವರ್ತಿಗಳ ಹಾವಳಿಯಿಂದಾಗಿ ಕೃಷಿ ಬದುಕು ಇನ್ನಷ್ಟು ನಷ್ಟವನ್ನು ಅನುಭವಿಸುತ್ತಿದೆ. ಈ ಹಾವಳಿಯನ್ನು ತಪ್ಪಿಸಲು ಸರ್ಕಾರ ಸೂಕ್ತ ಕ್ರಮವಹಿಸಿ ಮಾರುವವರ ಮತ್ತು ಕೊಳ್ಳುವವರ ಮಧ್ಯೆ ನೇರ ಸಂಪರ್ಕ ಸಾಧಿಸುವಂತಾದರೆ, ಕೃಷಿ ಬದುಕು ಲಾಭದಾಯಕವಾಗುವ ಸಾಧ್ಯತೆಗಳಿವೆ. ಕ್ರಿ.ಶ. ೧೨೮೫ರ ಶಾಸನದಲ್ಲಿ ಹೂದೋಟವ ದಾನವನ್ನು ಕುರಿತು ಹೇಳಿದೆ.[೨೬೬] ಶಾಸನಗಳಲ್ಲಿ ಮತ್ತೆ ಮತ್ತೆ ಹೂದೋಟಗಳ ದಾನಗಳು ಏತಕ್ಕಾಗಿ ಕಂಡುಬರುತ್ತವೆ ಎಂದು ಗಮನಿಸಿದರೆ ಇದರ ಹಿಂದಿರುವ ಧಾರ್ಮಿಕ ವಿಧಿ ವಿಧಾನಗಳಲ್ಲಿ ಹೂವಿನ ಪ್ರಾಮುಖ್ಯತೆ ಅಗ್ರಗಣ್ಯ. ಈ ಕಾರಣದಿಂದಾಗಿ ಹೂದೋಟಗಳನ್ನು ದಾನಮಾಡುವುದು ಶ್ರೇಯಸ್ಕರ ಎಂಬ ಭಾವನೆಯಿಂದ ಆಧ್ಯಾತ್ಮಿಕ ಮನೋಭಾವ ಹೊಂದಿರುವ ಪ್ರಭುತ್ವ, ಇತ್ಯಾದಿ ಸಮುದಾಯ ವರ್ಗದವರು ಹೂದೋಟಗಳನ್ನು ದಾನ ಮಾಡಿರುವುದು ಕಂಡುಬರುತ್ತದೆ. 'ಸಾಗರದ ಶಾಸನವೊಂದು ಕೀರ್ತಿವರ್ಮನ ಸೈನ್ಯ ಸಾಂತಳಿಗೆ, ಗುತ್ತಿನಾಡು, ಬರಿವೂರು, ಮುಂತಾದ ಸ್ಥಳಗಳ ಮೇಲೆ ಆಕ್ರಮಣ ನಡೆಸಿ ತೋಟ ಮತ್ತು ಮಾಳಿಗೆ ಕೊಳ್ಳೆ ಹೊಡೆದು ಸುಟ್ಟರೆಂದಿದೆ.[೨೬೭] ಆಳರಸರ ಆಕ್ರಮಣಕಾರಿ ಪ್ರವೃತ್ತಿಯಿಂದಾಗಿ ತೋಟಗಳು ಬೆಂಕಿಗಾವುತಿಯಾಗುತ್ತಿದ್ದದು, ಇದರಿಂದ ಬೆಳೆಗಳು ಸುಟ್ಟು ಹೋಗುತ್ತಿದ್ದವು. ಹೊಸದಾಗಿ ತೋಟ ಮಾಡುವ ಅನಿವಾರ್ಯತೆ ಸೃಷ್ಠಿಯಾಗಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೦೮೭ ಶಾಸನದಲ್ಲಿ 'ಮಾಧುಫಲದ ಬಯಲುಂ'[೨೬೮] ಉಲ್ಲೇಖವಿದೆ. ಈ ಭಾಗದಲ್ಲಿ ಅಂದರೆ ಶಿವಮೊಗ್ಗ ಪರಿಸರದ ಭಾಗದಲ್ಲಿ ಭೂಮಿಯನ್ನು ಬಯಲು ಎಂದು ಕರೆಯುವುದು ಈ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೦೪೨ರ ಶಾಸನದಲ್ಲಿ ಗೋನನರಸನು ಮಾಡಿದ ತೋಟದ ಬಗೆಗೆ ಶಾಸನ ಹೀಗೆ ಹೇಳಿದೆ.

ಕಿತ್ತಳಿ ಕದಳೀ ನಾರಂಗಫಲಂ ಬೆಳಸಂ ಪೇಳ್ವಡೆ ಕರ್ಬ್ಬುಂ
ಕಳವೆಯು ಮೇಲೆಯಡಕೆ ತೆಂಗು ಮಾಉಫಲಂ ಮಾವ್ವಾ
ಮೇಳಸಿವು ಪೆರ್ಬ್ಬಳಡವಿಯ ಬೆಳಸು ಪಿರಿದು ಕೋಡಾನೆಗಳಾ
ಆರಿಸಿನ ಮುಮೇಲೆಯಕ್ಕಿಯುಮೆರಡುಂ
ಬಾಳಂಗಳೊಂದೆ ವಸ್ತುವನೇಕಂ ಪಿರಿದು ಬೆಳವುದಱಿಂದಂ

ರೆಂಬುದಣವಿಲ್ಲ ಸಾಂತಲಿಗೆ ಸಾಸಿರದೊಳ್॥ ಬೆಳವುದು
ಬೆಳ್ದಿಂದಡೆ ಬಳಿಕುಳಿದೆಡೆಯಂ ಪೊಗಳವೇಡ ಮಳೆಗಾಲದೊಳಾ
ಗಳು ಮುಳಿಯದು ಬೆಟ್ಟದ ಸರಿವಳೆಯದ ಪಸವಿನಾಡೊಳ್॥
ಕೇದಗೆ ಸಂಪಗೆ ನಾಗಂ ಹಾದರಿಯರ್ಗುಂತೆ
ಸುರಯಿ ವಕುಳ ಲವಂಗಂ ಜಾದಿ ಮೊದಲಾದನೇಕಂ
ಪೂದೋಂಟಂ ಸುರಭಿ ಪರಿಮಳಾಮೋದಂಗಳ್[೨೭೯]

ದೊಡ್ಡ ಕೋಡಿನ ಆನೆಗಳು ಅಡವಿಯ ಬೆಳಸುಗಳೆಂದು ಈ ಶಾಸನವು ಹೇಳಿದೆ. ಇದಕ್ಕೆ ಪಂಪಭಾರತದ ಒಂದು ಪದ್ಯದಲ್ಲಿ ಈ ರೀತಿ ಇದೆ "ಲಳಿತ ವಿಚಿತ್ರ ಪತ್ರ ಫಲ ಪುಷ್ಪಯುತಾಟವಿ ಸೊರ್ಕಿದಾನೆಯಂ ಬೆಳೆವುದು ದೇವಮಾತೃಕವೆನಿಪ್ಪ ಪೊಲಂ ನವಗಂಧಶಾಲಿಯಂ ಬೆಳೆವುದು......ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್[೨೮೦] ಎಂದು ಹೇಳಿದೆ. ಬೆದ್ದಲು ಭೂಮಿಯಲ್ಲಿ ಬೆಳೆಯುವ ಜೋಳ, ಹತ್ತಿ, ಹರಳು, ಸಾಸಿವೆ ಮೊದಲಾದ ಧಾನ್ಯಗಳು ಹೊಲದ ಬೆಳೆಗಳಾಗಿವೆ. ಇದು ಚಿಕ್ಕ ಧಾನ್ಯಗಳು. ಇವುಗಳಿಗೆ ಹಾಕುವ ತೆರಿಗೆ ಪ್ರಮಾಣ ಕಡಿಮೆ. ಇವುಗಳ ಬೆಳೆಯ ಸಮಯ, ಶ್ರಮ ಹಾಗೂ ವೆಚ್ಚ ಎಲ್ಲದರ ಪ್ರಮಾಣಗಳು ಕಡಿಮೆ ಇರುತ್ತವೆ. ಪಿರಿದು ಕೋಡಾನೆಗಳ್ ಎಂದು ಹೇಳಿರುವುದನ್ನು ಗಮನಿಸಿದರೆ, ತೋಟದ ಬೆಳೆಗಳಾದ ಕಿತ್ತಳಿ, ಕದಳೀ, ನಾರಂಗ, ಕಬ್ಬು, ಕಳವೆ, ಅಡಕೆ, ತೆಂಗು, ಮಾವು, ಮೆಳಸು ಈ ಬೆಳೆಗಳು ದೊಡ್ಡ ಗಾತ್ರದ ಬೆಳೆಗಳು. ಈ ಬೆಳೆಗಳು ಲಾಭದಾಯಕ, ಶ್ರಮದಾಯಕ, ವೆಚ್ಚದಾಯಕವೂ ಆಗಿರುತ್ತವೆ. ಇವುಗಳಿಂದ ರಾಜ್ಯದ ಬೊಕ್ಕಸಕ್ಕೆ ಬರುವ ಆದಾಯ ಆಹಾರ ಬೆಳೆಗಳಿಗಿಂತ ಅಧಿಕವಾಗಿರುತ್ತದೆ. 'ಪೆರ್ಬ್ಬುಳಡವಿಯ ಬೆಳಸು' ಎಂದು ಕರೆದಿರುವ ಸಾಧ್ಯತೆಗಳಿವೆ.

ಕೇದಗೆ, ಸಂಪಿಗೆ ನಾಗಂ, ಪಾದರಿ, ಸುರಯಿ, ವಕುಳ, ಲವಂಗ, ಜಾಜಿ ಅನೇಕ ಪರಿಮಳವಾದ ವಾಸನೆ ಭರಿತ ಹೂವಿನ ಉಲ್ಲೇಖಗಳನ್ನು ಈ ಶಾಸನವು ತಿಳಿಸುತ್ತದೆ. 'ಬಂದಳಿಕೆಯ ಕೋಡಿಮಠದ ಶಾಸನದಲ್ಲಿ ಸೋಮನಾಥ ದೇವರಿಗೆ ೨೦೦೦ ಮರನ ತೋಟದ ಸ್ತಳದೊಳಗೆ ಹೆಗ್ಗಡೆ ದೇಪಯ್ಯಂಗೆ ೫೦೦ ಮರನ ತೋಟ ಮಾವು ಕೊಳನ ಕೆಳಗೆ ೧೨ ಕಂಬ ಬೆಸು"[೨೮೧] ಎಂದಿದೆ. ಮಾವಿನ ಬೆಳೆಯು ಪ್ರಾಚೀನ ಕಾಲದಲ್ಲಿ ಆರ್ಥಿಕ ಬೆಳೆಯ ಒಂದು ಭಾಗವಾಗಿ, ಆಹಾರದ ಬೆಳೆಯಾಗಿ ಕಂಡುಬರುತ್ತದೆ. ಕ್ರಿ.ಶ. ಸು ೫೦೦೦ ಹಳೆಯದಾದ ವೇದಗಳಲ್ಲಿಯೇ ಹಣ್ಣುಗಳಾದ ಮಾವು, ಸೀಬೆ, ದ್ರಾಕ್ಷಿ, ಕಲ್ಲಂಗಡಿ, ಬಾಳೆ, ಬೋರೆ(ಬೊಗರಿ) ಮುಂತಾದ ಹಣ್ಣುಗಳನ್ನು ಉಲ್ಲೇಖಿಸಿದೆ.[೨೮೨] ಇಂದಿಗೂ ಹಣ್ಣಿನ ಬೆಳೆಗಳು ಲಾಭದಾಯಕ ಬೆಳೆಗಳಾಗಿಯೇ ಕಂಡುಬರುವುದನ್ನು ನಾವು ಕಾಣುತ್ತಿದ್ದೇವೆ. ಮಾವಿನ ತೋಪುಗಳೆಂದೇ ಮಾವಿನ ತೋಟಗಳಿಗೆ ಕರೆಯುವುದಿದೆ. ಶಾಸನಗಳು 'ಮಾವಿನಗದ್ದೆ' ಎಂದು ಕರೆದಿರುವುದನ್ನು ಗಮನಿಸಿದ್ದೇವೆ. ಇವುಗಳಿಗೂ ನೀರಿನ ಅಗತ್ಯತೆ ಇರುವುದರಿಂದ ಮಾವಿನಗದ್ದೆಗಳೆಂದು ಕರೆದಿರುವ ಸಾಧ್ಯತೆಗಳಿವೆ. ಪ್ರಾಚೀನ ಕಾಲದ ಜನರು ಮಾವು ಬೆಳೆಯನ್ನು ನೀರಾವರಿ ಭೂಮಿಯಲ್ಲಿ ಬೆಳೆದಿರುವುದು ತಿಳಿದುಬರುತ್ತದೆ.

ಕ್ರಿ.ಶ. ೧೫ನೆಯ ಶತಮಾನದ ಶಾಸನದಲ್ಲಿ ಹುಣಸೆಯ ತೋಟ೧, ತಾಳ್ಗತೋಟ ೧೮ ಉಲ್ಲೇಖವಿದೆ.[೨೮೩] ತಾಳ್ಗ ತೋಟವೆಂದರೆ ತಾಳೆತೋಟ. ಇದನ್ನು ತಾಳೆ ಎಣ್ಣೆಗೆ ಬಳುಸುವರು. ಎಳನೀರಿನಂತೆ ಕುಡಿಯಲು ಬಳಸುವುದು ಸಹ ಕಂಡುಬರುತ್ತದೆ. ಮಳೆ ಕಡಿಮೆ ಬೀಳುವ ಪ್ರದೇಶಗಳಲ್ಲಿ ಈ ತೋಟಗಳು ಕಂಡುಬರುವ ಸಾಧ್ಯತೆಗಳಿವೆ.

ಕ್ರಿ.ಶ. ೨ನೆಯ ಶತಮಾನದಲ್ಲಿ ಹಲಸಿಳೆ ಮಾವರ ಸತು ಕುಲರು ಸಪುಣ್ಯ ಸ್ವರೂಪಿಗಳು ನರರೆಲ್ಲಂ ಎಂದಿದೆ.[೨೮೪] 'ಕ್ರಿ.ಶ. ೧೦೬೯ರ ಶಾಸನದಲ್ಲಿ ನಾಗೇಶ್ವರ ದೇವರಿಗೆ ಬಿಟ್ಟ ಹೂದೋಂಟದ ಬಗೆಗೆ ಹೇಳಿದೆ. ಆ ತೋಂಟಮನಾರೋರ್ವ್ವರ್ಮ್ಮಾಡುವ ಮಾಲಗಾಱ ದೇವರ್ಗ್ಗೆ ನಡೆಯಿಸುವ ಕಣಗಿಲೆಯ ಗಿಡುವಿರ್ಪ್ಪತ್ತು ಮತ್ತಿನಪುಟ್ಟಿಜಾತಿಯೇನೊಂದಾದಗಿಡು ಜಾತಿಯೊಳಯ್ದು ದವನಂ ಮರುಗಿನ ಮಡಿಯೊಂದೊಂದಱಲಯ್ದು ಗುಣಿಗನ ಮತ್ತರ್ ೧[೨೮೫] ಎಂದಿದೆ. ದೇವರ ಪೂಜೆಗೆ ಅರ್ಪಿಸಬೇಕಾದ ಹೂವುಗಳ ಬಗೆಗೆ ಹೇಳಿದೆ. ಕಣಗಿಲೆ, ಮತ್ತಿಪುಟ್ಟಿಮರುಗಿನಮಡಿ ಹೂಗಳನ್ನು ನೀಡಬೇಕೆಂದಿದೆ.

ಕ್ರಿ.ಶ. ೧೧೬೨ರ ಶಾಸನದಲ್ಲಿ 'ಕೌಂಗಿನ ತೆಂಗಿನ ನಂದನಂಗಳ ಹಿಡಿಂಜೆಕೊಳದ' ಉಲ್ಲೇಖವಿದೆ.[೨೮೬] ಕ್ರಿ.ಶ ೧೧೯೯ರ ಶಾಸನದಲ್ಲಿ ತೋಪುಮಾಡಿಸಿದ್ದನ್ನು ಹೇಳಿದೆ.[೨೮೭] ಕ್ರಿ.ಶ. ೧೧೨೯ ಶಾಸನದಲ್ಲಿ 'ಸಾಲಮಾವಿನ ಗದ್ದೆ' ಉಲ್ಲೇಖವಿದೆ.[೨೮೮] ಕ್ರಿ.ಶ. ೧೧೩೯ರ ಶಾಸನದಲ್ಲಿ ತೋಟ ಕವುಂಗು ನಾಲ್ಕೂಱು ಮರ[೨೮೯] ಎಂದಿದೆ. ಕ್ರಿ.ಶ. ೧೨೦೭ರ ಶಾಸನದಲ್ಲಿ ಮಾವಿನಗದ್ದೆ ಉಲ್ಲೇಖವಿದೆ.[೨೯೦] ಕ್ರಿ.ಶ. ೧೨೨೦ರ ಶಾಸನದಲ್ಲಿ ಬೇಲದಮರ,[೨೯೧] ಹುಣಿಸೆಯ ಉಲ್ಲೇಖವಿದ್ದು ಇವು ಹುಳಿ ಜಾತಿಯ ಮರಗಳು. ಹುಳಿ ಹಣ್ಣುಗಳನ್ನು ಬಿಡುವಂತಹವುಗಳಾಗಿವೆ.

'ಆಹಾರೇತರ ಬೆಳೆಗಳಾದ ಶ್ರೀಗಂಧ, ತೇಗ, ಬಿದಿರಿನ ಮರ ಮುಂತಾದವುಗಳನ್ನು, ಅದರಲ್ಲೂ ವಿಶೇಷವಾಗಿ ಕರ್ನಾಟಕವು ಶ್ರೀಗಂಧ, ತೇಗ ಮತ್ತು ಕರಿಯ ಮರಗಳನ್ನು ಬೆಳೆಯಲು ಪ್ರಸಿದ್ಧಿ ಪಡೆದಿತ್ತು. ಇವುಗಳನ್ನು ಪಶ್ಚಿಮ ದೇಶಗಳಿಗೆ ಅಗಾಧವಾಗಿ ರಫ್ತು ಮಾಡಲಾಗುತ್ತಿತ್ತು"[೨೯೨] ಮೂರನೆಯ ಸೋಮೇಶ್ವರನು ತನ್ನ ಮಾನಸೋಲ್ಲಾಸ ತೃತೀಯ ವಿಶಂತಿಯಲ್ಲಿ ಮಾದಲಹಣ್ಣು, ಗಜನಿಂಬೆ, ಅಡಕೆ, ಅತ್ತಿಮರ, ಶ್ರೀಗಂಧ, ಪುನ್ನಾಗ ಕೇಸರ, ಕೇದಗೆ, ಮಲ್ಲಿಗೆ, ಹಸಿರು ಪಾದರಿಹೂ ಇವುಗಳನ್ನು ಸುಗಂಧ ಲೇಪನಗಳಿಗೆ ಬಳಸಬೇಕು ಎಂದಿದ್ದಾನೆ.[೨೯೩] ಅಲ್ಲದೆ ನಾಗಕೇಸರ(ನಾಗಸಂಪಿಗೆ), ಪುನ್ನಾಗ(ಸುರುಗಿ), ಪ್ರಿಯಂಗು, ಕುಂಕುಮ, ಸಂಪಗೆ ಹೂಗಳನ್ನು ಸೇರಿಸಿ ಮನೆಯಲ್ಲಿಡುವುದರಿಂದ ಸುಗಂಧ ಪರಿಮಳ ಬೀರುತ್ತೆ ಎಂದು ತಿಳಿಸಿದ್ದಾನೆ.[೨೯೪] ಹಾಗೆಯೇ ಬೈನಿ, ತಾರೆ, ಬೇವು, ಚಳ್ಳೆ ಮರಗಳನ್ನು ಮನೆಕಟ್ಟಲು ವರ್ಜಿಸಬೇಕು ಎಂದಿದ್ದಾನೆ.[೨೯೫] ಇದನ್ನು ಹಿಂದೆ ಕೌಟಿಲ್ಯ, ಚಾವುಂಡರಾಯರು ಹೇಳಿರುವುದು ಕಂಡುಬರುತ್ತದೆ.

**ವೀಳ್ಯೆದೆಲೆ**

ಈ ಬೆಳೆಯು ತೋಟಗಾರಿಕೆ ಬೆಳೆಯಾಗಿ ಕಂಡುಬರುತ್ತದೆ. ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ವ್ಯಾಪಕವಾಗಿ ಬೆಳೆದು ಬಂದ ತೋಟದ ಬೆಳೆಯಿದು. ಜನರ ಸಾಂಸ್ಕೃತಿಕ, ಧಾರ್ಮಿಕ ಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದ ಬೆಳೆಯಿದು. ಶುಭ ಕಾರ್ಯದಿಂದ ಮೊದಲುಗೊಂಡು ಅಶುಭ ಕಾರ್ಯಗಳಂತಹ ಶವ ಸಂಸ್ಕಾರದಲ್ಲಿಯೂ ಬಳಕೆಯಾಗುವುದು ಕಂಡುಬರುತ್ತದೆ. ಸರ್ವಜ್ಞ ವೀಳ್ಯೆದೆಲೆ ಕುರಿತು ಹೀಗೆ ಹೇಳುತ್ತಾನೆ.

ಎಲೆಮೆಲ್ಲದ ಬಾಯಿ ಹಲವನೋದದ ಬಾಯಿ
ಸಲೆ ನೀಲಕಂಠನ ನೆನೆಯದವನ ಬಾಯಿ
ಬಿಲದ ಬಾಯೆಂದ ಸರ್ವಜ್ಞ[೨೯೬]

ಮಾಧ್ಯಮಗಳಿಲ್ಲದ ಪ್ರಾಚೀನ ಕಾಲದಲ್ಲಿ ಊಟದ ನಂತರ ಜನರು ಮಾತುಗಾರಿಕೆಯ ವೇಳೆ ಬಾಯಲ್ಲಿ ಮೆಲ್ಲುವುದಕ್ಕೆ ವಿಳ್ಯೆದೆಲೆ ಬಳಕೆಯಾಗುತ್ತಿತ್ತು. ಇದು ಕಡಿಮೆ ಪ್ರಮಾಣದಲ್ಲಿ ಇಂದಿಗೂ

ಕಂಡುಬರುತ್ತದೆ. ಈ ಬೆಳೆಯನ್ನು ಸಾಮಾನ್ಯವಾಗಿ ಅಡಕೆ ತೋಟದೊಂದಿಗೆ ಅಡಕೆ ಮರಕ್ಕೆ ಹಬ್ಬಿಸಿ ಬೆಳೆಯಲಾಗುತ್ತಿತ್ತು. ಬೆಳೆಯುವುದರಿಂದ ಹಿಡಿದು ಮೆಲ್ಲಲು, ಶುಭಕಾರ್ಯಗಳಲ್ಲಿ ಬಳಸುವಾಗಲೂ ಈ ಎರಡು ಬೆಳೆಗಳು ಜೊತೆಗೂಡಿರುವುದನ್ನು ಕಾಣಬಹುದಾಗಿದೆ. ಪ್ರಾಚೀನ ತಮಿಳು ಕೃತಿಯಾದ 'ಸಿಲಪ್ಪಾದಿಗಾರಂ'ನಲ್ಲಿ ಉಮ್ಮಣರು ವೀಳ್ಯದೆಲೆಯನ್ನು ಮಾರುವವರು[೧೯೭] ಎಂದಿದೆ. ಇದನ್ನು ಗಮನಿಸಿದರೆ ಪ್ರಾಚೀನ ಕಾಲದಿಂದಲೇ ವೀಳೆದೆಲೆ ಆರ್ಥಿಕತೆಯ ಭಾಗವಾಗಿತ್ತೆಂಬುದು ತಿಳಿಯುತ್ತದೆ. ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ ಎಲೆಯ ಹೇಱಿಗೆ ಅಯ್ವತ್ತು ದಾನ ಬಿಟ್ಟಂತಿದೆ.[೧೯೮] ಕ್ರಿ.ಶ. ೮೮೭ರ ಶಾಸನವು ಪನ್ನಿರ್ಮತ್ತಲೆಱಿಲಿಯ್ಯೂಱ(೫೦೦) ಬಳ್ಳಿಯ ತೋಣ್ಟ'[೧೯೯] ಎಂದಿದೆ. ಕ್ರಿ.ಶ. ೯೬೯ರ ಶಾಸನದಲ್ಲಿ ಸಾವಿರ ಬಳ್ಳಿಯ ತೋಟ ೨ ಕಂಭಯ್ಯ ಮೊದಲಾದವರು ಬಿಟ್ಟರೆಂದಿದೆ.[೨೦೦] ಕ್ರಿ.ಶ. ೯೯೪ರ. ಶಾಸನದಲ್ಲಿ ಕಲ್ಲುಬಾವಿಯ ತೋಂಟವೊಂದು ಮೂಱುತೋಂಟಕ್ಕ ಮೂಱು ಮತ್ತರ್ಕ್ಕಿಸುಕಾಡಿಂಗಮರುವಣ ಮನಿತ್ತುಣ್ಬರ್ಪನ್ನೆರಡು ತೋಂಟಕ್ಕ ಕೊಯ್ಲಳ್ ಪೊಂಗೆ ಪತ್ತು ವೀಸವನುಣ್ಬರೂರೊಳೆನಿತು ತೋಂಟವನಿತರ್ಕ್ಕೆ ಪೊಂಗೆ ಬೆಳೆಯುಂ ಒಯ್ಲೊಳಯ್ನುರೆಲೆಯ ಉಣ್ಬರು ಎಂದು ಹೇಳುತ್ತದೆ.[೨೦೧] ಕ್ರಿ.ಶ. ೧೧೮೪ರ ಶಾಸನದಲ್ಲಿ ಅರಸಿಕೆರೆಯನ್ನು ತೆಂಕಣ ಅಯ್ಯಾವೊಳೆ ಎಂದು ಕರೆದಿದೆ. ಹಾಗೆಯೇ 'ವೀಳೆದೆಲೆ ಬೆಳೆಗಾರರ ವಣಿಕಸಂಘ'ವನ್ನು[೨೦೨] ಉಲ್ಲೇಖಿಸಿದೆ. ಅರಸೀಕೆರೆ ಪ್ರಾಚೀನ ಕಾಲದ ಸಂದರ್ಭದಲ್ಲಿ ರಾಜಧಾನಿಯಾಗಿದ್ದಿತು. ಜೊತೆಗೆ ವಾಣಿಜ್ಯ ವ್ಯವಹಾರಗಳ ಪ್ರಮುಖ ಕೇಂದ್ರವಾಗಿತ್ತು. ಈ ವೇಳೆಗೆ ವೀಳ್ಯೆದೆಲೆ ಪ್ರಮುಖ ಆರ್ಥಿಕತೆಯ ಭಾಗವಾಗಿತ್ತು.

ಕ್ರಿ.ಶ. ೧೧೭೫ರ ಶಾಸನದಲ್ಲಿ ಪಡಿಯಲೆಯ ವೀಳೆಯಕ್ಕ ಬಿಲ್ಕುಂಬಳಿಯ ತೋಟದಲು ಎಲೆಯ ಗುಳಿ ಇನೂಱು ಗುಳಿಯಂ....ಅನ್ತು ಇಂನೂಱಎಂಭತ್ತು ಗುಳಿಯ ಪನ್ನಾಯವಂ ಬಿಟ್ಟರು[೨೦೩] ಎಂದಿದೆ. ಎಲೆಯ ತೋಟಕ್ಕೆ ಕೊಡುವ ಪಂನಾಯದ ಸುಂಕವನ್ನು ಉಲ್ಲೇಖಿಸಿರುವುದು ಕಂಡುಬರುತ್ತದೆ.

ಕ್ರಿ.ಶ. ೧೧೭೬ರ ಶಾಸನದಲ್ಲಿ 'ಎಲೆ ಕೊಂಡಲಿ ೨೫ ಕೊಟ್ಟಲಿ ೨೫' ಎಂದಿದೆ.[೨೦೪] ಎಲೆಯು ರಾಜ್ಯದ ಆದಾಯದ ಪ್ರಮುಖ ಮೂಲವಾಗಿರುವ ಸಾಧ್ಯತೆಗಳಿವೆ. ಈ ಕಾರಣಕ್ಕಾಗಿ ಈ ಬೆಳೆಗೆ ಉಳಿದ ಬೆಳೆಗಳಿಗಿಂತ ಅಧಿಕ ಸುಂಕ ವಿಧಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೦೬ರ ಶಾಸನದಲ್ಲಿ 'ಎಲೆಯ ಹೇಱಿಂಗೆ ನೋಱಿಲೆಯುಂ' ಎಂದಿದೆ[೨೦೫] ಒಂದು ಎಲೆಯ ಹೇರಿಗೆ ನೂರು ಎಲೆಗಳನ್ನು ಸುಂಕ ಹಾಕಿದಂತೆ ಕಂಡುಬರುತ್ತದೆ.

ಕ್ರಿ.ಶ. ೧೨೦೨ರ ಶಾಸನದಲ್ಲಿ ಎಲೆಯ ಹೊಱಿ, ಎಲೆ ಹೇಱಿಂಗೆ ೧೦೦[೨೦೬] ಎಲೆಗೆ ಕೊಡುವ ಸುಂಕ ಕುರಿತು ಹೇಳಿದೆ. ಕ್ರಿ.ಶ. ೧೧೦೬ರ ಶಾಸನದಲ್ಲಿ ಪನ್ನಾಯದೆಲೆಯ ಹೇಱಿನ ವಡ್ಡರಾವುಳ ಹೆರ್ಜ್ಜುಂಕ ಹೇಱಿಂಗೆ ಪಣ ೫ ಕೆಱಿಗೆ ನಡವನ್ತಪ್ಪ ಕುಳಿಯ ಸುಂಕ ಎಲೆಯ ಹೇಱಿಂಗೆ ಹಾಗೆವೆರಡು ವೀಸವೊನ್ದು ವೀಳೆಯಕ್ಕೆ ದೇವರ ತೋಂಟದೆಲೆಯಡಕೆ ಸುಂಕಮಂ'[೨೦೭] ಎಂದಿದೆ. ಕೆರೆಗೆ ಕೊಡುವ ಸುಂಕದಲ್ಲಿ ಕೊಡಬೇಕಾದ ಎಲೆಯ ಸುಂಕದ ಕುರಿತು ತಿಳಿಸಿದೆ.

ಕ್ರಿ.ಶ. ೧೪ನೆಯ ಶತಮಾನದ ಶಾಸನದಲ್ಲಿ 'ಅಯ್ದಡಕೆ ಏಳೆಲೆಯಲಿ ವೊಂದು ವೀಳೆ'[೨೦೮] ಉಲ್ಲೇಖವಿದೆ. ಕ್ರಿ.ಶ. ೧೧೪೩ರ ಶಾಸನದಲ್ಲಿ ಎಲೆಯ ಹೇಱಿಂಗೆ ಎಲೆ ೧೦೦[೨೦೯] ಉಲ್ಲೇಖವಿದೆ. ಕ್ರಿ.ಶ. ೧೧೮೧ರ ಶಾಸನದಲ್ಲಿ ಎಲೆಯ ಹೇರಿಂಗೆಯ ಉಲ್ಲೇಖವಿದೆ.[೨೧೦] ಗಾರೆ ಹಟ್ಟಿಯ ಶಾಸನವೊಂದರಲ್ಲಿ ಎಲೆಯ ಹೇಱಿಂಗೆ ಎಲೆ ೧೦೦ಅಡಕೆಯ ಹೇಱಿಂಗೆ ಅಡಕೆ ೩೦[೨೧೧] ಉಲ್ಲೇಖವಿದೆ. ಆದರೆ ಈ ಭಾಗದಲ್ಲಿ ಸಂಪೂರ್ಣವಾಗಿ ಇಂದು ಅಡಕೆ ಮತ್ತು ಎಲೆ ಎರಡನ್ನು

ನೋಡಲು ಸಾಧ್ಯವಿಲ್ಲ. ಕ್ರಿ.ಶ. ೧೨೦೭ರ ಶಾಸನದಲ್ಲಿ 'ಎಲೆಯ ಸಾಸಿರ್ವರು ಹೇರಿಗೆ ೧೦೦ ಎಲೆಯನ್ನು'[೩೧೨] ದಾನ ನೀಡಿದ್ದನ್ನು ಹೇಳುತ್ತದೆ. ಗುಂಜಗನೂರು ಶಾಸನವು 'ಅಯ್ನೂರು ಕೊಂಗೆಲೆವಳ್ಳಿ ತೋಟ'[೩೧೩] ಅನ್ನು ಉಲ್ಲೇಖಿಸಿದೆ. ಕ್ರಿ.ಶ. ೧೦೭೧ರ ಶಾಸನದಲ್ಲಿ ಗಾತ್ರಿಗರು ಎಲೆಯ ಹೇಜಿಂಗೆ ೨೦೦ ಎಲೆಯನ್ನು ದಾನ ನೀಡಿದ್ದನ್ನು ಹೇಳಿದೆ.[೩೧೪] ಗಾತ್ರಿಗರು ಈ ಶಾಸನದಲ್ಲಿ ಯಾರೆಂಬುದು ತಿಳಿಯದು. ಇವರು ದಾನ ಬಿಟ್ಟದ್ದನ್ನು ಶಾಸನವು ಹೇಳಿದೆ. ವಿಷ್ಣುವರ್ಧನನ ಶಾಸನವೊಂದರಲ್ಲಿ ನಾಲ್ಕು ಸಾವಿರ ಬಳ್ಳಿಯ ತೋಟದ[೩೧೫] ಉಲ್ಲೇಖವಿದೆ.

ಹೊಯ್ಸಳರ ಕಾಲಕ್ಕೆ ಎಲೆ ತೋಟದ ಬೆಳೆಗಳು ದ್ವಿಗುಣಗೊಳ್ಳುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಕಾರಣ ಇವರ ಕಾಲದಲ್ಲಿ ಸಾಕಷ್ಟು ನೀರಾವರಿ ಅಭಿವೃದ್ಧಿಯನ್ನು ಸಾಧಿಸಿತು. ನೀರಾವರಿಗೆ ಹೆಚ್ಚಿನ ಗಮನ ಹರಿಸಿದ ಕಾರಣಕ್ಕಾಗಿ ಬೆಳೆಗಳ ಉತ್ಪನ್ನ ಗಣನೀಯವಾಗಿ ಏರಿಕೆಗೊಂಡಿತು. ಕ್ರಿ.ಶ. ೧೨೦೩ರ ಶಾಸನದಲ್ಲಿ ೩೦ ಎಲೆಯ ಹೇಜೆಂಗೆ ಕೊಟ್ರಯನು ೨೦೦ ಹೊಜೆಗೆ ೧೦೦[೩೧೬] ಎಂದು ಉಲ್ಲೇಖಿಸಿದೆ. ಈ ಪ್ರದೇಶಗಳಲ್ಲೂ ಎಲೆಬಳ್ಳಿ ಸಂಪೂರ್ಣವಾಗಿ ಕಣ್ಮರೆಯಾಗಿರುವುದು ಕಂಡುಬರುತ್ತದೆ. ಶಾಸನವೊಂದರಲ್ಲಿ ಮಹಾಲಕ್ಷ್ಮೀದೇವಿಯ ವೀಳೆಯಕ್ಕೆ ೨೫ ಒಕ್ಕಲು ಹುಡುಕೆದೆಜೆಯ ಪನ್ನಾಯವಂ[೩೧೭] ಬಿಟ್ಟರೆಂದಿದೆ. ದೇವಿಗೆ ವೀಳೆದೆಲೆಯನ್ನು ವಿನಿಯೋಗಿಸುತ್ತಿದ್ದರೆಂದು ತಿಳಿಸುತ್ತದೆ. ಕ್ರಿ.ಶ. ೧೦೬೬ರ ಶಾಸನದಲ್ಲಿ ಪಿರಿಯ ತುಂಬಿನ ಮೊದಲ ತೋಂಟದ ಬಳ್ಳಿ ೪೦೦[೩೧೮] ಎಂದಿದೆ. ಮೊದಲೆ ತಿಳಿಸಿದಂತೆ ಎಲೆ ಬಳ್ಳಿಯು ನೀರಾವರಿ ಆಶ್ರಿತ ಬೆಳೆಯಾಗಿದ್ದು, ನೀರಾವರಿ ಆಕರಗಳ ಸಮೀಪದಲ್ಲಿ ಬೆಳೆಯತ್ತದೆ ಎಂಬುದನ್ನು ಇಲ್ಲಿ ತಿಳಿಸಲಾಗಿದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ರಾಮೇಶ್ವರ ದೇವರ 'ನೈವೇದ್ಯ ಪೂಜೆಗೆ ಶ್ರೀಗಂಧ, ವೀಳೆಯ'[೩೧೯] ಎಂದಿದೆ. ವೀಳೆದೆಲೆಯನ್ನು ದೇವರ ಪೂಜಾ ಕಾರ್ಯಗಳಿಗೆ ಬಳಸಿರುವುದನ್ನು ಶಾಸನವು ತಿಳಿಸುತ್ತದೆ.

ಕ್ರಿ.ಶ. ೧೧೮೫ರ ಶಾಸನದಲ್ಲಿ 'ಎಲೆಗೇಣಿ'[೩೨೦] ಉಲ್ಲೇಖವಿದೆ. ಎಲೆ ತೋಟವನ್ನು ಕೇಣಿ ಕೊಟ್ಟಿರುವುದನ್ನು ಶಾಸನವು ತಿಳಿಸುತ್ತದೆ. ಕ್ರಿ.ಶ. ೧೦೨೮ರ ಶಾಸನದಲ್ಲಿ ಎಲೆಯ ತೋಂಟದೊಳೊನ್ದು ಬಳ್ಳಿಯಿಂ ಅಡಕೆತೋಂಟದೊಳೊನ್ದು ಮರನುಮಂ ದೇವ ದೇವಿಗೆಗೊಕ್ಕಲಲೊನ್ದು' ಬಿಟ್ಟರು[೩೨೧] ಎಂದಿದೆ. ಕ್ರಿ.ಶ. ೧೦೭೧ರ ಶಾಸನದಲ್ಲಿ ಎಲೆವಳ್ಳದಿಂ ಮೂಡಲು 'ಪನ್ನಿರ್ಮ್ಮತ್ತರ್ಕ್ಕಯ್ಯ ಅಯ್ನೂರು ಬಳ್ಳಿಯ ತೋಂಟ'[೩೨೨] ದ ಉಲ್ಲೇಖವಿದೆ.

ಪ್ರಾಚೀನ ಕಾಲದಿಂದ ಇಂದಿನ ಕಾಲಘಟ್ಟದವರೆಗೂ ವೀಳೆದೆಲೆಯು ಸಾಂಸ್ಕೃತಿಕ, ಧಾರ್ಮಿಕವಾಗಿ ಮಾನವರ ಜೀವನದಲ್ಲಿ ಹಾಸುಹೊಕ್ಕಾಗಿ ಗುರುತಿಸಿಕೊಂಡಿದೆ. ಇದು ಬಳ್ಳಿ ಜಾತಿಯಲ್ಲಿ ಕಂಡುಬರುತ್ತದೆ. ನೀರಾವರಿ ಆಶ್ರಿತ ತೋಟದ ಬೆಳೆಯಾಗಿದೆ. ವರ್ಷ ಪೂರ್ತಿ ಇರುತ್ತದೆ. ಆದರೆ ಚಳಿಗಾಲದಲ್ಲಿ ಈ ಬಳ್ಳಿಯನ್ನು ಕತ್ತರಿಸಲಾಗುತ್ತದೆ. ಮತ್ತೆ ಅದು ಹೊಸದಾಗಿ ಚಿಗುರಲಾರಂಭಿಸುತ್ತದೆ. ಎಲೆಯನ್ನು ಶಾಸನಗಳು ಮೇಲೆ ತಿಳಿಸಿದಂತೆ ದೇವರ ಅಷ್ಟವಿಧ ಅರ್ಚನೆಗೆ, ತಾಂಬೂಲಗಳಿಗೆ, ಶುಭ ಸಮಾರಂಭಗಳಾದ ವಿವಾಹ, ಮುಂಜಿ ಇನ್ನಿತರ ಸಮಾರಂಭಗಳಿಂದ ಹಿಡಿದು ಮಾನವ ಜೀವನದ ಕೊನೆಯ ಸಂಸ್ಕಾರವಾದ ಶವ ಸಂಸ್ಕಾರಕ್ಕೂ ವೀಳೆದೆಲೆ ಬಳಕೆಯಾಗುತ್ತದೆ. 'ತಾಂಬೂಲಂ ಪ್ರಿಯ ಮುತ್ತಯಂ' ಎಂದು 'ವೀಳೆವಿಲ್ಲದ ಬಾಯಿ ಇಲಿಯ ಗುದ್ದಿನ ಹಾಗೆ'[೩೨೩] ಎಂಬ ಮಾತುಗಳು ವೀಳೆದೆಲೆಯ ಮಹತ್ವವನ್ನು ತಿಳಿಸುತ್ತವೆ. ಘನಮಠದ ಶಿವಯೋಗಿಗಳು ಇದರ ಕೃಷಿಯ ಬಗೆಗೆ ಹೀಗೆ ಹೇಳಿದ್ದಾರೆ. "ಮೊದಲು ಸಡೇದಗಿಡಗಳನ್ನು ಹಾಲಿವಾಣ, ಚೊಗಚೆ, ಅಡಕೆಮರ, ಬುರುಗ, ಮರಗಳ ಬುಡದಲ್ಲಿ ಲೊಡ್ಡಿಯ ಸಮೀಪದಲ್ಲಿ ಒಂದು

ಮೊಳ ಅಜಮಾಸು ಬಿಟ್ಟು ಗೇಣು, ನಾಲ್ಕು ಬೆರಳು ಅಗಲ ಗುದ್ದು ಮೊಳ ಅಂದರೆ ಗೇಣು ಎಂಟು ಬೆರಳು' ಅಜಮಾಸು ತಗ್ಗು ಇಟ್ಟು ಎಲ್ಲ ಗಿಡಗಳ ಬೊಡ್ಡೆಯಲ್ಲಿ ಪ್ರತಿಮಡಿ ಮಡಿಗಳಲ್ಲಿ ಈ ಪ್ರಕಾರ ತಗ್ಗುಗಳನ್ನು ತೆಗೆದು ಆ ಬೀಜದ ಬಳ್ಳಿಯನ್ನು ತಂದು ಮೊಳಮೊಳದ ತುಂಡುಮಾಡಿ ಮಲ್ಲಿಗೆ ಹಂಚಿನ ಹಾಗೆ ಸಿಂಬೆಯನ್ನು ಸುತ್ತಿ ಆ ಸಿಂಬೆಗಳನ್ನು ತಗ್ಗಿನಲ್ಲಿ ಇಟ್ಟು ಅದರ ಮೇಲೆ ಕೆಮ್ಮಣ್ಣು, ಕುರಿಯ ಗೊಬ್ಬರವನ್ನು ಕೂಡಿಸಿ, ಕಲಸಿ, ಸಣ್ಣ ಬೆಳವಲಕಾಯಿ, ಸಿಂಬೀಕಾಯಿ ಪ್ರಮಾಣ ಉಂಡಿಗಳನ್ನು ಕಟ್ಟಿ ನಾಲ್ಕಾರು ಬೆರಳು ಪ್ರಮಾಣ ಆ ಉಂಡಿಗಳನ್ನು ತಗ್ಗಿನಲ್ಲಿರುವ ಎಲೆಯ ಬಳ್ಳಿಯ ಸಿಂಬಿಯ ಮೇಲೆ ಹೌರಗೆ ಇಟ್ಟು ಅನವರತು ದಿವಸಗಳಲ್ಲಿ ಕುಡಿಗಳಾಗಿ ತಿಂಗಳಷ್ಟಕ್ಕೆ ಕುಡಿಸಾಗಿ ಬರುತ್ತದೆ'.[೩೪]

ಅಡಕೆ ತೋಟದಲ್ಲಿ ವೀಳೆ ಬೆಳೆಯುವುದರಿಂದ ಬಹು ಬೆಳೆ ಬೆಳೆದಂತಾಗುತ್ತದೆ. ಅಡಕೆ ಬೆಳೆಯು ವರ್ಷಕ್ಕೊಂದು ಬೆಳೆ. ಆದಾಯ ಕಾಣಲು ವರ್ಷ ಕಾಯಬೇಕು. ಆದರೆ ಇದು ಪ್ರತಿವಾರಕ್ಕೊಮ್ಮೆ ಆದಾಯ ನೀಡುತ್ತದೆ. ಮನೆಯ ಖರ್ಚು ಮತ್ತು ನಿರ್ವಹಣೆಗೆ ಸಹಾಯವಾಗಿ ಹಣಕಾಸಿನ ಮಿಗುತಾಯವಾಗುತ್ತದೆ. ಶಾಸನಗಳು ಉಲ್ಲೇಖಿಸುವಂತೆ ಎಲೆಗೆ ಹಾಕಿರುವ ತೆರಿಗೆಗಳು ಮತ್ತಾವ ಬೆಳೆಗೂ ಅಷ್ಟು ಪ್ರಮಾಣದಲ್ಲಿ ಹಾಕಿರುವುದು ಕಂಡುಬರುವುದಿಲ್ಲ. ಇದನ್ನು ಮನನಿಸಿದರೆ ಎಲೆಯ ಮಹತ್ವ ಎಷ್ಟಿತ್ತೆಂಬುದು ತಿಳಿಯುತ್ತದೆ. ಪ್ರಾಚೀನ ಕಾಲದ ಪ್ರಮುಖ ಆರ್ಥಿಕ ಬೆಳೆಯಾಗಿ ಇದು ಕಂಡುಬರುತ್ತದೆ. ಇದರ ಬೆಳೆ ಮುಂಗಾರು ಮಳೆ ಮುಗಿಯುವ ಹೊತ್ತಿಗೆ ಅಂದರೆ ಆಗಸ್ಟ್ ತಿಂಗಳಿನಲ್ಲಿ ಅಧಿಕ ಬೆಳೆ ಬರುತ್ತದೆ. ಆದ್ದರಿಂದಲೇ ಜನಪದರು ಹೀಗೆ ಹೇಳುತ್ತಾರೆ. "ಕಾರಬ್ಬಕ್ಕೆ ಕಾಲೇವಿಗಾಕು" ಈ ಅವಧಿಯಲ್ಲಿ ಯಥೇಚ್ಛ ಬೆಳೆ ಬರುವುದರಿಂದ ಈ ರೀತಿ ಹೇಳಿರುವುದು ಕಂಡುಬಂದಿದೆ. ಶಾಸನಗಳಲ್ಲಿ ಉಲ್ಲೇಖವಾದಂತೆ ಎಲೆಯನ್ನು ಸಂತೆಗಳಲ್ಲಿ ಮಾರಾಟ ಮಾಡಲಾಗುತ್ತಿತ್ತು. ಮನುಷ್ಯರು ಹೊತ್ತು ತಂದ ಹೊರಗೆ, ಬಂಡಿಯಲ್ಲಿ ತಂದ ಎಲೆಗಳಿಗೆ ತೆರಿಗೆಗಳು ಭಿನ್ನವಾಗಿರುತ್ತಿದ್ದವು. ಕಟ್ಟು, ಕವಳಿಗೆಯಂತೆ ಮಾರಾಟ ಮಾಡುತ್ತಿದ್ದರು. ನೂರೆಲೆ ಕಟ್ಟು, ಅರವತ್ತೆಲೆ ಕವಳಿಗೆಯಂತೆ ಮಾರಾಟ ಮಾಡುತ್ತಿದ್ದರು. ಆರಂಭದಿಂದ ಕಂಡುಬಂದ ಈ ಬೆಳೆಯು ಹೊಯ್ಸಳರ ಕಾಲಕ್ಕೆ ದಿಢೀರನೆ ಹೆಚ್ಚಾದುದ ಕಂಡುಬರುತ್ತದೆ. ಇದಕ್ಕೆ ಕಾರಣ ಏನು ಎಂಬುದನ್ನು ಗಮನಿಸಿದರೆ, ಈ ಆಳರಸರು ಸಾಧಿಸಿದ ನೀರಾವರಿ ಅಭಿವೃದ್ಧಿಯು ಕಾರಣವಾಯಿತು ಎಂಬುದು ತಿಳಿದುಬರುತ್ತದೆ.

**೨.೧.೩. ವಾಣಿಜ್ಯ ಬೆಳೆಗಳು**

ವಾಣಿಜ್ಯ ಬೆಳೆಗಳು ವ್ಯವಹಾರಿಕ ಸಾಧನಗಳಾಗಿ ಬಳಕೆಗೊಳ್ಳುತ್ತವೆ. ಇವುಗಳಲ್ಲಿ ಆಹಾರ ಬೆಳೆಗಳು, ತೋಟಗಾರಿಕಾ ಬೆಳೆಗಳನ್ನೂ ಸಹ ಒಳಗೊಂಡಿರುತ್ತವೆ. ಈ ಬೆಳೆಗಳನ್ನು ಆರ್ಥಿಕ ಲಾಭಗಳಿಕೆಯ ಮೂಲಿಕೆಗಳಾಗಿ ಬೆಳೆಯಲಾಗುತ್ತದೆ. ಈ ಬೆಳೆಗಳು ಪ್ರಾಚೀನ ಕಾಲದಿಂದ ಇಂದಿನವರೆಗೂ ಬೇರೆ ದೇಶ, ರಾಜ್ಯಗಳಿಗೆ ರಫ್ತು ಮತ್ತು ಆಮದು ಸರಕು ಸಾಧನಗಳಾಗಿವೆ. ಇದರಲ್ಲಿ ಪ್ರಮುಖವಾಗಿ ಹತ್ತಿ, ಸಾಂಬಾರು ಪದಾರ್ಥಗಳು ಎಣ್ಣೆ ಪದಾರ್ಥಗಳನ್ನು ಒಳಗೊಂಡಿರುತ್ತದೆ. ಆಹಾರ ಬೆಳೆಗಳಿಗಿಂತ ಈ ಬೆಳೆಗಳಿಗೆ ಪ್ರಾಚೀನ ಕಾಲದಿಂದ ಇಂದಿನವರೆಗೂ ರಾಜ್ಯದ ಬೊಕ್ಕಸಕ್ಕೆ ಅಧಿಕ ಆದಾಯ ಸಂದಾಯವಾಗುತ್ತಿದೆ.

**ಹತ್ತಿ**

ಈ ಬೆಳೆಯನ್ನು ಪ್ರಮುಖವಾಗಿ ಹತ್ತಿಬಟ್ಟೆ ತಯಾರಿಕೆಗಾಗಿ ಬೆಳೆಯಲಾಗುತ್ತದೆ. ಅಲ್ಲದೆ ದೀಪಗಳಿಗೆ ಬಳಕೆಯಾಗುತ್ತದೆ. ಆದರೆ ಅಧಿಕ ಪ್ರಮಾಣದ ಹತ್ತಿಯಲ್ಲ. ಅಲ್ಪ ಪ್ರಮಾಣದ ಹತ್ತಿಯನ್ನು

ದೀಪಗಳಿಗೆ, ಧಾರ್ಮಿಕ ಕಾರ್ಯಗಳಿಗೆ ಬಳಕೆಮಾಡಿಕೊಳ್ಳಲಾಗುತ್ತದೆ. ಹತ್ತಿಗೆ ಸಂಸ್ಕೃತದಲ್ಲಿ ಕಾರ್ಪಾಸ ಇಂಗ್ಲೀಷಿನಲ್ಲಿ ಕಾಟನ್ ಎಂದು ಕರೆಯಲಾಗುತ್ತದೆ. "ಎರಾತೋಸ್ಥನೆಸ್ ಮತ್ತು ಅರ್ಥಶಾಸ್ತ್ರಗಳ ಪ್ರಕಾರ ಹತ್ತಿ ಒಂದು ಬೆಳೆ ಎಂದು ಗುರುತಿಸಲಾಗಿಲ್ಲ. ಪಾಣಿನಿಯಲ್ಲಿ ಇದರ ಪ್ರಸ್ತಾಪವೇ ಇಲ್ಲ. ನಾರಗಸೆ ಮತ್ತು ಸೆಣಬು ಎರಡು ಪಾಣಿನಿಯ ಕೃತಿಯಲ್ಲಿ ಕಾಣುತ್ತೇವೆ. ಅಲೆಗ್ಸಾಂಡರ್‌ನ ಸೇನಾನಿ ನಿಯಾರ್ಕಸ್ ಹತ್ತಿಯು ಗಿಡಗಳಿಂದ ಕೀಳುವಂಥವಾಗಿದ್ದು, ವರ್ಷದ ಅಂತ್ಯದಲ್ಲಿ ತೆಗೆಯುವ ಬೆಳೆಗಿಂತ ಭಿನ್ನ. ಹತ್ತಿಯ ಗಿಡಗಳನ್ನು ದ್ರಾಕ್ಷಿಯ ರೀತಿಯಲ್ಲಿ ಸಾಲು ಸಾಲುಗಳಲ್ಲಿ ಬೆಳೆಸಲಾಗುತ್ತದೆ ಎಂದಿದ್ದಾರೆ. ಇವನ ಆಧಾರದ ಮೇಲೆ ಥಿಯೋ ಪ್ರಾಸ್ಟಸ್ ಕ್ರಿ.ಪೂ ೩೦೦ರಲ್ಲಿ ಹತ್ತಿಯ ಬಳಕೆ ಸಾಕಷ್ಟು ಅಭಿವೃದ್ಧಿಗೊಂಡಿತ್ತು ಎಂದಿದ್ದಾನೆ.[೩೨೫] ಈತನೂ ಅಲೆಗ್ಸಾಂಡರ್‌ನ ಅನುಯಾಯಿಯಾಗಿದ್ದು ಹತ್ತಿಯು ಅವನು ಹೇಳಿದಂತೆ ಅಭಿವೃದ್ಧಿ ಸಾಧಿಸಿತ್ತು ಎಂದ ಮೇಲೆ ಅವನ ನಂತರದಲ್ಲೂ ಇದು ಜಾರಿಯಲ್ಲಿತ್ತು ಎಂದು ಸೂಚಿಸುತ್ತದೆ.

ಪಾಣಿನಿಯು 'ನೀಲಿಯ' ಬಗೆಗೆ ಪ್ರಸ್ತಾಪಿಸಿದ್ದಾನೆ. ಪಾಣಿನಿಗೆ ವ್ಯಾಖ್ಯಾನ ಬರೆದ ಕಾತ್ಯಾಯನನ್ನು ಕ್ರಿ.ಪೂ ೨೫೦ರಲ್ಲಿ ನೀಲಿ ಬೆಳೆದುದರ ಬಗೆಗೆ ಹೇಳಿದ್ದಾನೆ.[೩೨೬] ಇದು ಒಂದು ಬಗೆಯ ಬಣ್ಣವಾಗಿ ಕಂಡುಬರುತ್ತದೆ. 'ದಖನ್ನಿನಲ್ಲಿ ಹತ್ತಿಯನ್ನು ಬೆಳೆಯುತ್ತಿದ್ದರು. ಆಂಧ್ರವು ಹತ್ತಿಯ ಬಟ್ಟೆಗಳನ್ನು ತಯಾರಿಸುವಲ್ಲಿ ಪ್ರಸಿದ್ಧವಾಗಿತ್ತೆಂಬುದನ್ನು ಕಥನಗಳು ಹೇಳುತ್ತವೆ.[೩೨೭] 'ಪಾಲಿ ಗ್ರಂಥದಲ್ಲಿ ನಾರಿನ ಪದಾರ್ಥಗಳ ಪೈಕಿ ಕಪ್ಪಾಸ ಅಥವಾ ತೂಲ, ಅಂದರೆ ಹತ್ತಿ, ಖೊಮ ಅಥವಾ ಅಗಸೆ ಮತ್ತು ಭಂಗ, ಸೆಣಬು ಮುಖ್ಯವಾದವು. ಮಞ್ಜಿಟ(ಹಳದಿ ಹೂ ಬಿಡುವ ಬಳ್ಳಿ), ನೀಲಿ(ನೀಲವರ್ಣದ ರಂಗು)ಗಳನ್ನು ಬೆಳೆಯುತ್ತಿದ್ದರು.[೩೨೮] ವಿವಿಧ ಸಸ್ಯಗಳ ಬೇರುಗಳಿಂದ ಬಣ್ಣವನ್ನು ತಯಾರಿಸಲಾಗುತ್ತಿತ್ತು. ಅದರಲ್ಲಿ ನೀಲಿ ಮತ್ತು ಹಳದಿ ರಂಗುಗಳನ್ನು ಇಲ್ಲಿ ಹೆಸರಿಸಲಾಗಿದೆ. ಇವುಗಳನ್ನು ಹತ್ತಿ ಬಟ್ಟೆಗಳಿಗೆ ಮಿಶ್ರಣ ಮಾಡಿ ಬಣ್ಣದ ಬಟ್ಟೆ ತಯಾರಿಸಿದಂತೆ ಕಂಡುಬರುತ್ತದೆ. ಶಾತವಾಹನರ ಕಾಲದಲ್ಲಿ ನೀಲಿಯನ್ನು ಬೆಳೆದು ರಫ್ತು ಮಾಡಲಾಗುತ್ತಿತ್ತು ಎಂದು ತಿಳಿದುಬರುತ್ತದೆ.

ಭಗವತೀ ಗ್ರಂಥವೊಂದು ನಾರಿನ ಪದಾರ್ಥಗಳಾದ ಸೆಣಬು, ಬಿದಿರು(ಚವಾವಂಗಳು, ವೇಣು, ಕನಕ, ಕಂಕವಂಸ ವಾರುವಂಸ[೩೨೯] ಇತ್ಯಾದಿಗಳನ್ನು ಉಲ್ಲೇಖಿಸಿದೆ. 'ಚಲುಕ್ಯ ಶಿಲ್ಪಗಳಲ್ಲಿ ಹತ್ತಿಯಿಂದ ತಯಾರಾದ ಬಟ್ಟೆಗಳನ್ನು ತೋರಿಸಲಾಗಿದೆ.[೩೩೦] ಆದರೆ ಬದಾಮಿ ಚಾಲುಕ್ಯರ ಶಾಸನಗಳಲ್ಲಿ ಹತ್ತಿ ಬೆಳೆಯ ಉಲ್ಲೇಖ ದೊರೆಯದು. ಶಿಲ್ಪದ ಮೇಲೆ ತೋರಿಸಿರುವ ಆಧಾರದ ಮೇಲೆ ಹತ್ತಿ ಬೆಳೆಯು ಯಥೇಚ್ಛವಾಗಿತ್ತು. ಅದರಿಂದ ಬಟ್ಟೆ ತಯಾರಿಕೆಯ ಕಾರ್ಯಗಳು ಅಭಿವೃದ್ಧಿ ಹೊಂದಿದವು ಎಂಬುದು ತಿಳಿದುಬರುತ್ತದೆ. ಕ್ರಿ.ಶ ೧೧೮೧ರ ಶಾಸನದಲ್ಲಿ ಹತ್ತಿಯ ಮಳವೆಗೆ ಹಾಗ ೧ ಸೀರೆಯ ಮಳವೆಗೆ ಹೊಂಗೆ ವೀಸ೧[೩೩೧]ರ ಉಲ್ಲೇಖವಿದೆ. ಕ್ರಿ.ಶ ೧೦೪೧ರ ಶಾಸನದಲ್ಲಿ ಹತ್ತಿಯ ಮಳವೆಯಲು ವೀಸ ಸೀರೆಯ ಮಳವೆ'[೩೩೨]ಯ ಉಲ್ಲೇಖವಿದೆ. ಕ್ರಿ.ಶ. ೧೧೬೧ರ ಶಾಸನದಲ್ಲಿ ತೋಟವೊನ್ನು ಹೂದೋಟವೊನ್ನು ದೇಸಿಗನ ಕರವುಂ ಮಳವೆಗೆ ವಿ೨ ಹತ್ತಿ ಹಂಜಿನೂಲ ಮಳವೆಗೆ ವೀಸ[೩೩೩]ಗಳ ಉಲ್ಲೇಖವಿದೆ. ಹತ್ತಿಯಿಂದ ನೂಲು ತಯಾರಿಸಲಾಗುತ್ತಿತ್ತು ಎಂಬುದು ಇದರಿಂದ ತಿಳಿದುಬರುತ್ತದೆ. ಕ್ರಿ.ಶ. ೧೨೦೨ರ ಶಾಸನದಲ್ಲಿ 'ಹತ್ತಿ ತೋಂಟಗೆಯ್ಯಿ೧'ರ ಉಲ್ಲೇಖವಿದೆ.[೩೩೪] ಕ್ರಿ.ಶ. ೧೧೯೯ರ ಶಾಸನದಲ್ಲಿ ಹತ್ತಿ ಯೆರೆಯ ಉಲ್ಲೇಖವಿದೆ.[೩೩೫] ಹತ್ತಿಯೆರೆ ಎಂದರೆ ಹತ್ತಿ ಬೆಳೆಯುವ ಭೂಮಿಯನ್ನು ಉಲ್ಲೇಖಿಸಿದೆ. ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಹತ್ತಿಯ ಹಾಳಿ[೩೩೬]ಯ ಉಲ್ಲೇಖವಿದೆ. ಕ್ರಿ.ಶ. ೧೨೬೭ರ ಶಾಸನದಲ್ಲಿ ಹತ್ತಿ ಹೇಜು[೩೩೭] ಕ್ರಿ.ಶ. ೧೧೨೫ರ ಶಾಸನದಲ್ಲಿ ಸೀರೆ ಮಳವೆ, ನೀಲಿಯಕೊಡ ವಸ್ತುಗಳ ಮೇಲೆ ದಸವಂದ ತೆರಿಗೆ ಹಾಕಿದಂತೆ ಹೇಳಿದೆ.[೩೩೮] ೩ನೇ ಸೋಮೇಶ್ವರನು ತನ್ನ ಕೃತಿ ಮಾನಸೋಲ್ಲಾಸದಲ್ಲಿ ರೇಶಿಮ ಮತ್ತು ಹತ್ತಿ ಬಟ್ಟೆಯನ್ನು ಜನರು

ಧರಿಸಬೇಕು ಎಂದಿದ್ದಾನೆ.[೩೩೯] ಕ್ರಿ.ಶ. ೧೨೮೪ರ ಶಾಸನದಲ್ಲಿ 'ಸೀಗೆಕಾಯಿ'[೩೪೦] ಉಲ್ಲೇಖವಿದೆ. ಕ್ರಿ.ಶ. ನುಗ್ಗೇನಹಳ್ಳಿಯ ಶಾಸನವೊಂದರಲ್ಲಿ ಬತ್ತಿಗೆ ಹತ್ತಿ, ನೂಲು, ಸೀರೆ, ಸುಗಂಧ, ಶ್ರೀಗಂಧಗಳ[೩೪೧] ಉಲ್ಲೇಖವಿದೆ.

ಕ್ರಿ.ಶ. ೧೨೪೮ರ ಶಾಸನದಲ್ಲಿ 'ಹತ್ತಿ'[೩೪೨] ಉಲ್ಲೇಖವಿದೆ. ಕರ್ನಾಟಕವು ಅತಿ ಪ್ರಾಚೀನ ಕಾಲದಿಂದಲೂ ಹತ್ತಿ ಬೆಳೆಗೆ ಪ್ರಸಿದ್ಧವಾಗಿದೆ. ಕ್ರಿ.ಶ ೧ನೆಯ ಶತಮಾನ ಗ್ರೀಕ್ ಯಾತ್ರಿಕ ಪೆರಿಪ್ಲಸ್ ದಕ್ಷಿಣ ಇಂಡಿಯಾದಿಂದ ಹತ್ತಿಯ ನೂಲು ಮತ್ತು ಬಟ್ಟೆಗಳನ್ನು ರಫ್ತು ಮಾಡುತ್ತಿದ್ದರು.[೩೪೩] ಎಂದಿದ್ದಾನೆ. ಹತ್ತಿಯು ವಾಣಿಜ್ಯ ಬೆಳೆಯಾಗಿದ್ದು, ಈ ಬೆಳೆಯು ಮುಂಗಾರು ಮತ್ತು ಹಿಂಗಾರು ಬೆಳೆಯಾಗಿದೆ. ಮಳೆಯಾಶ್ರಯದಲ್ಲಿ ಬೆದ್ದಲು ಭೂಮಿಯಲ್ಲಿ ಬೆಳೆಯುತ್ತಾರೆ. ಇದರಿಂದ ನೂಲು ಮತ್ತು ಬಟ್ಟೆ ತಯಾರಿಸಲಾಗುತ್ತದೆ. ಪ್ರಾಚೀನ ಕಾಲದಿಂದ ಕಂಡುಬರುವ ಈ ಹತ್ತಿಯನ್ನು ಪಾಶ್ಚಾತ್ಯರು ಆಮದು ಮಾಡಿಕೊಳ್ಳುತ್ತಿದ್ದರು. ಕ್ರಿ.ಶ. ೧೬೦೦ರ ಅವಧಿಯಲ್ಲಿ ಕಚ್ಚಾ ಹತ್ತಿಯನ್ನು ಆಮದು ಮಾಡಿಕೊಂಡು ಸಿದ್ಧ ಉಡುಪುಗಳನ್ನು ತಂದು ಮಾರಾಟ ಮಾಡುತ್ತಿದ್ದರು. ಹತ್ತಿಯಿಂದ ಬರುವ ಬೀಜದಿಂದ ಎಣ್ಣೆ ತಯಾರಿಸಲಾಗುತ್ತದೆ. ಇದರಿಂದ ದನಗಳಿಗೆ ಇಂಡಿ ತಯಾರಿಸಲಾಗುತ್ತದೆ. ಜನಪದರ ಮಾತ್ತೊಂದು ಗಾದೆ ಹೀಗೆ ಹೇಳುತ್ತದೆ. 'ಕತ್ತೆಗೇಕೆ ಹತ್ತಿಕಾಳು ಮುಸುರೆ' ಎಂದಿರುವುದು ಹತ್ತಿಕಾಳು ಮುಸುರೆ ದನಕರುಗಳಿಗೆ ಎಂತಹ ಸತ್ವಯುತ ಆಹಾರ ಎಂಬುದನ್ನು ತಿಳಿಸುತ್ತದೆ. ಹೊಲಗಳಲ್ಲಿ ಹತ್ತಿ ಬೆಳೆಯುವುದರಿಂದ ಮರುವರ್ಷ ಬೆಳೆಯುವ ಬೆಳೆ ಸಂಪದ್ಭರಿತವಾಗಿ ಬೆಳೆಯುತ್ತದೆ. ಹತ್ತಿಯ ಎಲೆಗಳು ಉದುರಿ ನೆಲವನ್ನು ಫಲವತ್ತಾಗಿಸುವುದರಿಂದ ಭೂಮಿಯಲ್ಲಿ ಹತ್ತಿ ಬೆಳೆಯು ಎರಡರಿಂದ ಮೂರು ವರ್ಷಗಳಿಗೆ ಒಮ್ಮೆಯಾದರೂ ಹತ್ತಿ ಬೆಳೆಯಬೇಕು.

**ಕಬ್ಬು**

ಈ ಬೆಳೆಯು ಕೃತಕ ನೀರಾವರಿಯನ್ನು ಆಶ್ರಯಿಸಿ ಬೆಳೆಯುವ ಬೆಳೆಯಾಗಿದೆ. ಅಂದರೆ ಬೇಸಿಗೆಯಲ್ಲಿ ಕೆರೆ, ಕಟ್ಟೆ, ಬಾವಿ, ಕಾಲುವೆ ಮೊದಲಾದವುಗಳ ಸಹಾಯದಿಂದ ಬೆಳೆಯಲ್ಪಡುತ್ತವೆ. ಸು. ೫೦೦ ಹಳೆಯದಾದ ವೇದಗಳ ಕಾಲದಲ್ಲಿ ಕರ್ಬು, ಕಬ್ಬಿನ ಉಲ್ಲೇಖವಿದೆ.[೩೪೪] ಕಬ್ಬಿನಲ್ಲಿ ಅನೇಕ ಕುಲಗಳಿವೆ. ರಸದಾಳಿ, ದಾಸರ ಕಬ್ಬು, ಮಲಸೀಮೆಯಲ್ಲಿ ಗೊಮಾರಿ ಕಬ್ಬು ಅಥವಾ ಹೊಟ್ಟೆಕಬ್ಬು, ತೆಲುಗು ದೇಶದಲ್ಲಿ ಪೆದ್ದ ಚರಕು, ಗನ್ನೇರಚರಕು ಎಂದು ಎರಡು ವರ್ಗಗಳಿವೆ. ಕನ್ನಡದಲ್ಲಿ ಹಿರೇಕಬ್ಬು, ಕಣಿಗಿಲ ಕಬ್ಬು, ಚಾಣೆಕಬ್ಬು, ಕರಿಕಬ್ಬು ಎಂಬ ವಿಧಗಳಿವೆ.[೩೪೫] ಅರ್ಥಶಾಸ್ತ್ರಕಾರನು 'ದ್ರಾಕ್ಷಿ ಮತ್ತು ಕಬ್ಬನ್ನು ನೀರು ಮೇಲೇರಿ ಬರುವ ಪ್ರದೇಶದಲ್ಲಿ ಬೆಳೆಯ ಬೇಕೆಂದು ಹೇಳಿದ್ದಾನೆ ಹಾಗೆಯೇ ಕಬ್ಬನ್ನು ನಿಕೃಷ್ಟ ಬೆಳೆ ಎಂದು ಕರೆದಿದ್ದಾನೆ.[೩೪೬]

ಇದು ವೆಚ್ಚದಾಯಕ ಮತ್ತು ಉಪದ್ರವಯುಕ್ತವೆಂಬ ಕಾರಣವಿರುವ ಸಾಧ್ಯತೆಗಳಿವೆ ಎನ್ನಲಾಗಿದೆ. ಇದನ್ನು ಕಬ್ಬಿನ ರಸಕ್ಕೆ, ಬೆಲ್ಲ, ಕಾಕಂಬಿ(ಅಂದರೆ ಬೆಲ್ಲವಾಗುವುದಕ್ಕೆ ಸ್ವಲ್ಪ ಮುಂಚೆ ತೆಗೆದ ಕಬ್ಬಿನ ಹಾಲಿನರಸವಾಗಿರುತ್ತದೆ) ಇವುಗಳಿಗೆ ಬಳಸಲಾಗುತ್ತದೆ. ಈ ಬೆಳೆಯು ವಾಣಿಜ್ಯ ಬೆಳೆಯೂ ಆಗಿ ಕಂಡುಬರುತ್ತದೆ. ಈ ಬೆಳೆಯಲ್ಲಿ ಲಾಭ ಗಣನೀಯವಾಗಿರುತ್ತದೆ. 'ಪಾಣಿನಿ ಕ್ರಿ.ಪೂ ೩೫೦ರಲ್ಲಿಯೇ ಕಬ್ಬಿನಿಂದ ತಯಾರಿಸುವ 'ಗುಡ'(ಗಟ್ಟಿ ಸಕ್ಕರೆ) ಬಗೆಗೆ ಪ್ರಸ್ತಾಪಿಸುತ್ತಾನೆ. ಅರ್ಥಶಾಸ್ತ್ರದಲ್ಲಿ ಗುಡ, ಖಂಡ ಮತ್ತು ಶರ್ಕರ ಎಂತಲೂ ಮೆಗಸ್ತಾನೀಸನು ನೆಲವನ್ನು ಬಗೆದು ತೆಗೆಯುತ್ತಿದ್ದ ಸಿಹಿಕಲ್ಲುಗಳು.'[೩೪೭] ಎಂದು ಹೇಳಿರುವುದು ಕಬ್ಬಿನಿಂದ ಪ್ರಾಚೀನ ಕಾಲದಿಂದಲೂ ಬೆಲ್ಲ, ಸಕ್ಕರೆ ಹಾಗೂ ಕಲ್ಲುಸಕ್ಕರೆಗಳನ್ನು ಉತ್ಪಾದಿಸಲಾಗುತ್ತಿತ್ತು ಎಂಬುದನ್ನು ತಿಳಿಸುತ್ತದೆ.

ಗದ್ದೆಗಳಲ್ಲಿ ಭತ್ತವಲ್ಲದೆ ಕಬ್ಬು ಬೆಳೆಯನ್ನು ಬೆಳೆಯಲಾಗುತ್ತಿತ್ತು. ಕ್ರಿ.ಶ. ೬೯೯ರ ಶಾಸನದಲ್ಲಿ ಒಂದು ಭಾಗ ಸಕ್ಕರೆಯ ಉಲ್ಲೇಖವಿದೆ.[೩೪೮] ಕ್ರಿ.ಶ. ೧೧೫೬ರ ಶಾಸನದಲ್ಲಿ ಕಬ್ಬಿನ ಗದ್ದೆಗೆ ಕಾಡಾನೆಗಳು ನುಗ್ಗಿ ಹಾಳುಮಾಡಿದುದರ ಸೂಚನೆಯಿದೆ.[೩೪೯] ಕಬ್ಬು ಆರ್ಥಿಕ ಬೆಳೆಯಾಗಿರುವುದರಿಂದ ಜನಪದರು ಹೀಗೆ ಉಲ್ಲೇಖಿಸಿರುವುದನ್ನು ಗಮನಿಸಬಹುದಾಗಿದೆ.

ಹಸಗೂಸು ಹುಟ್ಟಲಿ ಹೊಸಪ್ಯಾಟಿ ಕಟ್ಟಲಿ
ರಸಬಾಳಿ ಕಬ್ಬು ಬೆಳಿಯಲಿ। ನಮ್ಮೂರ
ಬಸವನ ತೇರು ಎಳಿಯಲಿ॥[೩೫೦]

ಊರಿನ ಜಾತ್ರೆ ಉತ್ಸವಗಳು ಸಂಭ್ರಮದಿಂದ ಜರುಗಲು ಹಣದ ಅಗತ್ಯತೆ ಇರುತ್ತದೆ. ಬೆಳೆ ಸಮೃದ್ಧವಾದರೆ ಆರ್ಥಿಕತೆಯ ಅವಶ್ಯಕತೆ ನೀಗುತ್ತದೆ. ಹಬ್ಬಹರಿದಿನಗಳು ಸಂಭ್ರಮದ ಗೂಡಾಗುತ್ತವೆ. ಮಾನವನ ಜೀವನದ ಮೇಲೆ ಆರ್ಥಿಕತೆಯ ಪ್ರಭಾವ ದಟ್ಟವಾಗಿರುತ್ತದೆ. ಕೃಷಿಕರಿಗೆ ಅವರ ಬೆಳೆಯ ಸಮೃದ್ಧತೆಯ ಮೇಲೆ ಅದು ನಿರ್ಧರಿತವಾಗುತ್ತದೆ.

ತಮಿಳು ಪ್ರಾಚೀನ ಕೃತಿಯಾದ ಸಿಲಪ್ಪದಿಗಾರಂನಲ್ಲೂ 'ಕರಿಕಬ್ಬಿನ ಜಲೆ'[೩೫೧]ಯ ಉಲ್ಲೇಖ ಕಂಡುಬರುತ್ತದೆ. ಪಾಲಿ ಗ್ರಂಥವು ಕಬ್ಬಿನ ಬೆಳೆಯ ಬಗೆಗೆ ಹೀಗೆ ಹೇಳುತ್ತದೆ. ಕಬ್ಬನ್ನು ಫಲಬೀಜವರ್ಗದ ಸಸ್ಯವೆಂದು ಹೇಳುತ್ತದೆ.[೩೫೨] ಅಂದರೆ ಕೀಲುಗಳಿಂದ ಹೊರ ಹೊಮ್ಮುವ ಸಸ್ಯ ಜಾತಿಗೆ ಸೇರಿರುವುದು ಎಂದು ಅರ್ಥೈಸಲಾಗಿದೆ. ಕಬ್ಬಿನ ಮಧ್ಯ ಮಧ್ಯದಲ್ಲಿ ಬರುವ ಗಂಟುಗಳು ನಂತರದ ಬೆಳೆಗೆ ನಾಟಿ ಮಾಡುವ ಬೀಜವಾಪನವಾಗುತ್ತವೆ. ಕ್ರಿಶ ೧೧೩೧ರ ಶಾಸನದಲ್ಲಿ ನಡುಬಯಲಯ್ವತ್ತು ಕೊಳಗ ಗರ್ದ್ದೆಯ ತೋಟಮುಮಂ[೩೫೩] ಎಂದಿದೆ. ಈ ಶಾಸನದಲ್ಲಿ ಗರ್ದ್ದೆಯ ತೋಟವೆಂದು ಉಲ್ಲೇಖಿಸಿರುವುದನ್ನು ಗಮನಸಿದರೆ ಈ ಭೂಮಿಯಲ್ಲಿ ಭತ್ತ ಮತ್ತು ಕಬ್ಬು ಎರಡರಲ್ಲಿ ಒಂದು ಅಥವಾ ಎರಡು ಬೆಳೆಗಳನ್ನು ಬೆಳೆದಿರುವ ಸಾಧ್ಯತೆಗಳಿವೆ. ಕ್ರಿಶ ೧೨೪೧ರ ಶಾಸನದಲ್ಲಿ ಕಬ್ಬು, ಕಳಮೆ, ಭತ್ತ, ಗಮತಗಳು ದೇವರ ಭೂಮಿಯ ವ್ಯವಸಾಯದ ಬೆಳೆಗಳಾಗಿದ್ದು, ಏನು ಮಾರಿದರು ಇವುಗಳಿಗೆ ಸುಂಕವಿಲ್ಲವೆಂದಿದೆ.[೩೫೪]

ಕ್ರಿ.ಶ. ೧೧೪೧ರ ಶಾಸನದಲ್ಲಿ 'ಬೆಲ್ಲದ ಭಣ್ಡಿಯನ್ನು'[೩೫೫] ಉಲ್ಲೇಖಿಸಿದೆ. ಬೆಲ್ಲದ ಭಣ್ಡಿಯ ಉಲ್ಲೇಖವಿರುವುದನ್ನು ಗಮನಿಸಿದರೆ ಕಬ್ಬು ಬೆಳೆದಿರುವ ಸಾಧ್ಯತೆಗಳಿವೆ. ಆ ಕಾರಣಕ್ಕೆ ಇದಕ್ಕೆ ಎರಡು ವೀಸ ಸುಂಕ ವಿಧಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೧೫ರ ಶಾಸನದಲ್ಲಿ ಕಬ್ಬಿನ ತೋಟದಿಂದ ಕಂಗೊಳಿಸಿದುದನ್ನು ಉಲ್ಲೇಖಿಸಿದೆ.

ಕರ್ಬ್ಬಿದೋಂಟದಿನಗುರ್ಬ್ಬಿನ ಕೆಯ್ವೊಲದಿಂನಿರಂತರಂ
ಬೆಳೆದ ಸುಗಂಧಶಾಳಿವನದಿಂ ವರನಂದನವನದಿಂ[೩೫೬]

ಕಬ್ಬು ಸುಗಂಧಗಾಳಿ(ಭತ್ತ) ವನಗಳಿಂದ ನಂದನವನ ಶೋಭಿಸುತ್ತಿತ್ತು ಎಂದು ಶಾಸನವು ವರ್ಣಿಸಿರುವುದು ಕಂಡುಬರುತ್ತದೆ. ಇದರಿಂದ ಗದ್ದೆಗಳಲ್ಲಿ ಕಬ್ಬು ಮತ್ತು ಭತ್ತ ಎರಡು ಬೆಳೆಗಳನ್ನು ಬೆಳೆದಂತೆ ತಿಳಿದುಬರುತ್ತದೆ. ಕ್ರಿ.ಶ. ೧೩೮೨ರ ಶಾಸನದಲ್ಲಿ ಬೆಲ್ಲದ ಹೇಱೊಂದಕ್ಕಂ ಹಾಗ ಸಖ್ಖರೆಯ ಹೇಱೊಂದಕ್ಕಂ ಅಡ್ಡ ಕಬ್ಬಿನ ಭಂಡಿ ಒಂದಕ್ಕಂ ಹಾಗ[೩೫೭]ಉಲ್ಲೇಖವಿದೆ. ಕ್ರಿ.ಶ. ೧೩-೧೪ನೆಯ ಶತಮಾನದ ಶಾಸನದಲ್ಲಿ ಸಿರಿಯನು "ಕಾಡಿನಲಿ ಕಬ್ಬಿನ ತೋಟಕೆ ಮಱಿಯಾನೆ ಹೊಕ್ಕಂತೆ ಕಾದಿದ"[೩೫೮] ಎಂದಿದೆ. ಕಬ್ಬಿನ ತೋಟಕ್ಕೆ ಕಾಡಾನೆ ಹೊಕ್ಕಂತೆ ಸಿರಿಯ ಎಂಬುವವನು ಕಾಳಗದಲ್ಲಿ ಹೋರಾಟ ಮಾಡಿ ಮಡಿದ ಎಂದಿರುವುದು ಕಬ್ಬಿನ ತೋಟಕ್ಕೆ ಕಾಡಾನೆಗಳು

ದಾಳಿಯಿಡುತ್ತಿದ್ದವೆಂಬುದನ್ನೂ ಸಹ ಸೂಚಿಸುತ್ತದೆ. ಕಬ್ಬಿನ ತೋಟಗಳು ಕಾಡಾನೆಗಳಂತಹ ಕಾಡುಪ್ರಾಣಿಗಳ ಹಾವಳಿಯಿಂದ ಬೆಳೆಗಳು ಹಾನಿಗೊಳಗಾಗುತ್ತಿದ್ದವು. ಇವುಗಳಿಂದ ರೈತರು ಶ್ರಮ ವಹಿಸಿ ರಕ್ಷಿಸಿಕೊಳ್ಳುವ ಅಗತ್ಯವಿತ್ತೆಂದು ತಿಳಿಯುತ್ತದೆ. ಕ್ರಿ.ಶ. ೧೦೭೭ರ ಶಾಸನದಲ್ಲಿ 'ಕರ್ಬ್ಬಿನ ತೋಂಟ ವೊಂದು'[೩೫೯] ಉಲ್ಲೇಖವಿದೆ. ಕ್ರಿ.ಶ. ೧೦೮೭ರ ಶಾಸನವು ಕರ್ಬ್ಬಿನ ತೋಂಟವೊಂದು[೩೬೦] ಉಲ್ಲೇಖವಿದೆ. ಕ್ರಿ.ಶ. ೧೧೨೫ರ ಶಾಸನವನ್ನು 'ಕಬ್ಬು' ಉಲ್ಲೇಖವಿದೆ.[೩೬೧]

ಕ್ರಿ.ಶ. ೧೧೫೧ರ ಶಾಸನದಲ್ಲಿ ಕಬ್ಬಿನ ಗದ್ದೆಯ ಉಲ್ಲೇಖವಿದೆ.[೩೬೨] ಕಬ್ಬನ್ನು ಬೆಳೆಯುವ ಸ್ಥಳಗಳಿಗೆ ಶಾಸನಗಳು ಕಬ್ಬಿನ ಗದ್ದೆಗಳು ಎಂದು ಉಲ್ಲೇಖಿಸಿರುವುದು ಕಂಡುಬರುತ್ತದೆ. ಕೃಷಿಜ್ಞಾನ ಪ್ರದೀಪಿಕೆಯಲ್ಲಿ ಕಬ್ಬು ಕೃಷಿಯ ಬಗೆಗೆ ಹೀಗೆ ಹೇಳಲಾಗಿದೆ. "ಸವಿನೀರು ಇರುವ ತೋಟಗಳಲ್ಲಿ ಕಬ್ಬನ್ನು ಹಚ್ಚಬೇಕು. ಸವಿ ನೀರಿನಿಂದ ಬೆಳೆದ ಕಬ್ಬಿನ ಬೆಲ್ಲವು ಕೆಡುವುದಿಲ್ಲ. ಸೌಳು ನೀರಿನಿಂದಾದರೂ ಕಬ್ಬು ಬೆಳೆಯುವುದು. ಆದರೆ ಅದರ ಬೆಲ್ಲವು ಸೌಳಾಗುವುದು ಹಾಗೂ ರಾಡಿಯಾಗುವುದು...ಕಬ್ಬಿನ ಹೊಲದಲ್ಲಿ ಸ್ವಲ್ಪವಾದರೂ ಕರಿಕೆ ಇರಬಾರದು. ಆ ಭೂಮಿಗೆ ಗೊಬ್ಬರದ ಬಲಾತ್ಕಾರ ವಿಶೇಷವಾಗಬೇಕು. ಮೊದಲು ಗೊಬ್ಬರ ಹಾಕಿ, ಎರಡು ಸಾಲು ನೇಗಿಲನ್ನು ಹೊಡೆದು ಪುನಃ ಗೊಬ್ಬರ ಹಾಕಿ, ದೊಡ್ಡ ಕುಂಟೆಯಿಂದ ಮೂರು ಸಾಲು ಚೆನ್ನಾಗಿ ಹರಗಿ ಮಣ್ಣು ಮೆತ್ತಗಾಗುವ ಹಾಗೆ ಮಾಡಿ ಬೋದು ಎಳಿಸಿ ಕಾವಲಿಯನ್ನು ತಿದ್ದಿಕೊಂಡು ಆ ಬೋದಿಗೆ ಗೊಬ್ಬರ ಹಾಕಿ ತಯಾರು ಮಾಡಬೇಕು.

ಬೀಜದ ಕಬ್ಬನ್ನು ತಂದು ಗುದ್ದುಮೊಳ ಅಥವಾ ಗೇಣು ತುಂಡುಗಳನ್ನು ಮಾಡಬೇಕು. ಆ ತುಂಡುಗಳ ನಡುವೆ ಗಣಿ ಗಲ್ಲುಗಳನ್ನು ಉಳಿಸಿ ಕಡಿದಿರಬೇಕು. ಕಬ್ಬನ್ನು ಹಚ್ಚಬೇಕಾದರೆ ಮುಂದೆ ಮುಂದೆ ಬೋದುಗಳಿಗೆ ನೀರು ಬಿಡುತ್ತಾ ಆ ನೀರಿನಲ್ಲಿ ಈ ಕಬ್ಬಿನ ಬೀಜದ ಗಣಿಕೆಗಳನ್ನು ತುಳಿಯುತ್ತಾ ಹೋಗಬೇಕು. ಗಣಿಕೆಗಳನ್ನು ತುಳಿಯುತ್ತಾ ಕಬ್ಬಿನ ಬೀಜಗಳನ್ನು ಹಚ್ಚಿ ನೀರು ಕಟ್ಟುತ್ತಾ ಹೋಗಬೇಕು. ಕಬ್ಬು ಹಚ್ಚಿದ ಮೇಲೆ ಹಸಿಯಾರದಂತೆ ನೋಡಿಕೊಳ್ಳಬೇಕು."[೩೬೩] ಈ ರೀತಿ ಬೆಳೆಯುವ ಕಬ್ಬು ಒಂದು ವರ್ಷದ ಬೆಳೆಯಾಗಿ ಕಂಡುಬರುತ್ತದೆ. ಕಬ್ಬು ಸೇವನೆಗೆ ರಸಭರಿತವಾಗಿದ್ದು, ಮಹಾಲಿಂಗರಂಗನು ಕನ್ನಡದ ಬಗೆಗೆ ಹೇಳುವಾಗ 'ಅಳಿದ ಸಿಪ್ಪೆಯ ಕಬ್ಬಿನಂದದಿ' ಎಂದಿದ್ದಾನೆ. ಇದರಿಂದ ತಯಾರಿಸುವ ಬೆಲ್ಲ, ಸಕ್ಕರೆ, ಕಾಕಂಬಿ ಉತ್ಪನ್ನಗಳನ್ನು ಶಾಸನಗಳು ಉಲ್ಲೇಖಿಸಿರುವುದು ಕಂಡುಬರುತ್ತದೆ. ಕಬ್ಬಿನ ಕೃಷಿಯು ಶ್ರಮದಾಯಕ, ವೆಚ್ಚದಾಯಕ, ಮತ್ತು ಲಾಭದಾಯಕ ಎಂಬ ಅಂಶಗಳು ಈ ಅಧ್ಯಯನದಿಂದ ತಿಳಿದುಬರುತ್ತವೆ. ಕಬ್ಬು ನೀರಾವರಿ ಆಶ್ರಿತ ಬೆಳೆಯಾಗಿದ್ದು, ವಾಣಿಜ್ಯ ಬೆಳೆಯಾಗಿ ಕಂಡುಬರುತ್ತದೆ.

**ಅಡಕೆ**

ಇದನ್ನು 'ಕೌಂಗು' ಎಂತಲೂ ಕರೆಯಲಾಗುತ್ತದೆ. ಪ್ರಾಚೀನ ಕಾಲದ ಪ್ರಮುಖ ತೋಟದ ಮತ್ತು ವಾಣಿಜ್ಯ ಬೆಳೆಯಾಗಿ ಕಂಡುಬರುತ್ತದೆ. ಯಾಕೆ ಅಡಕೆ ಅಷ್ಟು ಮಹತ್ವ ಪಡೆದಿತ್ತೋ ತಿಳಿಯದು. ಭಾರತೀಯ ಸಂಪ್ರದಾಯದಲ್ಲಿ ಇದನ್ನು ತಾಂಬೂಲ ಮತ್ತು ಶುಭಕಾರ್ಯಗಳಿಗೆ ಬಳಸುವುದಿದೆ. ಈಗ ಗುಟುಕ ಸೇವನೆಗೆ, ಬಣ್ಣ ತಯಾರಿಕೆಗೆ ಬಳಸಲಾಗುತ್ತಿದೆ. ಕ್ರಿ.ಶ. ೧೧೭೬ರ ಶಾಸನದಲ್ಲಿ ಅಡಕೆ ಹೊಂಗೆ ಕೊಟ್ಟಲ್ಲಿ ೫ ಕೊಂಡಲ್ಲಿ ೮ ತೆರಿಗೆಯನ್ನು ಹೇಳಿದೆ ಮಾರುವುದಕ್ಕಿಂತ ಕೊಳ್ಳುವಾಗ ಅಧಿಕ ತೆರಿಗೆ ಇದ್ದುದು ಕಂಡುಬಂದಿದೆ.[೩೬೪]

ಕ್ರಿ.ಶ. ೧೨೩೪ರ ಶಾಸನದಲ್ಲಿ ದೇವರಿಗೆ ಬಿಟ್ಟ ಬೆಳೆಯಾದ ಅಡಕೆಯೊಂದಿಗೆ ಇನ್ನುಳಿದ ಬೆಳೆಗಳಿದ್ದು, ಯಾವ ಭಂಡವ ಹೇಱು ತಂದು ಮಾರಿದಡಂ ಸುಂಕ ಪರಿಹಾರ ಮತ್ತಂ ಯಾ ದೇವರ ಕಂಮತ ಯಾವ ವೂರಲಿ ಮಾರಿದಡಂ ಆ ಭತ್ತ ಬಂಡಿ ಎತ್ತಿನಲಿ ಬಂದಂತ ಹಾವಕ್ಕೆ ಸುಂಕ ಬಾಹಿರ ಸೀಮೆ ಎಂದೆನಬಾರದು.[೩೬೫] ದೇವರಿಗೆ ಬಿಟ್ಟ ವಸ್ತುಗಳು ಎತ್ತಿನ ಬಂಡಿಯ ಮೇಲೆ ತಂದು ಯಾವ ವಸ್ತುಗಳನ್ನು ಮಾರಿದರು, ಕೊಂಡರೂ ಸುಂಕವಿಲ್ಲವೆಂದು ಶಾಸನವು ಹೇಳಿದೆ. ಕ್ರಿ.ಶ. ೧೨೦೬ರ ಶಾಸನದಲ್ಲಿ 'ಹೇಱಿಂಗಿಪ್ಪತ್ತಡಕೆ'[೩೬೬] ಎಂದಿದೆ. ಹೇಱಿಗೆ ೨೦ ಅಡಕೆ ಸುಂಕ ಕೊಡಬೇಕೆಂಬ ಮಾಹಿತಿ ಇದೆ. ಕ್ರಿ.ಶ. ೧೨೨೩ರ ಶಾಸನದಲ್ಲಿ 'ಕೊನೆಕಾಱರುಂ ಅಡಕೆಯ ಸುಲಿದ ಮೊತ್ತಮುಂ ಈಳಿಗೆಗೆ ಬಿಳೆವೊಳಿಗ ವೀಳೆಯಂ ಬಿಟ್ಟರು.[೩೬೭] ಅಡಕೆ ಕೊಯ್ಲು ಕೊಯ್ಯುವ ಕೊನೆಕಾರನಿಗೆ ನೀಡುವ ಸಂಭಾವನೆಯ ಬಗೆಗೆ ಹೇಳಿರುವುದನ್ನು ತಿಳಿಸಲಾಗಿದೆ. ಇವರು ಅಡಕೆ ಬಲಿತಾಗ ಅದರ ಫಸಲನ್ನು ಕೊಯ್ಯುವವರು. ಇವರು ದಾನ ನೀಡಿರುವುದನ್ನು ಶಾಸನವು ತಿಳಿಸುತ್ತದೆ.

'ಕ್ರಿ.ಶ. ೧೧೦೬ರ ಶಾಸನದಲ್ಲಿ ಅಡಕೆಯಾಯಂ ಪೊಂಗೆ ಹಾಗ ವೊನ್ದರ ಲೆಕ್ಕ'[೩೬೮] ಎಂದು ತಿಳಿಸಿದೆ. ಅಡಕೆಯ ಆದಾಯದಲ್ಲಿ ಕೂಡ ಬೇಕಾದ ಸುಂಕ ಹೊಂಗೆ ಹಾಗ ಎಂದಿದೆ. ಕ್ರಿ.ಶ. ೧೧೧೧ರ ಶಾಸನದಲ್ಲಿ 'ದೇಸಿಗ ಪ್ರಮುಖರು ಅಡಕೆ ಎತ್ತಿನ ಹೇಱಿಂಗೆ ೨೦'[೩೬೯] ಎಂದಿದೆ. ಕ್ರಿಶ ೧೧೪೩ರ ಶಾಸನದಲ್ಲಿ ಅಡಕೆಯ ಹೇಱಿಂಗೆ ಅಡಕೆ೨೦'[೩೭೦] ಎಂದಿದೆ. ಈ ಭಾಗದಲ್ಲಿ ಅಂದಿನಿಂದ ಇಂದಿಗೂ ಅಡಕೆ ಬೆಳೆ ಬೆಳೆಯುತ್ತಿರುವುದನ್ನು ಗಮನಿಸಬಹುದಾಗಿದೆ. ಅಡಕೆ ಬೆಳೆಯ ಪ್ರಮಾಣ ಹೆಚ್ಚಾಗಿದ್ದು, ಪ್ರಮುಖ ಬೆಳೆಯಾಗಿರುವ ಸಾಧ್ಯತೆಗಳಿವೆ. ಕ್ರಿಶ ೧೧೮೧ರ ಶಾಸನದಲ್ಲಿ ಅಡಕೆಯ ಹೇಱಿಂಗೆ ಹಾಗ ೧[೩೭೧] ಎಂದು ಉಲ್ಲೇಖಿಸಲಾಗಿದೆ.

ಕ್ರಿ.ಶ. ೧೦೬೧ರ ಶಾಸನದಲ್ಲಿ ಬ್ರಹ್ಮಪುರಿಯ ೪೨ ಮಹಾಜನರಿಗೆ ಸುಂಕದ ವಿನಾಯತಿ ನೀಡಿ ಅಡಕೆ ತೋಟವೊಂದಕ್ಕೆ ಪಣ ೧ ಹಾಗೂ ೧೦೦ ಅಡಕೆಯನ್ನು ದಾನ ಬಿಟ್ಟದ್ದನ್ನು ಹೇಳಿದೆ.[೩೭೨] ಈ ಭಾಗದಲ್ಲಿ ಅಡಕೆ ತೋಟಗಳು ಅಂದಿನಿಂದ ಇಂದಿನವರೆಗೂ ವಿರಳವಾಗಿಯೇ ಕಂಡುಬರುವುದನ್ನು ಕಾಣಬಹುದಾಗಿದೆ. ನುಲೇನೂರು ಗ್ರಾಮದ ಶಾಸನವೊಂದರಲ್ಲಿ ಅಡಕೆಮರದ ಸ್ಥಳ, ಬಾವಿ ಕೆಱೆಯ ಕೆಳಗೆ ತೋಟದ ಉಲ್ಲೇಖವಿದೆ.[೩೭೩] ಕ್ರಿ.ಶ. ೧೧೬೧ರ ಶಾಸನದಲ್ಲಿ ಅಡಕೆಯ ಹೇಱಿಂಗೆ ಅ ೮೦ ಅಡಕೆಯ ತಲೆವೊಱೆಗೆ ಅ ೨೫ ಎಲೆಯ ಹೇಱಿಂಗೆ ಎ ೧೦೦ ಎಲೆಯ ತಲೆವೊಱೆಗೆ ಎ ೫೦ರ[೩೭೪] ಉಲ್ಲೇಖಗಳು ಕಂಡುಬರುತ್ತವೆ. ಹೇಱು, ತಲೆವೊಱೆಗಳಿಗೆ ಪ್ರತ್ಯೇಕ ಸುಂಕವಿರುವುದನ್ನು ಶಾಸನವು ತಿಳಿಸಿದೆ. ಕ್ರಿ.ಶ. ೧೧೭೬ರ ಶಾಸನದಲ್ಲಿ ಭತ್ತ, ಎಲೆ, ಹೊಂಗೆ, ಅಡಕೆ ಮಾರಿದರೆ, ಕೊಂಡರೆ ತೆರಿಗೆ ಮಾನ ೧ ಎನ್ನಲಾಗಿದೆ.[೩೭೫] ಇವುಗಳನ್ನು ಸಂತೆಗಳಲ್ಲಿ ಮಾರಲಾಗುತ್ತಿತ್ತು ಎಂದು ಈ ಶಾಸನವು ತಿಳಿಸುತ್ತದೆ. ಕ್ರಿ.ಶ. ೧೧೬೨ರ ಶಾಸನದಲ್ಲಿ ಅಡಕೆ ಎಲೆಗೆ ಸೇರಿದ ಸಾರಿಗೆ ಸುಂಕ ಬೀರವಣವನ್ನು ದಾನ ನೀಡಿದ್ದನ್ನು ಹೇಳಿದೆ.[೩೭೬]

ಕ್ರಿ.ಶ. ೧೧೭೨ರ ಶಾಸನದಲ್ಲಿ ಎರಡು ಸಾವಿರ ಅಡಕೆ ಮರದ ಸ್ಥಳದ[೩೭೭] ಉಲ್ಲೇಖವಿದೆ. ಕ್ರಿ.ಶ. ೧೨೭೨ರ ಶಾಸನದಲ್ಲಿ ಮಾಚೇಶ್ವರ ದೇವರ ಕಾರ್ಯಗಳಿಗೆ ಅಡಕೆ ತೋಟ, ಅಡಕೆ ಮರ ೬೦೦೦ ಕಂ ಬೀಜವರಿ ಸ ಹೂದೋಟ ಕೊ ೧೦ ಇದೇ ಕಾಲಘಟ್ಟದ ಮೊತ್ತೊಂದು ಶಾಸನದಲ್ಲಿ ೪೦೦೦ ಅಡಕೆ ಮರಗಳ ತೋಟದ ಉಲ್ಲೇಖವಿದೆ.[೩೭೮] ಹೊಯ್ಸಳರ ಕಾಲಘಟ್ಟಕ್ಕೆ ಬಂದಂತೆ ನೀರಾವರಿಗೆ ಆದ್ಯತೆ ನೀಡಿದ್ದರಿಂದ ತೋಟದ ಪ್ರಮಾಣದಲ್ಲಿ ಗಣನೀಯವಾಗಿ ಏರಿಕೆಯಾಗಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೨೨೬ರ ಶಾಸನದಲ್ಲಿ ೭೦೦ ಮರಗಳ ಅಡಕೆ ತೋಟವನ್ನು ಉಲ್ಲೇಖಿಸಿದೆ.[೩೭೯] ಈ ಭಾಗದಲ್ಲಿ ಈ ಶಾಸನದ ಕಾಲಘಟ್ಟಕ್ಕೆ ಅಥವಾ ಪ್ರಾಚೀನ ಕಾಲದಲ್ಲಿ ಅಡಕೆ ತೋಟಗಳು ಸಮೃದ್ಧವಾಗಿದ್ದವೆಂದು ಶಾಸನದಿಂದ ತಿಳಿಯುತ್ತದೆ. ಆದರೆ ಇಂದು ಶಾಸನ ಉಲ್ಲೇಖಿತ ಈ ಸ್ಥಳದಲ್ಲಿ ಅಡಕೆ ತೋಟಗಳು ಸಂಪೂರ್ಣ ಕಣ್ಮರೆಯಾಗಿವೆ. ಕ್ರಿ.ಶ. ೧೧೭೭ರ ಶಾಸನದಲ್ಲಿ ಕಾರಡಕೆ, ಮೆಳಸಿನ[೩೮೦] ಉಲ್ಲೇಖವಿದೆ. ಕ್ರಿಶ ೧೦೫೦ರ ಶಾಸನದಲ್ಲಿ ಧೂಳಿಯಡಕೆ ಕೊಯ್ಲಾಳಿಗಳದರಿಸಿನದ ಪಾಗಂ ದೇವಗೊಳಗಂ[೩೮೧] ಎಂದಿದೆ. ಕ್ರಿ.ಶ. ಕ್ರಿ.ಶ. ೧೧೩೮ರ ಶಾಸನದಲ್ಲಿ ೧೦೦೦ ಅಡಕೆ ಮರದ ತೋಟದ ಸ್ಥಳ[೩೮೩] ಎಂದು ಉಲ್ಲೇಖಿಸಿದೆ. ಕ್ರಿ.ಶ. ೧೧೭೫ರ ಶಾಸನದಲ್ಲಿ ಅಡಕೆಯ ಮರ ೧೮೦೦ ಎಂದಿದೆ.[೩೮೪]

ಈ ಬೆಳೆಯು ಅಂದಿನಿಂದ ಇಂದಿನವರೆಗೂ ಆರ್ಥಿಕವಾಗಿ ಶ್ರೀಮಂತ ಬೆಳೆಯಾಗಿದೆ. ಇದು ತೋಟದಲ್ಲಿ ಬೆಳೆಯುವ ವಾಣಿಜ್ಯ ಬೆಳೆಯಾಗಿದೆ. ಅಡಿಕೆ, ಅಡ್ಕಿ, ಅಡಕೆ, ಅಡ್ಕೆ ಎಂದು ಕರೆಯುವುದಿದೆ. ಪಂಪನ ಆದಿಪುರಾಣದಲ್ಲಿ "ತೆಂಗು ಅಡಿಕೆ ಮಾವು ಬೆಳೆಗಳು ಕಂಡುಬರುತ್ತವೆ. ನಯಸೇನನ ಧರ್ಮಾಮೃತದಲ್ಲಿ ಸಸಿಯ ಕೌಂಗಿನ ತೆಂಗಿನ ಸಸಿಯಂ ನಜೆುಬೆಳೆದು ಮೇಘಫಲಂಮಂ ಕುಡುವಂ" ಎಂದಿದೆ. ಸರ್ವಜ್ಞ ತನ್ನ ವಚನದಲ್ಲಿ,

ಗೋಟಡಿಕೆ ಮೆಲಹೊಲ್ಲ। ಬಾಳೆಯೊಳು ಇರಹೊಲ್ಲ
ಕೂಟವನು ಮುರಿದು ಸತಿ ಹೊಲ್ಲ। ಹೆಣ್ಣಿನೊಳು।
ತಾಟಕಿಯ ಹೊಲ್ಲ ಸರ್ವಜ್ಞ॥[೩೮೫]

ಎಂದು ಅಡಕೆಯನ್ನು ಕುರಿತಾಗಿ ಹೇಳಿರುವುದು ಕಂಡುಬರುತ್ತದೆ. ಅಡಕೆಯನ್ನು ತೋಟ ಮಾಡುವ ಮುನ್ನ ಹಳೇ ಮರದ ಗೋಟುಗಳನ್ನು ತೆಗೆದುಕೊಂಡು ಸಗಣಿ ಗಂಜಲಲ್ಲಿ ಕಲಸಿಟ್ಟು, ಮೊಳಕೆಯೊಡೆದ ನಂತರ ಫಲವತ್ತಾದ ಕೆಂಪು ಅಥವಾ ಕಪ್ಪು ನೆಲದೊಳಗೆ ಗೋಟು ಹಾಕುವುದು. ನಂತರ ನೀರು ಬಿಡುತ್ತಾ ಬರುವುದು. ಒಂದು ವರ್ಷಕ್ಕೆ ಸಸಿ ಬರುತ್ತವೆ. ಚೆನ್ನಾಗಿ ಹದಗೊಳಿಸಿದ ಭೂಮಿಯಲ್ಲಿ ನಾಲ್ಕು ಅಡಿ ಅಥವಾ ಆರು ಅಡಿ ಅಂತರದಲ್ಲಿ ದಾಯ ಮಾಡಿಕೊಳ್ಳಬೇಕು. ಒಂದುವರೆ ಮೊಳ ಅಗಲ ಕಾಲು ಮೊಳ ಉದ್ದ ಕುಣಿಗಳನ್ನು ತೋಡಿ ಸಸಿಗಳನ್ನು ಚೆನ್ನಾಗಿ ತುಳಿಯಬೇಕು. ನಂತರ ನೀರು ಹಾಕುತ್ತಾ ಬಂದರೆ ನಾಲ್ಕರಿಂದ ಐದು ವರ್ಷಗಳಿಗೆ ಹೊಂಬಾಳೆ ಹೊಡೆಯುತ್ತದೆ. ಆರು ವರ್ಷಗಳಿಗೆ ಸಮೃದ್ಧ ಬೆಳೆ ನೀಡುತ್ತದೆ. ಪಂಪನು ಆದಿಪುರಾಣದ ೪ನೆಯ ಆಶ್ವಾಸದಲ್ಲಿ "ಅಡಿಕೆ ಮರವು ವೀಳೆಯದ ಹಂಬಿಗೂ ಯೋಗ್ಯವಾದಂತೆ" ಎಂದು ೨೮ನೆಯ ಪದ್ದದಲ್ಲಿ ಹೇಳಿದ್ದಾನೆ.[೩೮೬] ಅಡಕೆಯ ತೋಟದಲ್ಲಿ ವೀಳೆಯದೆಲೆ, ಬಾಳೆಗಳಂತಹ ಬಹು ಬೆಳೆಗಳನ್ನು ಬೆಳೆಯುವುದು ಯೋಗ್ಯ. ಇದು ವರ್ಷದಿಂದ ವರ್ಷಕ್ಕೆ ಆರ್ಥಿಕತೆಯ ಸಮತೋಲನವನ್ನು ಕಾಯ್ದಿರಿಸುತ್ತದೆ. 'ಕಾರಬ್ಬಕ್ಕೆ ಕರಿಯಡಕೆ', ಮಾರನಾಮಿಗೆ ಮಾರಡಿಕೆ' ಎಂದು ಜನಪದರು ಹೇಳಿರುವ ಮಾತುಗಳು ಇಂದಿಗೂ ಅನ್ವಯಿಸುತ್ತವೆ. ಕಾರಬ್ಬದ ವೇಳೆಗೆ ಅಡಿಕೆ ಪ್ರಾರಂಭವಾಗಲು ಆರಂಭಿಸುತ್ತದೆ. ಮಹಾನವಮಿಯ ವೇಳೆಗೆ ಕೊಯ್ಲು ಯಥೇಚ್ಛವಾಗಿ ಬರುತ್ತದೆ. ಶಾಸನಗಳಲ್ಲಿ ಅಡಕೆಯ ಮೇಲೆ ಇದು ಹಾಕಿರುವ ಸುಂಕಗಳು ಆರ್ಥಿಕ ಬೆಳೆಯಾಗಿ ರಾಜ್ಯದ ಆದಾಯದ ಭಾಗವಾಗಿತ್ತೆಂಬುದನ್ನು ತಿಳಿಸುತ್ತದೆ. ಹಾಗೂ ಮಾನವರ ಧಾರ್ಮಿಕ, ಸಾಂಸ್ಕೃತಿಕ ಜೀವನದ ಕೊಡುಕೊಳುಗೆಯ ಒಂದು ಭಾಗವಾಗಿ ಕಂಡುಬರುತ್ತದೆ.

ಪ್ರಾದೇಶಿಕವಾಗಿ ಮೈಸೂರು ಭಾಗದಲ್ಲಿ ಶಾಸನಗಳನ್ನು ಅವಲೋಕಿಸಿದರೆ ಪ್ರಾಚೀನ ಸಂದರ್ಭದಲ್ಲಿ ಬೆದ್ದಲು ಭೂಮಿ ಹೆಚ್ಚಾಗಿ ಕಂಡುಬರುತ್ತದೆ. ಇದರ ಅರ್ಥ ಬೆದ್ದಲು ಬೆಳೆಗಳನ್ನು

ಹೆಚ್ಚಾಗಿ ಬೆಳೆಯುತ್ತಿದ್ದರು ಎಂದು ತಿಳಿಯುತ್ತದೆ. ಹಿಂದುಳಿದ ಪ್ರದೇಶಗಳೆಂದು ಇಂದು ಗುರುತಿಸುವ ಕಡೆ ಪ್ರಾಚೀನ ಕಾಲದಲ್ಲಿ ನೀರಾವರಿ ಭೂಮಿ ಮತ್ತು ಬೆಳೆಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಭಾಗದಲ್ಲಿ ನಡೆದಷ್ಟು ಕೃಷಿ ಚಟುವಟಿಕೆಗಳು, ಬೆಳೆದ ನೀರಾವರಿ ಬೆಳೆಗಳು(ಭತ್ತ, ಅಡಕೆ, ವೀಳೆದೆಲೆ) ಇಂದು ನೀರಾವರಿ ಪ್ರದೇಶಗಳೆಂದು ಗುರುತಿಸುವ ಮೈಸೂರು ಭಾಗದಲ್ಲಿ ಕಂಡುಬರುವುದಿಲ್ಲ. ಅಂದರೆ ಹೋಲಿಕೆಯ ಸಂಖ್ಯೆ ಪ್ರಮಾಣದಲ್ಲಿ ಕಡಿಮೆಯಾಗಿ ಕಂಡುಬರುತ್ತವೆ. ಇಂದು ಈ ಭಾಗವು ಸಮೃದ್ಧ ನೀರಾವರಿ ಪ್ರದೇಶದಿಂದ ಕೂಡಿದ್ದು, ಮುಂದುವರಿದ ಪ್ರದೇಶವೆಂದು ಖ್ಯಾತಿ ಹೊಂದಿದೆ. ಇದಕ್ಕೆ ಪ್ರಮುಖ ಕಾರಣ ನೀರಾವರಿ ಸೌಲಭ್ಯ, ಇಂದು ಬೆದ್ದಲು ಬೆಳೆ ಬೆಳೆಯುವ ಹಿಂದುಳಿದ ಪ್ರದೇಶಗಳಲ್ಲಿ ನೀರಾವರಿ ಕುಂಠಿತಗೊಂಡಿರುವುದು ಈ ಪ್ರದೇಶಗಳ ಹಿಂದುಳಿಯುವಿಕೆಗೆ ಕಾರಣವೆನ್ನಲಾಗಿದೆ. ಒಂದು ಕಡೆ ಮಳೆಯಿಂದಾಗಿ ಪ್ರಕೃತಿಯಲ್ಲಿ ಸಂಭವಿಸಿದ ಪ್ರಾಕೃತಿಕ ಬದಲಾವಣೆ. ಇನ್ನೊಂದೆಡೆ ಏಕೆ ಪ್ರಾಚೀನ ನೀರಾವರಿ ಪ್ರದೇಶಗಳು ಇಂದು ಬೆದ್ದಲುಗಳಾಗಿ ರೂಪಾಂತರ ಹೊಂದಿವೆ ಎಂಬುದು ಪ್ರಶ್ನಾರ್ಹ ಸಂಗತಿಯಾಗಿದೆ.

ಪ್ರಸ್ತುತ ಸಂದರ್ಭವನ್ನು ಗಮನಿಸಿದರೆ ಅಡಕೆಯಂತಹ ವಾಣಿಜ್ಯ ಬೆಳೆಗಳು ಏಕೆ ಬೇಕು ಎಂದು ಪ್ರಶ್ನಿಸುವ ಸ್ಥಿತಿ ಎದುರಾಗಿದೆ. ಮಾನವರು ತೀರದ ಆಸೆಗಳಿಗೆ ಬಲಿಯಾಗುತ್ತಿದ್ದಾರೆ. ಪ್ರಾಚೀನ ಸಂದರ್ಭದಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಬೆಳೆ ಬೆಳೆಯುತ್ತಿದ್ದರು. ಇಂದು ಹೆಚ್ಚುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಸಂದರ್ಭಗಳಲ್ಲಿ ಬದಲಾವಣೆಗಳು ಸಂಭವಿಸಿವೆ. ಹೆಚ್ಚು ಹೆಚ್ಚು ಅಡಕೆ ಬೆಳೆಗಳ ದ್ವಿಗುಣಗೊಳ್ಳುವಿಕೆಯಿಂದ ಸಮಾಜದ ಮೇಲೆ ಅನಾರೋಗ್ಯಕರ ಪರಿಣಾಮ ಉಂಟುಮಾಡುತ್ತಿವೆ. ತೀರದ ಲಾಭಗಳಿಕೆಯ ಉದ್ದೇಶದಿಂದ ಬೆಳೆಯುವ ಬೆಳೆಯಿಂದಾಗಿ ಅಂತರ್ಜಲ ಬರಿದಾಗುತ್ತಿದೆ. ಅಡಕೆ ಬೆಳೆ ಇರಬೇಕು. ಆದರೆ ಅದು ಮಿತಿಯನ್ನು ದಾಟಬಾರದು. ಮಾನವರು ಆ ಮಿತಿಯನ್ನು ದಾಟಿ ಮುಂದೆ ಬಂದಿರುವುದು ಪ್ರಾಕೃತಿಕ ಅವನತಿಗೆ ದಾರಿಮಾಡಿಕೊಟ್ಟಿದೆ. ಸಮಾಜಕ್ಕೆ ಈ ನಿಟ್ಟಿನಲ್ಲಿ ಅರಿವಿನ ಬೆಳಕು ಮುಟ್ಟಿಸುವ ಅಗತ್ಯ ಇಂದಿನ ದಿನಗಳಿಗೆ ಎದುರಾಗಿದೆ. ಹಾಗೆಯೇ ಇದು ಇಂದಿನ ದಿನಗಳಿಗೆ ಎದುರಾದ ಸವಾಲು ಸಹ ಆಗಿ ಪರಿಣಮಿಸಿದೆ.

**ಸಾಂಬಾರು ಪದಾರ್ಥದ ಬೆಳೆಗಳು**

ಈ ಬೆಳೆಗಳು ತೋಟದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳಾಗಿ ಕಂಡುಬರುತ್ತವೆ. ಪ್ರಾಚೀನ ಕಾಲದಿಂದಲೂ ಪಶ್ಚಿಮದ ದೇಶಗಳಿಗೆ ಈ ಪದಾರ್ಥಗಳು ರಫ್ತು ಆಗುತ್ತಿದ್ದವು. ಆ ಮೂಲಕ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವ್ಯಾಪಾರ, ವ್ಯವಹಾರಗಳ ಸಂಪರ್ಕವನ್ನು ಸಾಧಿಸಲಾಗುತ್ತಿತ್ತು. ಕ್ರಿ.ಶ. ೧೨೭೬ರ ಶಾಸನದಲ್ಲಿ[೩೮೭] ಏಲಕ್ಕಿ, ಮೆಣಸು ಬೆಳೆಗಳ ಉಲ್ಲೇಖವಿದೆ. 'ಮೆಣಸು ಪಶ್ಚಿಮ ದೇಶದ ಜನರಿಗೆ ಬಹಳ ಪ್ರಿಯವಾಗಿತ್ತು. ಶಾತವಾಹನ ಕಾಲದಲ್ಲಿ ಏಲಕ್ಕಿ, ಮೆಣಸು ರಫ್ತು ಮಾಡಿರುವುದು ತಿಳಿದುಬರುತ್ತದೆ.'[೩೮೮]

ಕ್ರಿ.ಶ. ೨೨ರ ವೇಳೆಗೆ ಪೂರ್ವ ದೇಶದಿಂದ ಮೆಣಸನ್ನು ಕೊಳ್ಳಲು ಅಪಾರ ವೆಚ್ಚವಾಗುತ್ತಿತ್ತು. ಸಂಸ್ಕೃತದಲ್ಲಿ 'ಯವನಪ್ರಿಯ' ಎಂದು ಕರೆಯುತ್ತಿದ್ದರು.[೩೮೯] ಪೂರ್ವ ದೇಶಗಳಿಂದ ಮೆಣಸು ಪಶ್ಚಿಮ ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು ಎಂಬುದು ಇದರಿಂದ ತಿಳಿದುಬರುತ್ತದೆ. ಅರ್ಥಶಾಸ್ತ್ರಕಾರನು ಸಾಂಬಾರ ಪದಾರ್ಥಗಳನ್ನು ಉಲ್ಲೇಖಿಸಿರುವನು. ಅವುಗಳು 'ಹಿಪ್ಪಲಿ(ಮೆಣಸಿನ ಒಂದು ಜಾತಿ) ಮೆಣಸು, ಶುಂಠಿ, ಜೀರಿಗೆ, ನೆಲಬೇವು, ಬಿಳಿಸಾಸಿವೆ ಇವುಗಳನ್ನು ಶುಭ ಸಮಾರಂಭ, ತಾಂತ್ರಿಕ ವಿಧಿ ವಿಧಾನದಲ್ಲಿ ಬಳಸಲಾಗುವುದು. ಕೊತ್ತುಂಬರಿ, ಗಂಟುಕಚೋರ(ಚೋರಕ), ದಮನಕ, ಮಂಗಾರ,

ಶಿಗ್ರುಕಾಂಡ, ನುಗ್ಗೆಗಳು, ಕಟುಕ(ಕಟುಕಿ) ಇದು ಒಗಚುವರ್ಗ ಇವುಗಳನ್ನು ಆಯುರ್ವೇದ ಔಷಧಿಗಳಲ್ಲಿ ಬಳಕೆ ಮಾಡಬಹುದಾಗಿದೆ.[೩೯೦] ಕ್ರಿ.ಶ. ೬೯೯ರ ಶಾಸನದಲ್ಲಿ 'ಒಂದು ಮಾನ ಅರಿಸಿನ'[೩೯೧] ಎಂದಿದೆ. ಕ್ರಿ.ಶ. ೧೦೯೪ರ ಶಾಸನದಲ್ಲಿ ಮೆಳಸು ಶುಂಠಿಯರಿಸಿನ(ಅರಿಸಿನ) ಹೇಜಿನಲು ವೀಸದ ಉಲ್ಲೇಖವಿದೆ.[೩೯೨] ಕ್ರಿ.ಶ. ೧೧೬೧ರ ಶಾಸನದಲ್ಲಿ ಮೆಳಸು, ಸಾಸಿವೆ, ಜೀರಿಗೆಯಾದಿಯಾಗಿ ಹೇಜೆಂಗೆ ಮಾನ ೨ ಅರಿಸಿನ ಅಲ್ಲ (ಶುಂಠಿ)ದ ಹೇಜೆಂಗೆ ಪಲ ೫[೩೯೩] ರ ಉಲ್ಲೇಖಗಳಿದ್ದು, ಇವುಗಳ ಮೇಲೆ ತೆರಿಗೆ ವಿಧಿಸಿರುವುದು ಕಂಡುಬರುತ್ತದೆ. ಕ್ರಿ.ಶ ೧೨೮೮ರ ಶಾಸನದಲ್ಲಿ 'ಬಿಟೆಯನಹಳಿಯ ಮೆಣಸಿನ ಸೋಯಿಸೆಟಿಯ ಮಗ ಮಾದಿಸೆಟ್ಟಿ ಕೊಟ ಗದ್ಯಾಣಂ ೧ ಪಣ ೨ ಹಲುಮನ ೧[೩೯೪] ಎಂದಿದೆ. ಮೆಣಸಿನ ವ್ಯಾಪಾರ ಮತ್ತು ವ್ಯಾಪಾರಿಯನ್ನು ಈ ಶಾಸನವು ಉಲ್ಲೇಖಿಸಿದೆ. ಕ್ರಿ.ಶ ೧೨೩೪ರಲ್ಲಿ ದೇವರಿಗೆ ಬಿಟ್ಟ ಯಲ್ಲ ಮೆಳಸು, ಅರಿಶಿನ'[೩೯೫] ಗಳ ಉಲ್ಲೇಖವಿದ್ದು, ಎತ್ತಿನ ಬಂಡಿಯಲ್ಲಿ ಬಂದು ಮಾರುವ ದೇವರ ವಸ್ತುಗಳಿಗೆ ಕೊಂಡರೂ, ಮಾರಿದರೂ ಸುಂಕವಿಲ್ಲವೆಂದಿದೆ.

ಕ್ರಿ.ಶ. ೧೧೧೧ರ ಶಾಸನದಲ್ಲಿ ಮೆಳಸು ಹೇಜೆಂಗೆ ಸೊಳ ಸ ೨'[೩೯೬] ಎಂದಿದೆ. ಮೆಳಸು(ಮೆಣಸಿಗೆ) ವಿಧಿಸಿದ ಸುಂಕದ ಕುರಿತು ಹೇಳಿದೆ. ಕ್ರಿ.ಶ. ೧೪ನೆಯ ಶತಮಾನದ ಶಾಸನದಲ್ಲಿ 'ಮೆಣಸು' ಉಲ್ಲೇಖವಿದೆ.[೩೯೭] ಕ್ರಿ.ಶ. ೧೧೪೧ರ ಶಾಸನದಲ್ಲಿ ಮೆಳಸು, ಅರಿಸಿನವಳ್ಳಿ, ಶುಣ್ಠಿ[೩೯೮] ಉಲ್ಲೇಖಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೮೧ರ ಶಾಸನದಲ್ಲಿ ಮೆಳಸಿನ ಹೇಜೆಂಗೆ ಹಾಗ ೧ ಅರಿಸಿನದ ಹೇಜೆಂಗೆ ೧' ಎಂದಿದೆ.[೩೯೯] ಕ್ರಿ.ಶ. ೧೧೬೨ರ ಶಾಸನದಲ್ಲಿ ಮುಮ್ಮರಿದಂಡಗಳು ಅರಿಸಿನ, ಮೆಳಸು, ಜೀರಿಗೆ, ಅಜವಾನ ಮೊದಲಾದ ಸಾರಿಗೆ ಸುಂಕದ ದಾನ ನೀಡಿದುದನ್ನು ಹೇಳಿದೆ.[೪೦೦] ಸೋಮೇಶ್ವರನು ತನ್ನ ಕೃತಿ ಮಾನಸೋಲ್ಲಾಸದಲ್ಲಿ ಕರಿಸಾಸಿವೆ, ಶುಂಠಿ, ಜೀರಿಗೆ, ಏಲಕ್ಕಿಗಳನ್ನು ಉಲ್ಲೇಖಿಸಿದ್ದಾನೆ.[೪೦೧] ಕ್ರಿ.ಶ. ೧೧೧೯ರ ಶಾಸನದಲ್ಲಿ ವ್ಯಾಪಾರಿಗಳು ತಾವು ಮಾರುವ ಮೆಳಸು, ಸುಂಠಿ, ಹಿಪ್ಪಲಿ, ಸಕ್ಕರೆ, ಅರಿಸಿನ, ಅಲ್ಲ, ಸಾಸುವೆ, ಜೀರಿಗೆ ಮುಂತಾದವುಗಳಿಂದ ಬರುವ ಲಾಭಾಂಶವನ್ನು ದಾನವಾಗಿ ಬಿಡುತ್ತಾರೆ.[೪೦೨] ಕ್ರಿ.ಶ. ೧೨೮೨ರ ಶಾಸನದಲ್ಲಿ ಏಲಕ್ಕಿ[೪೦೩] ಯ ಉಲ್ಲೇಖವಿದೆ. ಕ್ರಿ.ಶ ೧೨೧೦ರ ಶಾಸನದಲ್ಲಿ 'ಅರಿಸಿನ ಮೆಣಸಿನಭಾರ ಎಲೆಯಕ್ಕಿ'[೪೦೪] ಉಲ್ಲೇಖವಿದೆ. ಕ್ರಿ.ಶ. ೧೩೮೨ರ ಶಾಸನದಲ್ಲಿ ಮೆಣಸಿನ ಹೇಜಿಒಂದಕಂ ಅಡ್ಡ ಅರಿಸಿನ ಉಳ್ಳಿ ಜೀರಿಗೆ ಮೆಂಥೆಯಡಂವ ಸಬ್ಬಸಿಗೆ ಸಾಸವೆ ಮುಂತಾದ ಪ್ರತಿ ಹೇಜಿಒಂದಕ್ಕಂ ಹಾಗ ಅಲ್ಲದ ಹೇಜಿಒಂದಕ್ಕಂ ಹಾಗ.[೪೦೫] ಉಲ್ಲೇಖಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೨೧-೨೨ರ ಶಾಸನದಲ್ಲಿ ಮೆಣಸು ಉಲ್ಲೇಖವಿದೆ.[೪೦೬] ಕ್ರಿ.ಶ. ೧೨೬೭ರ ಶಾಸನದಲ್ಲಿ ಮೆಣಸಿನ ಹೇಜು ೧೦ಕ್ಕೆ ಪಣ೨ ಏಲಕ್ಕಿಯ ಹೇಜು ೧೦ಕ್ಕೆ ಪಣ೨ ಎರಡು ಸಂಭಾರದ ಹೇಜು ೧೦ಕೆ ಪಣ ೨.[೪೦೭] ಎಂದಿದೆ. ಹರಿಹರದ ಶಾಸನವೊಂದರಲ್ಲಿ ಪೊಜಿವೇಜೆಂಗೆಲೆನೂಜು ಮೆಣಸು ನೇಲಕ್ಕಿ ಸೊಲ್ಲಗೆಯುವ್ವತೆಂದಡಕೆಯುಂ ಮತ್ತಿಲ್ಲಿಮಾಜಿೂದಡಂ ತೆಜುಗಯ್ವತ್ತೆಲೆ ಕೇಣಿಕಕ್ಕಡಕೆ ಯೀರೊಂದೊಂದನೆ[೪೦೮] ಎಂದಿದೆ. ಮೆಣಸು ಬೆಳೆಯನ್ನು ಸಾಮಾನ್ಯವಾಗಿ ಅಡಕೆ ಮರಗಳಿಗೆ ಹಬ್ಬಿಸಿ ಬೆಳೆಯುವುದಿದೆ. ಕೆಲವು ಕಡೆ ಸೊಗಸೆ ಮರ, ಸಿಲ್ವರ್ ಮರ ಹಾಗೂ ತೆಂಗಿನ ಮರಗಳಿಗೆ ಹಬ್ಬಿಸಿ ಬೆಳೆಯುವುದು ಕಂಡುಬರುತ್ತದೆ. ಹೇಗೆ ಬೆಳೆದರೆಂಬ ಉಲ್ಲೇಖಗಳು ಶಾಸನದಲ್ಲಿ ದೊರೆಯುವುದಿಲ್ಲ. ಆದ್ದರಿಂದ ಪ್ರಸ್ತುತ ಸನ್ನಿವೇಶವನ್ನು ಅವಲೋಕಿಸಿ ಹಿಂದಿನದಕ್ಕೆ ಅನ್ವಯಿಸುವ ಅಗತ್ಯತೆ ಇದೆ. ಕ್ರಿ.ಶ. ೧೦೭೩ರ ಶಾಸನದಲ್ಲಿ ಮೆಣಸಿನ ಉಲ್ಲೇಖವಿದೆ.[೪೦೯] ಕ್ರಿ.ಶ. ೧೧೮೪ರ ಶಾಸನದಲ್ಲಿ 'ಮೆಳಸು' ಬೆಳೆಯನ್ನು ಉಲ್ಲೇಖಿಸಿದೆ.[೪೧೦] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಮಾಸವಾಡಿ ನಾಡೆಂತೆನೆ ಬೆಳಸಲ್ಲವಲ್ಲ(ಅಲ್ಲ) ವರಿಸನ ಮೆಣಸು ಸರಾಜಾನವಿಕ್ಷು ವ್ರಿಕ್ಷಮವೆಲ್ಲಂ ಎಂದಿದೆ.[೪೧೧] ಕ್ರಿ.ಶ. ೧೨೭೬ರ ಶಾಸನದಲ್ಲಿ ಅರಸಿನ, ಏಲಕ್ಕಿ, ಮೆಣಸು

ಉಲ್ಲೇಖವಿದೆ.[೪೧೨] ಕ್ರಿ.ಶ. ೧೧೨೫ರ ಶಾಸನದಲ್ಲಿ ಮೆಳಸು, ಅರಿಸಿನ ಮಳವೆ, ಅಲ್ಲದ ಮಳವೆ ಗಳಿಗೆ ಎತ್ತು, ಕತ್ತೆ, ಕೋಣ ಮುಂತಾಗಿ ಯಾವುದರ ಮೇಲೆ ಹೇಜಿಕೊಂಡು ಬಂದರೂ ಹಕ್ಕೆ ಒಂದು ಭಾಗ ದಸವಂದ ಕೊಡಬೇಕು ಎಂದಿದೆ.[೪೧೩]

ಕ್ರಿ.ಶ. ೧೨೮೪ ಶಾಸನದಲ್ಲಿ ಅರ್ಸಿನ, ಮೆಣಸು, ಏಲಕ್ಕಿಗಳ ಉಲ್ಲೇಖವಿದೆ.[೪೧೪] ನುಗ್ಗೇಹಳ್ಳಿಯ ಶಾಸನವೊಂದರಲ್ಲಿ ಮೆಣಸು, ಏಲಕ್ಕಿಯ ಉಲ್ಲೇಖವಿದೆ.[೪೧೫] ಪ್ರಾಚೀನ ಕಾಲದಿಂದಲೂ ಭಾರತ ದೇಶ ಸಾಂಬಾರು ಪದಾರ್ಥಗಳಿಗೆ ಹೆಸರುವಾಸಿ. ಈ ಬೆಳೆಗಳನ್ನು ತೋಟದಲ್ಲಿ ಬೆಳೆಯುತ್ತಾರೆ. ಆದರೆ ತೋಟದಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳು, ಶಾಸನಗಳಲ್ಲಿ ಕಂಡುಬರುವಂತೆ ಅವುಗಳ ಮೇಲೆ ತೆರಿಗೆ ವಿಧಿಸಿರುವುದು ಕಂಡುಬರುತ್ತದೆ. ಇವುಗಳನ್ನು ಪಾಶ್ಚಾತ್ಯ ರಾಷ್ಟ್ರಗಳಿಗೆ ರಫ್ತು ಮಾಡಿರುವುದು ಕಂಡುಬರುತ್ತದೆ. ಇವು ರಾಜ್ಯದ ಆದಾಯದ ಬೊಕ್ಕಸಕ್ಕೆ ಮೂಲಗಳಾಗಿದ್ದವು ಎಂಬುದು ಅವುಗಳಿಗೆ ಹಾಕಿರುವ ತೆರಿಗೆಗಳಿಂದ ತಿಳಿಯುತ್ತದೆ. ಸಾಮಾನ್ಯವಾಗಿ ಇಂದು ಕರಾವಳಿ, ಮಲೆನಾಡು ಭಾಗಗಳಲ್ಲಿ ಈ ಪದಾರ್ಥಗಳನ್ನು ಬೆಳೆಯಲಾಗುತ್ತಿದೆ. ಮೆಣಸು ಎಲ್ಲ ಕಡೆ ಬೆಳೆಯುವುದು ಕಂಡುಬರುತ್ತದೆ. ಉಳಿದ ಬೆಳೆಗಳು ಮಾತ್ರ ಮಲೆನಾಡಿನ ಕೆಲವು ಭಾಗಗಳಲ್ಲಿ ಕಂಡುಬರುತ್ತವೆ.

**ಎಣ್ಣೆ ಧಾನ್ಯದ ಬೆಳೆಗಳು**

ಎಣ್ಣೆ ಅಥವಾ ತೈಲವನ್ನು ಉತ್ಪತ್ತಿ ಮಾಡುವ ಧಾನ್ಯಗಳಿವು. ಇವುಗಳಲ್ಲಿ ಕೆಲವು ಆಹಾರದ ಬೆಳೆಗಳೂ ಆಗಿ ಕಂಡುಬರುತ್ತವೆ. ಅವುಗಳಿಂದ ತಯಾರಿಸಿದ ಎಣ್ಣೆಯನ್ನು ದಿನ ನಿತ್ಯದ ಅಡಿಗೆ ತಯಾರಿಯಲ್ಲಿ ಬಳಸಲಾಗುತ್ತದೆ. ಅಲ್ಲದೆ ದೇವಾಲಯದ ನಂದಾದೀವಿಗೆಗೆ ಎಣ್ಣೆಯನ್ನು ಬಳಸಲಾಗುತ್ತದೆ. ತಿಲತೇಲ(ಎಳ್ಳೆಣ್ಣೆ), ಸಾಸಪತೇಲ(ಸಾಸಿವೆಎಣ್ಣೆ), ಎರಣ್ಡ ತೇಲ(ಹರಳೆಣ್ಣೆ)ಗಳ[೪೧೬] ಉಲ್ಲೇಖಗಳು ಪಾಳಿ ಗ್ರಂಥದಲ್ಲಿ ದೊರೆಯುತ್ತವೆ. ಸಾಸಿವೆ, ಎಳ್ಳುಗಳನ್ನು ಆಹಾರಕ್ಕಾಗಿಯೂ ಬಳಸಲಾಗುತ್ತದೆ. ಅರ್ಥಶಾಸ್ತ್ರದಲ್ಲಿ ಎಳ್ಳು, ಕುಸಂಬೆ, ಅಗಸೆ, ಶೈಂಬ್ಯ(ಶೇಂಗಾ ಇರಬಹುದು), ಸಾಸುವೆಗಳ ಉಲ್ಲೇಖ ಕಂಡುಬರುತ್ತದೆ.[೪೧೭] ಕ್ರಿ.ಪೂ. ೧೫೦೦ರಲ್ಲಿ ಎಳ್ಳು, ಸಾರ್ಷಪ(ಸಾಸಿವೆ ಬೀಜ) ನಾರಅಗಸೆ ಅಥವಾ ಅಲ್ಸಿ[೪೧೮] ಗಳ ಉಲ್ಲೇಖಗಳು ಕಂಡುಬರುತ್ತವೆ. ತಿಲ ತೆಗೆದ ಪಸೆಯೇ 'ತೈಲ' ಕನ್ನಡದಲ್ಲಿ ಎಳ್‌ನೆಯ್+ಎಣ್ಣೆ, ಹರಳು, ಅಗಸೆ, ಹೊಂಗೆ ಮುಂತಾದ ವಸ್ತುಗಳಿಂದ ಎಣ್ಣೆ ತೆಗೆದರು. ಮೊದಲು ಬಳಸಿರುವುದು ಎಳನೆಯ್=ಎಳ್ಳೆಣ್ಣೆಯೇ ಇದು ಎಳ್ಳಿನಿಂದ ತಯಾರಿಸಿರುವುದು[೪೧೯] ಎಂದು ತಿಳಿಯುತ್ತದೆ. ಶಾಸನಗಳು ಎಣ್ಣೆಕಾಳುಗಳು ಮತ್ತು ಗಾಣಗಳು, ಎಣ್ಣೆ ವ್ಯಾಪಾರಿಗಳಾದ ತೆಲ್ಲಿಗರು ಮೊದಲಾದವನ್ನು ಕುರಿತು ಉಲ್ಲೇಖಿಸುತ್ತವೆ. ಕ್ರಿ.ಶ. ೬೯ರ ಶಾಸನದಲ್ಲಿ ಎರಡು ಮಾನ ಎಣ್ಣೆಯ ಸುಂಕದ ಉಲ್ಲೇಖವಿದೆ.[೪೨೦] ಬನ್ನೂರು ಗ್ರಾಮದ ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ 'ಎಳ್ಳುಂ' ಪದದ ಉಲ್ಲೇಖ ದೊರೆಯುತ್ತದೆ.[೪೨೧] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ 'ಎಳ್ಳು'[೪೨೨] ಉಲ್ಲೇಖವಿದೆ.

ಕ್ರಿ.ಶ. ೧೨೭೬ರ ಶಾಸನದಲ್ಲಿ ಎಳ್ಳು ಬೆಳೆಯ ಉಲ್ಲೇಖವಿದೆ.[೪೨೩] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ 'ಹರಳಿಯ ಹಾಳ' ಉಲ್ಲೇಖವಿದೆ.[೪೨೪] ಕ್ರಿ.ಶ. ೧೨೧೮ರ ಶಾಸನವು ದೇವರ ನಂದಾದೀವಿಗೆಗೆ ಎಳ್ಳಕೆಯಿ ಕಂಬ ೩೦' ದೇವರ ದೀಪ ಧೂಪಗಳಿಗೆ ಎಳ್ಳು ಬೆಳೆಯುವ ೩೦ ಕಂಬ ಭೂಮಿಯನ್ನು ಬಿಟ್ಟರೆಂದು ಶಾಸನವು ತಿಳಿಸಿದೆ.[೪೨೫] ಕ್ರಿ.ಶ. ೧೧೪೩ರ ಶಾಸನದಲ್ಲಿ ತೆಲ್ಲಿಗರು ಗಾಣಕ್ಕೆ ಬಿಟ್ಟ ಎಣ್ಣೆ ಸೊಲ್ಲಗೆ[೪೨೬] ಎಂದಿದೆ. ಗಾಣಗಳು ಉಲ್ಲೇಖಿತಗೊಂಡ ಕಡೆಗಳಲ್ಲಿ ಎಣ್ಣೆ ಕಾಳುಗಳನ್ನು ಬೆಳೆಯುತ್ತಿದ್ದಿರುವ ಸಾಧ್ಯತೆಗಳು ಹೆಚ್ಚಿವೆ.

ಗಾರೆಹಟ್ಟಿಯ ಶಾಸನವೊಂದರಲ್ಲಿ ಎಣ್ಣೆಯ ಕೊಡಕ್ಕೆ ಎಣ್ಣೆ ಮಾನ ೧'[೪೨೭] ಎಂದಿದೆ. ಕ್ರಿ.ಶ. ೧೧೬೦ರ ಶಾಸನದಲ್ಲಿ ಎಲ್ಲ ಗಾಣಿಗರು ಗಾಣ ಬಿಡುವುದನ್ನು ಹೇಳಿದೆ.[೪೨೮] ಗಾಣವಿದೆ ಎಂದರೆ ಅಲ್ಲಿ ಎಣ್ಣೆ ಕಾಳುಗಳನ್ನು ಬೆಳೆದಿರುವ ಸಾಧ್ಯತೆಗಳಿವೆ ಎನ್ನಲಾಗಿದೆ. ಕ್ರಿ.ಶ. ೧೨೦೭ರ ಶಾಸನದಲ್ಲಿ ಐವತ್ತೊಕ್ಕಲು ತಾವು ಕೊಂಡುಕೊಳ್ಳುವ ಎಳ್ಳಿಗೆ ಹೊಂಗೆ ವೀಸವನ್ನು, ಗಾಣಕ್ಕೆ ದಿನಕ್ಕೆ ಸೊಲಿಗೆ ಎಣ್ಣೆಯನ್ನು ಬಿಡುತ್ತಾರೆ[೪೨೯] ಎಂದು ತಿಳಿಸುತ್ತದೆ. ಕ್ರಿ.ಶ. ೧೧೬೧ರ ಶಾಸನದಲ್ಲಿ ದೇವರ ಸೊಡರಿಗೆ ಎತ್ತು ಗಾಣದಲು ಸೊಳ ೨ ಕೈಗಾಣದಲು ಸೊ ೧[೪೩೦] ರ ಉಲ್ಲೇಖವಿದೆ. ಎತ್ತು ಮತ್ತು ಕೈಗಾಣ ಎರಡರಿಂದಲೂ ಎಣ್ಣೆ ತಯಾರಿಸಲಾಗುತ್ತಿತ್ತು. ಇದಕ್ಕೆ ತೆರಿಗೆಗಳನ್ನು ವಿಧಿಸುವುದು ಭಿನ್ನವಾಗಿ ಕಂಡುಬಂದಿದೆ. ಕೈಯಲ್ಲಿ ತಯಾರಿಸಿದರೆ ಅಧಿಕ ಶ್ರಮ ಕಡಿಮೆ ಎಣ್ಣೆಯ ಉತ್ಪಾದನೆಯ ದೃಷ್ಟಿಯಿಂದ ೧ ಸೊಡರು ವಿಧಿಸಲಾಗುತ್ತಿತ್ತು. ಎತ್ತಿನ ಗಾಣದಲ್ಲಿ ಶ್ರಮ ಕಡಿಮೆ ಅಧಿಕ ಎಣ್ಣೆ ಉತ್ಪಾದನೆಯಾಗುತ್ತದೆ. ಇದಕ್ಕೆ ಸುಂಕ ೨ ಸೊಡರು ಎಂಬುದನ್ನು ತಿಳಿಸುತ್ತದೆ.

ಕ್ರಿ.ಶ. ೧೧೩೪ ಶಾಸನದಲ್ಲಿ ಹೊಂಗೆಯನ್ನು ಮಾರಿದರೆ ಕೊಂಡರೆ ಮಾನ ೧ ಎಂದಿದೆ.[೪೩೧] ಕ್ರಿ.ಶ. ೧೧೭೬ರ ಶಾಸನದಲ್ಲಿ ಹೊಂಗೆ ಮಾರಿದರೆ ಕೊಂಡರೆ ಮಾನ ೧[೪೩೨] ಹೊಂಗೆಯನ್ನು ಸಂತೆಯಲ್ಲಿ ಮಾರಾಟ ಮಾಡಲಾಗುತ್ತಿತ್ತು ಎಂದು ಈ ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ ೧೧೬೨ರ ಶಾಸನದಲ್ಲಿ ಹೊಂಗೆಯ ಸಾರಿಗೆ ಸುಂಕ ಬಿಟ್ಟಿದ್ದನ್ನು[೪೩೩] ಹೇಳಿದೆ. ಹೊಂಗೆಯನ್ನು ಎಣ್ಣೆಗಾಗಿ ಬಳಸುತ್ತಿದ್ದರು. ಅಡಕೆ, ತೆಂಗು ಮೊದಲಾದ ತೋಟಗಳಿಗೆ ಹೊಂಗೆ ಸೊಪ್ಪನ್ನು ಗೊಬ್ಬರವಾಗಿ ಬಳಕೆ ಮಾಡಲಾಗುತ್ತಿತ್ತು.

ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ 'ಎಳ್ಳು ಸಲಗೆ'[೪೩೪] ಎಂದು ಉಲ್ಲೇಖಿಸಿದೆ. ಕ್ರಿ.ಶ. ೧೨೬೧ರ ಶಾಸನದಲ್ಲಿ ಎಳ್ಳು.....ಕಾರುಂಣ್ಯ ಬಿಟ್ಟಿಯಭಂಡಿ'[೪೩೫] ಉಲ್ಲೇಖವಿದೆ. ಕ್ರಿ.ಶ ೧೩೮೨ರ ಶಾಸನದಲ್ಲಿ ಎಳ್ಳು ಅಗಸೆ ಕುಸುಬೆ.........ಪ[೪೩೬] ಎಂದು ಉಲ್ಲೇಖಿಸಿದೆ. ಕ್ರಿ.ಶ. ೧೨೪೩ರ ಶಾಸನದಲ್ಲಿ 'ಎಳ್ಳು'ಸ ೩ ಕೊ ೪ ಕಂ ಗ ೧ ಪ'[೪೩೭] ಎಂದಿದೆ. ತ್ರಿಭುವನ ಮಲ್ಲನ ಶಾಸನವೊಂದರಲ್ಲಿ 'ಎಳ್ಳು' ಬೆಳೆಯ ಉಲ್ಲೇಖವಿದೆ.[೪೩೮]

ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಶ್ರೀಗಂಧದ ಉಲ್ಲೇಖವಿದೆ.[೪೩೯] ಶ್ರೀಗಂಧವು ಧಾರ್ಮಿಕವಾಗಿ ದೇವರ ಪೂಜೆಗೆ ಗಂಧಾರ್ಚನೆ ಮಾಡಲು ಉಪಯೋಗವಾಗುತ್ತದೆ. ಶ್ರೀಗಂಧದೆಣ್ಣೆ ತಯಾರಿಕೆಗೂ ಇದನ್ನು ಬಳಸಲಾಗುತ್ತದೆ. ಸೌಂದರ್ಯ ಲೇಪನಗಳಿಗಾಗಿಯೂ ಸಹ ಬಳಸುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಕನ್ನಡ ನಾಡಿನಲ್ಲಿ ಹೇರಳವಾಗಿ ಬೆಳೆದುಬಂದಿದೆ. ಆ ಕಾರಣಕ್ಕಾಗಿ "ಕನ್ನಡ ನಾಡನ್ನು ಶ್ರೀಗಂಧದ ಬೀಡು" ಎಂದೆಲ್ಲ ಕರೆಯುವುದಿದೆ. ಆರ್ಥಿಕವಾಗಿ ಅತ್ಯಂತ ಲಾಭದಾಯಕ ಗಣಿ ಇದಾಗಿದೆ.

ಕ್ರಿ.ಶ. ೧೧೭೫ರ ಶಾಸನದಲ್ಲಿ ಹರಳಿ ಎಣ್ಣೆ ೨೦೦[೪೪೦] ಉಲ್ಲೇಖವಿದೆ. ಕ್ರಿ.ಶ. ೧೨೭೬ರ ಶಾಸನದಲ್ಲಿ ಎಳ್ಳು[೪೪೧] ಉಲ್ಲೇಖವಿದೆ. ಕ್ರಿ.ಶ. ೧೨೮೪ರ ಶಾಸನವು 'ಎಳ್ಳು' ಉಲ್ಲೇಖವಿದೆ.[೪೪೨] ಕ್ರಿ.ಶ. ೧೨೪೮ರ ಶಾಸನದಲ್ಲಿ 'ಎಳ್ಳು' ಉಲ್ಲೇಖವಿದೆ.[೪೪೩] ಪ್ರಾಚೀನ ಕಾಲದಿಂದಲೂ ಇಂದಿಗೂ ಬೆಳೆದುಬಂದ ಈ ಕಿರಿ ಧಾನ್ಯವು ಎಣ್ಣೆಗಾಗಿ ಬಳಸಿದ ಪ್ರಾಚೀನ ಧಾನ್ಯವಾಗಿದೆ. ಶಾಸನಗಳಲ್ಲಿ ಈ ಎಣ್ಣೆ ಧಾನ್ಯದಷ್ಟು ಉಲ್ಲೇಖ ಮತ್ತಾವ ಎಣ್ಣೆ ಧಾನ್ಯದ್ದು ಅಷ್ಟಾಗಿ ಇರುವುದು ಕಂಡುಬರುವುದಿಲ್ಲ. ಇದು ಖರ್ಚಿಲ್ಲದ ಮತ್ತು ಲಾಭದಾಯಕ ಬೆಳೆ. ಇದಕ್ಕೆ ಯಾವುದೇ ರಾಸಾಯನಿಕ ರಸಗೊಬ್ಬರ, ಔಷಧಿಗಳ ಅಗತ್ಯವಿಲ್ಲದೆ ಬೆಳೆಯುತ್ತದೆ. ಆದರೆ ಈ ಬೆಳೆಯನ್ನು ಪ್ರತಿವರ್ಷ ಒಂದೇ ಭೂಮಿಗೆ ಹಾಕಿದರೆ ಭೂಮಿಯು ಸತ್ವಹೀನ ಮತ್ತು ವಿಷಪೂರಿತವಾಗುತ್ತದೆ. ಭೂಮಿಯಲ್ಲಿ ಕೂಳೆ ಬದಲಿಸಿ

ಬೆಳೆ ಬೆಳೆಯಬೇಕು. ಇದನ್ನು ಮುಂಗಾರಿನಲ್ಲಿ ಬೆದ್ದಲು ಭೂಮಿಯಲ್ಲಿ ಬೆಳೆಯುವ ಮಳೆಗಾಲದ ಬೆಳೆಯಾಗಿದೆ. ಈ ಬೆಳೆ ಬೆಳೆದ ನಂತರ ಹುರುಳಿ, ರಾಗಿ, ನವಣೆ, ಸಾವೆ ಬೆಳೆಗಳನ್ನು ಸಹ ಬೆಳೆಯಬಹುದಾಗಿದೆ. ಆರೋಗ್ಯದ ದೃಷ್ಟಿಯಿಂದಲೂ ಎಣ್ಣೆಯ ದೃಷ್ಟಿಯಿಂದಲೂ ಸತ್ವಯುತವಾದ ಬೆಳೆಯಾಗಿದೆ. ಆರ್ಥಿಕವಾಗಿಯೂ ಲಾಭದಾಯಕ ಬೆಳೆಗಳು ಎಣ್ಣೆ ಧಾನ್ಯದ ಬೆಳೆಗಳಾಗಿವೆ.

## ಅಡಿಟಿಪ್ಪಣಿಗಳು

೧. ಇರ್ಫಾನ್ ಹಬೀಬ್, ಭಾರತ ಚರಿತ್ರೆಯಲ್ಲಿ ರೈತ, ಪು. ೫
೨. ಕೃಷ್ಣಮೋಹನ್ ಶ್ರೀಮಾಲಿ, ಕಬ್ಬಿಣದ ಯುಗ ಮತ್ತು ಧಾರ್ಮಿಕ ಕ್ರಾಂತಿ,(ಕನ್ನಡಕ್ಕೆ) ದಿವಾಕರ ನಾ., ಪು. ೧೪
೩. ಅದೇ, ಪು. ೧೪.
೪. ಅದೇ, ಪು. ೧೫.
೫. ಅದೇ, ಪು. ೧೬.
೬. ಅದೇ, ಪು. ೧೬
೭. ಇರ್ಫಾನ್ ಹಬೀಬ್, ವಿಜಯಕುಮಾರ್ ಠಾಕೂರ್, ವೈದಿಕಯುಗ(ಅನು) ಚಂದ್ರಪ್ಪ ಸಿ., ಪ್ರದೀಪ ಬಿ. ಪು. ೫
೮. ಅದೇ, ಪು. ೮.
೯. ಅದೇ, ಪು. ೮.
೧೦. ಅದೇ, ಪು. ೮.
೧೧. ಅದೇ, ಪು, ೯.
೧೨. ರಂಗಸ್ವಾಮಯ್ಯ ಜಿ.ಆರ್., ಪ್ರಾಚೀನ ಭಾರತ, ಪು. ೩೧.
೧೩. ಅದೇ, ಪು. ೩೧.
೧೪. ಅದೇ, ಪು. ೫೪.
೧೫. ಇರ್ಫಾನ್ ಹಬೀಬ್, ವಿವೇಕಾನಂದ ಝಾ.,(ಕನ್ನಡಕ್ಕೆ) ನಗರಗೆರೆ ರಮೇಶ್, ಮೌರ್ಯರ ಕಾಲದ ಭಾರತ, ಪು, ೧೨೮–೧೨೯.
೧೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೦೪.
೧೭. ಅದೇ, ಪು. ೪೦೪.
೧೮. ಶೆಟ್ಟರ್ ಷ., ಹಳಗನ್ನಡ ಲಿಪಿ, ಲಿಪಿಕಾರ, ಲಿಪಿವ್ಯವಸಾಯ, ಪು. ೩೬೬.
೧೯. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೮೫–೧೮೬.
೨೦. ಅದೇ, ಪು. ೧೮೬.
೨೧. ಅದೇ, ಪು. ೧೮೬.
೨೨. ಅದೇ, ಪು. ೧೮೫.
೨೩. ಅದೇ, ಪು. ೧೮೫.
೨೪. ಅದೇ, ಪು. ೧೮೫.
೨೫. ರಂಗಸ್ವಾಮಿ ಎ., ಚಾವುಂಡರಾಯನ ಲೋಕೋಪಕಾರ: ಒಂದು ಅಧ್ಯಯನ, ಪು. ೮೯.
೨೬. ಅದೇ, ಪು. ೯೦.
೨೭. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೮೪.
೨೮. ಅದೇ, ಪು. ೧೮೫.
೨೯. ಅದೇ, ಪು. ೧೮೫.
೩೦. ಅದೇ, ಪು. ೧೮೪.
೩೧. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೪೦.
೩೨. ರಂಗಸ್ವಾಮಯ್ಯ ಜಿ.ಆರ್., ಪ್ರಾಚೀನ ಭಾರತ, ಪು. ೪೦.
೩೩. ಅದೇ, ಪು. ೩೧.

೩೪. ಇರ್ಫಾನ್ ಹಬೀಬ್, ವಿವೇಕಾನಂದ ಝಾ., ಮೌರ್ಯರ ಕಾಲದ ಭಾರತ,(ಕನ್ನಡಕ್ಕೆ) ನಗರಗೆರೆ ರಮೇಶ್, ಪು. ೧೨೯.
೩೫. ಕೃಷ್ಣಮೋಹನ್ ಶ್ರೀಮಾಲಿ, ಕಬ್ಬಿಣದಯುಗ ಮತ್ತು ಧಾರ್ಮಿಕ ಕ್ರಾಂತಿ,(ಕನ್ನಡಕ್ಕೆ) ದಿವಾಕರ ನಾ. ಪು. ೧-೧೭.
೩೬. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೮.
೩೭. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೧೭೦
೩೮. SII. Vol. XXVll . ೨೦೩
೩೯. MAR(1932) P. ೨೪೦.
೪೦. EC. Vol. VII, ಕೃಷ್ಣರಾಜಪೇಟೆ ೬೦.
೪೧. ಅದೇ, VI, ಪಾಂಡವಪುರ ೧೫.
೪೨. ಅದೇ, V, ಮೈಸೂರು ೫೯.
೪೩. ಅದೇ, l, ಕೊಡಗು ೯೭.
೪೪. ಅದೇ, V, ಟಿ.ನರಸೀಪುರ ೯೧.
೪೫. ಅದೇ, IV, ಚನ್ನರಾಯಪಟ್ಟಣ ೮೧.
೪೬. ಅದೇ, III, ಗುಂಡ್ಲುಪೇಟೆ ೫೬.
೪೭. ಅದೇ, ೧೭೧.
೪೮. ಕ.ವಿ.ಹಂ.ಶಾ.ಸಂ.೯, ಬಾಗಲಕೋಟೆ ೪೧.
೪೯. ಅದೇ, ಜಮಖಂಡಿ ೮.
೫೦. ಅದೇ, ೧೦, ಬಿಜಾಪುರ ೩೪.
೫೧. ಅದೇ, ೩೮.
೫೨. ಅದೇ, ೮, ಹುಮನಾಬಾದ್ ೧.
೫೩. ಅದೇ, ೭, ದೇವದುರ್ಗ ೩.
೫೪. ಅದೇ, ೮, ಬಸವಕಲ್ಯಾಣ ೧೭.
೫೫. ಅದೇ, ೯, ಹುನಗುಂದ ೧೨೭.
೫೬. ಅದೇ, ೧೦, ಬಿಜಾಪುರ ೪೧.
೫೭. ಅದೇ, ೪೫.
೫೮. ಅದೇ, ೪೭.
೫೯. ಅದೇ, ೭, ದೇವದುರ್ಗ ೩.
೬೦. ಅದೇ, ೪.
೬೧. EC(ರೈ.ಸಂ). Vol. XII, ಶಿಕಾರಿಪುರ ೧೯೦.
೬೨. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೬೮.
೬೩. ಅದೇ, ಇಂಡಿ ೩೨.
೬೪. SII. Vol. XV-Part-1, ೬೦
೬೫. EC. Vol. XV, ಹೊಸನಗರ ೭.
೬೬. ಅದೇ, ೧೯.
೬೭. ಅದೇ, ಸಾಗರ ೩.
೬೮. SII. Vol. XV-Part-1, ೭೩.
೬೯. EC(ರೈ.ಸಂ). Vol. XI, ದಾವಣಗೆರೆ ೩೯.
೭೦. ಅದೇ, ೧೦೫.
೭೧. ಕ.ವಿ.ಹಂ.ಶಾ.ಸಂ.೧೦, ಇಂಡಿ ೭೧.

೭೨. EC(ರೈ.ಸಂ). Vol. XI, ಬೆಂಗಳೂರು ೬.
೭೩. SII. Vol. XV-Part-1, ೧೩೫.
೭೪. ಅದೇ, ೨೩೦.
೭೫. ಅದೇ, ೨೩೩.
೭೬. ಕ.ವಿ.ಹಂ.ಶಾ.ಸಂ,೧, ಹಗರಿಬೊಮ್ಮನಹಳ್ಳಿ ೧.
೭೭. ಅದೇ, ೭, ದೇವದುರ್ಗ ೧೩.
೭೮. SII. Vol. XXVII, ೨೧೦.
೭೯. ಅದೇ, ೨೧೬.
೮೦. SII. Vol. XI-BKI Vol-1, Part-II, ೧೭೨.
೮೧. ಅದೇ, ೨೦೬.
೮೨. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೨೯.
೮೩. ಅದೇ, ೪೧.
೮೪. ಅದೇ, ಮಾನ್ವಿ ೮೭.
೮೫. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೮.
೮೬. ಕ.ವಿ.ಹಂ.ಶಾ.ಸಂ.೧, ಹೂವಿನಹಡಗಲಿ ೧೦೦.
೮೭. ಅದೇ, ೧೦೩.
೮೮. EC. Vol. III, ನಂಜನಗೂಡು ೨೦೪.
೮೯. ಅದೇ, ೨೭೪.
೯೦. ಅದೇ, ೨೯೪.
೯೧. EC(ರೈ.ಸಂ). Vol. XI, ಮೊಳಕಾಲ್ಮೂರು ೪೧.
೯೨. EC. Vol. VIII, ಹೊಳೇನರಸಿಪುರ ೧.
೯೩. ಅದೇ, ಹಾಸನ ೨೮.
೯೪. ಅದೇ, ೬೭.
೯೫. ಅದೇ, ೯೫.
೯೬. ಅದೇ, ೧೧೨.
೯೭. ಅದೇ, VIII, ಆಲೂರು ೨೩.
೯೮. ಅದೇ, XII, ತರೀಕೆರೆ ೪೫.
೯೯. ಅದೇ, ೯೬.
೧೦೦. ಅದೇ, XI, ಚಿಕ್ಕಮಗಳೂರು ೩೮.
೧೦೧. ಅದೇ, ೧೪೭.
೧೦೨. ಅದೇ, ೧೭೭.
೧೦೩. ಅದೇ, ಮೂಡಗೆರೆ ೧೬.
೧೦೪. ಅದೇ, ೨೦.
೧೦೫. ಅದೇ, ೨೫.
೧೦೬. ಅದೇ, ೮೫.
೧೦೭. SII. Vol. IX-Part-I, ೨೯೬.
೧೦೮. ಅದೇ, ೩೪೧.
೧೦೯. ಅದೇ, ೩೬೦,
೧೧೦. ಕ.ವಿ.ಹಂ.ಶಾ.ಸಂ.೧೦, ಸಿಂಧಗಿ ೫೧.

೧೧೧. EC. Vol. X, ಅರಸೀಕೆರೆ ೬೦.
೧೧೨. ಅದೇ, ೨೮೬.
೧೧೩. ಅದೇ, ೩೧೨.
೧೧೪. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ; ಇತಿಹಾಸ ಅನ್ವೇಷಣೆ, ಪು. ೪೧.
೧೧೫. ಅದೇ, ಪು. ೪೧.
೧೧೬. ಅದೇ, ಪು. ೪೧.
೧೧೭. ಅದೇ, ಪು. ೪೧.
೧೧೮. ಘನಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೧೬೧.
೧೧೯. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೬೩.
೧೨೦. ನರಸಿಂಹಶಾಸ್ತ್ರಿ ಕೆ.ಎಲ್., ಆದಿಪುರಾಣ,(ಗದ್ಯಾನುವಾದ) ಪು. ೫೯-೬೦.
೧೨೧. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೫೭
೧೨೨. ಕುಕ್ಕಿಲ ಭಟ್ಟ,(ಕನ್ನಡಕ್ಕೆ) ಸಿಲಪ್ಪದಿಗಾರಂ, ಪು. ೩೬.
೧೨೩. EC. Vol. VI, ಕೃಷ್ಣರಾಜಪೇಟೆ ೬೦.
೧೨೪. Gururajachar.S., Some Arpects of Econnomic and Social Life in Karnataka, P-1.
೧೨೫. ಕಲಬುರ್ಗಿ ಎಂ.ಎಂ.,(ಸಂ) ಸೋಮೇಶ್ವರ ವಿರಚಿತ, ಮಾನಸೋಲ್ಲಾಸ, ಸಂಪುಟ-೧, ಪು. ೩೩೬.
೧೨೬. ಅದೇ, ಪು. ೭೬೧
೧೨೭. ಶಂಕರ ಕೆದಿಲಾಯ ಎ., ಪೆರಿಯ ಪುರಾಣಂ, ಸಂಪುಟ-೧, ಪು. ೩೧೬.
೧೨೮. ರಾಗೌ,(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು, ಪು. ೧೪೪.
೧೨೯. Lallanji Gopal and V.C., Srivastava,(Ed) History of Agriculture in India, P. ೧೨೦
೧೩೦. ಅದೇ, ಪು. ೧೨೦.
೧೩೧. Lallanji Gopal and V.C., Srivastava,(Ed) History of Agriculture in India, P. ೧೨೦. It was the Cereal Gift of the goddess ceres or to the Egyptians, the Giftof Isis,
೧೩೨. ಅದೇ, ಪು. ೧೨೦.
೧೩೩. ವಿರುಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೯.
೧೩೪. Lallanji Gopal and V.C., Srivastava,(Ed) History of Agriculture in India, P. ೧೨೧
೧೩೫. ವಿರುಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೯.
೧೩೬. Lallanji Gopal and V.C., Srivastava,(Ed) History of Agriculture in India, P. ೧೨೬.
೧೩೭. ಅದೇ, ಪು. ೧೨೬.
೧೩೮. ಅದೇ, ಪು. ೧೨೬.
೧೩೯. ಅದೇ, ಪು. ೧೨೭.
೧೪೦. ಅದೇ, ಪು. ೧೨೭.
೧೪೧. ಅದೇ, ಪು. ೧೨೭.
೧೪೨. ಅದೇ, ಪು. ೧೨೬.
೧೪೩. ಅದೇ, ಪು. ೧೨೭.

೧೪೪. ಅದೇ, ಪು. ೧೨೭.
೧೪೫. ಅದೇ, ಪು. ೧೩೩.
೧೪೬. ಅದೇ, ಪು. ೧೩೪.
೧೪೭. ಅದೇ, ಪು. ೧೩೩.
೧೪೮. ಅದೇ, ಪು. ೧೩೪.
೧೪೯. ಅದೇ, ಪು. ೧೩೫.
೧೫೦. ರಂಗಸ್ವಾಮಯ್ಯ ಜಿ.ಆರ್., ಪ್ರಾಚೀನ ಭಾರತ, ಪು. ೫೪.
೧೫೧. ಶರ್ಮ ಆರ್.ಎಸ್., ಪ್ರಾಚೀನ ಭಾರತ, ಪು. ೪೬.
೧೫೨. ಕೃಷ್ಣಮೋಹನ್ ಶ್ರೀಮಾಲಿ,(ಕನ್ನಡಕ್ಕೆ) ದಿವಾಕರ ನಾ, ಕಬ್ಬಿಣ ಯುಗ ಮತ್ತು ಧಾರ್ಮಿಕ ಕ್ರಾಂತಿ, ಪು. ೧೪.
೧೫೩. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೮೪.
೧೫೪. ಅದೇ, ಪು, ೧೫೫
೧೫೫. ಕಲಬುರ್ಗಿ ಎಂ.ಎಂ.,(ಸಂ) ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ-೧, ಪು. ೩೪೧.
೧೫೬. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೨೦.
೧೫೭. ಚಿನ್ನಸ್ವಾಮಿ ಸೋಸಲೆ. ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ, ಸಂಪುಟ, ಪು. ೨೪೮.
೧೫೮. ಅದೇ, ಪು, ೨೪೮.
೧೫೯. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೨೯.
೧೬೦. ಇತಿಹಾಸ ದರ್ಶನ, ೨೦೧೭, ಪು. ೬೫-೬೬.
೧೬೧. EC. Vol. XII, ತರೀಕೆರೆ ೬೯.
೧೬೨. ಕ.ವಿ.ಹಂ.ಶಾ.ಸಂ.೧, ಹೂವಿನಹಡಗಲಿ ೧.
೧೬೩. EC. Vol. IX, ಬೇಲೂರು ೧೭೧.
೧೬೪. ಅದೇ, X, ಚನ್ನರಾಯಪಟ್ಟಣ ೧೧೩.
೧೬೫. ಅದೇ, ೭೫.
೧೬೬. ಕರ್ನಾಟಕ ಪರಂಪರೆ, ಸಂಪುಟ-೧, ಪು. ೨೬೯.
೧೬೭. ಕಲಬುರ್ಗಿ ಎಂ.ಎಂ.,(ಸಂ) ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ-೧, ಪು. ೩೩೭.
೧೬೮. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೫೩.
೧೬೯. ಅದೇ, ಪು, ೧೫೪.
೧೭೦. ಅದೇ, ಪು. ೧೩೪.
೧೭೧. ಕ.ವಿ.ಹಂ.ಶಾ.ಸಂ.೯, ಬದಾಮಿ ೭೮.
೧೭೨. EC. Vol. II, ಶ್ರವಣಬೆಳಗೊಳ೧೬೫.
೧೭೩. ಅದೇ, V, ಕೃಷ್ಣರಾಜಪೇಟೆ ೪೪.
೧೭೪. ಅದೇ, ಟಿ.ನರಸೀಪುರ ೮೮.
೧೭೫. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೮.
೧೭೬. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೧.
೧೭೭. ಅದೇ, ೯, ಹುನಗುಂದ ೧೨.

೧೭೮. ಅದೇ, ೧೦, ಬಾಗೇವಾಡಿ ೨೨.
೧೭೯. ಅದೇ, ಬಾಗೇವಾಡಿ ೪೮.
೧೮೦. ಅದೇ, ಮುದ್ದೇಬಿಹಾಳ ೫೪.
೧೮೧. EC. Vol. XII, ಕಡೂರು ೧೯೯.
೧೮೨. ಸೂರ್ಯನಾಥ ಕಾಮತ್, ಒಕ್ಕಲುತನ ಮತ್ತು ಒಕ್ಕಲಿಗರು: ಇತಿಹಾಸ ಅನ್ವೇಷಣೆ, ಪು. ೧೭
೧೮೩. ಅದೇ, ಪು. ೧.
೧೮೪. ಅದೇ, ಪು. ೧೮.
೧೮೫. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೧೦.
೧೮೬. ಅದೇ, ೧೩.
೧೮೭. EC. Vol. VIII, ಅರಕಲಗೂಡು ೧೦೧.
೧೮೮. ಅದೇ, XI, ಮೂಡಗೆರೆ ೮೮.
೧೮೯. ಅದೇ, IX, ಬೇಲೂರು ೧೭೦.
೧೯೦. ಅದೇ, ೧೭.
೧೯೧. ಅದೇ, ೩೦೯.
೧೯೨. ಅದೇ, ೩೫೧.
೧೯೩. EC(ರೈ.ಸಂ). Vol. IX, ಬೆಂಗಳೂರು ೬.
೧೯೪. EC. Vol. XV, ಸಾಗರ ೫೧.
೧೯೫. ಅದೇ, XV, ಬೇಲೂರು ೧೦೯.
೧೯೬. ಅದೇ, ೧೩೫.
೧೯೭. EC(ರೈ.ಸಂ). Vol. Vll ಶಿಕಾರಿಪುರ ೩೨೧.
೧೯೮. S11. Vol. VX, ೧೪೯.
೧೯೯. ಅದೇ, ೧೭೬.
೨೦೦. EC. Vol. V, ಟಿ.ನರಸೀಪುರ ೮೮.
೨೦೧. ಕ.ವಿ.ಹಂ.ಶಾ.ಸಂ.೨, ಕೊಪ್ಪಳ ೧೪೮.
೨೦೨. EC. Vol.VII, ನಾಗಮಂಗಲ ೭೨.
೨೦೩. ಅದೇ, X, ಚನ್ನರಾಯಪಟ್ಟಣ ೧೧೩.
೨೦೪. ಅದೇ, ಅರಸೀಕೆರೆ ೨೮೬.
೨೦೫. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೫೫.
೨೦೬. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೮.
೨೦೭. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೧೦.
೨೦೮. ಅದೇ, ೪೭.
೨೦೯. ಅದೇ, ೯, ಜಮಖಂಡಿ ೩೧.
೨೧೦. ಅದೇ, ೨೧.
೨೧೧. ಅದೇ, ಬಾಗೇವಾಡಿ ೨೨.
೨೧೨. ಅದೇ, ೧, ಹೂವಿನಹಡಗಲಿ ೧.
೨೧೩. ಅದೇ, ೭, ದೇವದುರ್ಗ ೩.
೨೧೪. EC. Vol. IX, ಬೇಲೂರು ೩೧೧.
೨೧೫. ಕಲಬುರ್ಗಿ ಎಂ.ಎಂ., ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ–೨, ಪು. ೭೬೧.

೨೧೬. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೭೯.
೨೧೭. ಘನ ಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೯೨.
೨೧೮. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೨೭.
೨೧೯. EC. Vol. XII, ಕಡೂರು ೨೪.
೨೨೦. ಕ.ವಿ.ಹಂ.ಶಾ.ಸಂ.೨, ಕುಷ್ಟಗಿ ೨೧.
೨೨೧. ಶಿವಾನಂದ ವಿ.(ಸಂ) ಹೈದರಾಬಾದ ಕರ್ನಾಟಕ ಕನ್ನಡ ಶಾಸನಗಳು, ಪು. ೧೪೯.
೨೨೨. ಅದೇ, ಪ್ರಸ್ತಾವನೆ, ಪು. XXXV
೨೨೩. ಕ.ವಿ.ಹಂ.ಶಾ.ಸಂ.೧೦,ಇಂಡಿ ೫೮.
೨೨೪. ಅದೇ, ೯, ಬೀಳಗಿ ೧.
೨೨೫. EC. Vol. II, ಶ್ರವಣಬೆಳಗೊಳ ೨೪೧ ಮತ್ತು ೨೪೨.
೨೨೬. ಅದೇ, XII, ಕಡೂರು ೯.
೨೨೭. ಅದೇ, ೬೬.
೨೨೮. ಅದೇ, ೬೬.
೨೨೯. ರಾಗೌ.(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು, ಪು. ೧೪೪.
೨೩೦. EC. Vol. XI, ಚಿಕ್ಕಮಗಳೂರು ೧೧೩.
೨೩೧. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೩೪.
೨೩೨. EC. Vol. V, ಮೈಸೂರು ೧೦೨.
೨೩೩. ರಂಗಸ್ವಾಮಿ ಎ., ಲೋಕೋಪಕಾರ ಒಂದು ಅಧ್ಯಯನ, ಪು. ೧೫೫.
೨೩೪. ಚಿನ್ನಸ್ವಾಮಿ ಸೋಸಲೆ. ಎನ್., ರಮೇಶ ನಾಯಕ,. ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೮.
೨೩೫. ಅದೇ, ಪು. ೨೪೮.
೨೩೬. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು: ಕೌಟಿಲೀಯ ಅರ್ಥಶಾಸ್ತ್ರ, ಪು. ೧೫೪.
೨೩೭. ಅದೇ, ಪು. ೧೫೫.
೨೩೮. EC. Vol. II, ಶ್ರವಣಬೆಳಗೊಳ ೧೭೦.
೨೩೯. ಕ.ವಿ.ಹಂ.ಶಾ.ಸಂ.೯, ಬಾಗಲಕೋಟೆ ೧೯.
೨೪೦. EC. Vol. XI, ಚಿಕ್ಕಮಗಳೂರು ೧೦೮.
೨೪೧. ಅದೇ, ೮೮.
೨೪೨. EC Vol. III, ಗುಡ್ಲುಪೇಟೆ ೧೬.
೨೪೩. ಅದೇ, XIII, ಅರಕಲಗೂಡು ೪೬.
೨೪೪. ಬಾಲಗೋಪಾಲ್ ಕೆ., ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ. ಕೊಸಾಂಬಿಯವರ ಚಿಂತನೆಗಳು, (ಅನು) ಶ್ರೀಮತಿ ಎಚ್.ಎಸ್., ಪು. ೧೭೭.
೨೪೫. EC. Vol. XII, ಕಡೂರು ೬೭.
೨೪೬. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೮೧.
೨೪೭. ಶೇಷಯ್ಯಂಗಾರ್ ಹೆಚ್.,(ಸಂ) ಲೋಕೋಪಕಾರ, ಪು. ೧೦೦.
೨೪೮. ಘನಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೧೩೮.
೨೪೯. ನಾರಾಯಣಶಾಸ್ತ್ರಿ, ಹ.ವೆ.,(ಗದ್ಯಾನುವಾದ) ಕರ್ನಾಟಕ ಕಾದಂಬರಿ, ಪು. ೭೮.
೨೫೦. ಗುಂಡ್ಮಿ ಚಂದ್ರಶೇಖರ ಐತಾಳ,(ಗದ್ಯಾನುವಾದ) ಕರ್ನಾಟಕ ಪಂಚತಂತ್ರ, ಪು. ೧೩೨.
೨೫೧. ದೇವರಕೊಂಡಾರೆಡ್ಡಿ, ದೇವರಾಜಸ್ವಾಮಿ ಜಿ.ಕೆ., ಇತಿಹಾಸ ದರ್ಶನ, ಸಂಚಿಕೆ ೩೨, ಪು. ೩೩.

೨೫೨. ಅದೇ, ಪು. ೩೩.
೨೫೩. EC. Vol. II, ಶ್ರವಣಬೆಳಗೊಳ ೪೪೪.
೨೫೪. ಕ.ವಿ.ಹಂ.ಶಾ.ಸಂ.೯, ಹುನಗುಂದ ೯೭.
೨೫೫. ಅದೇ, ೧೦೩.
೨೫೬. EC. Vol. II, ಶ್ರವಣಬೆಳಗೊಳ ೫೩೩.
೨೫೭. ಅದೇ, ೫೩೫
೨೫೮. ಅದೇ, ೫೬೫
೨೫೯. ಕ.ವಿ.ಹಂ.ಶಾ.ಸಂ.೧೦, ಇಂಡಿ ೭೭.
೨೬೦. ಅದೇ, ಬಾಗೇವಾಡಿ ೩೮.
೨೬೧. ಅದೇ, ಮುದ್ದೇಬಿಹಾಳ ೪.
೨೬೨. ಘನಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೯೩.
೨೬೩. ಅದೇ, ಪು. ೧೨೨.
೨೬೪. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೮೦.
೨೬೫. ಅದೇ, ಪು. ೧೮೦.
೨೬೬. ಅದೇ, ಪು. ೧೮೦.
೨೬೭. EC. Vol. XII, ಕಡೂರು ೧೫೦.
೨೬೮. ಅದೇ, ಕಡೂರು ೧೫೨.
೨೬೯. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೮೪–೧೮೫.
೨೭೦. ಘನಮಠ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೧೪೫.
೨೭೧. ಅದೇ, ಪು. ೧೪೩.
೨೭೨. ಶೇಷಯ್ಯಂಗಾರ್ ಹೆಚ್.,(ಸಂ) ಲೋಕೋಪಕಾರ, ಪು. ೯೯.
೨೭೩. ಅದೇ, ಪು. ೯೯.
೨೭೪. EC. Vol. XII, ತರೀಕೆರೆ ೩೪.
೨೭೫. MAR(1934) P. ೧೭೦.
೨೭೬. ಕ.ವಿ.ಹಂ.ಶಾ.ಸಂ.೧, ಹಗರಿಬೊಮ್ಮನಹಳ್ಳಿ ೨.
೨೭೭. ಅದೇ, ೬೦.
೨೭೮. ಅದೇ, ಹೂವಿನಹಡಗಲಿ ೯೬.
೨೭೯. ಅದೇ, ೭, ದೇವದುರ್ಗ ೫.
೨೮೦. EC. Vol. IX, ಬೇಲೂರು ೧೭೧.
೨೮೧. ಅದೇ, ೨೩೪.
೨೮೨. ಅದೇ, ೪೩೯.
೨೮೩. ಅದೇ, XV, ಸಾಗರ ೧೦೮.
೨೮೪. ಅದೇ, ಹೊಸನಗರ ೮೫.
೨೮೫. ಅದೇ, ಸಾಗರ ೩.
೨೮೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೦೬.
೨೮೭. EC. Vol. X III, ಶಿವಮೊಗ್ಗ ೩೭೦.
೨೮೮. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೮.
೨೮೯. ಕ.ವಿ.ಹಂ.ಶಾ.ಸಂ.೮, ಬೀದರ್, ೬೨.
೨೯೦. SII. Vol. XV, ೬೨೧,
೨೯೧. ಅದೇ, ೧೦೮,

೨೯೨. EC. Vol. IV, ಹುಣಸೂರು ೨೪.
೨೯೩. ಅದೇ, VII, ನಾಗಮಂಗಲ ೮೦.
೨೯೪. ಅದೇ, X, ಅರಸೀಕೆರೆ ೮೫.
೨೯೫. ಅದೇ, ೧೪೦.
೨೯೬. ಅದೇ, ೩೧.
೨೯೭. ಅದೇ, ಚನ್ನರಾಯಪಟ್ಟಣ ೪೦.
೨೯೮. Gururajachar.S., Some Aspects of Economic and Social Life in Karnataka (AD-1000-1300) P. ೪೨.
೨೯೯. ಕಲಬುರ್ಗಿ ಎಂ.ಎಂ.,(ಸಂ) ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ-೧, ಪು. ೩೦೦.
೩೦೦. ಅದೇ, ಪು. ೧೭೫.
೩೦೧. ಅದೇ, ಪು. ೧೭೫.
೩೦೨. ರಾಗೌ,(ಸಂ) ಸರ್ವಜ್ಞನ ಸಮಗ್ರ ತ್ರಿಪದಿಗಳು ಪು. ೧೬೯.
೩೦೩. ಕಕ್ಕಿಲ ಕೃಷ್ಣಭಟ್ಟ,(ಅನು) ಸಿಲಪ್ಪದಿಗಾರಂ, ಪು. ೧೧.
೩೦೪. ಕ.ವಿ.ಹಂ.ಶಾ.ಸಂ.೯, ಹುನಗುಂದ ೧೧.
೩೦೫. EC(ರೈ.ಸಂ). Vol. XI, ದಾವಣಗೆರೆ ೭೨.
೩೦೬. ಅದೇ, ಹೊಳಲಕೆರೆ ೨೩.
೩೦೭. SII. Vol. XI-Part-1, ೪೭.
೩೦೮. EC. Vol. X, ಅರಸೀಕೆರೆ ೩೩.
೩೦೯. ಅದೇ, V, ಶ್ರೀರಂಗಪಟ್ಟಣ ೭೯.
೩೧೦. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೩೪.
೩೧೧. EC. Vol. XII, ಕಡೂರು ೯.
೩೧೨. ಅದೇ, XIII, ಶಿವಮೊಗ್ಗ ೯೮.
೩೧೩. SII. Vol. IX-Part-1, ೧೭೦
೩೧೪. EC. Vol. III, ಗುಡ್ಲುಪೇಟೆ ೧೬.
೩೧೫. ಅದೇ, XII, ಕಡೂರು ೭೧.
೩೧೬. ಅದೇ, II, ಶ್ರವಣಬೆಳಗೊಳ ೪೪೪.
೩೧೭. EC(ರೈ.ಸಂ). Vol. XI, ಚಿತ್ರದುರ್ಗ ೩೪.
೩೧೮. ಕ.ವಿ.ಹಂ.ಶಾ.ಸಂ.೯, ಹುನಗುಂದ ೧೨೭.
೩೧೯. EC(ರೈ.ಸಂ). Vol. XI, ಹೊಳಲಕೆರೆ ೬೮.
೩೨೦. ಕ.ವಿ.ಹಂ.ಶಾ.ಸಂ.೧೦, ಇಂಡಿ ೫೮.
೩೨೧. EC. Vol. XII, ಕಡೂರು ೧೭೦.
೩೨೨. ಕ.ವಿ.ಹಂ.ಶಾ.ಸಂ.೧, ಹೂವಿನಹಡಗಲಿ ೧೦೦.
೩೨೩. EC. Vol. VIII, ಹಾಸನ ೩೧.
೩೨೪. EC(ರೈ.ಸಂ). Vol. XI, ದಾವಣಗೆರೆ ೬೬.
೩೨೫. ಕ.ವಿ.ಹಂ.ಶಾ.ಸಂ.೮, ಹುಮನಾಬಾದ್ ೪
೩೨೬. SII. Vol. XV-Part-1, ೬೬.
೩೨೭. ಅದೇ, ೬೫.
೩೨೮. ಅದೇ, ೧೧೧.

೩೨೯. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೮೬.
೩೩೦. ಘನಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೧೬೧.
೩೩೧. ಇರ್ಫಾನ್ ಹಬೀಬ್, ವಿವೇಕಾನಂದ ಝಾ., ಮೌರ್ಯರ ಕಾಲದ ಭಾರತ,(ಅನು) ನಗರಗೆರೆ ರಮೇಶ್, ಪು. ೧೩೦.
೩೩೨. ಅದೇ, ಪು. ೧೩೦.
೩೩೩. ಶರ್ಮಾ ಆರ್.ಎಸ್., ಪ್ರಾಚೀನ ಭಾರತ,(ಕನ್ನಡಕ್ಕೆ) ಶಂಕರನಾರಾಯಣರಾವ್ ಎನ್.ಪಿ., ಪು. ೧೭೦.
೩೩೪. ಕೃಷ್ಣಮೋಹನ್, ಶ್ರೀಮಾಲಿ, ಕಬ್ಬಿಣದ ಯುಗ ಮತ್ತು ಧಾರ್ಮಿಕ ಕ್ರಾಂತಿ,(ಕನ್ನಡಕ್ಕೆ) ದಿವಾಕರ ನಾ., ಪು. ೧೪.
೩೩೫. ಅದೇ, ಪು, ೧೫.
೩೩೬. ಚೆನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೮.
೩೩೭. EC, Vol. II, ಶ್ರವಣಬೆಳಗೊಳ ೪೪೪.
೩೩೮. EC(ರೈ.ಸಂ). Vol. XI, ಚಳ್ಳಕೆರೆ ೨೧.
೩೩೯. EC. Vol. XXIV, ಚಿಕ್ಕನಾಯಕನಹಳ್ಳಿ ೧೦೪.
೩೪೦. ಅದೇ, XII, ಕಡೂರು ೧೯೯.
೩೪೧. ಕ.ವಿ.ಹಂ.ಶಾ.ಸಂ.೧, ಹೂವಿನಹಡಗಲಿ ೧.
೩೪೨. EC. Vol. XI, ಮೂಡಗೆರೆ ೮೬.
೩೪೩. EC(ರೈ.ಸಂ). Vol. IX, ದೊಡ್ಡಬಳ್ಳಾಪುರ ೩೧.
೩೪೪. ಕ.ವಿ.ಹಂ.ಶಾ.ಸಂ.೨, ಹೂವಿನಹಡಗಲಿ ೧೭.
೩೪೫. ಕಲಬುರ್ಗಿ ಎಂ.ಎಂ.,(ಸಂ) ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ-೧, ಪು. ೩೧೯.
೩೪೬. EC. Vol. VII, ನಾಗಮಂಗಲ ೭೨.
೩೪೭. ಅದೇ, X, ಚನ್ನರಾಯಪಟ್ಟಣ ೧೧೩.
೩೪೮. ಅದೇ, ಅರಸೀಕೆರೆ ೨೮೬.
೩೪೯. ಕರ್ನಾಟಕ ಪರಂಪರೆ-೧, ಪು. ೪೦೦.
೩೫೦. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ; ಇತಿಹಾಸ ಅನ್ವೇಷಣೆ, ಪು. ೧೮.
೩೫೧. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೯೨.
೩೫೨. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೮೪.
೩೫೩. ಇರ್ಫಾನ್ ಹಬೀಬ್, ವಿವೇಕಾನಂದ ಝಾ., ಮೌರ್ಯರ ಕಾಲದ ಭಾರತ,(ಕನ್ನಡಕ್ಕೆ) ನಗರಗೆರೆ ರಮೇಶ್, ಪು. ೧೨೯.
೩೫೪. ಕ.ವಿ.ಹಂ.ಶಾ.ಸಂ.೯, ಬದಾಮಿ ೨೭೪.
೩೫೫. EC(ರೈ.ಸಂ). Vol. VIII, ಸೊರಬ ೧೭೫.
೩೫೬. ಸುಮಂಗಲಾ ಅತ್ತಿಗೇರಿ, ಕೃಷಿ ಜಾನಪದ ಮತ್ತು ಮಹಿಳೆ, ಪು. ೧೧೩.
೩೫೭. ಕುಕ್ಕಿಲ ಕೃಷ್ಣಭಟ್ಟ,(ಅನು) ಸಿಲಪ್ಪದಿಗಾರಂ, ಪು. ೩೬.
೩೫೮. ಕೃಷ್ಣಮೋಹನ್, ಶ್ರೀಮಾಲಿ, ಕಬ್ಬಿಣದ ಯುಗ ಮತ್ತು ಧಾರ್ಮಿಕ ಕ್ರಾಂತಿ,(ಕನ್ನಡಕ್ಕೆ) ದಿವಾಕರ ನಾ., ಪು. ೧೪.
೩೫೯. EC. Vol. II, ಶ್ರವಣಬೆಳಗೊಳ ೧೭೬.
೩೬೦. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೪೭.

೩೬೧. EC. Vol. XII, ಕಡೂರು ೬೭.
೩೬೨. ಕ.ವಿ.ಹಂ.ಶಾ.ಸಂ.೭, ಲಿಂಗಸುಗೂರು ೪೯.
೩೬೩. EC. Vol. IX, ಬೇಲೂರು ೧೭೧.
೩೬೪. ಅದೇ, XV, ಹೊಸನಗರ ೩೯.
೩೬೫. ಅದೇ, ೮೦.
೩೬೬. ಅದೇ, ೮೫.
೩೬೭. SII. Vol, XI, BKI, Part-II, ೧೭೭.
೩೬೮. EC. Vol. X, ಅರಸೀಕೆರೆ ೯೨.
೩೬೯. ಘನಮಠದ ಶಿವಯೋಗಿಗಳು, ಕೃಷಿಜ್ಞಾನ ಪ್ರದೀಪಿಕೆ, ಪು. ೧೬೯.
೩೭೦. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೩೪.
೩೭೧. ಅದೇ, ೪೦.
೩೭೨. EC. Vol. XII, ಕಡೂರು ೯.
೩೭೩. ಅದೇ, ೬೪.
೩೭೪. SII, Vol. IX, Part-I, ೧೭೦
೩೭೫. ಅದೇ, ೧೮೪.
೩೭೬. EC. Vol. XII, ಕಡೂರು ೭೧.
೩೭೭. ಅದೇ, II, ಶ್ರವಣಬೆಳಗೊಳ ೪೪೪.
೩೭೮. ಕ.ವಿ.ಹಂ.ಶಾ.ಸಂ.೯, ಹುನಗುಂದ ೧೦೪.
೩೭೯. EC(ರೈ.ಸಂ). Vol. XI, ಹೊಳಲಕೆರೆ ೩೪.
೩೮೦. EC. Vol. XXIV, ಚಿಕ್ಕನಾಯಕನಹಳ್ಳಿ ೧೦೪.
೩೮೧. ಕ.ವಿ.ಹಂ.ಶಾ.ಸಂ.೧೦, ಇಂಡಿ ೩೨.
೩೮೨. ಅದೇ, ೫೦.
೩೮೩. EC. Vol. XII, ಕಡೂರು, ೧೬೦.
೩೮೪. ಅದೇ, ೨೪೭, ೨೪೮.
೩೮೫. ಕ.ವಿ.ಹಂ.ಶಾ.ಸಂ.೧, ಹಗರಿಬೊಮ್ಮನಹಳ್ಳಿ ೨.
೩೮೬. ಅದೇ, ಹರಪನಹಳ್ಳಿ ೩೪.
೩೮೭. ಅದೇ, ೫೩.
೩೮೮. EC. Vol. VIII, ಹಾಸನ ೩೮.
೩೮೯. ಅದೇ, VII ನಾಗಮಂಗಲ ೬೧.
೩೯೦. ಅದೇ, X, ಅರಸೀಕೆರೆ ೧೫೨.
೩೯೧. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೮೩.
೩೯೨. ಅದೇ, ಪು. ೧೮೭.
೩೯೩. ಅದೇ, ಪು. ೧೮೭.
೩೯೪. EC. Vol. V, ಟಿ.ನರಸೀಪುರ ೮೮.
೩೯೫. ಕರ್ನಾಟಕದ ಪರಂಪರೆ, ಸಂಪುಟ–೧, ಪು. ೧೨೧.
೩೯೬. ಶರ್ಮ ಆರ್.ಎಸ್., ಪ್ರಾಚೀನ ಭಾರತ,(ಕನ್ನಡಕ್ಕೆ) ಶಂಕರನಾರಾಯಣರಾವ್ ಎನ್.ಪಿ., ಪು. ೧೯೧.
೩೯೭. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಲೀಯ ಅರ್ಥಶಾಸ್ತ್ರ, ಪು. ೧೫೫.

೩೯೮. ಕ.ವಿ.ಹಂ.ಶಾ.ಸಂ.೯, ಬದಾಮಿ ೨೭೪.
೩೯೯. EC(ರೈ.ಸಂ). Vol. XI, ಚಳ್ಳಕೆರೆ ೨೧.
೪೦೦. EC. Vol. XXIV, ಚಿಕ್ಕನಾಯಕನಹಳ್ಳಿ ೧೦೪.
೪೦೧. ಅದೇ, II, ಶ್ರವಣಬೆಳಗೊಳ ೨೦೦.
೪೦೨. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೪೦.
೪೦೩. SII. Vol. IX-Part-1, ೧೮೪, EC. Vol. III, ಗುಡ್ಲುಪೇಟೆ ೧೬.
೪೦೪. EC. Vol. XII, ಕಡೂರು ೬೭.
೪೦೫. ಅದೇ, II, ಶ್ರವಣಬೆಳಗೊಳ ೪೪೪.
೪೦೬. ಕ.ವಿ.ಹಂ.ಶಾ.ಸಂ.೧೦, ಇಂಡಿ ೫೩.
೪೦೭. ಕಲಬುರ್ಗಿ ಎಂ.ಎಂ.,(ಸಂ) ಸೋಮೇಶ್ವರ ವಿರಚಿತ ಮಾನಸೋಲ್ಲಾಸ, ಸಂಪುಟ-೧, ಪು. ೩೪೨.
೪೦೮. ಕ.ವಿ.ಹಂ.ಶಾ.ಸಂ.೭, ಮಾನ್ವಿ ೫೧.
೪೦೯. EC. Vol. VIII, ಹೊಸನಗರ ೯೫.
೪೧೦. ಅದೇ, VIII, ಹಾಸನ ೩೫.
೪೧೧. ಅದೇ, IX, ಬೇಲೂರು ೧೭೧.
೪೧೨. ಅದೇ, ೩೦೯.
೪೧೩. EC(ರೈ.ಸಂ). Vol. IX, ದೊಡ್ಡಬಳ್ಳಾಪುರ ೩೧
೪೧೪. ಅದೇ, XI, ದಾವಣಗೆರೆ ೫೯.
೪೧೫. EC. Vol. XV, ಹೊಸನಗರ ೧೦.
೪೧೬. SII. Vol. IX-Part-1, ೬೦.
೪೧೭. ಅದೇ, ೬೨೧.
೪೧೮. EC. Vol. V, ಟಿ.ನರಸೀಪುರ ೮೮.
೪೧೯. ಕ.ವಿ.ಹಂ.ಶಾ.ಸಂ.೨, ಯಲಬುರ್ಗ ೧೭.
೪೨೦. EC. Vol. VII, ನಾಗಮಂಗಲ ೭೨.
೪೨೧. ಅದೇ, X, ಚನ್ನರಾಯಪಟ್ಟಣ ೧೧೩.
೪೨೨. ಕೃಷ್ಣಮೋಹನ್ ಶ್ರೀಮಾಲಿ, ಕಬ್ಬಿಣ ಯುಗ ಮತ್ತು ಧಾರ್ಮಿಕ ಕ್ರಾಂತಿ,(ಕನ್ನಡಕ್ಕೆ) ದಿವಾಕರ ನಾ., ಪು. ೧೪.
೪೨೩. ಇರ್ಫಾನ್ ಹಬೀಬ್, ವಿವೇಕಾನಂದ ಝಾ., ಮೌರ್ಯರ ಕಾಲದ ಭಾರತ,(ಕನ್ನಡಕ್ಕೆ) ನಗರಗೆರೆ ರಮೇಶ್, ಪು. ೧೨೮-೧೨೯.
೪೨೪. ಕೃಷ್ಣಮೋಹನ್, ಶ್ರೀಮಾಲಿ, ಕಬ್ಬಿಣ ಯುಗ ಮತ್ತು ಧಾರ್ಮಿಕ ಕ್ರಾಂತಿ,(ಕನ್ನಡಕ್ಕೆ) ದಿವಾಕರ ನಾ., ಪು, ೧೬.
೪೨೫. ಸೂರ್ಯನಾಥ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೧೮.
೪೨೬. ಕ.ವಿ.ಹಂ.ಶಾ.ಸಂ.೯, ಬದಾಮಿ ೨೭೪.
೪೨೭. EC. Vol. V, ಟಿ.ನರಸೀಪುರ ೫೭.
೪೨೮. ಅದೇ, ೩೯.
೪೨೯. ಅದೇ, ೮೮.
೪೩೦. EC. Vol. XXIV, ತುಮಕೂರು ೧೬.
೪೩೧. ಅದೇ, XIII, ಶಿವಮೊಗ್ಗ ೭೪.

೪೩೨. ಅದೇ, XII, ಕಡೂರು ೭೧.

೪೩೩. EC(ರೈ.ಸಂ). Vol. XI, ಚಿತ್ರದುರ್ಗ ೩೪.

೪೩೪. ಕ.ವಿ.ಹಂ.ಶಾ.ಸಂ.೯, ಹುನಗುಂದ ೯೭.

೪೩೫. ಅದೇ, ೧೨೭.

೪೩೬. EC. Vol. XXIV, ಚಿಕ್ಕನಾಯಕನಹಳ್ಳಿ ೧೦೪.

೪೩೭. ಕ.ವಿ.ಹಂ.ಶಾ.ಸಂ.೧೦, ಇಂಡಿ ೩೪.

೪೩೮. ಅದೇ, ೩೨.

೪೩೯. ಅದೇ, ೫೩.

೪೪೦. EC. Vol. VIII, ಹಾಸನ ೧೧೨.

೪೪೧. ಅದೇ, IX, ಬೇಲೂರು ೧೭೦

೪೪೨. ಅದೇ, ೧೭೧.

೪೪೩. EC(ರೈ.ಸಂ). Vol. IX, ಬೆಂಗಳೂರು ೬.

# ಅಧ್ಯಾಯ ನಾಲ್ಕು
# ಕೃಷಿ ಮತ್ತು ಆರ್ಥಿಕತೆ

೪.೧. ವ್ಯಾಪಾರ
೪.೨. ಸ್ಥಳೀಯ ಮಾರುಕಟ್ಟೆಗಳಾಗಿ ಸಂತೆಗಳು
೪.೩. ಕೃಷಿ ಮತ್ತು ತೆರಿಗೆಗಳು
೪.೪. ಕೃಷಿ ಮತ್ತು ಅಳತೆಗಳು
೪.೫. ಕೃಷಿ ಮತ್ತು ಸಾಲಗಳು
೪.೬. ಕೃಷಿ ಮತ್ತು ಪಶುಸಂಗೋಪನೆ

## ಅಧ್ಯಾಯ: ನಾಲ್ಕು

# ಕೃಷಿ ಮತ್ತು ಆರ್ಥಿಕತೆ

ಪ್ರಾಚೀನ ಕೃಷಿಯು ಆರ್ಥಿಕ ಲಾಭಗಳಿಕೆಯ ಉದ್ದೇಶವನ್ನು ಹೊಂದಿರಲಿಲ್ಲ. ಆದರೂ ಕೃಷಿಯ ಉತ್ಪನ್ನವು ರಾಜ್ಯದ ಆದಾಯದ ಒಂದು ಭಾಗವಾಗಿತ್ತು. ಆರ್ಥಿಕ ಚಟುವಟಿಕೆಗಳಿಗೆ ಪೂರಕವಾಗಿ ಕೃಷಿಯು ಸಮಾಜದ ಬೆನ್ನೆಲುಬಾಗಿತ್ತು. ಕೃಷಿಯಿಂದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿತ್ತೆಂಬ ಅಂಶಕ್ಕೆ ಪೂರಕವಾಗಿ ಶಾಸನಗಳು ವಿಪುಲವಾದ ಮಾಹಿತಿಯನ್ನು ಒದಗಿಸಿವೆ. ಅವುಗಳು ಶಾಸನಗಳಲ್ಲಿ ಉಲ್ಲೇಖಿತಗೊಂಡಿರುವ ವ್ಯಾಪಾರ, ವೃತ್ತಿಗಳು, ತೆರಿಗೆಗಳು, ಮೊದಲಾದ ಅಂಶಗಳಿಂದ ತಿಳಿದುಬರುತ್ತವೆ. ಪ್ರಾಚೀನ ಕಾಲದ ಕೃಷಿ ಸಂಬಂಧಿ ತೆರಿಗೆಗಳು ರಾಜ್ಯದ ಬೊಕ್ಕಸಕ್ಕೆ ಕೃಷಿಯಿಂದ ಸಂದಾಯವಾಗುವ ಪ್ರಮಾಣದ ಬಗೆಗೆ ಹೆಚ್ಚು ಮಾಹಿತಿಯನ್ನು ಒದಗಿಸುತ್ತವೆ. ಈ ಹಿನ್ನೆಲೆಯಲ್ಲಿ ಕೃಷಿಯು ಆರ್ಥಿಕತೆಗೆ ಪೂರಕವಾಗಿತ್ತೆಂಬ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಬಹುದಾಗಿದೆ.

### ೪.೧. ವ್ಯಾಪಾರ

ಕಬ್ಬಿಣದ ಬಳಕೆಯಿಂದಾಗಿ ಕೃಷಿ ಉತ್ಪನ್ನವು ಹೆಚ್ಚಳಗೊಂಡಿತು. ಈ ರೀತಿ ಉತ್ಪಾದನೆಗೊಂಡ ಕೃಷಿ ಉತ್ಪನ್ನವು ವಿನಿಮಯವಾದರೆ ಆರ್ಥಿಕ ಸಂಪತ್ತು ದ್ವಿಗುಣಗೊಳ್ಳುತ್ತದೆ ಎಂಬ ದೃಷ್ಟಿಯಿಂದ ವಿನಿಮಯದ ಮೂಲಕ ವ್ಯಾಪಾರವು ಆರಂಭದಲ್ಲಿ ಹುಟ್ಟಿಕೊಂಡಿರುವ ಸಾಧ್ಯತೆಗಳಿವೆ. ತದನಂತರದಲ್ಲಿ ಕೃಷಿಯಲ್ಲಾದ ಬದಲಾವಣೆಗಳು, ಏರುಪೇರುಗಳು ಸಮಾಜದಲ್ಲಿ ವ್ಯಾಪಾರವನ್ನು ಈ ಜನಪದರ ಮಾತಿನಂತೆ ಅರ್ಥೈಸಿರುವ ಸಾಧ್ಯತೆಗಳಿವೆ.

'ವ್ಯವಸಾಯ ವರುಷ, ವ್ಯಾಪಾರ ನಿಮಿಷ,' 'ಎಂಟು ಎತ್ತಿನ ಬೇಸಾಯಕ್ಕಿಂತ ಕುಂಟೆತ್ತಿನ ವ್ಯಾಪಾರ ಲೇಸು' ಎಂಬ ತಳಹದಿಯಲ್ಲಿ ವ್ಯಾಪಾರವು ರೂಪುಗೊಂಡಿರುವ ಸಾಧ್ಯತೆಗಳಿವೆ. ವ್ಯಾಪಾರವು ಸಮಾಜದಲ್ಲಿ ಭಿನ್ನರೂಪದಲ್ಲಿ ತಲೆ ಎತ್ತಿ ತನ್ನ ಬೇರುಗಳನ್ನು ಬಿಟ್ಟುಕೊಂಡು ಬಂದಿರುವುದು ಚರಿತ್ರೆಯಲ್ಲಿ ದಾಖಲಾಗಿದೆ. ಕೃಷಿ ಸಂಬಂಧದ ಹಿನ್ನೆಲೆಯಲ್ಲಿ ಆಹಾರದ ಬೆಳೆಗಳ ಹೆಚ್ಚುವರಿ ಉತ್ಪನ್ನದ ಪ್ರಮಾಣವು, ಗಣನೀಯವಾಗಿ ಕ್ರಿ.ಶ. ೧೦ನೆಯ ಶತಮಾನದಿಂದ ಏರುಗತಿಯಲ್ಲಿ ಸಾಗಿತು. ಇದರಿಂದಾಗಿ ಶ್ರಮವಿಭಜನೆಯತಹ ವಿಭಜನ ಕ್ರಮಗಳಿಗೆ ದಾರಿ ಮಾಡಿಕೊಟ್ಟಿರುವ ಸಾಧ್ಯತೆಗಳಿವೆ. ಮಾನವನ ಜೀವನವು ಆಹಾರಕ್ಕಷ್ಟೆ ಸೀಮಿತವಾಗದೆ ಅದರಾಚೆಗಿನ ಅನಿವಾರ್ಯತೆಗಳ ಬದುಕಿಗೆ ಎದುರಾದಂತೆ ಕಂಡುಬರುತ್ತದೆ. ತಮ್ಮ ಇತರ ಅಗತ್ಯಗಳ ಪೂರೈಕೆಗಾಗಿ ಆರಂಭದಲ್ಲಿ ವಸ್ತು ವಿನಿಮಯ ಪದ್ಧತಿಯಂತಹ ಕೊಡುಕೊಳುಗೆಗಳನ್ನು ಮಾಡಿಕೊಂಡರು. ಇದರ ಮುಂದುವರಿದ ಭಾಗವಾಗಿ ಜನಸಾಮಾನ್ಯರನ್ನು ರಕ್ಷಿಸುವ ಹೊಣೆಗಾರಿಕೆಯನ್ನು ಹೊತ್ತ ಪ್ರಭುತ್ವ ವರ್ಗವು ತೆರಿಗೆಯ ರೂಪದಲ್ಲಿ ಧಾನ್ಯಗಳನ್ನು ಸಂಗ್ರಹಿಸಿತು. ಆದರೆ ಎಲ್ಲ ಕಾಲದಲ್ಲೂ ಆಹಾರಕ್ಕಾಗಿಯೇ ಮೀಸಲಿರಿಸಿ ಕೇವಲ ತಿಂದು ಮುಗಿಸುವ ಪ್ರಕ್ರಿಯೆಗೆ ಸೀಮಿತವಾಗದ ಸ್ಥಿತಿ ಬಂದೊದಗಿದ ಸಾಧ್ಯತೆಗಳಿವೆ. ಈ ಉತ್ಪನ್ನವನ್ನು ಬಳಸಿಕೊಂಡು ಪಾಲಕ ವರ್ಗವು ರಕ್ಷಣೆ ಮತ್ತಿತರ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳ ಅಭಿವೃದ್ಧಿಯ ಕಡೆಗೆ ಗಮನಹರಿಸುವ ಅನಿವಾರ್ಯ ನಿರ್ಮಾಣಗೊಂಡಿತು. ಇಂತಹ ಸಂದರ್ಭದಲ್ಲಿ ಇತರ ಪ್ರಾಂತ್ಯಗಳೊಂದಿಗೆ ಸಂಪರ್ಕ ಸಾಧಿಸಿ ತಮ್ಮ ರಾಜ್ಯದಲ್ಲಿ ದೊರಕದ ವಸ್ತುಗಳನ್ನು ತರಿಸಿಕೊಳ್ಳುವ ಅನಿವಾರ್ಯತೆ ಎದುರಾಯಿತು. ಇಂತಹ ಸಂದರ್ಭದಲ್ಲಿ ಮಾರುವ ಮತ್ತು ಕೊಳ್ಳುವ ಮಧ್ಯದ ಸೇತುವೆಯಾಗಿ, ಕೊಂಡಿಯಾಗಿ

ಕಾರ್ಯನಿರ್ವಹಿಸಿದ ಮಧ್ಯವರ್ತಿಯ ವರ್ಗವನ್ನು 'ವ್ಯಾಪಾರಿ'ಗಳೆಂದು ಕರೆಯಲಾಗುತ್ತದೆ. ಇವರ ವೃತ್ತಿಯನ್ನು 'ವ್ಯಾಪಾರ' ಎಂದು ಕರೆಯಲಾಗುತ್ತದೆ.

ಈ ವರ್ತಕರಲ್ಲಿ ವಿನಿಮಯ ವರ್ತಕರು ಮತ್ತು ಉತ್ಪಾದಕ ವಿನಿಮಯ ವರ್ತಕರು ಎಂಬ ಎರಡು ವರ್ಗಗಳು ಕಂಡುಬರುತ್ತವೆ.[೧] ವಿನಿಮಯ ವರ್ತಕರು ವ್ಯಾಪಾರವನ್ನೆ ತಮ್ಮ ಜೀವನದ ವೃತ್ತಿಯನ್ನಾಗಿಸಿಕೊಂಡಿರುತ್ತಾರೆ. ಅಯ್ಯಾವೊಳೆ ಐನೂರ್ವರು, ಸೆಟ್ಟಿಯರು, ಸೆಟ್ಟಿಗುತ್ತರು, ಮುಂಮುಜೆದಂಡಗಳು, ನಾನಾ ದೇಶಿಗಳು, ಗವಱೆಗಳು, ಗಾತ್ರಿಗಳು, ನಖರಂಗಳು, ಸೆಟ್ಟಿ, ಬಣಂಜಿಗರು ಮೊದಲಾದವರು ವಿನಿಮಯ ವರ್ತಕರಾಗಿದ್ದಾರೆ.[೨] ಐಯ್ಯಾವೊಳೆ ಐನೂರ್ವರು ಬದಾಮಿ ಚಾಲುಕ್ಯರ ಅವಧಿಯಲ್ಲಿ ಪ್ರಾಬಲ್ಯವನ್ನು ಹೊಂದಿದ್ದು, ಐಯ್ಯಾವೊಳೆ ಐನೂರ್ವರು ಎಂಬ ಸಂಗವು ಅರಸನಷ್ಟೆ ಅಧಿಕಾರವನ್ನು ಹೊಂದಿದ್ದು, ಇಂದಿನ ಚೇಂಬರ್ ಆಫ್ ಕಾಮರ್ಸ್‌ನ್ನು ಹೋಲುತ್ತಿತ್ತು ಎನ್ನಲಾಗಿದೆ.[೩] ರೈತರು, ಬಡಗಿಗಳು, ಅಕ್ಕಸಾಲಿ ಮೊದಲಾದವರನ್ನು ಉತ್ಪಾದಕ ವಿನಿಮಯ ವರ್ಗವೆಂದು ಕರೆಯಲಾಗುತ್ತದೆ. ಸೆಟ್ಟಿ ಎಂದರೆ ವ್ಯಾಪಾರಿ ಎಂಬರ್ಥದಲ್ಲಿ ಬಳಕೆಯಾಗಿದ್ದು, ಎಲ್ಲ ಜಾತಿ ಸಮುದಾಯಗಳಲ್ಲಿರುವ ವ್ಯಾಪಾರಿಗಳನ್ನು ಸೆಟ್ಟಿಗಳೆಂದೇ ಕರೆಯಲಾಗುತ್ತಿತ್ತು.[೪] ವರ್ತಕರು ರಾಜ್ಯದಲ್ಲಿ ಉತ್ಪಾದನೆಯಾದ ವಸ್ತುಗಳನ್ನು ರಫ್ತು ಮಾಡುವ ಮತ್ತು ಕೆಲವನ್ನು ಆಮದು ಮಾಡಿಕೊಳ್ಳುವ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಬಾರಕೂರು ಮತ್ತು ಮಂಗಳೂರಿನಿಂದ ಕರಿಮೆಣಸನ್ನು ವಿದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು.[೫] ಜೈನ, ವೈಷ್ಣವ ಹಾಗೂ ಶೈವ ಎಲ್ಲ ಧರ್ಮದವರಲ್ಲೂ ವ್ಯಾಪಾರಿಗಳು ಇದ್ದುದು ಕಂಡುಬರುತ್ತದೆ. ಗಂಗರ ಕಾಲದಲ್ಲಿ ವ್ಯಾಪಾರವು ವ್ಯವಸಾಯಕ್ಕಿಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿತ್ತು. 'ಶ್ರೇಣಿ ಅಥವಾ ಸಂಘಗಳು ಪಟ್ಟಣದ ಆಡಳಿತಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಅಲೆಮಾರಿ ವರ್ತಕರು ಎತ್ತು, ಎಮ್ಮೆಗಳಿಂದ ಎಳೆಯಲ್ಪಟ್ಟ ಬಂಡಿಗಳಲ್ಲಿ ಕಸ್ತೂರಿ, ಕೇಸರಿ, ಅರಿಶಿನ, ಹತ್ತಿ, ಗಂಧದ ಕೊರಡು, ಸಾಂಬಾರ ಜೀನಸು ಮೊದಲಾದ ಉತ್ಪನ್ನಗಳನ್ನು ತುಂಬಿಕೊಂಡು ಮಾರಾಟ ಮಾಡುತ್ತಿದ್ದರು.[೬] ವರ್ತಕ ಸಮುದಾಯವು ಅದರಲ್ಲೂ ವಿನಿಮಯ ವರ್ತಕರು ಅಲೆಮಾರಿಗಳಾಗಿರುತ್ತಿದ್ದರು. ಗಂಗರ ಕಾಲದಲ್ಲಿ ಜೈನಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿದ್ದುದರಿಂದ ವ್ಯಾಪಾರವು ಮುನ್ನೆಲೆಯಲ್ಲಿದುದು ಕಂಡುಬರುತ್ತದೆ. ಆದರೆ ೧೧ ನೆಯ ಶತಮಾನದಲ್ಲಿ ಜೈನ ಧರ್ಮದ ಅವನತಿಯಿಂದಾಗಿ ವ್ಯಾಪಾರಿ ವರ್ಗವು ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿತು. ಅಧಿಕಾರ ವಿಕೇಂದ್ರೀಕರಣ ವ್ಯವಸ್ಥೆಯಿಂದಾಗಿ, ಈ ವ್ಯಾಪಾರದ ಕ್ಷೀಣಿಸುವಿಕೆಯಿಂದಾಗಿ ಆರ್ಥಿಕತೆಯು ಕೃಷಿಯನ್ನವಲಂಬಿಸಿತು. ಕೃಷಿಯ ಉತ್ಪನ್ನದಲ್ಲಾದ ಕ್ರಾಂತಿ ಮತ್ತು ಹೆಚ್ಚಳವು ಪುನ: ವ್ಯಾಪಾರಕ್ಕೆ ಪ್ರೋತ್ಸಾಹವನ್ನು ನೀಡಿರುವ ಸಾಧ್ಯತೆಗಳಿವೆ.

ಉತ್ಪಾದಕ ವಿನಿಮಯ ವರ್ತಕರಲ್ಲಿ ಕೃಷಿಕರು ಸಹ ಒಂದು ಭಾಗವಾಗಿದ್ದು, ಮಾಲೆಕಾರರು ಹೂದೋಟಗಳಲ್ಲಿ ಹೂಗಳನ್ನು ಬೆಳೆದು ಪೇಟೆ, ಸಂತೆಗಳಲ್ಲಿ ಮಾರಾಟ ಮಾಡುತ್ತಿದ್ದರು. ಕೃಷಿಕರು ತಾವು ಬೆಳೆದ ಉತ್ಪನ್ನ ತರಕಾರಿ(ಬಾಡುಕಾಯಿ) ಮೊದಲಾದವುಗಳನ್ನು ಸ್ಥಳೀಯ ವ್ಯಾಪಾರ ಕೇಂದ್ರಗಳಾದ ಸಂತೆಗಳಲ್ಲಿ ಮಾರಾಟ ಮಾಡುತ್ತಿದ್ದರು. ಹೊಯ್ಸಳರ ಕಾಲದಲ್ಲಿ ಕಲಂಗೆರೆಯು ಪ್ರಸಿದ್ಧ ವ್ಯಾಪಾರಿ ಕೇಂದ್ರವಾಗಿತ್ತು. ಜೊತೆಗೆ ೯ ಮತ್ತು ೧೦ ನೆಯ ಶತಮಾನದಲ್ಲಿ ಜೈನ ಕೇಂದ್ರವಾಗಿತ್ತು. ಆ ಕಾಲದ ಪ್ರಸಿದ್ಧ ಸ್ಥಳಗಳಾದ ದೋರಸಮುದ್ರ, ಬೇಲೂರು ರಾಜಧಾನಿಗಳನ್ನು ಒಳಗೊಂಡಂತೆ ಅರಸೀಕೆರೆ, ಶ್ರವಣಬೆಳಗೊಳ, ತಲಕಾಡು, ಬನವಾಸಿ, ಬಳ್ಳಿಗಾವೆ, ಹಾನಗಲ್ ಹಾಗೂ ಉಚ್ಚಂಗಿ ಪ್ರದೇಶಗಳಲ್ಲಿ ವ್ಯಾಪಾರ ನಡೆಯುತ್ತಿತ್ತು.[೭]

ವ್ಯಾಪಾರಿಗಳು ದಾನ, ಧರ್ಮ ಕಾರ್ಯಗಳನ್ನು ಮಾಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಇದನ್ನು ಗಮನಿಸಿದರೆ' ವ್ಯಾಪಾರಂ ದ್ರೋಹ ಚಿಂತನಂ' ಎನ್ನುವಂತೆ ವ್ಯಾಪಾರಿಗಳು ನ್ಯಾಯಯುತವಾಗಿ ಸಂಪಾದಿಸಿದುದಕ್ಕಿಂತ ಹೆಚ್ಚಾಗಿ ಮೋಸದ ಲಾಭಿ ನಡೆಸಿ ಸಂಪಾದಿಸಿರುವ ಸಾಧ್ಯತೆಗಳಿವೆ. ಈ ಕಾರಣಗಳಿಂದಾಗಿಯೇ ಸಮಾಜದಲ್ಲಿ ದಾನ ಧರ್ಮದ ಕಾರ್ಯಗಳನ್ನು ನಡೆಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೨೩, ೧೧೮೧, ೧೧೮೭ರ ಶಾಸನದಲ್ಲಿ ವ್ಯಾಪಾರಿಗಳು ಪಂಚ ಶತವೀರ ಬಣಂಜು ಧರ್ಮವನ್ನು ಪಾಲಿಸುತ್ತಿದ್ದರೆಂದು ಕರೆದಿದೆ. ವಾಸುದೇವ ಖಂಡಳಿ ಮೂಳಭದ್ರ ವಂಶಕ್ಕೆ ಸೇರಿದವರೆಂದು, ಪದ್ಮಾವತಿದೇವಿ ಲಬ್ದವರ ಪ್ರಸಾದರೆಂದು ಕರೆದಿದೆ. ಅಯ್ಯಾವೊಳೆ ೫೦೦ ಸ್ವಾಮಿಗಳಾದ ನಾನಾ ದೇಶದ ಗವರೆ, ಗಾತ್ರಿಗರು, ಸೆಟ್ಟಿಯರು, ಸೆಟ್ಟಿಗುತ್ತರು, ಒಂದಾಗಿ ಗ್ರಾಮ, ನಗರ, ಖೇಡ, ಕರ್ವಡ, ಮಡಂಬ, ದ್ರೋಣಮುಖ ಪಟ್ಟಣಗಳಿಂದ ಕೂಡಿದ್ದು, ತೇರಿದಾಳದಲ್ಲಿ ಮಹಾ ನಾಡಾಗಿ ಸಭೆ ಸೇರಿ ಮಾಂಡಳಿಕನಾದ ಗೊಂಕದೇವನು ಕಟ್ಟಿಸಿದ ನೇಮೀಶ್ವರ ಚೈತ್ಯಾಲಯವನ್ನು ನೋಡಿ ದಾನ ನೀಡಿದರು ಎಂದಿದೆ.[೮] ಈ ಶಾಸನವು ವರ್ತಕರನ್ನು ಉಲ್ಲೇಖಿಸಿ ಅವರು ನೀಡಿದ ದಾನ ಕಾರ್ಯವನ್ನು ಉಲ್ಲೇಖಿಸಿರುವುದು ಕಂಡುಬಂದಿದೆ.

ವ್ಯಾಪಾರಿಗಳು ಸಮಾಜದಲ್ಲಿ ಕೊಳ್ಳುವವರ ಮತ್ತು ಮಾರುವವರ ಮಧ್ಯದಲ್ಲಿ ಕಂಡುಬರುವ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೫೦ರ ಶಾಸನದಲ್ಲಿ,[೯] ವ್ಯಾಪಾರಿಗಳು ನೀಡುವ ತೆರಿಗೆಯ ಬಗೆಗೆ ತಿಳಿಸಿದೆ. ನಖರಂಗಳು, ನಾನಾದೇಶಿಗವರೆಗಳು ಅಂಗಡಿಗಳ ವ್ಯಾಪಾರ ನಡೆಸುವುದಕ್ಕೆ ಪ್ರತಿಯಾಗಿ ಸಲ್ಲಿಸುವ ಕುರಿತು ತಿಳಿಸುತ್ತದೆ. ನಾನಾ ದೇಶಿ ವ್ಯಾಪಾರಿಗಳು ಕೃಷಿ ಸಂಬಂಧಿ ಬೆಳೆಗಳನ್ನು ಮಾರಾಟ ಮಾಡಿರುವುದು ಕಂಡುಬರುತ್ತದೆ. 'ಜೀರಿಗೆ ಸಾಸವಿ, ಸದಹುಗೆವೋವ ಕೊತ್ತುಂಬಲಿಯೊಳಗಾಗಿ ಹೊಂಗೆವೀಸ, ಹಿಪ್ಪಲಿ, ಎಲೆ, ಅಕ್ಕಿ ಅಲ್ಲ (ಶುಂಠಿ), ಅರಿಶಿನ ನಾರುಬೇರು ಸಮಸ್ತ ತೂಕದ ಭಂಡಾರಕ್ಕೆ ಹೊಂಗೆ ವೀಸವೊಂದನ್ನು ಕೊಡಬೇಕಿತ್ತು. ಈ ತೆರಿಗೆಗಳನ್ನು ವಸೂಲು ಮಾಡುವ ಅಧಿಕಾರಿಗಳಿಗೆ ಹೆಜ್ಜುಂಕ ವಡ್ಡರಾವುಳ ಎಂದು ಕರೆಯಲಾಗುತ್ತಿತ್ತು. ಇವರಲ್ಲದೆ ಬಣಂಜಿಗರು ಹೇಜಿಂಗೆ ಮಾನ ಒಂದನ್ನು ಬಿಟ್ಟಂತೆಯೂ ಈ ಶಾಸನ ತಿಳಿಸಿದೆ. ಅಲ್ಲದೆ ಎಣ್ಣೆಯ ಕಾಳುಗಳಿಂದ ಬರುವ ಎಣ್ಣೆಯನ್ನು ಮಾರಾಟ ಮಾಡುವ ವ್ಯಾಪಾರಿಗೆ ಈ ಶಾಸನವು ತೆಲ್ಲಿಗರಯ್ವತ್ತೊಕ್ಕಲು ಎಂದು ಉಲ್ಲೇಖಿಸಿರುವುದು ಕಂಡುಬರುತ್ತದೆ. ಅಂದರೆ ತೆಲ್ಲಿಗರು ಎಣ್ಣೆ ವ್ಯಾಪಾರಿಗಳಾಗಿ ಸಮಾಜದಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಇವರು ಸಂತೆಗಳಲ್ಲಿಯೂ ಮಾರಾಟ ಮಾಡುತ್ತಿದ್ದರು. ಕ್ರಿ.ಶ. ೧೨೭೮ರ ಶಾಸನದಲ್ಲಿ ಮಾಣಿಕ ಸೆಟ್ಟಿಯೊಳಗಾದ ಸಮಸ್ತ ನಕರಗಳು ಆ ಪಟ್ಟಣದ ಸಮಸ್ತ ಸಥವ ಮಾಡಿಸಿಕೊಟ್ಟ ಮಂಗಳವಾರದ ಸಂತೆಯ ಎಂದಿದೆ.[೧೦] ಈ ಶಾಸನವು ಸಂತೆಗಳಲ್ಲಿ ಸೆಟ್ಟಿ ಮೊದಲಾದ(ನಕರಗಳು) ವ್ಯಾಪಾರಿಗಳು, ವ್ಯಾಪಾರ ಮಾಡಿ ದೇವರಿಗೆ ದಾನ ನೀಡಿರುವುದು ಕಂಡುಬರುತ್ತದೆ.

ಈ ವ್ಯಾಪಾರಿಗಳು ದೇವಾಲಯ ನಿರ್ಮಿಸಿ, ಕೆರೆಗಳನ್ನು ಕಟ್ಟಿಸಿ ದಾನ ನೀಡಿದ ಉದಾಹರಣೆಗಳು ಕಂಡುಬರುತ್ತವೆ. ಕ್ರಿ.ಶ. ೧೧೧೭ರ ಶಾಸನವು[೧೧] ವಾಸಪಸೆಟ್ಟಿಯು ಮಲಯಾವತಿ ದೇವಾಲಯ ಕಟ್ಟಿಸಿ ದಾನ ನೀಡಿದನು. ಅಲ್ಲದೆ ನಾರಾಯಣ ದೇವರ ನಿತ್ಯ ಕಾರ್ಯಗಳಿಗೆ ದಾನ ನೀಡಿದನು. ವಿಶೇಷವೆಂದರೆ ಈ ದಾನ ದತ್ತಿ ಕಾರ್ಯಗಳ ನಿರ್ವಹಣೆಯ ಒಡೆಯರು ಬ್ರಾಹ್ಮಣರಾಗಿರಲಿಲ್ಲ. ಬದಲಿಗೆ(ನಖರರು) ವ್ಯಾಪಾರಿಗಳೇ ಆಗಿದ್ದರು. ನಕರರೆ 'ಮಾಣಿ' ಗಳನ್ನು ನೇಮಿಸಿ ದೇವಾಲಯದ ಮುದ್ರಾವಣದ ಒಡೆಯರಾಗಿದ್ದರು. ಇದನ್ನು ಗಮನಿಸಿದರೆ ವ್ಯಾಪಾರಿ ವರ್ಗವು ಹೊಂದಿದ್ದ ಪ್ರಾಬಲ್ಯ ತಿಳಿಯುತ್ತದೆ. 'ಕಾಸು ಇದ್ದವರು ಬಾಸು', ಕಾಸು ಇದ್ದರೆ ಕೈಲಾಸ' ಎಂಬ ಉದಾಹರಣೆಗಳು ಇಲ್ಲಿ ಹೆಚ್ಚು ಅನ್ವಯಿಸುತ್ತವೆ. ವ್ಯಾಪಾರ ವೃತ್ತಿಯ ಮೂಲಕ ಮೇಲುಗೈ

ಸಾಧಿಸಿದ ವರ್ಗವೊಂದು ಸಮಾಜದಲ್ಲಿ ಮುನ್ನಲೆಗೆ ಬಂದು, ಸಮಾಜದ ಧಾರ್ಮಿಕ ವ್ಯವಸ್ಥೆಯ ಮೇಲೆ ಹಿಡಿತವನ್ನು ಸಾಧಿಸಿತ್ತು ಎಂಬುದು ತಿಳಿಯುತ್ತದೆ. ಇದರಿಂದ ಸಮಾಜದಲ್ಲಿ ಪ್ರಾಬಲ್ಯದಿಂದ ಸಮಾಜದ ವ್ಯವಸ್ಥೆಯ ಮೂಲ ಆಶಯಗಳು ಬದಲುಗೊಳ್ಳುವ ಸಾಧ್ಯತೆಗಳಿದ್ದಂತೆ ಪ್ರಾಚೀನ ಸಂದರ್ಭದಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೦೯೭ರ ಶಾಸನದಲ್ಲಿ ಎತ್ತಿನ ವಣಿಜನ ಉಲ್ಲೇಖವಿದೆ.[೧೨] ಇಂದಿಗೂ ಸಹ ಎತ್ತಿನ ವ್ಯಾಪಾರಿಗಳು ಕಂಡುಬರುವುದಿದೆ. ಅವರನ್ನು ದಲ್ಲಾಳಿಗಳು, ಚಾಟಿ ಬುಗರಿ ಮಾಡುವವರು, ಮಧ್ಯವರ್ತಿ ವ್ಯಾಪಾರಿಗಳು ಎಂದು ಕರೆಯಲಾಗುತ್ತದೆ. ವ್ಯಾಪಾರಿಗಳು ಕತ್ತೆ, ಕೋಣ, ಬಂಡಿ ಮುಂತಾದವುಗಳ ಮೇಲೆ ವಸ್ತುಗಳನ್ನು ಕೊಂಡೊಯ್ದು ವ್ಯಾಪಾರ ಮಾಡುತ್ತಿದ್ದರು. ಇದನ್ನು 'ಕ್ರಿ.ಶ. ೧೧೧೩ರ ಶಾಸನವು ತಿಳಿಸಿದೆ.[೧೩] ಕ್ರಿ.ಶ. ೧೧೧೫ರ ಶಾಸನವು ಎಲೆಯ ವ್ಯಾಪಾರಿಯನ್ನು ಉಲ್ಲೇಖಿಸಿದೆ.[೧೪] ಕ್ರಿ.ಶ. ೧೧೫೮ರ ಶಾಸನವು ದೇಶಿ ಬಣಂಜಿಗರು ಮಾರಾಟ ಮಾಡುವ ವಸ್ತುಗಳಿಗೆ ಪಾವತಿ ಮಾಡುವ ತೆರಿಗೆಯ ಬಗೆಗೆ ತಿಳಿಸಿದೆ. ಹೇಜಿಂಗೊಬ್ಬಳ ಭತ್ತ ಮೆಳಸಿನ ಭಾರಕೊಬ್ಬಳ ಎಲೆಯ ಹೇಜಿಂಗೆ ೧೦೦ ಹೇಜಿಂಗೆ ೫೦[೧೫] ಮೊದಲಾದವುಗಳಿಗೆ ತೆರಿಗೆ ನೀಡಿರುವುದನ್ನು ತಿಳಿಸಿದೆ. ಪ್ರಾಚೀನ ಕಾಲದಲ್ಲಿ ಎಲೆ, ಮೆಣಸು, ಅಡಕೆಗಳು ಪ್ರಧಾನವಾಗಿ ವ್ಯಾಪಾರ ವಹಿವಾಟಿನ ಬೆಳೆಗಳಾಗಿದ್ದವೆಂದು ತಿಳಿಯುತ್ತದೆ. ರಾಜ್ಯದಲ್ಲಿ ವ್ಯಾಪಾರಿಗಳನ್ನೂ ಸಹ ರಕ್ಷಿಸಲಾಗುತ್ತಿತ್ತು. ಅವರ ಹಿತದೃಷ್ಟಿಯಿಂದ ಅವರಿಗಾಗಿ ಕಾರ್ಯನಿರ್ವಹಿಸುವ ವಣಿಕ ಸಂಘಗಳನ್ನು ರಚಿಸಿಕೊಳ್ಳುತ್ತಿದ್ದರು. ಈ ವಣಿಕ ಸಂಘಗಳು ಊರನ್ನು ಪಟ್ಟಣವನ್ನಾಗಿಸುವ ಸಾಮರ್ಥ್ಯವನ್ನು ಹೊಂದಿದ್ದರು. 'ಎಲ್ಲಿ ಸೆಟ್ಟಿ ತಳವೂರುವನೊ ಅದು ಪಟ್ಟಣವಾಗುತಿತ್ತೆಂಬ ಜನಪದರ ಮಾತು ಇದಕ್ಕೆ ಕನ್ನಡಿಯಂತಿದೆ. ತಮಿಳುನಾಡಿನ ಮಂಗಲದ ಶಾಸನವೊಂದು ಈ ಅಂಶಗಳನ್ನು ತಿಳಿಸುತ್ತದೆ.[೧೬] ಈ ಶಾಸನದಲ್ಲಿ ಅಂಯ್ಯಾಪೊಳಿಲ್‌ನ ತಿಶೈ ಆಯಿರತ್ತೈನೂರ್ವರ ವಣಿಕಸಂಘವಿತ್ತೆಂದು ತಿಳಿಸುತ್ತದೆ. ಈ ಸಂಘವೂ ಊರಿಂದೂರಿಗೆ ಸಂಚರಿಸುವ ವಣಿಕರಿಗೆ ಅಂತಸ್ತಿಗೆ ಅನುಗುಣವಾಗಿ ಬಟ್ಟೆ ಹಂಚುವುದು, ವ್ಯಾಪಾರಿಗಳ ಅಂಗರಕ್ಷಕರಿಗೆ ಊಟ ಹಾಕುವುದು, ಸತ್ತ ವೀರರ ನೆನಪಿಗೆ ಊಟ ಹಾಕಲು ಹಂದಿಕೊಲ್ಲುವ ಮೊದಲಾದ ವಿವರಗಳನ್ನು ಒಳಗೊಂಡಿದೆ. ಕ್ರಿ.ಶ. ೧೨೦೯ ರ ಶಾಸನವು ವೀಳೆದೆಲೆ ಬೆಳೆಗಾರರ(ಕೊಯ್ಲಾಳಿ) ಸಂಘವನ್ನು ಉಲ್ಲೇಖಿಸಿದೆ.[೧೭]

ರಾಜ್ಯದ ಆರ್ಥಿಕತೆಗೆ ಕೃಷಿ ಉತ್ಪನ್ನವನ್ನು ವಿನಿಮಯ ಮಾಡುವ ಮೂಲಕ ರಾಜ್ಯದ ಆದಾಯದ ಹೆಚ್ಚಳಕ್ಕೆ ವ್ಯಾಪಾರವು ಕಾರಣವಾಯಿತು. ವ್ಯಾಪಾರದ ಮೂಲಕ ಸಮಾಜದಲ್ಲಿ ಆರ್ಥಿಕತೆಗೆ ಅಡಿಗಲ್ಲನ್ನು ನಿರ್ಮಿಸಿದಂತೆ ಕಂಡುಬಂದಿದೆ. ಆರ್ಥಿಕತೆಯ ಮೂಲಕ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಬೆಳವಣಿಗೆಗಳಿಗೆ ವ್ಯಾಪಾರವು ಕಾರಣವಾಯಿತೆಂಬ ಅಂಶಗಳು ಈ ಅಧ್ಯಯನದಿಂದ ತಿಳಿದುಬಂದಿವೆ. ಕೆಲವೊಮ್ಮೆ ಮಾರುವವರ ಮತ್ತು ಕೊಳ್ಳುವವರ ಮಧ್ಯವರ್ತಿಗಳಾಗಿ, ಮಾರಾಟ ಮಾಡುವ ಮೂಲಕ ಸಮಾಜದ ಜನರ ಅಗತ್ಯಗಳನ್ನು ಪೂರೈಸುವ ಮೂಲಕ ವಿತರಕವಾಗಿ ಕಾರ್ಯನಿರ್ವಹಿಸಿರುವುದು ಕಂಡುಬರುತ್ತದೆ.

**೪.೨. ಸ್ಥಳೀಯ ಮಾರುಕಟ್ಟೆಗಳಾಗಿ ಸಂತೆಗಳು**

ಪ್ರಾಚೀನ ಕಾಲದ ಸಂದರ್ಭದಲ್ಲಿ ಸಂತೆಗಳು ಸ್ಥಳೀಯ ವ್ಯಾಪಾರ ಕೇಂದ್ರಗಳಾಗಿದ್ದವು. ಇಂದಿನ ಮಾರುಕಟ್ಟೆಗಳಿಗೆ ಯಾವುದೇ ವಿಧದಲ್ಲೂ ಕಡಿಮೆ ಎನ್ನದಂತೆ ಅಂದಿನ ಸಂತೆಗಳು ಕಾರ್ಯನಿರ್ವಹಿಸುತ್ತಿದ್ದವು. ಇವುಗಳು ಒಂದು ಗೊತ್ತಾದ ಪ್ರದೇಶದಲ್ಲಿ, ನಿಗದಿಪಡಿಸಿದ ದಿನದಂದು ಸಂತೆಗಳು ನಡೆಯುತ್ತಿದ್ದವು. ಇಂದಿನಂತೆ ವಾರಕ್ಕೆ ಒಂದು ದಿನದಂತೆ ಸಂತೆಗಳು ಏರ್ಪಟ್ಟಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೧ನೆಯ ಶತಮಾನದಲ್ಲಿ ಕೃಷಿಯ ಸಮೃದ್ಧಿಯಲ್ಲಾದ ಬೆಳವಣಿಗೆಗಳಿಂದಾಗಿ

ಸ್ಥಳೀಯ ವ್ಯಾಪಾರೀ ಕೇಂದ್ರಗಳಾದ ಸಂತೆಗಳು ಹುಟ್ಟುಕೊಂಡವಲ್ಲದೆ ದ್ವಿಗುಣಗೊಂಡವು. ಇದಕ್ಕೆ ಮತ್ತೊಂದು ಪ್ರಮುಖ ಕಾರಣವೆಂದರೆ ಕ್ರಿ.ಶ. ೧೧ನೆಯ ಶತಮಾನದಲ್ಲಿ ಆಡಳಿತದಲ್ಲಾದ ವಿಕೇಂದ್ರೀಕರಣ ವ್ಯವಸ್ಥೆ ಇದರಿಂದಾಗಿ ಆಡಳಿತ ವರ್ಗವು ಗ್ರಾಮೀಣ ವೃತ್ತಿಯಿಂದ ಕೃಷಿಯನ್ನು ಆರ್ಥಿಕತೆಯ ಕೇಂದ್ರ ಬಿಂದುವಾಗಿ ಪರಿಗಣಿಸಿತು. ಇದರ ಪರಿಣಾಮದಿಂದಾಗಿ ದ್ವಿಗುಣಗೊಂಡ ಕೃಷಿ ಉತ್ಪನ್ನವನ್ನು ಮಾರಾಟ ಮಾಡಲು ವೇದಿಕೆಯೊಂದನ್ನು ಸಿದ್ಧಪಡಿಸುವ ಅನಿವಾರ್ಯತೆ ಬಂದೊದಗಿತು. ಇದರ ಫಲಶೃತಿಯಿಂದ ಸ್ಥಳೀಯ ಮಟ್ಟದಲ್ಲಿ ರಚನೆಗೊಂಡ ಮಾರುಕಟ್ಟೆಗಳೇ ಸಂತೆಗಳಾಗಿ ಕಂಡುಬರುತ್ತವೆ. ಸಂತೆಯು ಸಂಸ್ಥಾ, ಸಂಸ್ಥೆ, ಸಂತೆ ಎಂದು ಸಂಸ್ಕೃತದಿಂದ ರೂಪುಗೊಂಡಿದೆ.[೧೮] ಈ ಸಂತೆಗಳು ಪ್ರಾಚೀನ ಕಾಲದಲ್ಲಿ ಆರ್ಥಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳೂ ಆಗಿ ಕಾರ್ಯನಿರ್ವಹಿಸುತ್ತಿದ್ದವು.

ಸಾಮಾನ್ಯವಾಗಿ ಸಂತೆಗಳು ಸ್ಥಳೀಯವಾಗಿ ಹಳ್ಳಿಗಳಲ್ಲಿ ರಚನೆಗೊಂಡವು. ಹೀಗೆ ರಚನೆಗೊಂಡಾಗಲೂ ದೇವಾಲಯದ ಬಳಿ ಸಂತೆ ಬೀದಿಗಳು, ಸಂತೆ ಸ್ಥಳ, ಹೀಗೆ ಮೊದಲಾಗಿ ನಿರ್ಮಿಸಿ ಅಲ್ಲಿ ವ್ಯಾಪಾರಿ ಚಟುವಟಿಕೆಗಳು ನಡೆಯುತ್ತಿದ್ದವು. ದೇವಾಲಯದಲ್ಲಿ ಆ ದೇವರ ವಾರ ಅಂದರೆ ವಿಶೇಷ ಪೂಜೆ ನಡೆಯುವಂದು ಸಂತೆಗಳು ಏರ್ಪಟ್ಟಿರುವ ಸಾಧ್ಯತೆಗಳಿವೆ. ದೇವಾಲಯಗಳಿಗೆ ಬಂದ ಭಕ್ತರು ಸ್ವಾಮಿ ಕಾರ್ಯದೊಂದಿಗೆ ಸ್ವಕಾರ್ಯವನ್ನು ಮಾಡಿಕೊಳ್ಳುವ ಸಲುವಾಗಿ ಹೀಗೆ ಮಾಡಿರುವ ಸಾಧ್ಯತೆಗಳಿವೆ. ದೇವರ ದರ್ಶನದೊಂದಿಗೆ ಸಂತೆಯಲ್ಲಿ ಪಾಲ್ಗೊಂಡು ತಮ್ಮ ಜೀವನಾವಶ್ಯಕತೆಗೆ ಬೇಕಾದ ವಸ್ತುಗಳನ್ನು ಕೊಳ್ಳುತ್ತಿದ್ದರು.

ಈ ಸಂತೆಗಳು ಇಂದಿನ ಮಾರುಕಟ್ಟೆಗಳಿಗೆ ಯಾವುದೇ ವಿಧದಲ್ಲೂ ಕಡಿಮೆ ಇಲ್ಲವೆಂಬಂತೆ ಪ್ರತಿಯೊಂದು ವಸ್ತುಗಳು, ಕೃಷಿ ಸಾಮಾಗ್ರಿಗಳ ವ್ಯಾಪಾರಗಳು ನಡೆಯುತ್ತಿದ್ದವು. ವಾರದಲ್ಲಿ ಒಂದು ದಿನಕ್ಕಷ್ಟೆ ಈ ವ್ಯಾಪಾರವು ಸೀಮಿತಗೊಂಡಿತ್ತು. ಹೊಸದಾಗಿ ಆರಂಭಿಸಿದ ಸಂತೆಗೆ ವರ್ತಕರನ್ನು ಆಕರ್ಷಿಸಲು ಸರಕುಗಳಿಗೆ ಸುಂಕ ರಿಯಾಯಿತಿಯನ್ನು ನೀಡಲಾಗುತ್ತಿತ್ತು. ಸ್ಥಳೀಯ ವಸ್ತುಗಳಲ್ಲದೆ ಹೊರಗಿನ ವ್ಯಾಪಾರಸ್ಥರು ವ್ಯಾಪಾರ ನಡೆಸುತ್ತಿದ್ದರು. ನಿತ್ಯ ಬಳಕೆಯ ವಸ್ತುಗಳ ವ್ಯಾಪಾರ ಮಾತ್ರ ನಡೆಸುವುದಲ್ಲದೆ ವಸ್ತುಗಳನ್ನು ಖರೀದಿಸಿ ರಫ್ತು ಮಾಡುವ ಮತ್ತು ಆಮದು ಮಾಡಿಕೊಂಡ ವಸ್ತುಗಳನ್ನು ಪೇಟೆ-ಪಟ್ಟಣಗಳಿಗೆ ವಿತರಿಸುವ ಕೆಲಸವನ್ನು ಮಾಡಲಾಗುತ್ತಿತ್ತು.[೧೯] ಸಂತೆಗಳು ನಿರ್ದಿಷ್ಟ ದಿನದಂದು ನಡೆಯುತ್ತಿದ್ದವು. ಶಾಸನಗಳಲ್ಲಿ ಸಂತೆಗಳು ನಡೆಯುವ ದಿನಗಳ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೨೧೮ರ ಶಾಸನದಲ್ಲಿ ಬುಧವಾರ ಸಂತೆಯನ್ನು ಉಲ್ಲೇಖಿಸಿದೆ.[೨೦] ಕ್ರಿ.ಶ. ೧೨೭೮ರ ಶಾಸನದಲ್ಲಿ ಮಂಗಳವಾರ ಸಂತೆಯನ್ನು ಉಲ್ಲೇಖಿಸಿದೆ.[೨೧] ಈ ರೀತಿ ಊರೊಂದರಂತೆ ವಾರದಲ್ಲಿ ಒಂದು ದಿನ ಸಂತೆ ನಡೆಯುತ್ತಿತ್ತು. ದಿನಕ್ಕೊಂದು ಊರುಗಳಲ್ಲಿ ಸಂತೆಗಳು ಬದಲಾಗುತ್ತಿದ್ದವು. ಆದರೆ ವ್ಯಾಪಾರಿಗಳು ಮಾತ್ರ ಅವರೆ ಆಗಿರುತ್ತಿದ್ದರು. ಅವರು ದಿನಕ್ಕೊಂದು ಊರಿನಂತೆ ಪ್ರತಿದಿನವು ಸಂತೆಗಳಲ್ಲಿ ಭಾಗವಹಿಸಿ ಮಾರಾಟ ಮಾಡುತ್ತಿದ್ದರು. ಈ ಸಂತೆಗಳಲ್ಲಿ ವ್ಯಾಪಾರಿ ವರ್ಗಗಳಾದ ಉತ್ಪಾದಕ ವಿನಿಮಯ ವರ್ಗಗಳು ಪಾಲ್ಗೊಳ್ಳುತ್ತಿದ್ದವು. ಈ ಸಂತೆಗಳು ಕೃಷಿ ಮಾರುಕಟ್ಟೆಗಳಂತೆ ಕಾರ್ಯನಿರ್ವಹಿಸುತ್ತಿದ್ದವು. ಮಾರಿದ ಮತ್ತು ಕೊಂಡ ವಸ್ತುಗಳಿಗೆ ಸುಂಕ ವಿಧಿಸುತ್ತಿದ್ದರು. ಇವುಗಳಿಗೆ ಇಂದು 'ಜಕಾತಿ' ಎಂದು ಕರೆಯಲಾಗುತ್ತಿದೆ. ಪ್ರಾಚೀನ ಕಾಲದಲ್ಲಿ ಊರಿನ ಮಹಾಜನರು ಮೊದಲಾದ ಊರಿನ ಮುಖಂಡರು ಹಾಗೂ ವಾಪಾರಿಗಳು ಸಂತೆಗಳನ್ನು ನಿರ್ಧರಿಸುತ್ತಿದ್ದರು. ಇಂದಿಗೂ ಆ ಪರಂಪರೆ ಮುಂದುವರಿದುಕೊಂಡು ಬಂದಿದೆ. ಅಂದು ದೇವಾಲಯಕ್ಕೆ ಸಂತೆಗಳ ಆದಾಯ ಸಂದಾಯವಾಗುತ್ತಿತ್ತು. ಇಂದು ಗ್ರಾಮ ಪಂಚಾಯಿತಿಗಳಿಗೆ

ಸಂದಾಯವಾಗುತ್ತಿದೆ. ವರ್ಷ ಒಂದಕ್ಕೆ ಸಂತೆಗಳ ಸುಂಕ ವಸೂಲಾತಿಗೆ ವ್ಯಕ್ತಿಯೊಬ್ಬರಿಗೆ ಊರಿನ ಮುಖಂಡರು ಸೇರಿ ಗುತ್ತಿಗೆ ನೀಡುತ್ತಿದ್ದರು. ಇದರ ಹರಾಜು ಪ್ರಕ್ರಿಯೆ ವರ್ಷಕ್ಕೆ ನಿಗದಿಯಾಗಿರುತ್ತದೆ.

ಸಂತೆಗಳಿಗೆ ವರ್ತಕರು ಎತ್ತು, ಕೋಣಗಳ ಬಂಡಿಯ ಮೇಲೆ ಬರುತ್ತಿದ್ದರು. 'ಸ್ವಸ್ಥಳ, ಪರಸ್ಥಳದ ವರ್ತಕರು ದವಸ ಧಾನ್ಯಗಳನ್ನು ರಾಶಿಯಾಗಿ ಕೂಡಿ ಹಾಕುತ್ತಿದ್ದರು. ವಸ್ತುಗಳನ್ನು ತೂಗಿ, ಎಣಿಸಿ, ಅಳೆದು ಮಾರುತ್ತಿದ್ದರು. ತೂಗಲು ತಕ್ಕಡಿ ಬಳಸುತ್ತಿದ್ದರು.[೨೨] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಸಂತೆಯ ಉಲ್ಲೇಖವಿದೆ.[೨೩] ಇದರ ಆದಾಯವನ್ನು ಶ್ರೀ ರಾಮನಾಥ ದೇವರು, ಶ್ರೀ ನಾರಸಿಂಹ್ವದೇವರು ಮೊದಲಾದ ದೇವರಿಗೆ ಬಿಟ್ಟರೆಂದು ತಿಳಿಸುತ್ತದೆ. ಹರಿಹರದ ಶಾಸನವೊಂದರಲ್ಲಿ 'ಸಂಥೆಯ ಆರವೆ ತುಡುಕೆ೧ ಮುಂಮರಿದಂಡ ಮೊದಲಾದವರು ಮಹದೇವರಾಯ ನಾರಾಯಣ ದೇವರಿಗೆ ಸಂಥೆಗಳ ಆಯವನ್ನು ಬಿಟ್ಟರು. ಪೊಱವೇಱಿಂಗೆಲೆನೂಱು ಮೆಣಸು ನೆಲಕ್ಕಿ ಸೊಲ್ಲಗೆಯಯ್ವತೆಂದಡಕೆಯಂ ಮತ್ತಿಲ್ಲಿ ಮಾಱಾದಡಂ ತೆಱುಗಯ್ವತ್ತೆಲೆಕೇಣಿಕಕ್ಕಡಕೆ ಯಿರೊಂದೊಂದನೆ[೨೪] ಎಂದಿದೆ. ಪ್ರಾಚೀನ ಸಂದರ್ಭವನ್ನು ಗಮನಿಸಿದಂತೆ ಇಂದು ಗ್ರಾಮ ಪಂಚಾಯಿತಿಗಳು ಸಂತೆ ತೆರಿಗೆಯ ಪಾವತಿ ಕೇಂದ್ರಗಳಾದಂತೆ, ದೇವಾಲಯಗಳು, ಸಂತೆಯ ಮೇಲೆ ಒಡೆತನ ಸಾಧಿಸಿದಂತೆ ಕಂಡುಬರುತ್ತದೆ. ಇದು ದಾನದ ಮೂಲಕವಾದರು, ಸಂತೆಯ ತೆರಿಗೆ ದೇವಾಲಯಕ್ಕೆ ಸಂದಾಯವಾಗುತ್ತಿತ್ತು. ಉಲ್ಲೇಖಿತ ಈ ಶಾಸನವು ತಿಳಿಸುವಂತೆ ಸಂತೆಯಲ್ಲಿ ಯಾರು ಮಾರಿದರೂ ತೆರಿಗೆಯನ್ನು ಕಟ್ಟಬೇಕಿತ್ತು. ಸಂತೆಯಲ್ಲಿ ಮಾರಾಟವಾಗುವ ಕೆಲವು ವಸ್ತುಗಳಿಗೆ ಸುಂಕ ವಿಧಿಸಿ ಅದರ ಸುಂಕವನ್ನು ದೇವಾಲಯಕ್ಕೆ ಬಿಟ್ಟರೆಂದು ಶಾಸನವು ತಿಳಿಸಿದೆ. ಸಂತೆಯಲ್ಲಿ ಮಾರಾಟವಾಗುವ ಮೆಣಸು, ನೆಲ್ಲಕ್ಕಿ, ಎಣ್ಣೆ, ಎಲೆ, ಅಡಕೆಗಳ ಉಲ್ಲೇಖ ಕಂಡುಬಂದಿದೆ. ತೆರಿಗೆ ವಿಧಿಸುವಾಗ ತಲೆಯ ಮೇಲೆ ಬಂದ ಹೊರೆಗಳಿಗೆ, ಎತ್ತಿನ ಬಂಡಿಯಲ್ಲಿ ಬಂದ ವಸ್ತುಗಳು, ಹೇಱುಗಳು ಮೊದಲಾದವುಗಳಿಗೆ ಸುಂಕವು ಪ್ರತ್ಯೇಕವಾಗಿರುತ್ತಿತ್ತು. ಕ್ರಿ.ಶ. ೧೨೪೦ರ ಶಾಸನವು ಸಂಥೆಯಂ ಮಾಡಿ ಶ್ರೀ ಸೋಮನಾಥ ದೇವರ್ಗ್ಗೆ ಬಿಟ್ಟ ಆಯ ಬಂಡಿ ಭತ್ತ ಪಡಿ ಅಡಕೆಯ ಕೊ೧ ಹೇಱಿಂಗೆ ಬ ೧ ಎಣ್ಣೆ ಕೊಡಕ್ಕ ಸೊ ೨ ಹೇಱಿಂಗೆ ಅಡಕೆ ೧೦ ದೇಱಿಗೆ ಎಲೆ ೧೦೦ ಮೇಲಾದ ಭಂಡಕ್ಕಂದಳಸಾದವಱಿದು ಕೊಡುವರು. ದೇವರ್ಗ್ಗೆ ಎತ್ತು ನೂಱಕ್ಕಂ ಸರ್ವ್ವ ಮಾನ್ಯ ಗೌಡಂಗಂ ಎತ್ತು ೩೦ತಕ್ಕ ಸರ್ವ್ವ ಮಾನ್ಯ ಪಟ್ಟಣ ಸ್ವಾಮಿ ಎತ್ತು ೩೦ಕ್ಕಂ ಸರ್ವಮಾನ್ಯ ಮುಂಮರಿದಂಡ ಸ್ಥಳದಲ್ಲಿ ದಂಡ ದೋಷ.[೨೫] ಸಂತೆಯಲ್ಲಿ ಮಾರುವ ಕೆಲವರಿಗೆ ವಿಶೇಷ ರಿಯಾಯಿತಿ ದೊರೆಯುತ್ತಿತ್ತು. ದೇವಾಲಯಕ್ಕೆ ಸಂಬಂಧಿಸಿದ ವಸ್ತುಗಳಿಗೆ, ಗೌಡರ ವಸ್ತುಗಳಿಗೆ, ಪಟ್ಟಣ ಸ್ವಾಮಿ ಮೊದಲಾದ ಉನ್ನತ ವರ್ಗದ ಶ್ರೀಮಂತರ ಕೆಲವು ವಸ್ತುಗಳ ಮೇಲಿನ ಸುಂಕವನ್ನು ಮಾನ್ಯ ಮಾಡಿರುವುದು ತಿಳಿದುಬರುತ್ತದೆ. ಸುಂಕದ ಮೇಲಿನ ಹೊರೆ ಮತ್ತು ಪಾವತಿಯ ಜವಾಬ್ದಾರಿ ಸಾಮಾನ್ಯ ಜನರಿಗೆ ಹೆಚ್ಚು ಸೀಮಿತವಾಗಿದ್ದಂತೆ ಕಂಡುಬರುತ್ತದೆ. ಕ್ರಿ.ಶ. ೧೨೮೭ರ ಶಾಸನದಲ್ಲಿ ಸಂತೆ ಭೂಮಿ ೫೦ರ ಉಲ್ಲೇಖವಿದೆ.[೨೬] ಯಾವ ಊರುಗಳಲ್ಲಿ ಸಂತೆ ನಡೆಯುತ್ತದೆಯೋ ಆ ಊರಿನಲ್ಲಿ ಪ್ರತ್ಯೇಕ ಸ್ಥಳವೊಂದರಲ್ಲಿ ಸಂತೆ ನಿಗದಿಯಾಗುತ್ತಿತ್ತು. ಆ ಸ್ಥಳವನ್ನು ಇಂದಿಗೂ 'ಸಂತೆ ಬೀದಿ' ಎಂದು ಕರೆಯಲಾಗುತ್ತಿದೆ. ಸಂತೆಗೆ ಸಂಬಂಧಿಸಿದ ಜಾಗ ಅಥವಾ ಭೂಮಿಯನ್ನು ಶಾಸನವು ಉಲ್ಲೇಖಿಸಿರುವ ಸಾಧ್ಯತೆಯಿದೆ. ಸಂತೆಗಳು ಏರ್ಪಡುವಾಗ ಮೂಲಭೂತ ಸೌಕರ್ಯಗಳಲ್ಲೊಂದಾದ ನೀರಿನ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಕ್ರಿ.ಶ. ೧೨೮೦ ರ ಬೆಣ್ಣೆಹಳ್ಳಿಯ ಶಾಸನವು ಸಂತೆಯೊಳಗಣ ಅಱವಟಿಗೆಗೆ ಮತ್ತರು೨[೨೭] ಎಂದಿದೆ. ಸಂತೆಗೆ ಬರುವ ಜನರಿಗೆ, ವ್ಯಾಪಾರಿಗಳ ಯೋಗಕ್ಷೇಮದ ಹಿತದೃಷ್ಟಿಯಿಂದ ಅರವಟಿಗೆಗಳನ್ನು ಇರಿಸಿ ಅದರ ನಿರ್ವಹಣೆಗೆ ಭೂದಾನ ನೀಡಿರುವುದನ್ನು ತಿಳಿಸಿದೆ. ಕ್ರಿ.ಶ. ೧೨೨೬ರ ಶಾಸನದಲ್ಲಿ ಸಂತಯಾಯವನ್ನು ಬಿಟ್ಟಂತೆ ತಿಳಿಸಿದೆ.[೨೮] ಸಂತೆಗಳಲ್ಲಿ

ಕೆಲವೊಮ್ಮೆ ಬಲವಂತವಾಗಿ ತೆರಿಗೆ ವಸೂಲಿ ಮಾಡಿದಂತೆ ಕಂಡುಬರುತ್ತದೆ. ಈ ಕಾರಣದಿಂದಾಗಿಯೇ ಕ್ರಿ.ಶ. ೧೧೫೯ರ[೨೯] ಶಾಸನದಲ್ಲಿ ಮಂಗಳವಾರದ ಸಂತೆಯ ಮಾರುಕಟ್ಟೆಯಲ್ಲಿ ಅಧಿಕಾರಿಗಳು ತೆರಿಗೆ ವಸೂಲಿಗೆ ಬಲತ್ಕಾರಿಸಿದರಾದರೆ ಅರಸನ ಮೇಲೆ ಆಣೆ ಎಂದು ಹೇಳಿದೆ. ಕೆಲವೊಮ್ಮೆ ವ್ಯಾಪಾರವಾಗದ, ಮೊದಲಾದ ಸಂದರ್ಭದಳು ವರ್ತಕರಿಗೆ ಎದುರಾಗುತ್ತಿದ್ದವು. ಇದರಿಂದ ವರ್ತಕರು ತೆರಿಗೆ ಪಾವತಿಸಲು ಸಾಧ್ಯವಾಗದ ಸ್ಥಿತಿ ಬಂದೊದಗುತ್ತಿತ್ತು. ಇಂತಹ ಸಂದರ್ಭದಲ್ಲಿ ಅಧಿಕಾರಿಗಳು ಬಲವಂತವಾಗಿ ವಸೂಲಿ ಕಾರ್ಯ ಮಾಡುತ್ತಿದ್ದಿರುವ ಸಾಧ್ಯತೆಗಳಿವೆ. ಈ ಕಾರಣದಿಂದಲೇ ಅಧಿಕಾರಿಗಳಿಗೆ ಎಚ್ಚರಿಕೆಯನ್ನು ಈ ಶಾಸನದಲ್ಲಿ ಸೂಚಿಸಿರುವುದು ಕಂಡುಬಂದಿದೆ. ಇಂದಿಗೂ ಸಂತೆಗಳಲ್ಲಿ ಮಾರಾಟವಾಗಲೀ ಬಿಡಲೀ ಆ ವಸ್ತುವಿಗೆ ತಗಲಬಹುದಾದ ಜಕಾತಿಯನ್ನು ಪಾವತಿಸಿಯೇ ತೀರಬೇಕೆಂಬ ನಿಯಮಗಳಿವೆ. ಸಂತೆಗಳಲ್ಲಿ ಅಧಿಕಾರಿಗಳು ಮಾನವೀಯತೆಯನ್ನು ಮರೆತು ವರ್ತಿಸುತ್ತಿದ್ದರೆಂಬುದು ಪ್ರಾಚೀನ ಸಂದರ್ಭದಲ್ಲೇ ಕಂಡುಬರುತ್ತದೆ. ಕ್ರಿ.ಶ. ೧೨೭೮ರ ಶಾಸನವು ಸಂತೆಗೆ ಬರುವ ವಸ್ತುಗಳಿಗೆ ವಿಧಿಸಿದ ತೆರಿಗೆಯ ಬಗೆಗೆ ತಿಳಿಸುತ್ತದೆ. ಸಂಥೆಗೆ ಬಂದ ಭಂಡರವೊಳಗೆ ಯೆಂಣ್ನೆಯ ಸೊಡರು ಅತ್ತಿ ಸೊಲಗೆ ಎಂಣ್ನೆ ಹಸರಕ್ಕೆ ಎರಡಡಕೆ ಎಲೆಯ ಹೇಜೆಂಗೆವೊಂದು ಕೌಳಿಗೆ ಎಲೆ ದವಸದ ರಾಸಿಗೆಯಿಂ ಮಾನಭತ್ತ, ಕಾಯಿ ಹೇಜೆಂಗೆ ಎರಡು ಕಾಯಿ ೧ ಹೆಡಗೆಗೆವೊಂದು ಕಾಯಿ ೧ ಬೆಲ್ಲ ಹಸರಕ್ಕೊಂದು ಬೆಲ್ಲ ಹಸರಕ್ಕೆ ಸೀರೆಯ ಹಸರಕ್ಕೆವುಂ ವರುಷ ನಿಬಂಧಿಯಾಗಿ ಹಸರಕ್ಕೆ ಹಗವ ಕೊಡುವರು. ಇದನ್ನು ಸಮಸ್ತ ಪ್ರಜೆಗಳು ಬೊವಕ್ಕಳು ಮುಖ್ಯರಾದ ಹದಿನೆಂಟು ಸಮೆಯ ಮಾಡಿರುವುದು ಕಂಡುಬರುತ್ತದೆ.[೩೦] ಸಂತೆಯಲ್ಲಿ ಮಾರಾಟವಾಗುವ ವಸ್ತುಗಳಿಗೆ ವಸ್ತು ರೂಪದಲ್ಲಿಯೇ ತೆರಿಗೆ ಪಡೆದಿರುವುದು ಈ ಶಾಸನದಲ್ಲಿ ಕಂಡುಬಂದಿದೆ. ಚಿತ್ರದುರ್ಗದ ನುಲೇನೂರು ಗ್ರಾಮದ ಶಾಸನದಲ್ಲಿ ಸಂತೆಯಾಯದ ಉಲ್ಲೇಖವಿದೆ.[೩೧] ಬದಲಾವಣೆ ಸಮಾಜದ ನಿಯಮ. ಅದರಂತೆ ಬದಲಾದ ಸಾಂಸ್ಕೃತಿಕತೆಯ ತಲ್ಲಣಗಳಿಂದಾಗಿ ಪ್ರಾಚೀನ ಕಾಲದ ಊರುಗಳಲ್ಲಿ ಕಂಡುಬಂದ ಸಂತೆಗಳು ಇಂದು ನಡೆಯುತ್ತಿಲ್ಲ. ಇದಕ್ಕೆ ಉದಾಹರಣೆ ಎಂಬಂತೆ ಶಾಸನ ಉಲ್ಲೇಖಿತ ಈ ನೂಲೇನೂರು ಗ್ರಾಮದಲ್ಲಿ ಇಂದು ಸಂತೆ ನಡೆಯದೇ ಇರುವುದು ಕಂಡುಬರುತ್ತದೆ. ಇದಕ್ಕೆ ಪ್ರಮುಖ ಕಾರಣ ಊರುಗಳು ಪಟ್ಟಣಗಳಾಗಿ ಮಾರ್ಪಟ್ಟಿರುವುದು. ಪಕ್ಕದ ರಾಮಗಿರಿ ತಕ್ಕಮಟ್ಟಿಗೆ ಪಟ್ಟಣವಾಗಿ ರೂಪಗೊಂಡ ಕಾರಣಕ್ಕೆ ಮತ್ತು ಊರಿನಲ್ಲಿ ಸಂತೆಯು ಕಾಲಕ್ರಮೇಣ ಗತಿಸಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೦೭ರ ಶಾಸನದಲ್ಲಿ ಸಂತೆಯಲ್ಲಿ ಮಾರುವ ಒಂದು ಕೊಡ ಎಣ್ಣೆಗೆ ಒಂದು ಮಾನ ಎಂದಿದೆ.[೩೨] ಕ್ರಿ.ಶ. ೧೨೭೮ ಶಾಸನದಲ್ಲಿ ಸಂತೆಯೊಳಗೆ ದೇವಿಯ ಕಮ್ಮತದ ಭತ್ತ ದೇವದನ ಮಾಜೆದಡಂಯಾಯಾ ಮಾನ್ಯ ದೇವಿಯ ... ದೊಳಗೇನನು ಮಾಜೆದ ವಸ್ತುವಿಗೆ ಯಾಯಾವಿಲ್ಲವೆಂದಿದೆ.[೩೩] ದೇವರ ಭೂಮಿಯಲ್ಲಿ ಬೆಳೆದ, ದೇವರು ಮತ್ತು ದೇವಾಲಯಕ್ಕೆ ಸಂಬಂಧಿಸಿದ ಯಾವ ವಸ್ತುಗಳನ್ನು ಮಾರಿದರು. ಆ ವಸ್ತುಗಳಿಗೆ ಸುಂಕವಿಲ್ಲವೆಂದು ಶಾಸನವು ತಿಳಿಸುತ್ತದೆ.

ಈ ರೀತಿ ಕಂಡುಬರುವ ಸಂತೆಗಳಲ್ಲಿ ಕಳ್ಳತನಗಳು ನಡೆಯುತ್ತಿದ್ದಂತೆ ಕಂಡುಬರುತ್ತದೆ. ಜನಪದರು 'ಸಂತೆಗಿಂತ ಮುಂಚೆ ಗಂಟು ಕಳ್ಳರು ಬಂದು ನೆರಿದಿದ್ದರು' ಎಂಬ ಮಾತುಗಳು ಕಳ್ಳರ ಹಾವಳಿಯಾಗುತ್ತಿತ್ತು ಎಂಬುದನ್ನು ಸೂಚಿಸುತ್ತವೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಏರುಮುಖವನ್ನು ಕಂಡ ಸಂತೆಗಳು ವಿಜಯನಗರದ ಅರಸರ ಆಳ್ವಿಕೆಯ ಕಾಲಕ್ಕೆ ಗಣನೀಯವಾಗಿ ಇಳಿಮುಖವನ್ನು ಕಂಡವು. ಇದಕ್ಕೆ ಪ್ರಮುಖ ಕಾರಣ ಕೃಷಿಯು ಇಳಿಮುಖವಾಯಿತೆಂದಲ್ಲ. ಉತ್ಪಾದನೆ ಹೆಚ್ಚಾದಂತೆ ಗ್ರಾಮೀಣ ಪ್ರದೇಶದ ಛಾಯೆ ಕಡಿಮೆಗೊಂಡು ಪಟ್ಟಣಗಳ ಲಕ್ಷಣಗಳು ಕಂಡುಬಂದವು. ವ್ಯಾಪಾರಸ್ಥರಾದ ಕುಮ್ಮಟಿಗಳು ಬಂದ ಹಾಗೆ ಸಂತೆಗಳು ಇಳಿಮುಖಗೊಂಡು ಪೇಟೆ ಪಟ್ಟಣದ ಕಡೆಗೆ

ಮುಖಮಾಡಿತು. ಕ್ರಿ.ಶ. ೧೨೫೧ರ ಶಾಸನವು ಎಮ್ಮದೂರು ಹಳ್ಳಿಯನ್ನು ಪಟ್ಟಣವಾಗಿ ಪರಿವರ್ತಿಸಲಾಯಿತು[೩೪] ಎಂದಿದೆ.

ಈ ರೀತಿಯ ಪರಿವರ್ತನೆಯ ಪ್ರಕ್ರಿಯೆಗಳು ಸಂತೆಗಳ ಇಳಿಮುಖತೆಗೆ ಕಾರಣಗಳಾದವು. ಸಂತೆಗಳಿಂದಾಗಿ ಹಳ್ಳಿಗಳು ಹೆಚ್ಚು ಸೌಕರ್ಯ ಮತ್ತು ಸೌಲಭ್ಯಗಳನ್ನು ಪಡೆದವು. ಆದರೆ ಈ ಅಭಿವೃದ್ಧಿಗೊಂಡ ಸೌಕರ್ಯ ಮತ್ತು ಸೌಲಭ್ಯದಿಂದಾಗಿ ಪಟ್ಟಣಗಳ ಬೆಳೆಯುವಿಕೆಗೆ ನಾಂದಿಯಾಯಿತು. ಅಲ್ಲದೆ ಹಳ್ಳಿಗಳ ಸಾಂಸ್ಕೃತಿಕತೆಯ ಪಲ್ಲಟಗಳು ಈ ರೀತಿಯ ಬದಲಾವಣೆಗೆ ದಾರಿ ಮಾಡಿಕೊಟ್ಟವು. ಸಂತೆಗಳು ಪ್ರಾಚೀನ ಸಂದರ್ಭಕ್ಕೆ ಹೋಲಿಸಿದರೆ ಸಂಪೂರ್ಣ ತನ್ನ ಪತವನ್ನು ಬದಲಿಸಿವೆ. ಮೂಲ ಸ್ವರೂಪಕ್ಕಿಂತ ವಿರಳದಂತೆ ಕಂಡುಬರುತ್ತವೆ. ಇಂದಿನ ಸಂತೆ ಕೆಲವೊಂದು ದೈನಂದಿನ ತರಕಾರಿಗಳಿಗೆ ಮಾತ್ರ ಸೀಮಿತವಾಗಿರುವುದು ಕಂಡುಬರುತ್ತದೆ. ಇದಕ್ಕೆ ಪ್ರಮುಖ ಕಾರಣ ಆಧುನಿಕತೆಯ ಪರಿಣಾಮದಿಂದಾದ ಸಾರಿಗೆ ಸೌಲಭ್ಯಗಳ ಅಭಿವೃದ್ಧಿ ಮೊದಲುಗೊಂಡಿದೆ.

### ೪.೩. ಕೃಷಿ ಮತ್ತು ತೆರಿಗೆಗಳು

ರಾಜ್ಯದ ಆದಾಯಕ್ಕೆ ಪ್ರಾಚೀನ ಕಾಲದಿಂದ ಇಂದಿನವರೆಗೂ ಬಹುದೊಡ್ಡ ಪ್ರಮಾಣದ ಆರ್ಥಿಕ ಮೂಲವೆಂದರೆ ಅದು ತೆರಿಗೆಗಳಿಂದ ಸಂದಾಯವಾಗುವ ಆದಾಯ. ಪ್ರಸ್ತುತ ಅಧ್ಯಯನದಲ್ಲಿ ಕೃಷಿಗೆ ಸಂಬಂಧಿಸಿದ ತೆರಿಗೆಗಳನ್ನು ಕುರಿತು ಚರ್ಚಿಸಬಹುದಾಗಿದೆ. ಶಾಸನಗಳಲ್ಲಿ ಭೂಸಂಬಂಧಿತ ಆಸ್ತಿ ತೆರಿಗೆಗಳು, ಭೂಮಿಯ ಫಲವತ್ತತೆಗೆ ಅನುಗುಣವಾಗಿ ವಿಧಿಸಿದ ತೆರಿಗೆಗಳು, ಬೆಳೆ ಸಂಬಂಧಿ ತೆರಿಗೆಗಳು, ಕೃಷಿ ಉತ್ಪನ್ನವನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿಧಿಸುವ ಸುಂಕಗಳು ಮೊದಲಾದ ಅಂಶಗಳು ತಿಳಿದುಬರುತ್ತವೆ. ರಾಜ್ಯದ ರೈತಾಪಿವರ್ಗ ಮೊದಲಾದ ಪ್ರಜೆಗಳೆಲ್ಲರು ಒಂದಲ್ಲ ಒಂದು ತೆರನಾಗಿ ತೆರಿಗೆಯನ್ನು ಪಾವತಿ ಮಾಡಿರುವುದು ಕಂಡುಬರುತ್ತದೆ. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಿಧಿಸುವ ತೆರಿಗೆಯ ಪ್ರಮಾಣಗಳು ಭಿನ್ನ ಸ್ವರೂಪದವುಗಳಾಗಿದ್ದವು. ಪ್ರಜೆಗಳು 'ರಾಜನಿಗೆ ತೆರಿಗೆಗಳನ್ನು ನೀಡಬೇಕೆಂದು ಪ್ರಾಚೀನ ಸ್ಮೃತಿ ಮತ್ತು ಸಂಹಿತೆಗಳು ಹೇಳುತ್ತವೆ. ಭೂಮಿಯ ಉತ್ಪನ್ನದ ಮತ್ತು ಇತರ ಯಾವುದೇ ಆದಾಯದ ಆರನೆಯ ಒಂದು ಭಾಗದ ಉತ್ಪನ್ನ ತೆರಿಗೆಯ ರೂಪದಲ್ಲಿ ಸಂದಾಯವಾಗಬೇಕೆಂದು ಸಂಗಮ್ ಸಾಹಿತ್ಯಗಳು ತಿಳಿಸುತ್ತವೆ.'[೩೫] ಮಹಾಭಾರತದಲ್ಲಿ ಧರ್ಮರಾಯನ ಆಳ್ವಿಕೆಯ ಸಂದರ್ಭದಲ್ಲಿ ಋಷಿಗಳು ರಾಜನ ಆಸ್ಥಾನವನ್ನು ಪ್ರವೇಶಿಸಿ ರಾಜನನ್ನು ಕುರಿತು ಹೀಗೆ ಕೇಳುತ್ತಾರೆ. ನೀನು ವಿಧಿಸಿರುವ ತೆರಿಗೆಗಳಿಂದ ರೈತರು ತಮ್ಮ ಉದ್ಯೋಗ ತ್ಯಜಿಸಿ ಗ್ರಾಮಗಳನ್ನು ಬಿಡುತ್ತಿಲ್ಲ ತಾನೆ ? ಎಂದು ಕೇಳಿದ್ದರಂತೆ.[೩೬] ಇಂತಹ ಮಾತುಗಳು ಇತಿಹಾಸ ಪೂರ್ವ ಕಾಲದಿಂದಲೇ ಜಾರಿಯಲ್ಲಿದ್ದವು. ಅಲ್ಲದೆ ಜನಸಾಮಾನ್ಯರಿಗೆ ಹೊರಲಾರದಷ್ಟು ತೆರಿಗೆಗಳನ್ನು ವಿಧಿಸಿರುವ ಸಾಧ್ಯತೆಗಳಿದ್ದು, ಅದರಿಂದ ತಪ್ಪಿಸಿಕೊಳ್ಳಲು ಜನರು ಊರು ಬಿಡುತ್ತಿದ್ದರೆಂಬ ಅಂಶಗಳು ವ್ಯಕ್ತವಾಗುತ್ತವೆ. ಇಂತಹ ಪ್ರಸಂಗ ಬೌದ್ಧ ಗ್ರಂಥದಲ್ಲಿಯು ಕಂಡುಬರುತ್ತದೆ. ಡಿ.ಡಿ. ಕೊಸಾಂಬಿಯವರು 'ದೀರ್ಘನಿಕಾಯ' ಎಂಬ ಬೌದ್ಧ ಗ್ರಂಥದಲ್ಲಿ ಒಬ್ಬ ಪುರೋಹಿತನು ರಾಜನೊಂದಿಗೆ ಪ್ರಜೆಗಳು ಸಂತೃಪ್ತರಾಗಿರಬೇಕಾದರೆ ಕಳ್ಳತನ ದಂಗೆ ದರೋಡೆಗಳು ನಡೆಯದಿರಬೇಕಾದರೆ ಯಜ್ಞಗಳನ್ನು ನಡೆಸುವುದರಿಂದೇನು ಪ್ರಯೋಜನವಿಲ್ಲ. ಬದಲಿಗೆ ರೈತರಿಗೆ ಬಿತ್ತನೆ ಬೀಜ, ವ್ಯಾಪಾರಿಗಳಿಗೆ ಬಂಡವಾಳ, ಶ್ರಮಿಕರಿಗೆ ಕೈತುಂಬ ಕೆಲಸ ಇವುಗಳ ಕೊರತೆಯಾಗದಂತೆ ನೋಡಿಕೊಂಡರೆ ಅವರವರ ಕೆಲಸ ಕಾರ್ಯಗಳಲ್ಲಿ ಅವರವರು ಮಗ್ನರಾಗಿರುತ್ತಾರೆ. ಎಲ್ಲರೂ ನಿಯಮಾನುಸಾರ ತೆರಿಗೆ ಕಂದಾಯ ಸಲ್ಲಿಸುತ್ತಾರೆ. ಖಜಾನೆ ತುಂಬಿ

ತುಳುಕಾಡುತ್ತದೆ.[೩೭] ಎಂದು ಹೇಳಿರುವುದನ್ನು ಉಲ್ಲೇಖಿಸುತ್ತಾರೆ. ತೆರಿಗೆ ವಸೂಲಾತಿ ಮತ್ತು ಸಂಗ್ರಹಣೆಗಳಿಗಿಂತ ಮೊದಲು, ಕೃಷಿ ಚಟುವಟಿಕೆಗಳು ಸುಗಮವಾಗಿ ಸಾಗಲು ಬೇಕಾದ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕು ಎಂಬ ಅಂಶಗಳು ಪ್ರಾಚೀನ ಕೃಷಿಯಲ್ಲಿ ಆಗಲೇ ಉಲ್ಲೇಖಗೊಂಡಿರುವುದು ಕಂಡುಬರುತ್ತದೆ.

ಶಾಸನಗಳಲ್ಲಿ ತೆರಿಗೆ ಕುರಿತಾದ ಮಾಹಿತಿಗಳು ವಿಪುಲವಾಗಿ ದೊರೆತಿವೆ. ಅದರಂತೆ ಕೆಲವು ಪದಗಳ ಅರ್ಥೈಸುವಿಕೆಯು ಸಮಸ್ಯಾತ್ಮಕವಾಗಿ ಉಳಿದಿದ್ದು, ಜಟಿಲತೆಯಿಂದ ಕೂಡಿದೆ. ಇದಕ್ಕೆ ಪ್ರಮುಖ ಕಾರಣವೆಂದರೆ 'ಪ್ರಾಚೀನ ದಕ್ಷಿಣ ಭಾರತದ ತೆರಿಗೆಯ ಸ್ವರೂಪದಲ್ಲಿ ಕಾಲದಿಂದ ಕಾಲಕ್ಕೆ ಕೊಟ್ಟ ತೆರಿಗೆಯ ರಿಯಾಯಿತಿಗಳು ಹಾಕಿದ ಹೊಸ ತೆರಿಗೆಗಳು ಅದನ್ನು ಜಟಿಲಗೊಳಿಸಿವೆ.[೩೮] ಎಂದು ಕೆ.ಎನ್. ಶಾಸ್ತ್ರಿ ಅವರು ಅಭಿಪ್ರಾಯಪಟ್ಟಿದ್ದಾರೆ. ರಾಜ್ಯದ ಪ್ರಜೆಗಳಿಂದ ಸಂಗ್ರಹಿಸುವ ತೆರಿಗೆಯನ್ನು ಪ್ರಜೆಗಳ ಹಿತಕ್ಕಾಗಿ, ರಾಜ್ಯದ ಅಭಿವೃದ್ಧಿ ಮತ್ತು ರಕ್ಷಣೆಗಾಗಿ ವಿನಿಯೋಗಿಸಲಾಗುತ್ತಿತ್ತು. ಈ ರೀತಿ ವ್ಯಯಿಸಬೇಕಾದ ಸಂದರ್ಭದಲ್ಲಿ ಕಾಲದಿಂದ ಕಾಲಕ್ಕೆ ವ್ಯಯಿಸಬೇಕಾದ ಹಣವು ದುಪ್ಪಟ್ಟು ಹೆಚ್ಚಾಗುವ ಸಂದರ್ಭಗಳು ಎದುರಾಗುತ್ತಿದ್ದವು. ಇದರಿಂದಾಗಿ ರಾಜನು ಆರ್ಥಿಕ ಮೂಲವನ್ನು ಸಂಗ್ರಹಿಸಲು ಪುನಃ ತೆರಿಗೆಯ ಕಡೆಗೆ ಮುಖ ಮಾಡಬೇಕಿತ್ತು. ಈ ಕಾರಣದಿಂದಾಗಿ ಕಾಲದಿಂದ ಕಾಲಕ್ಕೆ ತೆರಿಗೆಯನ್ನು ಹೆಚ್ಚಿಸುವ ಅನಿವಾರ್ಯತೆ ಸೃಷ್ಠಿಯಾಗಿರುವ ಸಾಧ್ಯತೆಗಳಿವೆ. ಅರ್ಥಶಾಸ್ತ್ರಕಾರನು ಕೃಷಿ ಭೂಮಿಗೆ ಸಂಬಂಧಿಸಿದ ತೆರಿಗೆಗಳನ್ನು 'ಸೀತಾ' ಎಂತಲೂ ಧಾನ್ಯ ಸಂಬಂಧಿ ತೆರಿಗೆಯನ್ನು ಭಾಗ ಎಂತಲೂ[೩೯] ಕರೆದಿದ್ದಾನೆ. ಭಾಗ ಎಂದರೆ ಧಾನ್ಯದ ೧/೬ ಪಾಲು ನೀಡಬೇಕೆಂದು ತಿಳಿಸಿದ್ದಾನೆ. ಸೀತಾ ಭೂಮಿಗೆ ೧/೪ ಭಾಗ ತೆರಿಗೆಯನ್ನು ಜನಪದರ ಭೂಮಿಗೆ ೧/೬ ಭಾಗ ತೆರಿಗೆಯನ್ನು ಮೌರ್ಯರ ಕಾಲದಲ್ಲಿ ವಿಧಿಸಲಾಗಿತ್ತು.[೪೦] ಡಾ. ಅಳ್ತೆಕರರು ಉದ್ರಂಗ ಮತ್ತು ಉಪರಿಕರ ಎಂಬ ತೆರಿಗೆಗಳನ್ನು ಕ್ರಮವಾಗಿ ಭಾಗಕರ ಮತ್ತು ಭೋಗಕರಗಳಿಗೆ ಸಮವೆಂದು ತಿಳಿಸಿದ್ದಾರೆ. ಮೊದಲನೆಯದು ಭೂಕಂದಾಯ, ಎರಡನೆಯದು ಪದಾರ್ಥ ರೂಪದಲ್ಲಿ ಸಲ್ಲಿಸಲಾಗುತ್ತಿದ್ದ ಚಿಕ್ಕಪುಟ್ಟಕರವೆಂದು ತಿಳಿಸಿದ್ದಾರೆ.[೪೧] ಭೂಕಂದಾಯವು ಭೂಮಿಯ ಉತ್ಪತ್ತಿಯಲ್ಲಿ ಆರನೆ ಒಂದು ಭಾಗ ಇತ್ಯಾದಿ ಪ್ರಮಾಣದಲ್ಲಿ ಅರಸನಿಗೆ ಸಲ್ಲಿಸುವುದಾಗಿತ್ತು. ಹಳ್ಳಿಯ ಅಧಿಕಾರಿಗಳ ಸಂಬಳ, ಸಾರಿಗೆಗಾಗಿ ಎತ್ತುತ್ತಿದ್ದ ಹೆಚ್ಚಿನ ಕರಗಳು ಭೋಗಕರ ಅಥವಾ ಪದಾರ್ಥಗಳ ರೂಪದಲ್ಲಿ ಸಲ್ಲಿಸುತ್ತಿದ್ದ ತೆರಿಗೆಗಳಾಗಿದ್ದವು. ಕ್ರಿ.ಶ. ೧೨೨೬ರ ಶಾಸನವು ದವಸಾಯ ತೆರಿಗೆಯ ಬಗೆಗೆ ತಿಳಿಸುತ್ತದೆ.[೪೨] ಇದು ಧಾನ್ಯದ ರೂಪದಲ್ಲಿ ಸಂಗ್ರಹಿಸುವ ತೆರಿಗೆಯಾಗಿದೆ. ಈ ರೀತಿ ವಸ್ತುಗಳ ರೂಪದಲ್ಲಿ ತೆರಿಗೆಯನ್ನು ಪಡೆದಿರುವುದು ತಿಳಿಯುತ್ತದೆ. ಬಾದಾಮಿ ಚಾಲುಕ್ಯರ ಕಾಲದ ಹೈದ್ರಾಬಾದ್, ಪೆದ್ದವಡಗೂರು, ಶಾಸನಗಳು ಭೂಮಿದಾನ ತೆರಿಗೆಗಳ ಬಗೆಗೆ ತಿಳಿಸುತ್ತವೆ. ಅಲ್ಲದೆ ಬಹುತೇಕ ಬ್ರಹ್ಮದೇಯ ದಾನಗಳಾಗಿ ಕಂಡುಬರುತ್ತವೆ. ಇಂತಹ ಭೂಮಿಗಳಿಗೆ ತೆರಿಗೆ ವಿನಾಯಿತಿ ನೀಡಲಾಗುತ್ತಿತ್ತು. ಕೆಲವೊಮ್ಮೆ ಸಂಪೂರ್ಣ ವಿನಾಯಿತಿ ನೀಡಲಾದರೆ, ಮತ್ತೆ ಕೆಲವೊಮ್ಮೆ ಸಾಂಕೇತಿಕವಾಗಿ ವಸೂಲು ಮಾಡಲಾಗುತ್ತಿತ್ತು. ಇಂತಹ ತೆರಿಗೆಗಳನ್ನು 'ಮಾನ್ಯ(ಮನ್ನೆಯ), ಅರ್ಧಮಾನ್ಯ ಮತ್ತು ಸರ್ವಮಾನ್ಯಗಳೆಂದು ಕರೆಯಲಾಗುತ್ತಿತ್ತು.[೪೩] ಸುಂಕ ವಸೂಲು ಮಾಡಲು ಪ್ರತ್ಯೇಕವಾದ ಅಧಿಕಾರಿವರ್ಗವೊಂದು ಇರುತ್ತಿತ್ತು. ಇಂತಹ ಅಧಿಕಾರಿಗಳನ್ನು ಪೆರ್ಜುಂಕ, ವಡ್ಡರಾವುಳದ ಅಧಿಕಾರಿಗಳೆಂದು ಕರೆಯಲಾಗುತ್ತಿತ್ತು. ಕ್ರಿ.ಶ. ೧೦೮೩ರ ಶಾಸನವು ಪೆರ್ಜುಂಕ, ವಡ್ಡರಾವುಳದ ಅಧಿಕಾರಿ, ಸುಂಕವೆರ್ಗಡೆ ದಾಸಿಮಯ್ಯರು, ಸಿರಿಮಲೆಯ ಸಕಲೇಶ್ವರ ದೇವರಿಗೆ ಪನ್ನಾಯ ಮತ್ತು ಹೆಜ್ಜುಂಕದಲ್ಲಿ ತಿಂಗಳಿಗೆ ಒಂದು ಎಲೆಯ ಹೇರಿನ ಸಂಕಬಿಟ್ಟಂತೆ ತಿಳಿಸಿದೆ. ಈ ದಾನಕ್ಕೆ ಸುಂಕ

ನೀಡಿದವರನ್ನು ಒಡೆಯರನ್ನಾಗಿ ಮಾಡಿ ಭಕ್ತರಾದವರನ್ನು ಮಾತ್ರ ಪೂಜಾರಿಯನ್ನಾಗಿ ಮಾಡಬೇಕೆಂದು ತಿಳಿಸಿದೆ.[೪೪]

ಕೆಲವೊಂದು ಭೂಮಿಗೆ ತೆರಿಗೆಯನ್ನು ಹಾಕದಂತೆ ಮಾನ್ಯ ಮಾಡಲಾಗುತ್ತಿತ್ತು. ಕ್ರಿ.ಶ. ೧೦೬೮ರ ಶಿರೂರು ಶಾಸನವು ಕಿರುವಿಟ್ಟೆಗಳ್ಗಮೀವ ಭೂಮಿ ದಾನದ ಬಗೆಗೆ ಹೇಳುತ್ತದೆ.[೪೫] ತೆರಿಗೆ ವ್ಯಾಪ್ತಿಗೆ ಒಳಪಡದ ಭೂಮಿಯು ಕೃಷಿ ಯೋಗ್ಯವಲ್ಲದ, ಕಲ್ಕಾಡ ಭೂಮಿಯಾಗಿರುವ ಸಾಧ್ಯತೆಯಿದೆ. ಕೆಲವೊಮ್ಮೆ ದೇವಾಲಯಗಳಿಗೆ, ಬ್ರಾಹ್ಮಣರಿಗೆ ಭೂಮಿ ನೀಡಿದಾಗ ಅಂತಹ ಭೂಮಿಗೆ ತೆರಿಗೆ ಮಾನ್ಯ ಮಾಡಿರುವ ಸಾಧ್ಯೆತೆಗಳು ಹೆಚ್ಚಿರುತ್ತವೆ. ಆದರೆ ಶಾಸನವೊಂದು ಬೀಳು ದಂಡ[೪೬] ಅಂದರೆ ಬೀಳು ಭೂಮಿ ಅಥವಾ ಬಂಜರು ಮೊದಲಾದ ಭೂಮಿಯ ಮೇಲೆ ದಂಡ ವಿಧಿಸಿರುವುದನ್ನು ತಿಳಿಸುತ್ತದೆ. ಫಲವತ್ತಾದ ಭೂಮಿಯ ಪ್ರಮಾಣಕ್ಕಿಂತ ಕಡಿಮೆ ತೆರಿಗೆ ವಿಧಿಸಿರುವ ಸಾಧ್ಯತೆಗಳಿವೆ. ಸಾಮಾನ್ಯವಾಗಿ ಈ ಭೂಮಿಯು ರಾಜನ ಬಳಿ ಕೇಂದ್ರೀಕೃತವಾಗಿದ್ದು, ಈ ಭೂಮಿಯನ್ನು ಉಳುವವರಿಗೆ ಕೃಷಿ ವಿಸ್ತರಿಸುವ ಮತ್ತು ಸಂಪತ್ತಿನ ಕ್ರೂಢೀಕರಣದ ಉದ್ದೇಶಗಳಿಗಾಗಿ ನೀಡಿ ತೆರಿಗೆ ವಿಧಿಸಿರುವ ಸಾಧ್ಯತೆಗಳಿವೆ. ಮತ್ತೊಂದು ಶಾಸನದಲ್ಲಿ 'ನೊಗಹಣ'[೪೭] ಎಂಬ ತೆರಿಗೆಯ ಉಲ್ಲೇಖವಿದ್ದು, ಇದು ಪಾಳು ಭೂಮಿಯನ್ನು ಕೃಷಿಗೆ ಒಳಪಡಿಸುವಾಗ ತಗಲುವ ವೆಚ್ಚವನ್ನು ಸರಿದೂಗಿಸಲು ವಿಧಿಸಿದ್ದಿರುವ ಸಾಧ್ಯತೆಗಳಿವೆ. ಭೂಮಿಯಲ್ಲಿ ಬೆಳೆಯುವ ಉತ್ಪನ್ನಗಳನ್ನು ಕೇಣಿ ಪಡೆಯುವವರಿಗೂ ತೆರಿಗೆಯನ್ನು ವಿಧಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೨೧ರ ಶಾಸನದಲ್ಲಿ ಎರೆಯಲುವಡಕೆಯಲು ಕೇಣಿಯಂಕೊಂಡವರಲ್ಲಿ ಪೊಂಗಡ್ಡ ಹೊಜಿಗಣ ಭತ್ತವಂ ತನ್ದಟಿವಲ್ಲಿ ಮೂಲೆವತ್ತ ಹೇಜಿಂಗೊಬ್ಬಳ ಪುಳಗಣ ಭಣ್ಡಿಗೆ ಮೂಗುಟಿ ವೂರಲುತುಕೃಷ್ಟವಪ್ಪುದೊಂದು ಗಾಣದ ಮಾನಣ್ಣೆಗಳನ್ನು ದೇವರಿಗೆ, ಬ್ರಾಹ್ಮಣರ ಜೀವಿತಕ್ಕೆ ಬಿಟ್ಟರೆಂದಿದೆ.[೪೮] ಈ ಶಾಸನದಲ್ಲಿ ಹೊರಗಿನಿಂದ ತಂದು ಮಾರಾಟವಾಗುವ ಮತ್ತು ಒಳಗಿನ ಭಣ್ಡಿ ಬತ್ತಕ್ಕೆ ಪ್ರತ್ಯೇಕವಾಗಿ ತೆರಿಗೆ ವಿಧಿಸಿರುವುದು ಕಂಡುಬರುತ್ತದೆ. ಅಶೋಕನ ರುಮ್ಮಿಂಡೈ ಸ್ತಂಭ ಶಾಸನವು ಬುದ್ಧನ ಜನ್ಮ ಸ್ಥಳದಲ್ಲಿ ತೆರಿಗೆ ಮಾನ್ಯ ಮಾಡಿದ್ದನ್ನು ತಿಳಿಸಿದೆ. ಆದರೆ ರೈತರು ಬೆಳೆದ ಬೆಳೆಯ ೧/೮ ಭಾಗವನ್ನು ರಾಜನಿಗೆ ನೀಡಬೇಕಿತ್ತು ಎಂದಿದೆ. ಇವರ ಕಾಲದಲ್ಲಿ ತೆರಿಗೆಯನ್ನು 'ಬಲಿ' ಎಂದು ಕರೆಯಲಾಗುತ್ತಿತ್ತು.[೪೯] ಅರ್ಥಶಾಸ್ತ್ರಕಾರನು ೧/೬ ಭಾಗ ತೆರಿಗೆಯನ್ನು, ಡಿಯೋಡರಸ್ ೧/೪ ಭಾಗ ನೀಡಬೇಕೆಂದು ತಿಳಿಸಿದ್ದಾರೆ. ಸ್ಟ್ರಾಬೋ ರೈತರು ಕೂಲಿಗಾಗಿ ಬೆಳೆದು ಕಾಲು ಭಾಗ ಪಡೆಯುತ್ತಿದ್ದರು ಎಂದಿದ್ದಾನೆ. ಮಿಸ್ತೋಸ್ ತೆರಿಗೆಯನ್ನು ಬಾಡಿಗೆ ಮತ್ತು ಕೂಲಿ ಎಂಬರ್ಥದಲ್ಲಿ ಬಳಸಿದ್ದಾನೆ, ಅರ್ಥಶಾಸ್ತ್ರಕಾರನು ನೀರಾವರಿಗೆ ಅನುಕೂಲವಿದ್ದ ಭೂಮಿಗೆ ೧/೫ ಭಾಗ ತೆರಿಗೆ ನೀಡಬೇಕೆಂದಿದ್ದಾನೆ.[೫೦] ಮೌರ್ಯರ ಕಾಲದಲ್ಲಿ ತೆಂಗೆಗಳು ರೈತರಿಗೆ ಪ್ರತ್ಯೇಕವಾಗಿರದೆ ಭೂಕಂದಾಯದ ರೂಪದಲ್ಲಿ ಪಡೆದಿರುವುದು ಕಂಡುಬರುತ್ತದೆ. ವಸ್ತು ಅಥವಾ ಹಣ ರೂಪದಲ್ಲಿ ತೆರಿಗೆಯನ್ನು ಪಡೆಯಲಾಗುತ್ತಿತ್ತು. ಮಾನ್ಯ ಮಾಡಿದ ಭೂಮಿಯ ತೆರಿಗೆಗೆ ಶಾಸನಗಳು ಅರುವಣವೆಂದು ಕರೆದಿವೆ. ಡಿ.ಸಿ. ಸರ್ಕಾರ್ ಅವರು ಮಾನ್ಯ ಭೂಮಿಗಳ ಮೇಲೆ ಹಾಕುತ್ತಿದ್ದ ಆರುಪಣ ತೆರಿಗೆ ಎಂದಿದ್ದಾರೆ. ಶ್ರೀನಿವಾಸ ರಿತ್ತಿ, ಎಸ್.ಜಿ. ಘಟಪಣದಿ ಮೊದಲಾದವರು ವ್ಯವಸಾಯ ಯೋಗ್ಯ ಭೂಮಿಗೆ ಹಾಕುವ ತೆರಿಗೆ ಎಂತಲೂ, ಬಾರ್ನೆಟ್‌ರವರು ಅರುವಣವು 'ಮಾನ್ಯ ಭೂಮಿಗಳ ಮೇಲಿನ ತೆರಿಗೆ' ಎಂದಿದ್ದಾರೆ. ಆದರೆ ಚಿದಾನಂದಮೂರ್ತಿಯವರು ದತ್ತಿಯ ಭೂಮಿಗಳ ತೆರಿಗೆಯನ್ನು ಅರ್ಧದಷ್ಟು ಇಳಿಸಿ ಅಥವಾ ಇನ್ನೂ ಇಳಿಸಿ ಹೆಸರಿಗೆ ಮಾತ್ರ ಅರುವಣ ತೆರಿಗೆ ತೆಗೆದುಕೊಳ್ಳುತ್ತಿದ್ದರು ಎಂದಿದ್ದಾರೆ.[೫೧] ಈ ತೆರಿಗೆಯು ದಾನ ಬಿಟ್ಟ ಭೂಮಿಗೆ ಹಾಕುತ್ತಿದ್ದ ತೆರಿಗೆಯಾಗಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೮೦ರ ಶಾಸನವು ಬಿತ್ತುವಟ್ಟ ಆರುವಣ ಎಂದಿದೆ.[೫೨] ಅಲ್ಲದೆ ಫಲವಾದ ಮಣ್ಣೆ ಅರುವಣವಿಲ್ಲಯೆಂದು ಬೇರೆಡೆ ಹೇಳಿರುವುದು ಕಂಡುಬರುತ್ತದೆ. ಇದು

ದಾನದ ಭೂಮಿಗೆ ವಿಧಿಸುತ್ತಿದ್ದ ತೆರಿಗೆಯಾಗಿದ್ದು, ಈ ತೆರಿಗೆಯನ್ನು ಕೆಲವೊಮ್ಮೆ ಮಾನ್ಯ ಮಾಡಿರುವುದು ಕಂಡುಬರುತ್ತದೆ.

ನೇಗಿಲು ಹಿಡಿದು ಕೂಲಿಗಾಗಿ ಹೊಲವನ್ನು ಉಳುಮೆ ಮಾಡುವವರಿಗೂ ತೆರಿಗೆಯನ್ನು ಹಾಕಲಾಗುತ್ತಿತ್ತು. ಕ್ರಿ.ಶ. ೧೦೮೫ರ ಶಾಸನವು ಮೇಳಿಯ ಹಿಡಿದುಗೆಯ್ವ ಬಂಟಗೆಡೆಯಲೊಂದೊಂದು ಹಾಗವ.... ಮಸಕಯಿ ಕುಲಿಗಳುಂ ಬಂಟಗೆಡೆಗಳುಂ ಪ್ರತಿ ವರ್ಷ ಕೊಡುವಂತೆ ನಡೆಸಿದರು. ಅಲ್ಲದೆ ಮುನ್ತೆ ವೊಕ್ಕಲುಗಳ ಮೇಂಟಿಯಲೊಂದುಂದು ಕೊಳಗ ಭತ್ತಯಂ ಎಂದಿದೆ.[೫೩] ಕೃಷಿಕ ಉಳುಮೆ ಮಾಡುವ ಭೂಮಿಗೆ ಒಡೆಯರಿರಲಿ, ಗೇಣಿ ಪಡೆದವರಾಗಲಿ, ಕೂಲಿಗಳಾಗಲಿ, ತೆರಿಗೆ ಪಾವತಿಸಬೇಕಿತ್ತೆಂಬುದನ್ನು ಈ ಶಾಸನವು ತಿಳಿಸುತ್ತದೆ. ಕ್ರಿ.ಶ. ೧೦೮೭ರ ಶಾಸನವು ಒಕ್ಕಲುದೆರೆ ಪಣ ೫ನ್ನು ಉಲ್ಲೇಖಿಸಿದೆ.[೫೪] ಕ್ರಿ.ಶ. ೯ನೆಯ ಶತಮಾನದ ಶಾಸನವು ತೆರಿಗೆಗಳ ನಿಯಮದ ಕುರಿತು ತಿಳಿಸುತ್ತದೆ.[೫೫] ಈ ಶಾಸನದಲ್ಲಿ ತೆರಿಗೆಯನ್ನು ಸಿರಿವಾರ ಗ್ರಾಮದ ಇನ್ನೂರು ಜನ ಮಾಡಿದುದಲ್ಲದೆ ಕಟ್ಟಳೆಗಳನ್ನು ವಿಧಿಸಿದ್ದರು. ವೀಸ, ದಸ ಮತ್ತು ಪಂಚದ ಲೆಕ್ಕದಲ್ಲಿ ತೆರಿಗೆಯನ್ನು ನೀಡುವುದು. ಹಾನಿಯಾಗಲಿ, ಲಾಭವಾಗಲಿ ೫ ದರ ಲೆಕ್ಕದಲ್ಲಿ ನೀಡಬೇಕು. ಪಂಚಕವನ್ನು(೫) ನ್ನು ನೀಡದೆ ಹೋದಲ್ಲಿ ದಸ(೧೦) ದಂಡ ನೀಡಬೇಕು. ದಶವನ್ನು(೧೦) ನೀಡದೆ ಹೋದಲ್ಲಿ ವೀಸ(೨೦) ವನ್ನು ನೀಡಬೇಕು. ತೆರಿಗೆಯನ್ನು ನೀಡದೆ ಊರಿಗೆ ಪ್ರವೇಶಿಸಿದರೆ ದ್ವಿಗುಣ, ತ್ರಿಗುಣದಲ್ಲಿ ನೀಡಬೇಕು. ತಪ್ಪಿದವನು ನಾಯಿ, ಗಾರ್ದಭ, ಚಂಡಾಳ ಮುಂತಾದವರು ಎಂದು ತಿಳಿಸಿದೆ. ಇದನ್ನು ಗಮನಿಸಿದರೆ ತೆರಿಗೆ ಪಾವತಿಸದವರನ್ನು ಊರಿನಿಂದ ಹೊರಹಾಕಿರುವ ಸಾಧ್ಯಗಳಿವೆ. ಇದು ತೆರಿಗೆಯ ಹೊರೆ ಮತ್ತು ಸಂಕೀರ್ಣವಾದ ಜಠಿಲ ತೆರಿಗೆ ಪದ್ಧತಿಯನ್ನು ಸೂಚಿಸುತ್ತದೆ.

ಬೆಳೆದ ಧಾನ್ಯಗಳನ್ನು ಸಾಗಿಸುವಾಗ, ಮಾರುವಾಗ, ಕೊಳ್ಳುವಾಗ ಅವುಗಳಿಗೆ ಸುಂಕ ವಿಧಿಸಲಾಗುತ್ತಿತ್ತು. ವಸ್ತುಗಳ ಪ್ರಮಾಣಕ್ಕೆ ಅನುಗುಣವಾಗಿ ಸುಂಕ ವಿಧಿಸಿರುವುದು ಶಾಸನಗಳಿಂದ ತಿಳಿದುಬರುತ್ತದೆ. ದೇವರ ಭೂಮಿಯಿಂದ ಅಥವಾ ದೇವರು, ಪೂಜಾರಿ ಮೊದಲಾದ ಧಾರ್ಮಿಕ ಕಾರ್ಯಗಳಿಗೆ ನೀಡಿದ ದೇವಕಾರ್ಯಕ್ಕೆ ಸಂಬಂಧಿಸಿದ ವಸ್ತುಗಳನ್ನು ಸಂತೆ ಮೊದಲಾದ ಯಾವ ಸ್ಥಳದಲ್ಲಿ ಮಾರಿದರೂ ಅವುಗಳಿಗೆ ಸುಂಕ ವಿಧಿಸುತ್ತಿರಲಿಲ್ಲವೆಂಬ ಅಂಶಗಳೂ ಸಹ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಕ್ರಿ.ಶ. ೧೧೩೯ರ ಶಾಸನದಲ್ಲಿ ಜೋಳ ದವಸ ಧಾನ್ಯವಾವುದಾಡಂ ಮಾಜಿದವರಲ್ಲಿ ಪೊಂಗೆ ಮಾನ ೧ ಮಾಱುಗೊಂಡವರಲ್ಲಿ ಪೊಂಗೆ ಎಂದಿದೆ.[೫೬] ಕ್ರಿ.ಶ. ೧೨೭೮ರ ಶಾಸನದಲ್ಲಿ ಹೇರುವ ಸಾಸನದೆತ್ತು ೧೫, ಹೊರಗೆ, ಭತ್ತ, ಸೊ ೧ ಹೇಜಿಂಗೆಲೆ ೫೦, ದೇವಿಯ ಕಂಮತದ ಭತ್ತ ದೇವದನ ಮಾಜಿದಡಂ ಯಾಯಾಮಾಂನ್ಯ ದೇವಿಯದೊಳಗೇನನು ಮಾಜಿದ ವಸ್ತುವಿಗೆ ಯಾಯಸುಂಕವಿಲ್ಲ' ಎಂದಿದೆ.[೫೭] ಕ್ರಿ.ಶ. ೧೧೨೦ರ[೫೮] ಶಾಸನದಲ್ಲಿ ಊರಿನ ಒಳಗಡೆ ಮಾರಿದ ಭಂಡಕ್ಕೆ ಹೆಜ್ಜುಂಕ, ಬಿಲುಕೊಡೆ, ವಡ್ಡರಾವುಳ ಮೂಲೆಗೆ ಬಳ್ಳ ೧ ಎಲೆಯ ಹೇಜಿಂಗೆ ೨೦೦ ಅಡಕೆ ಪಾಗ ೧೦ ವಿಧಿಸಿದ್ದನ್ನು ತಿಳಿಸಿದೆ. ಊರಿನ ಒಳಗಡೆ ಮಾರಿದ ವಸ್ತುಗಳಿಗೆ ಸುಂಕ ವಿಧಿಸಿದ್ದುದು ಈ ಶಾಸನದಿಂದ ತಿಳಿಯುತ್ತದೆ. ಇದೇ ಸ್ಥಳದ ಕ್ರಿ.ಶ. ೧೧೨೯ರ ಶಾಸನವು ಸೆಟ್ಟಿಗುತ್ತ ಪ್ರಮುಖ ನಖರಂಗಮಿ ತವಿಳ ಮುಖ್ಯವಾಗಿ ತಾವುಕೊಂಡ ಪೊಂಗೆ ಅಡಕೆ ೧೦ ಧಾನ್ಯ ಕೊಂಡಲ್ಲಿ ಮಾನ ೧ ಕೊಟ್ಟಲ್ಲಿ ಮಾನ ೧ ಕೊಂಡ ಹೇಜಿಂಗೆ ಎಲೆ ೫೦[೫೯] ಎಂದಿದೆ. ಕ್ರಿ.ಶ. ೧೧೭೬ರ ಶಾಸನದಲ್ಲಿ[೬೦] ಅಯ್ಯಾವೊಳೆ ಐನೂರ್ವರು ಮತ್ತು ಇತರ ವ್ಯಾಪಾರಿಗಳು ಚಿಕರೂವಿಗೆಯಲ್ಲಿ ಸಭೆ ಸೇರಿ ಅಲ್ಲಿನ ನಾಗೇಶ್ವರ ದೇವರಿಗೆ ಮಾರಿದ ಹೊಂಗೆ ಕೊಟ್ಟಲ್ಲಿ ಒಂದು ಮಾನ ಕೊಂಡಲ್ಲಿ ಒಂದು ಮಾನ, ಭತ್ತ ಕೊಟ್ಟಲ್ಲಿ ಒಂದು ಅರೆವಾನ ಕೊಂಡಲ್ಲಿ ಅರೆವಾನ, ಎಲೆ ಕೊಂಡಲ್ಲಿ ೨೫ ಕೊಟ್ಟಲ್ಲಿ ೨೫ ಅಡಕೆ ಹೊಂಗೆ ಕೊಟ್ಟಲ್ಲಿ ೫ ಕೊಂಡಲ್ಲಿ ೮ ಬಿಟ್ಟಂತೆ ತಿಳಿಸಿದೆ.

ಪ್ರಾಚೀನ ಕಾಲದಲ್ಲಿ ಹೆಚ್ಚು ತೆರಿಗೆಗೊಳಪಟ್ಟ ಬೆಳೆಗಳಾಗಿ ವೀಳೆದೆಲೆ, ಅಡಕೆ, ಭತ್ತದ ಬೆಳೆಗಳು ಕಂಡುಬರುತ್ತವೆ. ವೀಳೆದೆಲೆಯ ತೆರಿಗೆಗಳಂತೂ ಶಾಸನದಲ್ಲಿ ಹೇರಳವಾಗಿ ಉಲ್ಲೇಖಗೊಂಡಿವೆ. ಇದನ್ನು ಗಮನಿಸಿದರೆ ವೀಳೆದೆಲೆ ಅಂದಿನ ಕಾಲದ ಪ್ರಮುಖ ಬೆಳೆಯಾಗಿತ್ತೆಂಬುದು ತಿಳಿಯುತ್ತದೆ. ಕ್ರಿ.ಶ. ೭ನೆಯ ಶತಮಾನದ ಶಾಸನದಲ್ಲಿ 'ವಿನ್ನಾಣಿಗಳಿಗೆ ಬಳ್ಳಿಗವರ್ತೆ'[೬೧] ಎಲೆಯ ಮೇಲೆ ಸುಂಕ ವಿಧಿಸಿದ್ದನ್ನು ತಿಳಿಸಿದೆ. ಇದರಿಂದ ಎಲೆಗಳ ಮೇಲೆ ವಿಧಿಸುವ ತೆರಿಗೆಯನ್ನು ಪನ್ನಾಯ ಎಂದು ಕರೆಯಲಾಗುತ್ತಿತ್ತು. ಕ್ರಿ.ಶ. ೧೧೫೬ರ ಶಾಸನವು ಬಿಲ್ಕೊಡೆಯ ಸುಂಕ, ತೋಟದೆಲೆಯ ಪನ್ನಾಯ ಸುಂಕ ಬಿಟ್ಟರೆಂದು ಉಲ್ಲೇಖಿಸಿದೆ.[೬೨] ಬಿಲುಕೊಡೆ ಎಂದರೆ ಪ್ರಾಣಿಗಳ ಮೇಲೆ ಹೇರಿಕೊಂಡು ಬರುವ ಸುಂಕವೆಂದು ಅರ್ಥೈಸಲಾಗಿದೆ.[೬೩] ಎಲೆಯ ವ್ಯಾಪಾರಿಗಳನ್ನು ಎಲೆಕಾರರು, ಪನ್ನವರ್ಣ್ಣದವರು ಎಂದು ಕರೆದಂತೆ 'ಕ್ರಿ.ಶ. ೧೦೫೯ರ ಶಾಸನವು ತಿಳಿಸಿದೆ.[೬೪] ಈ ಬೆಳೆಯು ಆರ್ಥಿಕ, ಸಾಂಸ್ಕೃತಿಕ ವಾಹಿನಿ ಬೆಳೆಯಾಗಿತ್ತೆಂಬುದು ತಿಳಿಯುತ್ತದೆ. ವೀಳೆದೆಲೆಯು ಪ್ರಾಚೀನ ಪಾರಂಪರಿಕ ಜನರ ಧಾರ್ಮಿಕ ವಿಧಿ ವಿಧಾನಗಳು, ಸಾಂಸ್ಕೃತಿಕ ಕೊಡು ಕೊಳುಗೆಗಳು, ಆರ್ಥಿಕ ವ್ಯವಹಾರಗಳಲ್ಲಿ ಮುಂಚೂಣಿ ಬಳಕೆಯ ಸಾಧ್ಯತೆಯಿಂದಾಗಿ ಈ ಬೆಳೆಯು ಮಹತ್ವ ಪೂರ್ಣದ್ದಾಗಿತ್ತು. ಮತ್ತು ಹೆಚ್ಚು ತೆರಿಗೆ ವ್ಯಾಪ್ತಿಗೆ ಒಳಪಟ್ಟಿತ್ತೆಂಬ ಅಂಶವು ತಿಳಿದುಬರುತ್ತದೆ. ಪ್ರಾಚೀನ ಕಾಲದ ಬೆಳೆಗಳ ಮಾರಾಟ ಮತ್ತು ಕೊಳ್ಳುವಿಕೆಗೆ ಸಂಬಂಧಿಸಿದಂತೆ ವಸ್ತುಗಳಿಗೆ ತೆರಿಗೆಯನ್ನು ವಿಧಿಸುವ ಸಂದರ್ಭದಲ್ಲಿ ಆ ಊರಿಗೆ ಸಂಬಂಧಿಸಿದಂತೆ ವ್ಯಾಪಾರಿಗಳು ಸಭೆ ಸೇರಿ ಚರ್ಚಿಸಿ ತೆರಿಗೆ ನಿಗಧಿಪಡಿಸಿದಂತೆ ಮೇಲಿನ ಶಾಸನವು ತಿಳಿಸುತ್ತದೆ. ಅದರಂತೆ ವಸ್ತುವಿನ ಬೆಲೆಯನ್ನೂ ಸಹ ನಿಗದಿಪಡಿಸಿರುವ ಸಾಧ್ಯತೆಗಳಿವೆ. ಇಂದಿನ ಸಂತೆ, ಮಾರುಕಟ್ಟೆ ಮೊದಲಾದವುಗಳಲ್ಲಿ ಈ ರೀತಿಯ ಬೆಳವಣಿಗೆಗಳು ಮುಂದುವರಿದುಕೊಂಡು ಬಂದಿವೆ.

ಕ್ರಿ.ಶ. ೧೨೩೪ರ ಶಾಸನದಲ್ಲಿ ಶ್ರೀ ನರಸಿಂಹದೇವರ ಅಂಗಭೋಗ ರಂಗಭೋಗ ಚೈತ್ರ ಪವಿತ್ರಕೆಯೆಂದು ೫೦ ಎತ್ತುಯಡಕೆಯಲ್ಲಮೆಳಸು ಅರಿಶಿನ ಪಟ್ಟಕರ್ಪ್ಪೂರ ಭೂಸವಿದಳ ಮುಖ್ಯ ಯಾವ ಭಂಡವ ಹೇಱು ತಂದು ಮಾಱಿಜಿದಡಂ ಸುಂಕ ಪರಿಹಾರ ಮತ್ತಂ ಯಾದೇವರ ಕಂಮತ ಯಾವ ವೂರಲಿ ಮಾರಿದಡಂ ಆ ಭತ್ತ ಭಂಡಿ ಎತ್ತಿನಲಿಬಂದಂತಹಾವಕ್ಕೆ ಸುಂಕ ಬಾಹಿರಸೀಮೆ ಎಂದೆನಬಾರದು ಮತ್ತಂ ಆ ದೇವರ ವಸ್ತು ಎಂಮೆಯೆತ್ತು ಕುದುರೆಯೇನು ಮಾಱಿದಡಂ ಮಾಱಿಕೊಂಡದಂ ಸುಂಕ ಪರಿಹಾರ, ಮತ್ತಂ ದೇವರ ಪೂಜಾರಿಗಳು ಆವ ತೋಟವ ಮಾಡಿ ಬಾಡುಕಾಯ ಮಾಱಿದಡಂ ಸುಂಕ ಪರಿಹಾರ[೬೫] ದೇವಾಲಯಕ್ಕೆ ಸಂಬಂಧಿಸಿದ ಮಾರಾಟದ ವಸ್ತುಗಳು, ದೇವರ ಭೂಮಿಯಲ್ಲಿ ಬೆಳೆದ ವಸ್ತುಗಳು ಪೂಜಾರಿ ಬೆಳೆದ ಬೆಳೆಗಳನ್ನು ಊರಿನಲ್ಲಿ ಅಲ್ಲದೆ ಬೇರೆ ಯಾವ ಊರಿನಲ್ಲಿ ಮಾರಿದರೂ ಆ ವಸ್ತುಗಳಿಗೆ ಸುಂಕ ವಿಧಿಸುವಂತಿಲ್ಲವೆಂಬ ಅಂಶವು ಈ ಶಾಸನದಿಂದ ತಿಳಿದುಬರುತ್ತದೆ.

ಕೆಲವೊಮ್ಮೆ ಸುಂಕದಿಂದ ತಪ್ಪಿಸಿಕೊಳ್ಳಲು ಮಾರಾಟಗಾರರು ಇಂದಿನಂತೆ ಪ್ರಾಚೀನ ಕಾಲದಲ್ಲೂ ಕಳ್ಳಸಾಗಾಣಿಕೆ, ಕಾಳಸಂತೆ, ಚೋರತನಗಳನ್ನು ಮಾಡುತ್ತಿದ್ದರು. ಅರ್ಥಶಾಸ್ತ್ರಕಾರನು ಇಂತಹ ಕೃತ್ಯವೆಸಗಿದವರಿಗೆ 'ಸುಂಕದ ಎಂಟರಷ್ಟನ್ನು' ದಂಡ ವಿಧಿಸಬೇಕೆಂದು ತಿಳಿಸಿರುವನು.[೬೬] ಇದಕ್ಕಾಗಿಯೇ ಗೂಢಾಚಾರಿಗಳನ್ನು ನೇಮಿಸಲಾಗುತ್ತಿತ್ತು. ಜೊತೆಗೆ ಇಂದಿನಂತೆ ಸುಂಕ ಪಾವತಿಸಿದರೆ ರಶೀದಿ ನೀಡುವಂತೆ ಅಂದೂ ಸಹ ವಸ್ತುಗಳಿಗೆ ರಾಜಮುದ್ರೆಯನ್ನು ಹಾಕಲಾಗುತ್ತಿತ್ತೆಂದು ತಿಳಿದುಬರುತ್ತದೆ. ಮಹೋಪಕಾರವೂ, ಸ್ವದೇಶದಲ್ಲಿ ದೊರಕದವೂ, ಬೀಜಗಳನ್ನು ಸಸ್ಯಾ ಸಂಪತ್ತಿಗಾಗಿಯೂ, ಔಷಧಿಗಳಿಗಾಗಿಯೂ ಸುಂಕವಿಲ್ಲದಂತೆ ಮಾಡಿ ಪ್ರೋತ್ಸಾಹಿಸಲಾಗಿತ್ತು.[೬೭] ತೆರಿಗೆ ಮಾನ್ಯ ಮಾಡುವ ಉದ್ದೇಶ ಮತ್ತು ಸಂದರ್ಭಗಳು ಇದರಿಂದ ತಿಳಿದುಬರುತ್ತವೆ. ಕ್ರಿ.ಶ. ೧೨೮೦ರ

ಶಾಸನವು 'ಭತ್ತಾಯ' ವನ್ನು ಉಲ್ಲೇಖಿಸಿದೆ.[೧೮] ಭತ್ತದ ಬೆಳೆಯ ಮೇಲೆ ಹಾಕುತ್ತಿದ್ದ ತೆರಿಗೆಯಾಗಿದೆ. ದಾಸಿಮಯ್ಯನು ಸಹ ತನ್ನ ವಚನದಲ್ಲಿ ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ, ಇರುಳೆಲ್ಲಾ ನಡೆದನಾ ಸುಂಕ ಕಂಜಿ' ಎಂದಿದ್ದಾರೆ. ಈ ರೀತಿ ಸುಂಕಕ್ಕೆ ಎದರಿ ತಪ್ಪಿಸಿಕೊಳ್ಳುತ್ತಿದ್ದ ಜನರು ಸಮಾಜದಲ್ಲಿ ಸರ್ವಕಾಲದಲ್ಲಿಯೂ ಕಂಡುಬರುವುದಿದೆ.

ತೋಟದಲ್ಲಿ ತೋಟಗಳ ಗೇಣಿ ಪಡೆದವರಿಗೆ ಸುಂಕ ವಿಧಿಸಿರುವುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ. ೧೪ನೆಯ ಶತಮಾನದ ಶಾಸನದಲ್ಲಿ ತೆಂಗಿನ ಮರನ ಗೇಣಿಯಿಂದ ಬಹ ಅಕ್ಕಿ ಮೂಡೆ ೩ ಎಂದಿದೆ.[೧೯] ಕ್ರಿ.ಶ. ೧೨೩೬ ಅಡಕೆಲೆಸುಂಕದ[೨೦] ಬಗೆಗೆ ತಿಳಿಸುತ್ತದೆ. ಪ್ರಾಚೀನ ಕಾಲದಲ್ಲಿ ಹೇರಳವಾಗಿ ಈ ಬೆಳೆಗಳಿಗೆ ಸುಂಕ ವಿಧಿಸಿರುವುದು ಕಂಡುಬರುತ್ತದೆ. ರಾಜ್ಯದ ಆದಾಯಕ್ಕೆ ಅಧಿಕವಾಗಿ ಈ ಬೆಳೆಗಳಿಂದ ತೆರಿಗೆ ಪಾವತಿಯಾದಂತೆ ಕಂಡುಬರುತ್ತದೆ. ಕ್ರಿ.ಶ. ೧೨೪೩ರ ಶಾಸನದಲ್ಲಿ ಅಡಕೆಲಕ್ಕ೧ ಕ್ಕ ೫ ಪಣ ಎಂದಿದೆ.[೨೧] ಕ್ರಿ.ಶ. ೧೨೬೭ರ ಶಾಸನವು ಹತ್ತಿ ಹೇಜು, ಬೆಂಡೆಯ ಮಳವೆ, ಅರಿಸಣ ದವಸದ ಹೇಜು ಏಲಕ್ಕಿ ಮೊದಲಾದವುಗಳಿಗೆ ತೆರಿಗೆ ವಿಧಿಸಿದ್ದನ್ನು ತಿಳಿಸುತ್ತದೆ.[೨೨] ಭೂದಾನ ಅಥವಾ ಇನ್ನಿತರ ದಾನಗಳನ್ನು ನೀಡುವಾಗಲು ಅವುಗಳಿಗೆ ತೆರಿಗೆ ವಿಧಿಸಿರುವ ಸಾಧ್ಯತೆಗಳಿವೆ. ಶಾಸನವೊಂದರಲ್ಲಿ 'ತೆರೆ'ಯ ಉಲ್ಲೇಖವಿದೆ.[೨೩] ತಾಳಗುಂದದ ಬೆಳಗಾವಿ ಗ್ರಾಮದ ಚಾಳುಕ್ಯ ಜಗದೇಕಮಲ್ಲನ ಶಾಸನವು 'ತಿಪ್ಪೆಸುಂಕ'ವನ್ನು ಉಲ್ಲೇಖಿಸಿದೆ.[೨೪] ಕ್ರಿ.ಶ. ೧೨೦೩ರ ಶಾಸನದಲ್ಲಿ ತೋಟದ ಸುಂಕವನ್ನು ಬಿಟ್ಟರೆಂದಿದೆ.[೨೫] ಬೆದ್ದಲು ಭೂಮಿಯ ಮೇಲೆ ವಿಧಿಸುವ ಸುಂಕಕ್ಕಿಂತ ನೀರಾವರಿ ಭೂಮಿ, ತೋಟದ ಬೆಳೆಗಳು ಮತ್ತು ತೋಟದ ಮೇಲೆ ವಿಧಿಸುವ ತೆರಿಗೆಯ ಪ್ರಮಾಣ ಹೆಚ್ಚಾಗಿರುತ್ತಿತ್ತು. ಈ ಕುರಿತು ಅರ್ಥಶಾಸ್ತ್ರಕಾರನು ಸಹ ತಿಳಿಸಿದ್ದಾನೆ. B.N.S. Yadava ಅವರು ತಮ್ಮ ಲೇಖನ Some Aspects of Share Cropping in India in Ancient and early medival Times ಎಂಬ ಲೇಖನದಲ್ಲಿ ಮೌರ್ಯರ ಕಾಲದಲ್ಲಿ ಕೃಷಿ ನಿರ್ದೇಶಕರಿಗೆ ಸೀತಾಧ್ಯಕ್ಷ ಎಂದು ಕರೆಯುತ್ತಿದ್ದು, ಬೆಳೆ ಮತ್ತು ಪಾಲು ಆಧಾರದ ಮೇಲೆ ಅವರು ಬೆಳೆಗಾರರಿಗೆ ಸುಂಕ ವಿಧಿಸುತ್ತಿದ್ದರು ಎಂದು ಉಲ್ಲೇಖಿಸಿದ್ದಾರೆ. ಕ್ರಿ.ಶ. ೧೩೧೦ರ ಶಾಸನವು ತೋಟವಣವನ್ನು ಉಲ್ಲೇಖಿಸಿದೆ.[೨೬] ಕ್ರಿ.ಶ. ೧೨-೧೩ನೆಯ ಶತಮಾನದ ಶಾಸನದಲ್ಲಿ ಒಕ್ಕಲುದೆಜಿ ವಿಧಿಸಿದ್ದನ್ನು ತಿಳಿಸಿದೆ.[೨೭] ಕೃಷಿಕರ ಮೇಲೆ ವಿಧಿಸಿದ ತೆರಿಗೆಯನ್ನು ಈ ಶಾಸನ ತಿಳಿಸಿದೆ. ಶಾಸನಗಳಲ್ಲಿ ಹೇರಳವಾಗಿ ನಂದಾದೀವಿಗೆಗೆ ಎಣ್ಣೆದಾನ ನೀಡುವ ಸಲುವಾಗಿ ಗಾಣಗಳನ್ನು ದಾನ ನೀಡಿರುವುದು ಕಂಡುಬರುತ್ತದೆ. ಈ ಗಾಣಗಳು ಹೇರಳವಾಗಿರುವ ಕಡೆ ಎಣ್ಣೆ ಧಾನ್ಯಗಳನ್ನು ಬೆಳೆದಿರುವ ಸಾಧ್ಯತೆಗಳಿವೆ. ಗಾಣಗಳಲ್ಲಿ ಕೈಗಾಣ, ಎತ್ತುಗಾಣಗಳು ಕಂಡುಬರುತ್ತವೆ. ಕ್ರಿ.ಶ. ೧೦೪೪ರ ಶಾಸನವು ಎತ್ತುಗಾಣದ ಮೇಲೆ ತೆರಿಗೆ ವಿಧಿಸಿದ್ದನ್ನು ಉಲ್ಲೇಖಿಸಿದೆ.[೨೮] ಕೈಗಾಣದಲ್ಲಿ ಉತ್ಪಾದನೆಯಾಗುವ ಎಣ್ಣೆಯ ಪ್ರಮಾಣಕ್ಕಿಂತ ಎತ್ತಿನ ಗಾಣದಲ್ಲಿ ಅಧಿಕ ಎಣ್ಣೆಯು ಉತ್ಪಾದನೆಯಾದ ಕಾರಣದಿಂದಾಗಿ ಕೈಗಾಣಕ್ಕಿಂತ ಎತ್ತಿನಗಾಣದ ಮೇಲೆ ವಿಧಿಸುವ ಸುಂಕ ಹೆಚ್ಚಾಗಿರುತ್ತಿತ್ತು. ಕ್ರಿ.ಶ. ೧೦೫೦ರ ಶಾಸನವು ಕೈಗಾಣವನ್ನು ಉಲ್ಲೇಖಿಸಿದೆ.[೨೯] ಎಣ್ಣೆಯ ವ್ಯಾಪಾರವನ್ನು ತೆಲ್ಲಿಗರು ಮಾಡುತ್ತಿದ್ದರು. ಕ್ರಿ.ಶ. ೧೧೫೦ರ ಶಾಸನವು ತೆಲ್ಲಿಗರಯ್ವತ್ತೊಕ್ಕಲು ದೇವರ ನಂದಾದೀವಿಗೆಗೆ ಗಾಣಂಗಳಲು ಪ್ರತ್ಯೇಕ ಎಣ್ಣೆ ಬಿಟ್ಟರೆಂದು ತಿಳಿಸಿದೆ.[೩೦] ಕೆಲವೊಮ್ಮೆ ದೇವರಿಗೆ ಬಿಡುವ ಸಂದರ್ಭದಲ್ಲಿ ಗಾಣದೆರೆಯನ್ನು ಮಾನ್ಯ ಮಾಡಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೩೧ರ ಶಾಸನದಲ್ಲಿ ಗಾಣದೆರೆಯನ್ನು ಮಾನ್ಯ ಮಾಡಿದ್ದನ್ನು ತಿಳಿಸಿದೆ.[೩೧] ಗಾಣಿಗರು ವರ್ಷನಿಬಂಧಿಯಾಗಿ ತೆರಿಗೆ ಪಾವತಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೦೭ರ ಶಾಸನದಲ್ಲಿ ಗಾಣ ಆಡಿಸುವವರು ವರ್ಷಕ್ಕೆ ಒಂದು ಹಣ ಕೊಡಬೇಕೆಂದಿದೆ.[೩೨] ಪಶುಸಂಗೋಪನೆಗೆ ಸಂಬಂಧಿಯಾದ ಹೈನುಗಾರಿಕೆಯಿಂದ ರಾಜ್ಯದ ಆದಾಯಕ್ಕೆ ತೆರಿಗೆಯ ಮೂಲಕ ಆದಾಯ

ಸಂದಾಯವಾಗುತ್ತಿತ್ತು. ಕ್ರಿ.ಶ. ೮೭೩ರ ಶಾಸನವು ತುಪ್ಪದೆಜೆಯನ್ನು ಉಲ್ಲೇಖಿಸಿದೆ.[೮೩] ಕೆಲವೊಮ್ಮೆ ತೆರಿಗೆಗಳನ್ನು ಬಲವಂತವಾಗಿ ವಸೂಲಿ ಮಾಡಲಾಗುತ್ತಿತ್ತು. ಇದರಿಂದಾಗಿ ಕ್ರಿ.ಶ. ೧೧೫೯ರ[೮೪] ಶಾಸನದಲ್ಲಿ ನಾಡಿನ ಅಧಿಕಾರಿಗಳು ಬಿಟ್ಟಿ, ಬಿರಾಡ ಮುಂತಾದ ತೆರಿಗೆಗಳ ವಸೂಲಿಗೆ ಆ ಊರಿಗೆ ಹೋಗಬಾರದೆಂದು ತಿಳಿಸಿದೆ.

ಕೃಷಿವೃತ್ತಿ ಮಾಡುವರಿಗೂ ತೆರಿಗೆ ವಿಧಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೨೩ರ ಶಾಸನವು ಕೊನೆಕಾಣಿರು ಅಂದರೆ ಅಡಕೆ ಕೊಯ್ಲು ಕೊಯ್ಯುವವರಿಗೆ ಸುಂಕ ವಿಧಿಸಿದ್ದನ್ನು ತಿಳಿಸುತ್ತದೆ.[೮೫] ಕ್ರಿ.ಶ. ೧೧೪೧ರ ಶಾಸನವು ಅಡಕೆ ಹೇಜೆಂಗೆ ಒಂದಕ್ಕೆ ಅಡಕೆಯಿಪ್ಪತ್ತು, ಹಸುಬೆಗೆ ಯಡಕೆ ಹತ್ತು ಮೆಳಸಿನ ಅಡಕೆ ೨೦ ಹೇಱೊಂದಕ್ಕೆ ಮಾನವೆಱಡು ಹಸುಬೆಗೆ ಮಾನವೊಂದು ಅರಿಸಿನ ಮಳ್ಳಿ ಶುಣ್ಠಿಯ ಹೇಱುಗಳ್ಗೆ ವೀಸವೊಂದು ಹಸುಬೆಗಳ್ಗೆಕಾಗಿಣಿಯೆರಡು ತೆಂಗಿನ ಕಾಯಿ ಹೇಜೆಂಗೆ ಕಾಯೆರಡು ದವಸದ ಭಣ್ಡಿಗೆ ಕೊಳಗವೊಂದು ಆ ಹೇಱಬಳ್ಳವೊಂದು ಬೆಲ್ಲದ ಬಣ್ಡಿಗೆ ವೀಸವೆರಡು ತಲೆವಣಿಗೆ ಕಾಗಿಣಿಯೆರಡು ಎಲೆಯ ಹೆಜೆಂಗೆವೆಲೆನೂಱು ಎಂದಿದೆ.[೮೬] ಈ ಶಾಸನವು ಯಾವ ಬೆಳೆಯ ಮಾರಾಟಕ್ಕೆ ಎಷ್ಟು ತೆರಿಗೆ ಇತ್ತು ಎಂಬುದನ್ನು ತಿಳಿಸಿದೆ. ಅಲ್ಲದೆ ತಲೆಯ ಮೇಲೆ ಮಾರಾಟಕ್ಕೆ ತಂದ ವಸ್ತುವಿಗೆ ಪ್ರತ್ಯೇಕ ಸುಂಕ ವಿಧಿಸಿದರುವುದು ಮತ್ತು ಹೇಜೆಗಿಂತ ಕಡಿಮೆಯಾಗಿರುತ್ತಿತ್ತೆಂಬ ಅಂಶಗಳನ್ನು ತಿಳಿಸುತ್ತದೆ. ಮಾರಾಟದ ವಸ್ತುಗಳಿಗೆ ಕೊಳ್ಳುವವರು ವಿಧಿಸುವ ಸುಂಕದ ಬಗೆಗೂ ಶಾಸನವು ತಿಳಿಸುತ್ತದೆ. ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ 'ನೂಱುಭತ್ತ ಕೊಡವರು ಕಾಲುಭತ್ತಗುಡುವುದು'[೮೭] ಇಂದಿಗಿಂತ ಅಧಿಕ ತೆರಿಗೆಗಳು ಪ್ರಾಚೀನ ಕಾಲದಲ್ಲಿ ಇತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ಕೃಷಿಯ ಮೂಲಕ ರಾಜ್ಯದ ಆದಾಯಕ್ಕೆ ಅಧಿಕ ಪ್ರಮಾಣದ ತೆರಿಗೆ ಪಾವತಿಯಾಗುತ್ತಿತ್ತು ಎಂಬುದು ತಿಳಿಯುತ್ತದೆ. ಇದರಿಂದಾಗಿಯೇ ಈ ಅವಧಿಯಲ್ಲಿ ಕೃಷಿ ಅಭಿವೃದ್ಧಿಯ ಪರ್ವಗಳು ಆರಂಭವಾದುದು ಕಂಡುಬರುತ್ತದೆ. ಪ್ರಭುತ್ವವು ಇದಕ್ಕಾಗಿಯೇ ಹೆಚ್ಚಿನ ಹೂಡಿಕೆ ಮತ್ತು ವ್ಯಯ ಮಾಡಿತು. ಈ ಹಿನ್ನೆಲೆಯಲ್ಲಿಯೇ ಕೆರೆಗಳ ನಿರ್ಮಾಣದಂತಹ ಕಾರ್ಯಗಳು ದ್ವಿಗುಣಗೊಂಡು ನೀರಾವರಿ ಕೃಷಿಯು ಅಭಿವೃದ್ಧಿ ಸಾಧಿಸಿತು ಎಂಬುದು ತಿಳಿದುಬರುತ್ತದೆ. ಕ್ರಿ.ಶ. ೧೩ನೆಯ ಶತಮಾನದ ಶಾಸನವು ಸಿದ್ಧಾಯ ಭತ್ತ ಬ ಳ ಎಂದಿದೆ.[೮೮] ಈ ತೆರಿಗೆಯ ಬಗೆಗೆ ಹಲವು ವಿದ್ವಾಂಸರು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಡಿ.ಸಿ.ಸರ್ಕಾರ್ ಅವರು ಉಳುಮೆಯಾಗುತ್ತಿದ್ದ ಭೂಮಿಯ ತೆರಿಗೆ ಎಂದು ಭಾವಿಸುತ್ತಾರೆ. ಚಿದಾನಂದಮೂರ್ತಿಯವರು ಸಾಮಾನ್ಯವಾಗಿ ಭೂಮಿಗೆ ವಿಧಿಸುವ ತೆರಿಗೆಯಾದರೂ ಮನೆಯ ಮೇಲು ತೆರಿಗೆ ವಿಧಿಸಿದ್ದರು ಎಂದಿದ್ದಾರೆ. ಎಸ್. ಗುರುರಾಜಾಚಾರ್ ಅವರು ಇಡೀ ಗ್ರಾಮದಿಂದ ಬರುವ ಒಟ್ಟು ಆದಾಯ ಎಂದಿದ್ದಾರೆ. ಬಿ.ಆರ್.ಗೋಪಾಲ್‌ರವರು ಸಿದ್ಧಾಯವು ನಿಗದಿತ ಆದಾಯವೆಂದು ಅದನ್ನು ಸ್ಥಿರಾಸ್ತಿಗಳಾದ ಭೂಮಿ, ಮನೆ ಮತ್ತು ಅಂಗಡಿಗಳ ಮೇಲೆ ಹಾಕಲಾಗುತ್ತಿತ್ತು ಎಂದಿದ್ದಾರೆ. ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವದಲ್ಲಿ ರಾಜನು ಭೂಮಿಯಲ್ಲಿ ತನ್ನ ಆಜ್ಞೆ ಹೆಚ್ಚಬೇಕೆಂದರೆ ಅದನ್ನು ನಿಷ್ಕಂಟಕ ಮಾಡಿ ಪ್ರತಿ ಸ್ಥಿತಿಯಿಂದ ಸಿದ್ಧಾಯವನ್ನು ಕೊಡಬೇಕು ಎಂದಿದ್ದಾನೆ. ಕ್ರಿ.ಶ. ೧೩೦೦ರ ಶಾಸನವೊಂದು 'ನಿಯತಕರವಹ ಸಿದ್ಧಾಯವನು ಎಂದು ಹೇಳಿರುವುದರಿಂದ ಸಿ.ಯು.ಮಂಜುನಾಥ್‌ರವರು ಸಿದ್ಧಾಯ ನಿಯತವಾಗಿ ರಾಜ್ಯಾದಾಯಕ್ಕೆ ಸೇರುತ್ತಿದ್ದ ಆದಾಯವೆಂದು ಭಾವಿಸಿದ್ದಾರೆ.[೮೯] ಈ ಮೇಲಿನ ವಿದ್ವಾಂಸರ ಅಭಿಪ್ರಾಯವನ್ನು ಆಧರಿಸಿ ಮತ್ತು ಶಾಸನಗಳಿಂದ ತಿಳಿದುಬರುವ ಮಾಹಿತಿಯನ್ನಾಧರಿಸಿ ಸಿದ್ಧಾಯವು ರಾಜ್ಯದ ಸಿದ್ಧ ವಸ್ತುಗಳ ಮೇಲೆ ಹಾಕುವ ತೆರಿಗೆಯೆಂಬುದು ಸ್ಪಷ್ಟವಾಗುತ್ತದೆ. ಹೆಸರೇ ಸೂಚಿಸುವಂತೆ ಸಿದ್ಧ+ಆಯ=ಸಿದ್ಧಾಯ ಆಗುತ್ತದೆ. ಇದರಿಂದ ಸಿದ್ಧವಾದ ಕೃಷಿ ಭೂಮಿ ಮತ್ತು ಅದರ ಉತ್ಪನ್ನವಾಗಲಿ, ಆದಾಯ

ಮೂಲಗಳಾಗಲೀ ಮೊದಲಾದವುಗಳ ಮೇಲೆ ಹಾಕಿರುವ ತೆರಿಗೆಯಾಗಿರುವ ಸಾಧ್ಯತೆಗಳಿವೆ. 'ಸಿದ್ಧ' ಎಂದರೆ ತಯಾರಾದ, ಪಕ್ವವಾದ, ಅಣಿಯಾದ ಎಂಬ ಅರ್ಥವು ಇರುವುದರಿಂದ ಎಲ್ಲ ವಸ್ತುಗಳ ಮೇಲೆ ವಿಧಿಸಿದ ಒಟ್ಟು ಮೊತ್ತದ ಆದಾಯವಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೯೭ರ ಶಾಸನವು ಧವಳಾರದ ಭಂಡಿ ಹೊಗೆದೆಱ ಮಗ್ಗದೆಱೆತುಪ್ಪದಳಮಿಳಿ ಗುಳನೂಲು ಮುಖ್ಯವಾದಯೆಲ್ಲಾ ಅಪೂರ್ಬಾಯಗೂಡಿ ಕಟ್ಟಿಕೊಟ್ಟ ಗುತ್ತಗೆಯ ಸಿದ್ಧಾಯಗದ್ಯಾಣ ನೂಱು ಎಂದಿದೆ.[೯೦] ಎಲ್ಲ ವಸ್ತುಗಳಿಂದ ಸರ್ಕಾರಕ್ಕೆ ಪಾವತಿಯಾಗುವ ಒಟ್ಟು ಮೊತ್ತದ ಆದಾಯವೆಂಬ ಅರ್ಥದಲ್ಲೂ ಬಳಕೆಯಾಗಿರುವುದು ಈ ಶಾಸನದಿಂದ ತಿಳಿದುಬರುತ್ತದೆ. ಭೂಮಿಯ ಉಳುಮೆಗೆ ಸಂಬಂಧಿಸಿದ ಸಿದ್ಧಾಯವು ವರ್ಷ ನಿಬಂಧಿಯಾಗಿರುತ್ತಿತ್ತು. ಸಿದ್ಧಾಯವನ್ನು ಸಮಯಕ್ಕೆ ಸರಿಯಾಗಿ ಪಾವತಿ ಮಾಡದಿದ್ದರೆ ಅದಕ್ಕೆ ಬಡ್ಡಿ ವಿಧಿಸಲಾಗುತ್ತಿತ್ತು. ಇದನ್ನು ಕ್ರಿ.ಶ. ೧೧೯೧ರ ಶಾಸನವು ತಿಳಿಸುತ್ತದೆ.[೯೧]

ಕ್ರಿ.ಶ. ೧೧೯೮ರ ಶಾಸನವು ಹತ್ತಿಯ ಬಂಡಿಗೆ ಹಾಗ ವಿಧಿಸಿದ್ದನ್ನು ತಿಳಿಸುತ್ತದೆ.[೯೨] ಕ್ರಿ.ಶ. ೧೨೮೦ರ ಶಾಸನದಲ್ಲಿ ಶ್ರೀಗಂಧಕ್ಕೆ ಪಣ ೫ ಪಂನೀರಿಂಗೆ ಪ ೨ ತೆಂಗಿನೆಂಣೆ, ಬಾಳೆಹಣ್ಣು ೧೦೦೦ ಕಬ್ಬು ೩೦೦ ತೋಳು ಮಾಲೆ ವೀಳೆಯಕ್ಕಡಕೆ ಈ ತೆರಿಗೆಗಳನ್ನು ದಾನ ಬಿಟ್ಟಿರುವುದನ್ನು ತಿಳಿಸುತ್ತದೆ.[೯೩] ಕೆಲವೊಮ್ಮೆ ತಲೆಹೊಱೆಯ ಮೇಲೆ ಸುಂಕವನ್ನು ವಿನಾಯಿತಿ ನೀಡಲಾಗುತ್ತಿತ್ತು. ಅಗರದ ಶಾಸನವೊಂದು ತಲೆಹೇಱು ಸುಂಕಕ್ಕೆ ವಿನಾಯಿತಿ ನೀಡಿದ್ದನ್ನು ತಿಳಿಸುತ್ತದೆ.[೯೪] ಚಾಮರಾಜನಗರದ ಶಾಸನವೊಂದು ಗೋಮಾಳದ ಮೇಲೆ ತೆರಿಗೆ ವಿಧಿಸಿದ್ದನ್ನು ತಿಳಿಸುತ್ತದೆ.[೯೫] ಕ್ರಿ.ಶ. ೧೧೮೦ರ ಶಾಸನವು 'ನೀರು ಕೂಲಿಯನ್ನು ಭುಜಗೇಶ್ವರ ದೇವರಿಗೆ ಬಿಟ್ಟರೆಂದು ತಿಳಿಸಿದೆ.[೯೬] ನೀರು ಕೂಲಿಯು ನೀರಿನ ಮೇಲೆ ವಿಧಿಸಿರುವ ಸುಂಕವಾಗಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೧೨೧ರ ಶಾಸನವು ಪೆರ್ಜುಂಕವೆಗಡೆ ಕುಳಿಯ ಸುಂಕದ ಕಾರಣೆಯಿಂ ಬಿಟ್ಟ ತೋಟ ೧ ಸಾರಿಗೆ ಒಕ್ಕಲಲು ಭತ್ತ ಕೊಳಗ೧ ಎಳ್ಳು ಗೋಧುವೆ ಕಡಲೆ ಬಳ್ಳ ೨ ಎಂದಿದೆ.[೯೭] ಕುಳಿಯ ಸುಂಕವೆಂದರೆ ಕೃಷಿಕರು ಅಡಕೆ, ತೆಂಗು ಬೆಳೆಗಳನ್ನು ಬೆಳೆಯಲು ಇವುಗಳನ್ನು ನೆಡುವ ಸಂದರ್ಭದಲ್ಲಿ ವಿಧಿಸುವ ತೆರಿಗೆಯಾಗಿದ್ದಂತೆ ಕಂಡುಬರುತ್ತದೆ. ಒಕ್ಕಲಿಗರು ಹೊಲ ಮೊದಲಾದವುಗಳಿಗೆ, ಮಾರಾಟ ಮಾಡುವ ಸಂದರ್ಭ ಇತ್ಯಾದಿಗಳಿಗೆ ತಾವು ನಡೆದಾಡುವ, ಬಂಡಿ ದಾರಿ(ರಸ್ತೆ)ಗೆ ಸುಂಕ ವಿಧಿಸಿರುವ ಸಾಧ್ಯತೆಗಳಿದ್ದು, ಅದನ್ನು ಸಾರಿಗೆ ಸುಂಕವೆಂದು ಕರೆದಿರುವ ಸಾಧ್ಯತೆಯಿದೆ. ಕ್ರಿ.ಶ. ೧೨೩೮ರ ಸಂತೆ ಶಿರೂರು ಶಾಸನವು ಸಾರಿಗೆ ಸುಂಕವನ್ನು ಉಲ್ಲೇಖಿಸಿದೆ. ರಸ್ತೆಯಲ್ಲಿ ಸಂಚರಿಸುವ ೨ ಬಂಡಿಗೆ ಒಂದು ಗದ್ಯಾಣ ಸುಂಕ ವಿಧಿಸಿರುವುದು ಕಂಡುಬರುತ್ತದೆ.[೯೮] ತೆರಿಗೆಯನ್ನು ಸಮಯಕ್ಕೆ ಸರಿಯಾಗಿ ಪಾವತಿಸದಿದ್ದರೆ ಅದಕ್ಕೆ ದಂಡವನ್ನು ವಿಧಿಸಲಾಗುತ್ತಿತ್ತು. ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ ದೋಷ ಮಾಡಿದಲ್ಲಿ ದಂಡವಿದೆ ಎಂದು ತಿಳಿಸಿದೆ.[೯೯] ಕೆಲವೊಮ್ಮೆ ಮಹಾಜನರಿಗೆ ಸುಂಕ ವಿನಾಯಿತಿ ನೀಡಲಾಗುತ್ತಿತ್ತು. ಕ್ರಿ.ಶ. ೧೦೬೧ರ ಶಾಸನದಲ್ಲಿ ಬ್ರಹ್ಮಪುರಿಯ ೪೨ ಮಹಾಜನರಿಗೆ ಸುಂಕ ವಿನಾಯಿತಿ ನೀಡಿ ಅಡಕೆ ತೋಟವೊಂದಕ್ಕೆ ಪಣ೧ ವಿಧಿಸಿದಂತೆ ತಿಳಿಯುತ್ತದೆ.[೧೦೦]

ಕ್ರಿ.ಶ. ೧೧೭೪ರ ಶಾಸನದಲ್ಲಿ ಉಳಿಗೆಪಾಗ ಏಣಿಗೆಪಾಗಗಳನ್ನು ಉಲ್ಲೇಖಿಸಿದೆ.[೧೦೧] ಇವುಗಳು ತೆರಿಗೆಗಳಾಗಿದ್ದು, ಇವುಗಳ ಅರ್ಥದ ಬಗೆಗೆ ತಿಳಿಯುವುದಿಲ್ಲ. ಕೆಲವೊಮ್ಮೆ ಸುಂಕದ ಹೊರೆ ಹೆಚ್ಚಾದಾಗ ರೈತರು ರಾಜನಲ್ಲಿಗೆ ಹೋಗಿ ಕೇಳಿರುವುದು ಕಂಡುಬರುತ್ತದೆ. ಕ್ರಿ.ಶ. ೯೯೧ರ ಬಾಗಳಿಯ ಶಾಸನದಲ್ಲಿ ಆದಿವರ್ಮನು ಸುಂಕವನ್ನು ಹೆಚ್ಚಿಸಿದಾಗ ವ್ಯಾಪಾರಿಗಳು ಮತ್ತಿತರ ಕೃಷಿ ಮೊದಲಾದ ವರ್ಗದವರು ರಾಜನಲ್ಲಿ ವಿನಂತಿಸಿಕೊಂಡರು. ಆಗ ಆಳ್ವಿಕೆ ನಡೆಸುತ್ತಿದ್ದ ಆಹವಮಲ್ಲದೇವನು ಆದಿತ್ಯಾವರ್ಮನು ಸುಂಕ ವಿಧಿಸಿದ್ದನ್ನು ತೆಗೆದು ಹಾಕಿದನೆಂದಿದೆ.[೧೦೨] ರಾಜನ ಗಮನಕ್ಕೆ ತರದೆ ಅಧಿಕಾರಿವರ್ಗದವರು ಸುಂಕವನ್ನು ಹೆಚ್ಚಿಸಿರುವುದು ಇಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೦೧೮ರ

ಶಾಸನದಲ್ಲಿ ಕೆಱೆಗೊಂಡಗೆಯಿ ದಸವಂದವಂ ಕೊಣ್ಡು ಕೆಱೆಗಳಂ ಪಾಲಿಸುವರು ಎಂದಿದೆ.[೧೦೩] ಕೆರೆ ನಿರ್ವಹಣೆಗಾಗಿ ನೀಡಿದ ಭೂಮಿಗೆ ದಸವಂದದ ಭಾಗವನ್ನು ಪಡೆದು ಅದರಿಂದ ಬಂದ ಆದಾಯವನ್ನು ಕೆರೆಯ ನಿರ್ವಹಣೆಗೆ ಬಳಸಲಾಗುತ್ತಿತ್ತು. ಕ್ರಿ.ಶ. ೪೫೦ರ ಹಲ್ಮಿಡಿ ಶಾಸನವು ಸಹ ಪತ್ತೊನ್ದಿಯನ್ನು ತಿಳಿಸಿರುವುದು ಕಂಡುಬರುತ್ತದೆ. ಅಂದರೆ ೧/೧೦ ಭಾಗವನ್ನು ನೀಡಬೇಕೆಂದು ತಿಳಿಸುತ್ತದೆ. ಕ್ರಿ.ಶ. ೧೦೮೯ರ ಶಾಸನದಲ್ಲಿ ಬಣಬೆ ದೆಱೆಯ ಉಲ್ಲೇಖವಿದೆ.[೧೦೪] ಪಶುಗಳ ಆಹಾರವಾದ ಹುಲ್ಲು ಹೊಟ್ಟಿನ ಬಣವೆಗಳ ಮೇಲೆ ತೆರಿಗೆ ವಿಧಿಸಿರುವುದು ಕಂಡುಬರುತ್ತದೆ. ಒಳಗಿನ ವಸ್ತುಗಳಲ್ಲದೆ ಹೊರಗಿನಿಂದ ಬಂದು ಕೆಲವು ವಸ್ತುಗಳು ಮಾರಾಟವಾಗುತ್ತಿದ್ದವು. ಅಂದರೆ ಒಂದು ಗಡಿ ಪ್ರದೇಶದಿಂದ ಮತ್ತೊಂದು ಗಡಿ ಪ್ರದೇಶಕ್ಕೆ ಬಂದು ಮಾರಾಟ ಮಾಡುವುದಾಗಿದೆ. ಇಂತಹ ವಸ್ತುಗಳಿಗೆ ವಿಧಿಸುವ ಸುಂಕವನ್ನು 'ಅಭ್ಯಾಗತೆ' ಎನ್ನಲಾಗುತ್ತಿತ್ತು. ಇದನ್ನು ಕ್ರಿ.ಶ. ೧೨೯೯ರ ಶಾಸನವು ಉಲ್ಲೇಖಿಸಿದೆ.[೧೦೫]

ಕ್ರಿ.ಶ. ೧೨೯೧ರ ಶಾಸನವು ಕೊನೆದೆಱೆಯನ್ನು ಉಲ್ಲೇಖಿಸಿದೆ.[೧೦೬] ಅಂದರೆ ಅಡಕೆ, ಬಾಳೆ ಗೊನೆಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯಾಗಿದೆ. ಕ್ರಿ.ಶ. ೧೨೩೦ರ ಶಾಸನವು 'ಬಾಣ'ವನ್ನು ಉಲ್ಲೇಖಿಸಿದೆ.[೧೦೭] ಇದು ಮೇವಿನ ತೆರಿಗೆಯಾಗಿದ್ದು, ಇದಕ್ಕೆ ಸಂಬಂಧಿಸಿದಂತೆ ಬಣವೆಗಳ ಮತ್ತು ಬಣವೆದೆಱೆಗಳ ಉಲ್ಲೇಖಗಳು ಕಂಡುಬರುತ್ತವೆ. ನಲ್ಲಾವು ನಲ್ಲೆತ್ತುನ್ನು ಕ್ರಿ.ಶ. ೧೧೮೩ರ ಶಾಸನವು ತಿಳಿಸಿದೆ.[೧೦೮] ಇದಕ್ಕೆ ಒಳ್ಳೆಯ ಹಸುಗಳು, ಎತ್ತುಗಳು ಎಂಬ ಅರ್ಥವಿದ್ದು, ಅವುಗಳಿಗೆ ವಿಧಿಸಿದ ತೆರಿಗೆಯಾಗಿದೆ.[೧೦೯] ಕ್ರಿ.ಶ. ೧೨೦೫ರ ಶಾಸನವು ಬಾಲಪಣವನ್ನು ಉಲ್ಲೇಖಿಸಿದೆ.[೧೧೦] ಚಿದಾನಂದಮೂರ್ತಿಯವರು ಇದನ್ನು ಎತ್ತುಗಳ ಮೇಲೆ ವಿಧಿಸುತ್ತಿದ್ದ ತೆರಿಗೆ ಎಂದಿದ್ದಾರೆ. ಇದಕ್ಕೆ ಅವರು ಶಬ್ದಮಣಿದರ್ಪಣದ ಒಂದು ಉದಾಹರಣೆಯನ್ನು ಕೊಡುತ್ತಾರೆ. 'ಬಾಲವಣಂ ಬೇಡುವನೊಂದೆ ಗೊಂದಗಮನಂ ಗಾರಾತಿಯಂ ಹೈಹಯಂ' ಇದರ ಅರ್ಥ ಹೈಹಯನು ಶಿವನ ಎತ್ತಾದರೂ ಸರಿಯೇ ಬಾಲವಣವನ್ನು ಕೇಳದೆ ಬಿಡುವವನಲ್ಲ ತೆರಿಗೆ ಹಾಕುವಾಗ ಒಂದು ಹಸುವಿಗೆ ಎಂದು ಹೇಳುವ ಬದಲು ಒಂದು ಬಾಲಕ್ಕೆ ಎಂದು ಹೇಳಿದ್ದು ತಿಳಿದುಬಂದಿದೆ ಎಂದು ಅಭಿಪ್ರಾಯ ಪಡುತ್ತಾರೆ.[೧೧೧] ಪ್ರಾಚೀನ ಸಂದರ್ಭದ ಈ ತೆರಿಗೆಗಳನ್ನು ಗಮನಿಸಿದರೆ ಇಂದಿಗಿಂತಲೂ ಅಧಿಕವಾಗಿದ್ದಂತೆಯೇ ಕಂಡುಬರುತ್ತವೆ. ಸರ್ವಜ್ಞನೂ ಸಹ ಸುಂಕದ ಮಹತ್ವವನ್ನು ಕುರಿತು ಹೀಗೆ ಹೇಳಿದ್ದಾನೆ.

ದಂಡಿಯಿಲ್ಲದ ಹಾಡು ಉಂಡಿಗಿಲ್ಲದ ಸುಂಕ
ಹೆಂಡತಿಯಿಲ್ಲದವನ ಮನೆವಾರ್ತೆ ಇವು ಮೂರು
ಭಂಡಾಟವಯ್ಯ ಸರ್ವಜ್ಞ[೧೧೨]

ಇದು ರಾಜ್ಯದ ಬೊಕ್ಕಸಕ್ಕೆ ತೆರಿಗೆಯ ಮಹತ್ವವನ್ನು ಸೂಚಿಸುತ್ತದೆ. ತೆರಿಗೆಯು ರಾಜ್ಯದ ಆರ್ಥಿಕತೆಯ ಮೂಲಸ್ತಂಭವಾಗಿತ್ತು. ಆದರೆ ಸಾಮಾನ್ಯ ಜನತೆಗೆ ನುಂಗಲಾರದ ತುತ್ತಾಗಿತ್ತು. ಕೆಲವೊಮ್ಮೆ ಜನರು ತೆರಿಗೆಯ ಭಾರದಿಂದ ಊರು ಬಿಡುತ್ತಿದ್ದರು. ಅದು ಮೇಲೆ ಉಲ್ಲೇಖಿಸಿದ ಶಾಸನದಿಂದಲೂ ತಿಳಿದುಬರುತ್ತದೆ. ಈ ರೀತಿ ರಾಜ್ಯದ ಜನತೆಗೆ ತೆರಿಗೆ ಹೊರೆಯಾಗಿತ್ತು ಎಂಬುದು ತಿಳಿಯುತ್ತದೆ.

### ೪.೪. ಅಳತೆಗಳು ಮತ್ತು ಕೃಷಿ

ಒಂದು ನಿರ್ದಿಷ್ಟ ವಸ್ತುವಿನ ಬೆಲೆ ಅಥವಾ ಮೌಲ್ಯ, ಗಾತ್ರ ಮತ್ತು ವಿಸ್ತೀರ್ಣವನ್ನು ಗುರುತಿಸಲು, ಸ್ಪಷ್ಟೀಕರಿಸಲು ಬಳಸುವ ನಿಕರತೆಯ ಪ್ರಮಾಣವು ಅಳತೆಗಳೆನ್ನಿಸುತ್ತದೆ. ಪ್ರಾಚೀನ ಕರ್ನಾಟಕದಿಂದ ಇಂದಿನ ಆಧುನಿಕ ಕರ್ನಾಟಕದಲ್ಲಿ ಈ ಅಳತೆಯ ಮಾಪನವನ್ನು ಬಳಸಲಾಗುತ್ತದೆ. ಯಾಕೆ ಈ ಅಳತೆಗಳು ಬೇಕು ಎನ್ನುವಾಗ ಒಂದು ವಸ್ತುವಿನ ಮೌಲ್ಯ ಗುರುತಿಸಲು, ಕೇಂದ್ರೀಕೃತ ಪ್ರದೇಶವನ್ನು ವಿಭಾಗಿಸಲು, ಅದರ ವಿನ್ಯಾಸ, ವಿಸ್ತೀರ್ಣ ಮೊದಲಾದವುಗಳನ್ನು ಕಂಡುಹಿಡಿಯಲು ಅಳತೆಗಳು ನೆರವಾಗುತ್ತವೆ. ಅರ್ಥಶಾಸ್ತ್ರಕಾರನು ತೂಕ ಮತ್ತು ಅಳತೆಗಳ ಬಗೆಗೆ ತಿಳಿಸಿರುವನು. ಪ್ರಾಚೀನ ಶಾಸನಗಳಲ್ಲಿಯೂ ಭೂಮಿಯ ಎಲ್ಲೆಯನ್ನು ಗುರುತಿಸಲು, ದಾನಕೊಟ್ಟ ಭೂಮಿಯ ಪ್ರಮಾಣವನ್ನು ತಿಳಿಸಲು ಅಳತೆಗಳನ್ನು ಬಳಸಲಾಗಿದೆ. ಅಳತೆಗಳು ಕಾಲದಿಂದ ಕಾಲಕ್ಕೆ ಬದಲಾದಂತೆ ಕಂಡುಬರುತ್ತವೆ. ಪ್ರಾಚೀನ ಕಾಲದಲ್ಲಿ ಬಳಕೆಯಾಗುತ್ತಿದ್ದ ಪರಿಭಾಷೆಗಳು ಇಂದು ಬಳಕೆಯಾಗುತ್ತಿಲ್ಲ. ಇಂದು ಅಡಿ, ಚದುರ, ಗುಂಟೆ, ಎಕರೆಗಳ ಲೆಕ್ಕದಲ್ಲಿ ಬಳಕೆಯಾಗುತ್ತಿವೆ. ಪ್ರಾಚೀನ ಕಾಲದಲ್ಲಿ ಭೂಮಿಯನ್ನು ಅಳೆಯಲು ಎರಡು ವಿಧಾನಗಳನ್ನು ಬಳಸುತ್ತಿದ್ದರು. ಬಿತ್ತುವ ಬೀಜದ ಆಧಾರದ ಮೇಲೆ ಭೂಮಿಯ ವಿಸ್ತೀರ್ಣವನ್ನು ಗುರುತಿಸುವುದು. ಎರಡು ಸಲಗೆ ಗದ್ದೆ, ಒಂದು ಸಲಗೆ ಬೆದ್ದಲು ಖಂಡುಗ ಇತ್ಯಾದಿ. ಈ ರೀತಿ ಬಳಸುವುದು ಒಂದು ವಿಧಾನ. ಮತ್ತೊಂದು ವಿಧಾನವೆಂದರೆ ಅದು ಅಳತೆಯ ಕೋಲುಗಳ ಮೂಲಕ ಅಳೆಯುವುದು. ಪ್ರಾಚೀನ ಕರ್ನಾಟಕದಲ್ಲಿ ಕೋಲುಗಳು ಅಳತೆಯ ಮಾನಗಳಾಗಿದ್ದವು ಎಂಬುದು ಇದರಿಂದ ತಿಳಿಯುತ್ತದೆ. ಇಂದು ಸರಪಳಿ ಮತ್ತು ಹಗ್ಗಗಳನ್ನು ಬಳಸಿ ಭೂಮಿಯನ್ನು ಅಳೆಯಲಾಗುತ್ತಿದೆ. ಅಳತೆ ಕೋಲುಗಳನ್ನು ಬಳಸುವಾಗ ಒಂದೇ ಪ್ರಮಾಣದ ಕೋಲುಗಳಿಂದ ಅಳೆಯುತ್ತಿದ್ದುದು ಕಂಡುಬರುವುದಿಲ್ಲ. ಬದಲಿಗೆ ಅವು ಪ್ರದೇಶದಿಂದ ಪ್ರದೇಶಕ್ಕೆ, ಹಳ್ಳಿಗಳಿಂದ ಹಳ್ಳಿಗೆ ಭಿನ್ನವಾಗಿರುತ್ತಿದ್ದವು. ಅದು ಶಾಸನಗಳಿಂದಲೂ ಸ್ಪಷ್ಟವಾಗುತ್ತದೆ. ಶಾಸನಗಳಲ್ಲಿ ಭೂಮಿಯ ವಿಧಗಳನ್ನು ತೆರಿಗೆಗಳನ್ನು, ದಾನ ನೀಡುವ ಭೂಮಿಯ ವಿವರಗಳನ್ನು ತಿಳಿಸುವಾಗ ಅಳತೆಗಳು ಕಂಡುಬರುತ್ತವೆ. ಅಪ್ಪಾದೊರೈರವರು ತಮ್ಮ ಕೃತಿ ಎಕನಾಮಿಕ್ ಕಂಡಿಷನ್ಸ್ ಇನ್ ಸೌತ್ ಇಂಡಿಯಾ ಕೃತಿಯಲ್ಲಿ 'ವ್ಯವಹಾರ ಗಣಿತ ಮತ್ತು ಕ್ಷೇತ್ರಗಣಿತಗಳ ಕರ್ತೃವಾದ ರಾಜಾದಿತ್ಯನು ಹೊಲಗಳನ್ನಳೆಯಲು 'ಗಳೆ'ಗಳನ್ನು ಬಳಸಬೇಕು. ಒಂದೊಂದು ಊರಿಗೂ ಪ್ರತ್ಯೇಕ ಗಳೆಯಿರಬಹುದೆಂದು ಹೇಳಿದ್ದಾನೆ.[೧೧೩] ಕ್ರಿ.ಶ. ೭೫೦ರ ಶಾಸನದಲ್ಲಿ ಕುಋಗೋಡು ಎಂಬ ಊರಿನಲ್ಲಿ ಹದಿನೆಂಟು ಗೇಣಿನ ಕೋಲನ್ನು ಬಳಸಬೇಕೆಂದು ರಾಜನು ಶಾಸನ ಹೊರಡಿಸಿದನೆಂದು ತಿಳಿಸಿದೆ.[೧೧೪] ಇದನ್ನು ಗಮನಿಸಿದರೆ ರಾಜಾದಿತ್ಯನ ಮಾತುಗಳು ಈ ಶಾಸನಕ್ಕೆ ಪೂರಕವಾಗುತ್ತವೆ. ಅಳತೆಯ ಮಾಪನಗಳು ಸ್ಥಳದಿಂದ ಸ್ಥಳಕ್ಕೆ ಕಾಲದಿಂದ ಕಾಲಕ್ಕೆ, ರಾಜರಿಂದ ರಾಜರಿಗೆ ಕಾಲಕ್ಕೆ ಅನುಗುಣವಾಗಿ ವ್ಯತ್ಯಾಸ ಹೊಂದುತ್ತ ಸಾಗುತ್ತಿದ್ದವು ಎಂದು ತಿಳಿಯುತ್ತದೆ. ಪ್ರದೇಶಕ್ಕೆ ಅನುಗುಣವಾಗಿ ಆಯಾಭಾಗಗಳಲ್ಲಿ ರಾಜರು ಅಳತೆಯ ಮಾಪನಗಳನ್ನು ನಿರ್ಧರಿಸುತ್ತಿದ್ದನೆಂದು ಈ ಉಲ್ಲೇಖಿತ ಶಾಸನದಿಂದ ತಿಳಿಯುತ್ತದೆ. ಶಾಸನಗಳು ತಿಳಿಸುವಂತೆ ಅಳತೆಯ ಮಾನಗಳು ಊರಿನ ಪ್ರಮುಖ ವ್ಯಕ್ತಿಗಳ, ಸ್ಥಳದ, ಅಧಿಕಾರಿಗಳ, ವ್ಯಕ್ತಿಗಳ ಬಿರುದುಗಳ, ದೇವರು, ಊರಿನ ಹೆಸರು, ಸಂಖ್ಯೆಯ ಹೆಸರು, ದಾನದ ಸಂಕೇತ, ಶೂರತ್ವದ ಸಂಕೇತ, ಭೂಪ್ರಕಾರ ಸಂಕೇತ ಹೀಗೆ ಮೊದಲಾದವುಗಳ ಹೆಸರುಗಳಿಂದ ಬಳಸಿರುವುದು ಕಂಡುಬರುತ್ತದೆ. ಈ ರೀತಿಯ ಅಳತೆಕೋಲುಗಳನ್ನು ಆ ಅಳತೆಯ ಮಾಪನಗಳಿಗೆ ಸಂಬಂಧಿಸಿದ ಊರಿನ ದೇವಾಲಯಗಳಲ್ಲಿ ಇಡುತ್ತಿದ್ದರು. ದೇವಾಲಯದ ಗೋಡೆಯ ಮೇಲೆ ಕೆತ್ತಿರುವುದಕ್ಕೆ ನಿದರ್ಶನವೆಂಬಂತೆ ಕ್ರಿ.ಶ. ೧೨೦೦ರ ಶಾಸನದಲ್ಲಿ 'ಯೀ ಅಮ್ವತ್ತುಗೇಣು ಗಡಿಬವ ಸಲಿಸದೆ ಕಿತ್ತವಂಗೆ ಕುಂಬೀನರಕ ಸಂತಾನಕ್ಷಯವಕ್ಕುಂ' ಎಂದಿದೆ.[೧೧೫] ಇಂದಿಗೂ ಕೆಲವು

ದೇವಾಲಯದಲ್ಲಿ ಕೋಲುಗಳು ಕಂಡುಬರುತ್ತವೆ. ಅವುಗಳಿಗೆ ಪೂಜೆ ಸಲ್ಲುವುದಿದೆ. ಅಪ್ಪಾದೊರೈ ಎ. ಅವರು ತಮಿಳುನಾಡಿನಲ್ಲಿಯೂ ಈ ಆಚರಣೆ ರೂಢಿಯಲ್ಲಿತ್ತು ಎಂದಿದ್ದಾರೆ.[೧೧೬] ಭೂಮಿಯನ್ನು ಅಳೆಯಲು ಪ್ರತ್ಯೇಕವಾಗಿ ಊರಿನಲ್ಲಿ ಕೆಲವು ವ್ಯಕ್ತಿಗಳಿರುತ್ತಿದ್ದರು. 'ದಾನ ಮಾಡಿದ ಭೂಮಿಯನ್ನು ಅಳೆದ ಐವರ ಉಲ್ಲೇಖವೊಂದು ಇಮ್ಮಡಿ ವಿಕ್ರಮಾದಿತ್ಯನ ತಿಪ್ಪಲೂರು ಶಾಸನದಲ್ಲಿ ಕಂಡುಬರುತ್ತದೆ.[೧೧೭] ಇದರಿಂದ ಅಳತೆಗಳನ್ನು ಅರಿತ, ಅದರಲ್ಲಿ ನುರಿತ, ಅನುಭವ ಹೊಂದಿದವರು ಊರುಗಳಲ್ಲಿ ಇರುತ್ತಿದ್ದರು. ಅವರು ಅಳತೆಗಳಂತಹ ಕಾರ್ಯಗಳನ್ನು ನಿರ್ವಹಿಸುತ್ತಿದ್ದರೆಂದು ತಿಳಿದುಬರುತ್ತದೆ. ಕೋಲುಗಳನ್ನು ಗೇಣಿನ ಲೆಕ್ಕದಲ್ಲಿ ಬಳಸಿರುವುದು ಕಂಡುಬರುತ್ತದೆ. ಕೆಲವು ಅರಸರ ಹೆಸರಲ್ಲೂ ಕೋಲುಗಳು ಬಳಕೆಯಾಗಿರುವುದಿದೆ. ಕ್ರಿ.ಶ.೧೧೨೯ರ ಶಾಸನದಲ್ಲಿ ಸೇನಭೋವ ವಿಟ್ಟರಸ ಮಾನ್ಯದ ಕೋಲು[೧೧೮] ಎಂದಿದೆ. ಅಂದರೆ ದಾನಮಾಡಿದ ವ್ಯಕ್ತಿಯ ಹೆಸರಿನಿಂದಲೂ ಈ ರೀತಿ ಕರೆದಿರುವ ಸಾಧ್ಯತೆಗಳಿವೆ. ಚಲುಕ್ಯರ ಶಾಸನದಲ್ಲಿ 'ರಾಜಮಾನ' ಎಂಬುದು ಬಳಕೆಯಲ್ಲಿರುವುದು ಕಂಡುಬರುತ್ತದೆ. 'ಇಂದಿನ ಭಾರತೀಯ ಮಾನಕ ಸಂಸ್ಥೆ(ISI)ಯ ಅಧಿಕೃತ ಮಾನದಂತೆ ರಾಜನಿಂದ ಮಾನ್ಯತೆ ಪಡೆದ ಅಳತೆ ರಾಜಮಾನವಾಗಿರಬಹುದೆಂದು ಶೀಲಕಾಂತ ಪತ್ತಾರರು ಊಹಿಸಿದ್ದಾರೆ.[೧೧೯] ಶಾಸನಗಳು ಮೇಲಿಂದ ಮೇಲೆ 'ರಾಜಮಣ' ಎಂಬ ಅಳತೆಯ ಉಲ್ಲೇಖ ನೀಡಿರುವುದನ್ನು ಶ್ರೀ ಜ್ಯೋತ್ಸ್ನಾ ಬುರುಡೆಯವರು ಒಂದು ಆಡಳಿತದವರು ನಿರ್ದಿಷ್ಟಪಡಿಸಿದ ಅಳತೆ ಎಂದು ತೋರುತ್ತದೆ ಎಂದಿದ್ದಾರೆ.[೧೨೦] ಶಾಸನಗಳಲ್ಲಿ ಹೆಚ್ಚಾಗಿ ಭೂದಾನ ನೀಡಿದ ಸಂದರ್ಭದಲ್ಲಿ ಮತ್ತರುಗಳನ್ನು ದಾನ ನೀಡಿದ ಉಲ್ಲೇಖ ಕಂಡುಬರುತ್ತದೆ. ಈ ಮತ್ತರು ಅಳತೆಗೆ ಸಮಾನವಾದ ಆಧುನಿಕ ಅಳತೆಯನ್ನು ಗುರುತಿಸುವಲ್ಲಿ ವಿದ್ವಾಂಸರುಗಳಲ್ಲಿ ಒಮ್ಮತದ ಅಭಿಪ್ರಾಯವಿಲ್ಲ ಮತ್ತು ನಿಕರವಾಗಿ ಗುರುತಿಸಲು ಸಾಧ್ಯವಾಗದ ಹಿನ್ನಲೆಯಲ್ಲಿ ಎ.ಎಸ್.ಅಲ್ಟೇಕರ್ ಅವರ ಅಭಿಪ್ರಾಯಗಳನ್ನು ಸದ್ಯಕ್ಕೆ ಒಪ್ಪಲಾಗಿದೆ. ಎಂದು ಶೀಲಕಾಂತ ಪತ್ತಾರರು ಹೇಳುತ್ತಾರೆ. ಅಲ್ಟೇಕರರು ಮತ್ತರು ಅಥವಾ ಮತ್ತಲ ಮತ್ತು ನಿವರ್ತನ ಭೂಮಿಯ ಅಳತೆ ಮಾಪನಗಳು ೪ ಅಥವಾ ೫ ಎಕರೆಗೆ ಸಮ ಎಂದು ತಿಳಿಸಿದ್ದಾರೆ.[೧೨೧] ಆದರೆ ಕ್ರಿ.ಶ.೯೪೬ರ ಶಾಸನವು ಪನ್ನಿರ್ಮ್ಮತ್ತರು ಸಾವಿರಬಳ್ಳಿಯ ತೋಂಟಮುಮ ಕೊಟ್ಟರು ಎಂದಿದೆ.[೧೨೨] ಹನ್ನೆರಡು ಮತ್ತರಿನ ಭೂಮಿಯಲ್ಲಿ ಸಾವಿರ ಎಲೆ ಬಳ್ಳಿಯ ತೋಟವಿತ್ತು ಎಂದು ಶಾಸನವು ತಿಳಿಸಿದೆ. ಇದರಿಂದ ಇಂದಿಗೆ ಹೋಲಿಸಿದರೆ ಸಾವಿರ ಎಲೆಬಳ್ಳಿಯ ತೋಟ ಎರಡು ಎಕರೆಗಳಲ್ಲಿ ಕಂಡುಬರುತ್ತದೆ. ಇದರಿಂದ ಅಲ್ತೆಕರರ ಊಹೆಯನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಈ ಶಾಸನದ ಆಧಾರದ ಮೇಲೆ ಇಂದಿನ ಆರರಿಂದ ಹತ್ತು ಗುಂಟೆ ಒಂದು ಮತ್ತರಿರುವ ಸಾಧ್ಯತೆಗಳಿವೆ. ಕ್ರಿ.ಶ. ೯೧೧ರ ಶಾಸನದಲ್ಲಿ ನಾಗಲೇಶ್ವರ ದೇವಾಲಯಕ್ಕೆ ೪೦೦ ಮತ್ತರು ಭೂದಾನ ನೀಡಿದ ಉಲ್ಲೇಖವಿದೆ.[೧೨೩] ಕ್ರಿ.ಶ. ೯೩೧ರ ಶಾಸನದಲ್ಲಿ ರಾಜಮಾನ ಅಯ್ವತ್ತು ಮತ್ತರು ಉಲ್ಲೇಖವಿದೆ.[೧೨೪] ಕ್ರಿ.ಶ.೧೧ ಮತ್ತು ೧೨ನೆಯ ಶತಮಾನದ ಶಾಸನದಲ್ಲಿ ೧೮ ಗೇಣ ಕೋಲಿಂದಂ ೧೫೦೦ ಕಂಮ...... ಆ ಕೋಲಿಂದ ೨೫೦ ಕಮ್ಮ ಮಣ್ಣಂ ದಾನನೀಡಿದ ಉಲ್ಲೇಖವಿದೆ. ಸತ್ರಕ್ಕೆ ೧೮ ಮತ್ತರು, ದೇವರಿಗೆ ೫ ಮತ್ತರು, ಮಠಕ್ಕೆ ಎರೆಮತ್ತರು ೫ ಉಲ್ಲೇಖವಿದೆ.[೧೨೫] ಕ್ರಿ.ಶ. ೧೧೯೦ರ ಶಾಸನದಲ್ಲಿ ೩ ಮತ್ತರು, ೭೫೦ ಕಮ್ಮ ತೋಟ, ೭೫೦ ಕಮ್ಮ ಗದ್ದೆಯ ಉಲ್ಲೇಖವಿದೆ.[೧೨೬] ಕ್ರಿ.ಶ. ೧೧೭೭ರ ಶಾಸನದಲ್ಲಿ ಸತ್ರಕ್ಕೆ ೫ ಮತ್ತರು, ೫೦೦ ಕಮ್ಮಗದ್ದೆ, ಎರಡು ಮತ್ತರು ಎರೆಭೂಮಿ, ಕಾಯಿಮಕ್ಕನ ಭಾಗದ ಒಂದು ಮತ್ತರು ೪೫೦ ಕಮ್ಮ ದಾನ ನೀಡಿದನ್ನು ತಿಳಿಸಿದೆ.[೧೨೭] ಕ್ರಿ.ಶ. ೧೧೭೦ರ ಶಾಸನ ೧೦ ಮತ್ತರು ಉಲ್ಲೇಖಿಸಿದೆ.[೧೨೮] ಕ್ರಿ.ಶ.೧೧೦೮ರ ಶಾಸನದಲ್ಲಿ ಮಾವಿನ ತೋಂಟ ಮತ್ತರು ೨ ಕಮ ೨೨೫ ತೋಂಟವಟ್ಟು ಮತ್ತರು ೫ ಕಮ್ಮ ೬೭೫ ಕಿಸುಮತ್ತರು ೧ ಕಮ್ಮ ೧೦೦ ವಸುಗೆಯ ಕಿಸುಮತ್ತ೧ ಕಮ್ಮ ೧೦೦ ವೀಸಕದ ಮತ್ತರು ೪ ಗಳ ಉಲ್ಲೇಖವಿದೆ.[೧೨೯] ಕ್ರಿ.ಶ. ೧೦೨೪ರ ಶಾಸನದಲ್ಲಿ ಕಿರಿಯನೆಲ ೫೪ ಮತ್ತರು ೪೫೦ ಕಮ್ಮ ಭೂಮಿಯನ್ನು, ೪೫೦ ಕಂಬ ತೋಟ

ಬಿಟ್ಟಂತೆ ತಿಳಿಸಿದೆ.[೧೩೦] ಕ್ರಿ.ಶ. ೧೧೮೩ರ ಶಾಸನದಲ್ಲಿ ಹರಳಕೆಯಿ ಮತ್ತ೧ ಕಮ್ಮ ೪೫೦ ಯರೆಮತ್ತಂ೧ ಕಂಮ್ಮ ೪೫೦ ಕೆಂಗಾಡು ಮತ್ತ ಗದ್ದೆಕೆಮ್ಮ ೧೦೦ ಉಲ್ಲೇಖವಿದೆ.[೧೩೧] ಭೂಮಿಯ ವಿಧದ ಹೆಸರಿನಲ್ಲಿ ಮತ್ತರು ಮಾಪನ ಬಳಕೆಯಾಗಿರುವುದು ಕಂಡುಬರುತ್ತದೆ. ಕ್ರಿ.ಶ.೧೦೫೦ರ ಶಾಸನದಲ್ಲಿ ಕೋಗಳಿಯ ಗಳೆ ಮತ್ತರು ೧೨ ಎಂದಿದೆ.[೧೩೨] ಕ್ರಿ.ಶ. ೧೧೭೪ರ ಶಾಸನದಲ್ಲಿ ಎರೆ ಮತ್ತರು ಕೆಂಗಾಡು ಮತ್ತರು, ಎರೆ ಕಮ್ಮ ೨೨೦ರ ಉಲ್ಲೇಖವಿದೆ.[೧೩೩] ಕ್ರಿ.ಶ. ೧೨೦೬ರ ಶಾಸನದಲ್ಲಿ ಮಣಲುಮತ್ತರೊಂದರ ಉಲ್ಲೇಖವಿದೆ.[೧೩೪]

ಶಿವಮೊಗ್ಗದ ಶಾಸನವೊಂದರಲ್ಲಿ ಆರು ನಿವರ್ತನ ಭೂಮಿಯನ್ನು ಉಲ್ಲೇಖಿಸಿದೆ.[೧೩೫] ಕ್ರಿ.ಶ. ೧೧೧೫ರ ಶಾಸನವು ಗಳ್ದೆಗಳೆಯಲು ಮತ್ತರು ೨, ಬೆದ್ದಲು ಗಳೆಯ ಮತ್ತರು ೭ ಉಲ್ಲೇಖವಿದೆ.[೧೩೬] ಕ್ರಿ.ಶ. ೧೨೧೮ರ ಶಾಸನದಲ್ಲಿ ಎಳ್ಳುಕೆಯಿ ಕಂಬದ ಉಲ್ಲೇಖವಿದೆ.[೧೩೭] ಕ್ರಿ.ಶ. ೧೧ನೆಯ ಶಾಸನದಲ್ಲಿ ಗದ್ದೆಗಳೆಯ, ಸಾಲಕೆಯಿಗಳೆಯ ಮತ್ತಲೊನ್ದು ಬೆದ್ದಲೆಗಳೆಗಳ ಉಲ್ಲೇಖವಿದೆ.[೧೩೮] ಕ್ರಿ.ಶ. ೧೨೪೪ರ ಶಾಸನದಲ್ಲಿ 'ನಂದಿಯಗದೆ ಕೊಳಗದ ಉಲ್ಲೇಖವಿದೆ.[೧೩೯] ಕ್ರಿ.ಶ. ೧೧೭೭ರ ಶಾಸನವು ಗದ್ದೆಗಿಳಿಯ ಕಂಬ ೧೯೦, ಬೆದಲು ಕಂಬ ೩೪೫ ಬಡಗಕೆಯಿ ಕಂಬ ೧ ಎಂದಿದೆ.[೧೪೦] ಚಿಪ್ಪಗಿರಿಯ ಶಾಸನವೊಂದರಲ್ಲಿ ರಾಜಮಾನ ಅಯ್ವತ್ತು ಮತ್ತರ್ ಮತ್ತಮಂ ಬನ್ನಿರ್ಕ್ಕೊಳಗಮುಂಗಳ ಉಲ್ಲೇಖವಿದೆ.[೧೪೧] ಕ್ರಿ.ಶ. ೧೧೭೭ರ ಶಾಸನದಲ್ಲಿ ಕಿಸುಕಾಡು ಮತ್ತರ೨ ತಕ್ಕಲು ಮತ್ತರ್ ೨ ಕುದುರೆಗೆ ವೀಸ ೨ ಕಾಣಿ೨ ಹೊಂಗೆ ಸೊಳಸ೨ ಕೊಟ್ಟಲ್ಲಿ ಸೊಳಸ೨ ಉಲ್ಲೇಖವಿದೆ.[೧೪೨] ಕ್ರಿ.ಶ. ೧೯೪೯ರ ಶಾಸನದಲ್ಲಿ ೫೦ ನಿವರ್ತನ ಭೂಮಿಯನ್ನು ಮತ್ತು ಸಿದ್ದೇಶ್ವರ ದೇವರಿಗೆ ೩೦೦ ನಿವರ್ತನ ಭೂದಾನದ ಉಲ್ಲೇಖವಿದೆ.[೧೪೩]

ಕ್ರಿ.ಶ. ೧೧೩೩ರ ಶಾಸನದಲ್ಲಿ ಒಂದು ಸಿವನೆ ಭೂಮಿ ದಾನದ ನೀಡಿದ ಉಲ್ಲೇಖವಿದೆ.[೧೪೪] ಕ್ರಿ.ಶ. ೧೩–೧೪ನೆಯ ಶತಮಾನದಲ್ಲಿ ಒಂದು ಸಿವನೆ ತೆಲಿಗರು ಸಿವನೆ ೫೦ರ ಉಲ್ಲೇಖವಿದೆ.[೧೪೫] ಕ್ರಿ.ಶ. ೧೯೬ರ ಶಾಸನದಲ್ಲಿ ೩ ಶಿವನೆಯ ಉಲ್ಲೇಖವಿದೆ.[೧೪೬]. ಕ್ರಿ.ಶ. ೧೨೯೦ರ ಶಾಸನದಲ್ಲಿ ಒಂದು ಭರಣದ ಉಲ್ಲೇಖವಿದೆ.[೧೪೭] ಕ್ರಿ.ಶ. ೧೦೧೨ರ ಶಾಸನದಲ್ಲಿ ಗುಣಿಗನ ಮತ್ತರ್ ಉಲ್ಲೇಖವಿದೆ.[೧೪೮]

ಕ್ರಿ.ಶ. ೧೨೫೨ರ ಶಾಸನದಲ್ಲಿ ಗದ್ದೆ ಬೀಜವರಿ ಸ೧, ಬೆದ್ದಲು ಬೀಜವರಿ ಕೊ೧೦ರ ಉಲ್ಲೇಖವಿದೆ.[೧೪೯] ಕ್ರಿ.ಶ. ೧೨೭೨ರ ಶಾಸನದಲ್ಲಿ ಬೀಜವರಿಗದ್ದೆ ಸಲಗೆ೩ ಬೆದ್ದಲು ಬೀಜವರಿ ಸಲಗೆ೧ರ ನೀರೋತ್ತು ಬೆದ್ದಲು ಕಂಬದ ಉಲ್ಲೇಖವಿದೆ.[೧೫೦]

**ಧಾನ್ಯಗಳ ತೂಕ ಮತ್ತು ಅಳತೆಗಳು**

ರೈತರು ತಾವು ಬೆಳೆದ ಬೆಳೆಗಳನ್ನು, ಅದರ ಧಾನ್ಯಗಳನ್ನು ಅಳೆಯಲು ಮಾಪನಗಳನ್ನು ಬಳಸುತ್ತಿದ್ದರು. ಈ ಮಾಪನಗಳು ಪ್ರಾಚೀನ ಕಾಲದಿಂದ ಇಂದಿಗೆ ಹೋಲಿಸಿದರೆ ಭಿನ್ನವಾಗಿ ಕಂಡುಬರುತ್ತವೆ. ಅಂದರೆ ಕರೆಯುವ ಪರಿಭಾಷೆಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಪಲ್ಲ(೧೦೦ ಕೆ.ಜಿ.), ಮಣ(೧೨ ಅಥವಾ ೧೧ ಕೆ.ಜಿ.), ಗಿದ್ನ(೩ ಕೆ.ಜಿ), ಸೇರು(೧ ಕೆ.ಜಿ.), ಅಚ್ಚೇರು(ಅರ್ಧ ಕೆ.ಜಿ.), ಪಾವು(೧/೪ ಕೆ.ಜಿ.), ಅರ್ಪಾವು(೧೨೫ ಗ್ರಾಂ), ಚಟಾಕು(ಕಾಲು ಪಾವು). ಈ ಅಳತೆ ಮತ್ತು ತೂಕದ ಮಾನಗಳು ರೂಢಿಯಲ್ಲಿದ್ದು, ಕಳೆದ ೨೫ರಿಂದ ೩೦ ವರ್ಷಗಳಿಂದ ಕಣ್ಮರೆಯಾಗುತ್ತಿವೆ. ಕೆಲವು ಹಳ್ಳಿಗಳಲ್ಲಿ ಇಂದಿಗೂ ರೂಢಿಯಲ್ಲಿರುವುದು ಕಂಡುಬರುತ್ತದೆ. ಇಂದಿನ ಅಳತೆಮಾನಗಳು ಮೆಟ್ರಿಕ್‌ಟನ್(೧೦ ಟನ್) ಒಂದು ಟನ್‌ಗೆ ಹತ್ತು ಕ್ವಿಂಟಾಲ್, ಒಂದು ಕ್ವಿಂಟಾಲ್‌ಗೆ ನೂರು ಕೆ.ಜಿ,

ಒಂದು ಕೆ.ಜಿ.ಗೆ ಸಾವಿರ ಗ್ರಾಂ. ಹೀಗೆ ಈ ರೀತಿಯ ಅಳತೆ ಮಾನಗಳು ಪ್ರಸ್ತುತದಲ್ಲಿ ಜಾರಿಯಲ್ಲಿವೆ. ಪ್ರಾಚೀನ ಕಾಲದ ಶಾಸನಗಳಲ್ಲಿ ಧಾನ್ಯಗಳ ಅಳತೆ ಮತ್ತು ತೂಕಗಳಿಗೆ ಸಂಬಂಧಿಸಿದಂತೆ ಉಲ್ಲೇಖಗಳು ದೊರೆತಿವೆ. ಅವುಗಳನ್ನಿಲ್ಲಿ ಗಮನಿಸಲಾಗಿದೆ. ಕ್ರಿ.ಶ. ೭೩೨–೩೮ ಒಂದು ಶಾಸನದಲ್ಲಿ ಮಣ, ಸೇರು, ವೀಶ, ಭಾಂಡಪೇರುಗಳನ್ನು ಉಲ್ಲೇಖಿಸಿದೆ. ಮಣವನ್ನು(೧೧.೨ ಕಿಲೋ ಗ್ರಾಂ ಎಂದು ಕರೆಯುತ್ತಿರುವುದು), ಪೇರು(೬೪ ಸೇರಿನ ಒಂದು ಕಾಳಿನ ಮೂಟೆ), ವೀಶ, ವೀಸ, ವೀಸೆ ೧೭೫ ರೂ.ಗೆ ಸಮ ಅಥವಾ ೫ ಸೇರು. ಇದು ದಕ್ಷಿಣ ಕರ್ನಾಟಕದಲ್ಲಿ ಮೊನ್ನೆ ಮೊನ್ನೆಯವರೆಗೆ ಪ್ರಚಲಿತದಲ್ಲಿತ್ತು. ಭಾಂಡಪೇರು ಒಂದು ಬಂಡಿಯ ತೂಕದ ಅಳತೆಯಾಗಿದೆ.[೧೫೧] ಹಾನೆ[೧೫೨] ಸೇರು, ಮೊರ, (೮೭ ಘನ ಅಂಗುಲಗಳಷ್ಟು ಒಳ ಆಯವನ್ನುಳ್ಳ ಪಾತ್ರೆಗಳು ಎನ್ನಲಾಗಿದೆ) ಸಲ್ಲಡಕವು[೧೫೩] ಧಾನ್ಯ ಅಳೆಯುವ ಮಾನವಾಗಿದೆ. ಸಿದ್ದೆ.[೧೫೪]ಯು ಕೊಳಗದ ೧/೬ ನೆಯ ಭಾಗವಾಗಿದೆ, ಒಂದು ಮೂಡೆ– ೨೦ ಕೊಳಗ ಕೆಲವೊಂದು ಕಡೆ ೧೫ ಕೊಳಕ್ಕೆ ಸಮ. ಮೂಡೆ ಎಂದರೆ ಇದು ಹುಲ್ಲಿನಿಂದ ಗೋಲಾಕಾರವಾಗಿ ನಿರ್ಮಿಸಿ ಇಪ್ಪತ್ತು ಕೊಳಗ ಧಾನ್ಯ ಶೇಖರಿಸುವ ಸ್ಥಳವಾಗಿರುತ್ತದೆ. ಮೂಷಂಕ.[೧೫೫]ವು ಒಂದು ಬಗೆಯ ದ್ವಿದಳ ಧಾನ್ಯವಾಗಿದ್ದು, ತೂಕಕ್ಕಾಗಿ ಉಪಯೋಗಿಸುವ ಸಣ್ಣಕಾಯಿ. ಮುಡೆಗದ್ದೆ.[೧೫೬]ಯು ನಿರ್ಧಿಷ್ಟ ಭೂಮಿಯಲ್ಲಿ ಇಂತಿಷ್ಟು ಭತ್ತ ಬೆಳೆಯುವ ನಿರ್ಧಿಷ್ಟ ಭೂವಿಸ್ತಾರವನ್ನು ಹೊಂದಿದ ಭೂಮಿ. ಬೀಜವರಿ ಮೂಡೆ.[೧೫೭] ನಿರ್ದಿಷ್ಟ ಪ್ರಮಾಣದಲ್ಲಿ ಬೀಜ ಬಿತ್ತನೆ ಮಾಡುವ ಸಾಮರ್ಥ್ಯವುಳ್ಳ ಭೂಮಿಯಾಗಿದೆ.

ಕುಳ ಎಂಬುದು ಧಾನ್ಯದ ಅಳತೆಯಾಗಿದೆ. ಇದನ್ನು ಫ್ಲೀಟರು ೬೪ ಸೇರು ಅಥವಾ ೧೭.೨೮ ಕಿಲೋಗ್ರಾಂ ತೂಕದ ಅಳತೆಗೆ ಸಮವಾದ ಕೊಳಗ ಎಂದು ಗುರುತಿಸಿದ್ದಾರೆ.[೧೫೮] ಎಣ್ಣೆಯನ್ನು ಅಳೆಯಲು ಶಾಸನ ಉಲ್ಲೇಖಿಸುವಂತೆ ಸೊಂಟಿಗೆಯನ್ನು ಬಳಸಲಾಗುತ್ತಿತ್ತು. ಇದು ದ್ರವ ಪದಾರ್ಥಗಳನ್ನು ಅಳೆಯುವ ಮಾಪನವಾಗಿತ್ತು. ಶಾಸನಗಳಲ್ಲಿ ಗಾಣದವರಾದ ಗಾಣಿಗರು ದೇವರ ನಂದಾದೀವಿಗೆಗಳಿಗೆ ಸೊಂಟಿಗೆ ಎಣ್ಣೆದಾನ ನೀಡಿರುವ ಉಲ್ಲೇಖಗಳು ಕಂಡುಬರುತ್ತವೆ. ಕ್ರಿ.ಶ. ೭೧೮ರ ಶಾಸನವು ಸೊಂಟಿಗೆಯನ್ನು ದಾನ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ.[೧೫೯] ಡಾ.ಫ್ಲೀಟರು ಸೊಂಟಿಗೆ ಎಂಬುದು ಇಂದಿನ 'ಸವುಟು' ಎಂಬ ಅಳತೆಗೆ ಸಮ ಎಂದಿದ್ದಾರೆ.[೧೬೦] ಶಾಸನದಲ್ಲಿ ಕೊಳಗ, ಬಳ್ಳ, ಮಾನಗಳ, ಉಲ್ಲೇಖಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. 'ಕೊಳಗವು ಒಂದು ನಿರ್ದಿಷ್ಟ ಪ್ರಮಾಣದ ಕಂಠವಿರುವ ಪಾತ್ರೆಯನ್ನು ಸೂಚಿಸುತ್ತದೆ. ಭೂಮಿದಾನ ನೀಡುವಾಗ ಕೊಳಗಗಳ ಉಲ್ಲೇಖ ಬರುತ್ತದೆ. ಬೆದ್ದಲೆ ಕೊಳಗ ಎಂದರೆ ಒಂದು ಕೊಳಗ ಧಾನ್ಯವನ್ನು ಬಿತ್ತುವಷ್ಟು ಭೂಮಿ ಎಂದು ಭಾವಿಸಬೇಕಾಗುತ್ತದೆ.[೧೬೧] ಕೋಲುಗಳಿದ್ದಂತೆ ಕೊಳಗಗಳು ಇದ್ದವೆನ್ನುವುದಕ್ಕೆ ಧರ್ಮಗೊಳಗ, ದೇವಗೊಳಗ, ಜಕ್ಕಿಗೊಳಗ, ಗುಂಮೇಶ್ವರದಕೊಳಗ, ವೀರಂಗನ ಕೊಳಗ ಇವೆ ಮೊದಲಾದ ಕೊಳಗಗಳ ಉಲ್ಲೇಖ ಬರುತ್ತದೆ. ಕೊಳಗಗಳೂ ಸಹ ದೇವರ ಹೆಸರಿನಲ್ಲಿ ಊರಿನ ಹಿರಿಯರ ಹೆಸರುಗಳಲ್ಲಿ ಬಳಕೆಯಾಗಿರುವು ಕಂಡುಬರುತ್ತದೆ. ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿ ಈ ಕೊಳಗಗಳು ಕಂಡುಬರುತ್ತವೆ. ಕ್ರಿ.ಶ. ೧೦೩೪–೩೫ರ ಶಾಸನವು ದೇವಕೊಳಗ ಧರ್ಮಗೊಳಗವನ್ನು ಉಲ್ಲೇಖಿಸಿದೆ.[೧೬೨] ಕ್ರಿ.ಶ. ೧೧೧೭ರ ಶಾಸನದಲ್ಲಿ ಜಕ್ಕಿಗೊಳಗ ಧರ್ಮಗೊಳದನಗೊಳಗದ ಉಲ್ಲೇಖವಿದೆ.[೧೬೩] ದೇವಗೊಳಗವು ದೇವಾಲಯಕ್ಕೆ, ದೇವಾಲಯದ ಅರ್ಚಕ ಮೊದಲಾದವರಿಗೆ ಕೊಡುವ ದಾನವಾಗಿ ಕಂಡುಬರುತ್ತದೆ. ಚಿದಾನಂದಮೂರ್ತಿಯವರು ಡಿ.ಲಿಂಗಯ್ಯ ಅವರು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಗೆ ಬರೆದ ಬೋರೆದೇವರು ಎಂಬ ಲೇಖನದ ಸಾಲುಗಳನ್ನು ಉಲ್ಲೇಖಿಸಿದ್ದಾರೆ. ಇವು ದಕ್ಷಿಣ ಕರ್ನಾಟಕದ ಹಳ್ಳಿಗಳಲ್ಲಿ ಕಂಡುಬರುವ ಮಾತುಗಳಾಗಿವೆ. ಒಂದು ವರ್ಷಕ್ಕೆ ಊರಿನ ಪ್ರತಿಯೊಂದು ಕುಳವೂ ಅರ್ಚಕನಿಗೆ ಬತ್ತ, ರಾಗಿ ಮುಂತಾದ ದವಸಧಾನ್ಯ

ಕೊಡಬೇಕೆಂದು ಗೌಡರು ನಿಗದಿಮಾಡುತ್ತಾರೆ. ಇದಕ್ಕೆ ದೇವಗೊಳಗ ಎಂದು ಹೆಸರು.[೧೬೪] ಅಲ್ಲದೆ ದೇವಗೊಳವು ಒಂದು ಅಳತೆಯ ಮಾನದ ಜೊತೆಗೆ ಒಂದು ವ್ಯವಸ್ಥೆಯ ಹೆಸರಾಗಿ ಕಂಡುಬರುತ್ತದೆ ಎನ್ನುತ್ತಾರೆ ಚಿದಾನಂದಮೂರ್ತಿಯವರು.

ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ 'ಅಯ್ಗುಳ ಬೆದೆಗಜ್ಡೆಯ ಕೊಳಗ'ದ ಉಲ್ಲೇಖವಿದೆ.[೧೬೫] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ 'ಪದಿರ್ಕ್ಕೊಳಂ' ಉಲ್ಲೇಖವಿದೆ.[೧೬೬] ಕ್ರಿ.ಶ. ೧೨೪೩ರ ಶಾಸನದಲ್ಲಿ ಜೋಳಸಲಗೆ೧ ಎಳ್ಳುಸಲಗೆ೩ ಉಲ್ಲೇಖವಿದೆ.[೧೬೭] ಕ್ರಿ.ಶ. ೧೧೨೪ರ ಶಾಸನದಲ್ಲಿ ದೇವಗೊಳಗ ಧರ್ಮಗೊಳಗದ ಉಲ್ಲೇಖವಿದೆ.[೧೬೮] ಕ್ರಿ.ಶ. ೯೭೭ರ ಶಾಸನದಲ್ಲಿ ಒಕ್ಕಲೊಳೊನ್ದು ಪೊಜಿಯುಂ ಕಯುಂ ಪದಿರ್ಕ್ಕೊಳಂ ಭತ್ತಮಂ ಬಿಟ್ಟರೆಂದಿದೆ.[೧೬೯] ಕ್ರಿ.ಶ. ೯-೧೦ನೆಯ ಶತಮಾನದ ಶಾಸನದಲ್ಲಿ ನೆಲ್ಲುಕ್ಕಿ ಸೊಲ್ಲಗೆ ಬಿಟ್ಟರೆಂದಿದೆ.[೧೭೦] ಕ್ರಿ.ಶ.೧೦ನೆಯ ಶತಮಾನದ ಶಾಸನದಲ್ಲಿ ಇಕ್ಕೊಳಂಭತ್ತದ ಉಲ್ಲೇಖವಿದೆ.[೧೭೧] ಕ್ರಿ.ಶ. ೧೨೨೮ರ ಶಾಸನದಲ್ಲಿ ಹತ್ತುಮಾನ ಅಕ್ಕಿಯನ್ನು ದೇವರ ನೈವೇದ್ಯಕ್ಕೆ ಬಿಟ್ಟರೆಂದಿದೆ.[೧೭೨] ಹದಿನಾಲ್ಕು ಕೊಳಗ ಭತ್ತದ ಉಲ್ಲೇಖವಿದೆ. ಕ್ರಿ.ಶ. ೧೨ನೆಯ ಶತಮಾನದಲ್ಲಿ ಬತ್ತ ಸಲಗೆ ೪೦೦ ದಾನ ನೀಡಿದ ಉಲ್ಲೇಖವಿದೆ.[೧೭೩] ಕ್ರಿ.ಶ. ೧೦೮೮ರ ಶಾಸನದಲ್ಲಿ ರಾಜಾನ್ನದ ಅನ್ನ ಒಂದು ಕೊಳಗ ಒಂದು ಮಾನ ಹೆಸರು, ಒಂದು ಮಾನ ತುಪ್ಪ ೧೨ ಅಡಕೆ, ೨೪ ಎಲೆ ಉಲ್ಲೇಖವಿದೆ.[೧೭೪] ಧಾನ್ಯಗಳನ್ನು ಅಳೆಯಲು 'ಮಾನ' ಬಳಸುತ್ತಿದ್ದರು. ದ್ರವರೂಪವಲ್ಲದೆ ಘನರೂಪದ ವಸ್ತುಗಳನ್ನು ಅಳೆಯಲು ಬಳಸಿರುವುದು ಕಂಡುಬರುತ್ತದೆ. ಕ್ರಿ.ಶ. ೮೯೩-೯೪ರ ಶಾಸನದಲ್ಲಿ ಅರಮನಮಪ್ಪೆ ಕೂಟ್ಗೆ ಒರ್ಬ್ಬಳ್ಳ ಅರಮನಂ ಉಲ್ಲೇಖವಿದೆ.[೧೭೫] ಕ್ರಿ.ಶ. ೧೧೭೯ರ ಶಾಸನದಲ್ಲಿ ಕೊಳಗ ಜೋಳದ ಉಲ್ಲೇಖವಿದೆ.[೧೭೬] ಕ್ರಿ.ಶ. ೧೧೬೫ರ ಶಾಸನದಲ್ಲಿ ಸೊಟಿಗೆ ಭತ್ತವನೆತ್ತುವರು ನನ್ದಾದೀವಿಗೆಗೆ 'ಮಣ'ಎಂದಿದೆ.[೧೭೭] ಕ್ರಿ.ಶ. ೮೯೩-೯೪ರ ಶಾಸನದಲ್ಲಿ ಅರಮನಮಪ್ಪೆ ಕೂಟ್ಗೆ ಒರ್ಬ್ಬಳ್ಳ ಅರಮನಂ ಉಲ್ಲೇಖವಿದೆ.[೧೭೮] ಕ್ರಿ.ಶ. ೧೨-೧೩ನೆಯ ಶತಮಾನದ ಶಾಸನದಲ್ಲಿ ಹಸುಬೆಗೆ ಹತ್ತಿಡಕೆ ತೆಂಗಿನಕಾಯೊಂದು ತೂಕದ ಭಂಡಂಗಳಲ್ಯೆದು ಫಲವೊಂದುಗಳ ಉಲ್ಲೇಖವಿದೆ.[೧೭೯] ಐಹೊಳೆಯ ದುರ್ಗಗುಡಿಯ ಶಾಸನದಲ್ಲಿ ಸಲಗೆ, ಕುಳ, ಕುಳಗ, ಖಂಡುಗ, ಮಡಿ, ಸೊಂತಿಗೆ, ಮಣ ಉಲ್ಲೇಖಗೊಂಡಿವೆ. ಮಣ ೧೧.೨ ಕೆ.ಜಿ. ಪೇರು ೬೪೪ ಸೇರು, ವೀಸಂ ೫ ಸೇರು, ವೀಸವು ತೂಕಸಮಾನವಾಗಿಯೂ, ಹಣವಾಗಿಯೂ ಕಂಡುಬರುತ್ತದೆ. ೨೦೦ ವೀಸಗಳು ಒಂದು ಗದ್ಯಾಣ, ಒಂದು ವೀಸ ೨೦ ಎನ್ನಲಾಗಿದೆ.[೧೮೦] ಧಾನ್ಯದ ಅಳತೆಗೆ ಸಂಬಂಧಿಸಿದಂತೆ

ನಾಲ್ಕು ಗಿದ್ದ = ಒಂದು ಸೊಲ್ಲಿಗೆ

ನಾಲ್ಕು ಸೊಲ್ಲಿಗೆ = ಒಂದು ಮಾನ

ನಾಲ್ಕು ಮಾನ = ಒಂದು ಬಳ್ಳ

ನಾಲ್ಕು ಬಳ್ಳ = ಒಂದು ಕೊಳಗ

ಐದು ಕೊಳಗ = ಒಂದು ಪಂಚಕ

ನಾಲ್ಕು ಪಂಚಕ = ಒಂದು ಖಂಡುಗ.[೧೮೧]

ಸೊಲ್ಲಿಗೆಗಳನ್ನು ಎಣ್ಣೆ ಮೊದಲಾದ ದ್ರವ ಪದಾರ್ಥಗಳನ್ನು ಅಳೆಯಲು ಬಳಸಲಾಗುತ್ತಿತ್ತು. ಇದನ್ನು ಶಾಸನಗಳು ಉಲ್ಲೇಖಿಸಿರುವುದನ್ನು ಗಮನಿಸಲಾಗಿದೆ.

**ಕೋಲು**

ಭೂಮಿಯನ್ನು ಅಳೆಯಲು ಪ್ರಾಚೀನ ಕಾಲದಲ್ಲಿ ಕೋಲುಗಳು ಬಳಕೆಯಾಗುತ್ತಿದ್ದವು. ಅವು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದ್ದವು. ಆ ಭಿನ್ನತೆಯನ್ನು ಶಾಸನಗಳಲ್ಲಿ ಉಲ್ಲೇಖಗಳ ಮೂಲಕ ಗುರುತಿಸಬಹುದಾಗಿದೆ. ಕ್ರಿ.ಶ. ೯೪೫ರ ಶಾಸನದಲ್ಲಿ ತಂಬಳಕೋಲ, ೨೦೦ ನಿವರ್ತನ ಭೂದಾನದ ಉಲ್ಲೇಖವಿದೆ.[೧೮೨] ಕೊಪ್ಪಳದ ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿ ನಾಗದೇವನ ಸವಣ್ಣಾದ ಗಡಿಂಬ ಎಂದು ಉಲ್ಲೇಖಿಸಿದೆ.[೧೮೩] ಮೊದಲೇ ತಿಳಿಸಿದಂತೆ ಊರಿನ ಪ್ರಮುಖ ವ್ಯಕ್ತಿ ಅಥವಾ ಪ್ರಸಿದ್ಧ ವ್ಯಕ್ತಿಯ ಹೆಸರಿನಲ್ಲಿ ಕೋಲುಗಳನ್ನು ಬಳಸಿರುವುದು ಕಂಡುಬರುತ್ತದೆ. ಈತನು ದಾನ ಚಿಂತಾಮಣಿ ಬಿರುದಾಂಕಿತ ಅತ್ತಿಮಬ್ಬೆಯ ಪತಿ. ಇವನ ಹೆಸರಿನ ಕೋಲಿನ ಉಲ್ಲೇಖ ಈ ಶಾಸನದಲ್ಲಿ ಕಂಡುಬಂದಿದೆ. ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ದಾನ ನೀಡಿದ ಸೀಮೆಯನ್ನು ಉಲ್ಲೇಖಿಸುವಾಗ ಮೂಡಲು ೧೪ ಫಳೆ, ಬಡಗಲು ೪೭ ಫಳೆ, ಪಡವಲು ೧೪ ಫಳೆ, ತೆಂಕಲು ನೀಳದ ಫಳೆ ೪೭ ರ ಉಲ್ಲೇಖವಿದೆ.[೧೮೪] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ 'ನನ್ದಿಯ ಕೋಲು' ಕೊಟ್ಟು ನೆಲನುಂ ನೀಡಿದರು ಎಂದಿದೆ.[೧೮೫] ಕ್ರಿ.ಶ. ೧೧೭೫ರ ಶಾಸನದಲ್ಲಿ ಹಿರಿಯ ಕೋಲಗಡಿಂಬ ಎಂದಿದೆ.[೧೮೬] ಕ್ರಿ.ಶ. ೧೧೪೮ರ ಶಾಸನದಲ್ಲಿ ೩೨ ಗೇಣ ಕೋಲಲ್ಲಿ ಅಳೆದು ಭೂದಾನ ನೀಡಿದರೆಂದಿದೆ.[೧೮೭] ಕ್ರಿ.ಶ. ೧೩೦೩ರ ಶಾಸನದಲ್ಲಿ 'ಕಚ್ಚವಿಯಗಳೆ'ಯ ಉಲ್ಲೇಖವಿದೆ.[೧೮೮] ಕ್ರಿ.ಶ. ೧೦೬೩ರ ಶಾಸನದಲ್ಲಿ ಕತ್ಸವಿಯಗಳೆಯ ಮತ್ತರೊಂದು.[೧೮೯] ತ್ರಿಭುವನಮಲ್ಲನ ಶಾಸನದಲ್ಲಿ ಕಚ್ಚವಿಯಗಡಿಂಬದಲು ಉಲ್ಲೇಖವಿದೆ.[೧೯೦] ಈ ಅಳತೆಗೋಲುಗಳು ಪ್ರಾದೇಶಿಕವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಶಿವಮೊಗ್ಗ ಭಾಗದಲ್ಲಿ ಶಿವನೆ(ಸಿವನೆ) ಕಚ್ಚವಿಯಗಳೆಗಳು ಬಳಕೆಯಲ್ಲಿದ್ದುದು ಕಂಡುಬರುತ್ತದೆ. ಕ್ರಿ.ಶ. ೧೦–೧೧ನೆಯ ಶತಮಾನದ ಶಾಸನದಲ್ಲಿ ಹತ್ತು ಮಾರು ಫಳೆಯಲಳೆದು ಭೂಮಿಯನ್ನು ಬಿಟ್ಟರೆಂದಿದೆ.[೧೯೧] ಕ್ರಿ.ಶ. ೧೧೫೮ರ ಶಾಸನದಲ್ಲಿ ಗಂಗರಗಳೆಯಲು ಮತ್ತರೆರಡು ಗದ್ದೆ ಕಮ್ಮ ೨೫ರ ಉಲ್ಲೇಖವಿದೆ.[೧೯೨] ಕ್ರಿ.ಶ. ೧೨೫೧ರ ಶಾಸನದಲ್ಲಿ ಹದಿನಾರುಮೆಟ್ಟಿನಹಾಸಗಳೆಯ ಉದ್ದಳತೆಯ ಉಪಕರಣವನ್ನು ಉಲ್ಲೇಖಿಸಿದೆ.[೧೯೩] ಕ್ರಿ.ಶ. ೧೨೫೦ ಮತ್ತು ೧೨೫೧ರ ಶಾಸನದಲ್ಲಿ ಚದುರಸಗಳೆನೂಱಯ್ವತ್ತೆಂಟಕ್ಕಂ ಸಂದಗಳೆಯಲು ಕಂಬ ತೊಂಭತ್ತಯ್ದು ಎಂದಿದೆ.[೧೯೪] ಕ್ರಿ.ಶ. ೧೦೯೯ರ ಶಾಸನದಲ್ಲಿ ಪತ್ತು ಗೇಣಕೋಲು ಮತ್ತರೊಂದು, ಗುಣಿಗನ ಮತರ್ ಉಲ್ಲೇಖವಿದೆ.[೧೯೫] ಕ್ರಿ.ಶ. ೧೦೭೫ರ ಶಾಸನವು 'ಪ್ರವರ್ತ್ತನೆಯ ೩೩ಗೇಣಗಡಿಂಬ'ವನ್ನು ಉಲ್ಲೇಖಿಸಿದೆ.[೧೯೬]

ಕ್ರಿ.ಶ. ೧೯೯ರ ಶಾಸನದಲ್ಲಿ ನಾಗೇಶ್ವರದೇವನ ತೋಂಟ ಇರ್ಪ್ಪತ್ತು ಗೇಣಗಳೆಯಲ್ ಕುಳಿಯ ತೋಂಟಮತ್ತರ್ ಉಲ್ಲೇಖವಿದೆ.[೧೯೭] ಕ್ರಿ.ಶ. ೧೧೨೧ರ ಶಾಸನದಲ್ಲಿ ಕೊಳಗಭತ್ತ, ಉಲ್ಲೇಖವಿದೆ.[೧೯೮] ಕ್ರಿ.ಶ. ೧೧೪೮ರ ಶಾಸನದಲ್ಲಿ 'ಕೊಂಡಿಜೀವ ಗೋಮನ ಗಡಿಂಬ'ದ ಉಲ್ಲೇಖವಿದೆ.[೧೯೯] ಕ್ರಿ.ಶ. ೧೦೭೪ರ ಶಾಸನದಲ್ಲಿ 'ಮಣಿಕೇಶ್ವರದ ಕೋಲು' ಉಲ್ಲೇಖವಿದೆ.[೨೦೦] ಕ್ರಿ.ಶ. ೧೧೭೩ರ ಶಾಸನದಲ್ಲಿ ಮಾಣಿಕೇಶ್ವರದ ಕೋಲ ಉಲ್ಲೇಖವಿದೆ.[೨೦೧] ಕ್ರಿ.ಶ. ೧೧೨೦ರ ಶಾಸನದಲ್ಲಿ ೬೦ ಗಡಿಂಬದ ಕೋಲ ಉಲ್ಲೇಖವಿದೆ.[೨೦೨] ಕ್ರಿ.ಶ. ೧೦೩೩ರ ಶಾಸನದಲ್ಲಿ ದವಸಂದದ ಮತ್ತರ ಉಲ್ಲೇಖವಿದೆ.[೨೦೩] ದವಸದ ಹೆಸರಿನಲ್ಲಿ ಮತ್ತರನ್ನು ಈ ಶಾಸನವು ಉಲ್ಲೇಖಿಸಿದೆ. ಕ್ರಿ.ಶ.೧೧೦೦ರ ಶಾಸನದಲ್ಲಿ ಸಲಿಕೆಯ ಉಲ್ಲೇಖವಿದೆ.[೨೦೪] ಕ್ರಿ.ಶ. ೧೦೧೫ರ ಶಾಸನದಲ್ಲಿ ಭರಣದ ಕೋಲ ಉಲ್ಲೇಖವಿದೆ.[೨೦೫] ಕ್ರಿ.ಶ.೧೦೬೪ರ ಶಾಸನವು ಹಿರಿಯಗಡಿಂಬದ ಕೋಲನ್ನು ಉಲ್ಲೇಖಿಸಿದೆ.[೨೦೬] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಬಂಧುಚಿಂತಾಮಣಿಯ ಕೋಲಲ್ಲಿ ಭೂಮಿಯನ್ನು ಅಳೆದು ಕೊಟ್ಟರೆಂದಿದೆ.[೨೦೭] ಕ್ರಿ.ಶ. ೧೧೦೭ ಶಾಸನವು ೨೮ ಗೇಣಕೋಲನ್ನು ಉಲ್ಲೇಖಿಸಿದೆ.[೨೦೮] ಕ್ರಿ.ಶ.

೧೨೫೧ರ ಶಾಸನದಲ್ಲಿ ಬಾಚಿವಿಡಿಯ ಘಳೆಯಲ್ಲಿ ೬೪ ಮತ್ತರು ಎಂದಿದೆ.[೨೦೯] ಕ್ರಿ.ಶ.೧೩ನೆಯ ಶತಮಾನದ ಶಾಸನದಲ್ಲಿ ಬೆದೆಯಕೋಲು ಎಂದು ಉಲ್ಲೇಖಿಸಿದೆ.[೨೧೦] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ದಾನ ಚಿಂತಾಮಣಿಯ ಘಳೆಯಕೋಲು ಉಲ್ಲೇಖವಿದೆ.[೨೧೧] ಕ್ರಿ.ಶ. ೧೧೮೯ರ ಶಾಸನದಲ್ಲಿ ಗಡಿಂಬ ೩೨ರ ಗಳೆಯಲ್ಲಿ ಅಳೆದು ಭೂಮಿ ಹಾಗೂ ತೋಟದಾನ ನೀಡಿದ ಉಲ್ಲೇಖವಿದೆ.[೨೧೨] ಕ್ರಿ.ಶ. ೧೧೯೧ರ ಶಾಸನದಲ್ಲಿ ೨೭ ಗಳೆಯ ಉಲ್ಲೇಖವಿದೆ.[೨೧೩]

ಕ್ರಿ.ಶ. ೧೦೬೯ರ ಶಾಸನದಲ್ಲಿ ನಿಗರಮತ್ತರು ಉಲ್ಲೇಖವಿದೆ.[೨೧೪] ಕ್ರಿ.ಶ. ೧೧೧೯ರ ಶಾಸನದಲ್ಲಿ ಬೆಂಕೊಳ್ವನ ಕೋಲಲಿ ಅಳೆದು ನಾಲ್ಕು ಮತ್ತರು ಭೂಮಿಯನ್ನು ದಾನ ನೀಡಿರುವುದನ್ನು ತಿಳಿಸಿದೆ.[೨೧೫] ಕ್ರಿ.ಶ. ೧೦೭೬ರ ಶಾಸನವು ೪೨ ಗೇಣ ಗಳೆಯಲ್ಲಿ ಅಳೆದು ೫೦ ಕರಿಯ ನೆಲವನ್ನು ೨೦೦ ಕಮ್ಮ ಗದ್ದೆಯನ್ನು ದಾನ ನೀಡಿದ್ದನ್ನು ತಿಳಿಸಿದೆ.[೨೧೬] ಕ್ರಿ.ಶ. ೧೧೦೬ರ ಶಾಸನದಲ್ಲಿ ೩೬ ಗೇಣ ಗಳೆಯಲಿ ಅಳೆದು ಕರಿಯ ಭೂಮಿ ೩೪ ಮತ್ತರು ೨೦೦ ಕಮ್ಮ ಹೂದೋಟ ಬಿಟ್ಟಂತೆ ತಿಳಿದಿದೆ.[೨೧೭] ಕ್ರಿ.ಶ. ೧೧೩೮ರ ಶಾಸನದಲ್ಲಿ ನಿಗರಂಕೋಲು ೨ ಮತ್ತರು, ಕರಿಯಕೋಲು ಮತ್ತರು ೬ ಗದ್ದೆ ಒಂದು ಮತ್ತರು, ಕಂಬ ಕೋಲ ಮತ್ತರು ೨೦ ಎಂದಿದೆ.[೨೧೮]

ಕ್ರಿ.ಶ. ೧೧೯೫ರ ಶಾಸನದಲ್ಲಿ ಅಜಿಲೂರ ಪಾನ್ವೇಶ್ವರದ ಗಡಿಂಬ ಗಣ್ಡರಾದಿತ್ಯನ ಪಿರಿಯಕೋಲು ಉಲ್ಲೇಖವಿದೆ.[೨೧೯] ಕ್ರಿ.ಶ. ೧೧೨೧ರ ಶಾಸನದಲ್ಲಿ ಹದಿನಯ್ದು ಮಾರುಂಚೆ ತೋಳು ಘಳೆಯ ಉಲ್ಲೇಖವಿದೆ.[೨೨೦] ಕ್ರಿ.ಶ. ೧೦೪೫ರ ಶಾಸನದಲ್ಲಿ ಕೋಗಳಿ ಗಡಿಂಬದ ಉಲ್ಲೇಖವಿದೆ.[೨೨೧] ಕ್ರಿ.ಶ.೧೦೪೯ರ ಶಾಸನದಲ್ಲಿ 'ಕುಜಿತಕೊಂಟೆಯಕೋಲ್' ಉಲ್ಲೇಖವಿದೆ.[೨೨೨] ಕ್ರಿ.ಶ.೧೦೬೨ರ ಶಾಸನದಲ್ಲಿ ನಗರೇಶ್ವರದ ಗಡಿಂಬದಕೋಲ್ ಎಂದಿದೆ.[೨೨೩] ಕ್ರಿ.ಶ. ೧೦೭೮ರ ಶಾಸನದಲ್ಲಿ ಎಳರಾವೆಯ ತೀರ್ಥದಗಡಿಂಬ ಎಂದಿದೆ.[೨೨೪] ಕ್ರಿ.ಶ. ೧೦೪೦ರ ಶಾಸನವು ಬಂಟರಭಾವನಕೋಲ್ ಉಲ್ಲೇಖವಿದೆ.[೨೨೫] ಕ್ರಿ.ಶ. ೧೦೨೯ರ ಶಾಸನದಲ್ಲಿ ಮಲೆಪರಮಾರಿಯಕೋಲ್ ಎಂದಿದೆ.[೨೨೬] ಕ್ರಿ.ಶ. ೧೧೦೩ರ ಶಾಸನದಲ್ಲಿ ಮುಳುಗುಂದದ ಮಲ್ಲಹರ ಮಾರಿಯಕೋಲ್ ಎಂದಿದೆ.[೨೨೭]

ಮೇಲೆ ಉಲ್ಲೇಖಿಸಿದ ಕೋಲುಗಳು ಬೆದ್ದಲು, ನೀರಾವರಿ ಭೂಮಿಯನ್ನು ಅಳೆಯಲು ಬಳಸುತ್ತಿರುವ ವಿವಿಧ ಕೋಲುಗಳಾಗಿವೆ. ದೇವರ ಹೆಸರು, ವ್ಯಕ್ತಿಯ ಹೆಸರು, ಭೂಮಿಯ ಹೆಸರು, ಊರಿನ ಹೆಸರು, ಸಂಖ್ಯೆಯ ಹೆಸರು, ಈ ರೀತಿಯ ಅನೇಕ ವಿಧಗಳಲ್ಲಿ ಕಂಡುಬಂದಿವೆ. ಈ ಕೋಲುಗಳ ಸಹಾಯದಿಂದ ಭೂಮಿಯನ್ನು ಅಳೆಯುತ್ತಿದ್ದರು. ಅಳೆದ ಭೂಮಿಯನ್ನು ಅಳತೆಗೆ ಅನುಸಾರವಾಗಿ ಮತ್ತರು, ಕಮ್ಮ(ಕಂಬ) ಎಂದು ಗುರುತಿಸುತ್ತಿದ್ದರು.

ಒಂದು ಮತ್ತರಿಗೆ ೯೦೦ ಕಮ್ಮ ಇದನ್ನು 'ಕ್ರಿ.ಶ. ೧೧೯ರ ಶಾಸನವು ತಿಳಿಸುತ್ತದೆ. ಈ ಶಾಸನದಲ್ಲಿ ೪ ಮತ್ತರು ೩೧೦೦ ಕಮ್ಮ ಎಂದಿದೆ. ಒಟ್ಟು ಮೊತ್ತವನ್ನು ಹೇಳುವಾಗ ೭+ ಕಮ್ಮ ೪೦೦. ಅಂದರೆ ಮತ್ತರು ೪+೩೧೦೦, ಕಮ್ಮ, ಇದೇ ಶಾಸನದಲ್ಲಿ ಗಟ್ಟಿ ಗುಣಿಗನ ಮತ್ತರಿನ ಪ್ರಮಾಣವನ್ನು ಹೀಗೆ ಕೊಟ್ಟಿದೆ. ೨ ಮತ್ತರು + ಕಮ್ಮ ೧೯೩೫=ಮತ್ತರ್ ೪+ಕಮ್ಮ ೧೩೦. ಭೂಮಿಯ ಪ್ರಮಾಣವನ್ನು ಹೇಳುವಾಗ ೫ ಕಮ್ಮದಷ್ಟು ಹೆಚ್ಚು ಕಡಿಮೆಯಾಗಿದೆಯೆಂದು ಭಾವಿಸಿದರೆ ಒಂದು ಮತ್ತರು ೯೦೦ ಕಮ್ಮಗಳಿಗೆ ಸಮಾನವೆಂದು ಸ್ಪಷ್ಟವಾಗುತ್ತದೆ ಎಂದು ಚಿದಾನಂದಮೂರ್ತಿಯವರು ತಿಳಿಸಿದ್ದಾರೆ.[೨೨೮] ಸೊರಬ ತಾಲೂಕಿನ ಶಾಸನವೊಂದರಲ್ಲಿ ಒಂದು ಮತ್ತರು=೪ ಹಾದ, ೧ ಹಾದ=೨೫ ಕಂಬ, ೧ ಮತ್ತರು=೧೦೦ ಕಂಬ, ಹಾದ=ಪಾದ(೧/೪ ಮತ್ತರು) ಮತ್ತರಿಗೆ ೯೦೦, ಕಂಬ ೧೦೦ ಎಂಬ ಅಳತೆಗಳ ಭಿನ್ನ ಎಣಿಕೆ ಇದೆ.[೨೨೯]

ಬುಕನನ್ ಪ್ರಕಾರ ಒಂದು ಕಂಬವು ೪ ಎಕರೆಗೆ ಸಮ ಎಂದಿದ್ದಾರೆ. ಅಲ್ಟೇಕರರು ಒಂದು ಮತ್ತರು ೪ ರಿಂದ ೫ ಎಕರೆಗೆ ಸಮ ಎನ್ನುತ್ತಾರೆ. ಅಲ್ಟೇಕರರ ವಾದವನ್ನು ಶಿಲಕಾಂತ ಪತ್ತಾರರು ಸದ್ಯಕ್ಕೆ ಒಪ್ಪಬಹುದು ಎಂದಿದ್ದಾರೆ. ಆದರೆ ಶಾಸನದಲ್ಲಿಯೇ ಇವರ ಊಹೆಗಳಿಗೆ ಉತ್ತರವಿರುವಂತೆ ಕಂಡುಬರುತ್ತದೆ. ಹನ್ನೆರಡು ಮತ್ತರು ಸಾವಿರ ಎಲೆಬಳ್ಳಿಯ ತೋಟದ ಉಲ್ಲೇಖಗಳು ೬ ರಿಂದ ೧೦ ಗುಂಟೆ ಜಮೀನು ಒಂದು ಮತ್ತರಿರುವ ಸಾಧ್ಯತೆ ಇದೆ ಎಂದು ತಿಳಿಸುತ್ತದೆ. ಮತ್ತರು ಭೂಮಿಯ ಪ್ರಮಾಣವೇ ಇಷ್ಟು ಇರುವಾಗ ಇನ್ನು ಕಂಬವು ಇಂದಿನ ೪ ಎಕರೆಗೆ ಸಮ ಎಂಬ ಮಾತನ್ನು ಒಪ್ಪಲು ಸಾಧ್ಯವಿಲ್ಲ. ಅಲ್ಲದೆ ಶಾಸನಗಳಲ್ಲಿ ದಾನ ನೀಡಿದ ಭೂಮಿಯ ಪ್ರಮಾಣ ೪೦೦ ಕಮ್ಮ, ೩೦೦ ಕಮ್ಮಗಳಷ್ಟು, ಭೂದಾನ ನೀಡಿರುವುದನ್ನು ಗಮನಿಸಿದರೆ, ೧೨೦೦, ೩೨೦೦ ಎಕರೆಗಳಷ್ಟು ಭೂಮಿಯನ್ನು ದಾನ ನೀಡಲು ಸಾಧ್ಯವೇ ಎಂಬ ಪ್ರಶ್ನೆ ಬರುತ್ತದೆ. ಪ್ರಾಚೀನ ಕಾಲದಲ್ಲಿ ಒಂದು ಹಳ್ಳಿಗೆ ಇಷ್ಟೊಂದು ಭೂಮಿಯು ಸಾಗುವಳಿಗೆ ಒಳಪಟ್ಟಿತ್ತೆ ಎಂಬುದೇ ಸಂದೇಹ ಉಂಟು ಮಾಡುತ್ತದೆ. ಕೆಲವೊಮ್ಮೆ ಹಳ್ಳಿಗಳನ್ನೇ ದಾನ ಮಾಡಿರುವುದಿದೆ. ಆದರೆ ಇಷ್ಟೊಂದು ದೊಡ್ಡಮಟ್ಟದ ಭೂದಾನವು ಇತ್ತೆಂಬುದನ್ನು ಊಹಿಸಲು ಸಾಧ್ಯವಾಗುವುದಿಲ್ಲ.

**ಹೇಜುಗಳು**

ಸಂತೆ ಅಥವಾ ಮಾರಾಟ ಸ್ಥಳಗಳಲ್ಲಿ ಹೇಜುಗಳಿಗೆ ಸುಂಕ ವಿಧಿಸಲಾಗುತ್ತಿತ್ತು. ಹೇರುಗಳಿಗೆ ಅನುಸಾರವಾಗಿ ಸುಂಕ ನಿಗದಿಯಾಗುತ್ತಿತ್ತು. ಇದಲ್ಲದೆ ಹೊರೆಯ ಲೆಕ್ಕದಲ್ಲೂ ಅಳೆಯುವ ಪದ್ಧತಿ ರೂಢಿಯಲ್ಲಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಎಣಿಕೆಯ ಮೂಲಕ ವಸ್ತುವಿನ ಮೌಲ್ಯ ಗುರುತಿಸುವುದೂ ಸಹ ಕಂಡುಬರುತ್ತದೆ. ಕ್ರಿ.ಶ. ೮ನೆಯ ಶತಮಾನದ ಶಾಸನದಲ್ಲಿ ಒಂದು ಹೇರಿಗೆ ಒಮ್ಮಾನ, ಬಣ್ಡಿಯ ಹೇರಿಗೆ ೫ ವೀಸ ಎಲೆಯ ಹೇರಿಗೆ ಅಯ್ವತ್ತು ದಾನ ನೀಡಿದ ಉಲ್ಲೇಖವಿದೆ.[೨೩೦] ಕ್ರಿ.ಶ. ೧೨೬೭ರ ಶಾಸನದಲ್ಲಿ ಹತ್ತಿಯ ಹೇಜು, ಬೆಲ್ಲದ ಹೇಜು ದವಸದ ಹೇಜು ೨೦ಕೆ ಪಣ ೧ ಅಡಕೆಯ ಹೇಜು ೧೦ಕೆ ಪಣ ೨ ಮೆಣಸಿನ ಹೇಜು ೧೦ಕೆ ಪಣ ೨, ಏಲಕ್ಕಿಯ ಹೇಜು ೧೦ಕ್ಕೆ ಪಣ ೧, ಎತ್ತಿನ ಹೇಜು ಕತ್ತೆ ಹೇಜು, ಎಲೆಯ ಹೇಜುಗಳ ಉಲ್ಲೇಖವಿದೆ.[೨೩೧]

ಕ್ರಿ.ಶ. ೧೧೫೪ರ ಶಾಸನದಲ್ಲಿ ವ್ಯಾಪಾರಿಗಳು ಗವರೇಶ್ವರ ದೇವರಿಗೆ ತಾವು ಅಳೆಯುವ, ತೂಗುವ, ಎಣಿಸುವ ಸಮಸ್ತ ಧಾನ್ಯವನ್ನು ಮಾರಿದಲ್ಲಿ ಚಿನ್ನದ ಕಾಣಿ ಎರಡು ಸೀರೆಯ ದಿಂಡಿನ ಬಂಡಿಯೊಂದಕ್ಕೆ ಒಂದು ಪಣ, ಎತ್ತಿನ ಮೇಲಿನ ಮಳವೆಗೆ ೫ ವೀಸ, ಕತ್ತೆಯ ಮೇಲಿನ ಮಳವೆಗೆ ಎರಡುವೀಸ ತಲೆಯ ಮೇಲೆ ತರುವ ಜವಳಿಯ ಸೀರೆಗೆ ಒಂದು ವೀಸ ಕೊಡಬೇಕೆಂದಿದೆ.[೨೩೨] ಕ್ರಿ.ಶ. ೧೦೫೯ರ ಶಾಸನದಲ್ಲಿ ಹೇರಿಗೆ ನೂರು ಎಲೆ ಅಂದಳಕ್ಕೆ ೫೦ ಎಲೆಗಳನ್ನು ಬಿಟ್ಟ ಉಲ್ಲೇಖವಿದೆ.[೨೩೩] ಸೋಗಿಯ ಶಾಸನವೊಂದರಲ್ಲಿ ಕಂಬ ೨೪೦, ಬತಪಲ್ಲ ಹೇಜೆಂಗೆ ೧೦೦ ಹೇಜೆಂಗೆ ೫೦ಗಳ ಉಲ್ಲೇಖವಿದೆ.[೨೩೪] ಕ್ರಿ.ಶ. ೧೧೨೭ರ ಶಾಸನದಲ್ಲಿ ಅರವಂಟಿಗೆಗೆ ಬಿಟ್ಟದಾನವೆಂದರೆ ಪೇಳಿಯಲು ಪಣವಯ್ದು ಕಾರಡಕೆ ಮೊಳಸಿನ ಪೇಜೆಂಗೆ ಅರೆವೀಸ ದವಸದ ಪೇಜೆಂಗೆಯೊಟ್ಟಿಂಗೆ ಹಾಗವಂ ಎಂದಿದೆ.[೨೩೫] ಕ್ರಿ.ಶ. ೧೦೭೯ರ ಶಾಸನದಲ್ಲಿ ಅಡಕೆಯ ಒಂದು ಎಲೆಯ ಹೇರಿಗೆ ಒಂದು ಕಾಣಿ ಉಲ್ಲೇಖವಿದೆ. ಉಳಿಗೆ ಪಾಗ, ಏಣಿಗಪಾಗ ಕ್ರಿ.ಶ. ೧೧೦೩ರ ಶಾಸನದಲ್ಲಿ ಎಲೆಯ ಹೇರಿನ ಸುಂಕ ೧೨ ಪಣ ಎಲೆಯ ಪೇಜೆಂಗೆಯೊಂದು ವೀಸ ತಲೆವೊಜಿಗೆಯರ ವೀಸಮಂ ಎಂದಿದೆ.[೨೩೬]

ಕ್ರಿ.ಶ. ೧೧೧೫ರ ಶಾಸನದಲ್ಲಿ ಲಾವಣಿಗೆಯಪಾಗ ಎಂದಿದೆ.[೨೩೭] ಕ್ರಿ.ಶ.೧೧೫೩ರ ಶಾಸನದಲ್ಲಿ ನೆಲ್ಲಕ್ಕಿ ಕೊಳಗ ೧ ಬಳ್ಳ ಎನ್ದಿರುಮಾನಂ ೨ ಸೊಳಸೆ ಅಳೆ ಬಳ್ಳ ೩ ಬಾಡು ಕಾಯ್ಗೆ ವೀಸ ೧ ಅಡಕೆ ೨೫, ಎಲೆ ೫೦ ಉಲ್ಲೇಖವಿದೆ.[೨೩೮] ಕ್ರಿ.ಶ.೧೨೦೨ರ ಶಾಸನದಲ್ಲಿ ತಲೆವೊಜಿಗೆ ೫, ಎಲೆ ಹೇಜೆಂಗೆ

೧೦೦, ಉಪ್ಪು ಹೇಜಿಂಗೆ ಮಾನ ೨, ಅಕ್ಕಿ ಬತ್ತ ಹೇಜುಂಗೆ ಮಾನ ೨, ಎಣ್ಣೆ ಕೊಡಕ್ಕೆ ೨ ಉಲ್ಲೇಖವಿದೆ.[೨೩೯] ಕ್ರಿ.ಶ.೧೨೪೦ರ ಶಾಸನದಲ್ಲಿ ಬಂಡಿಭತ್ತ ಪಡಿ ಅಡಕೆಯ ಕೊ ೧ ಹೇಜಿಂಗೆ ಬ ೧ ಎಣ್ಣೆಕೊಡಕ್ಕೆ ಸೊ ೨ ಹೇಜಿಂಗೆ ಅಡಕೆ ೧೦ ಹೇಜಿಂಗೆ ಎಲೆ ೧೦೦ ಎತ್ತು ೩೦೦ ಉಲ್ಲೇಖವಿದೆ.[೨೪೦]

ಧಾನ್ಯ, ಭೂಮಿ ಮೊದಲಾದ ಕೆಲವು ವಸ್ತುಗಳನ್ನು ತೂಕ ಮತ್ತು ಅಳತೆಯ ಮೂಲಕ ಅಳೆಯುತ್ತಿದ್ದರು. ಮತ್ತೆ ಕೆಲವು ವಸ್ತುಗಳನ್ನು ಎಣಿಕೆಯ ಮೂಲಕ ಅದಕ್ಕೆ ಬೆಲೆಯನ್ನು ನಿಗದಿಪಡಿಸಲಾಗುತ್ತಿತ್ತು. ಇಂತಹ ವಸ್ತುಗಳ ವ್ಯಾಪಾರವು ಸಾಮಾನ್ಯವಾಗಿ ಪ್ರಾಚೀನ ಕಾಲದಲ್ಲಿ ನಿಶ್ಚಿತ ಸಂತೆಗಳಲ್ಲಿ ನಡೆಯುತ್ತಿತ್ತು. ಸಂತೆಗೆ ಬಂದ ವಸ್ತುಗಳು ಬಂಡಿಯಲ್ಲಿ, ಕತ್ತೆಯ ಮೇಲೆ, ತಲೆಯ ಮೇಲೆ ಕೋಣದ ಮೇಲೆ ತರಲಾಗುತ್ತಿತ್ತು. ಹೀಗೆ ತಂದಾಗ ಅದಕ್ಕೆ ತಕ್ಕಂತೆ ಬೆಲೆ ನಿಗದಿಯಾಗುತ್ತಿತ್ತು. ಎಲೆಗಳನ್ನು ಎಣಿಕೆ ರೂಪದಲ್ಲಿ, ಹೇಜಿನ ರೂಪದಲ್ಲಿಯೂ ಮಾರಾಟ ಮಾಡಲಾಗುತ್ತಿತ್ತು. ನೂರು ಎಲೆ ಕಟ್ಟು, ಕವಳಿಗೆ ಹೊಜಿ ಮೊದಲಾಗಿ ಮಾರಲಾಗುತ್ತಿತ್ತು. ಎಲೆಯ ಹೇಜೆಗೆ ೧೦೦, ಹೊರೆಗೆ ೫೦ನ್ನು ಸುಂಕ ವಿಧಿಸಿರುವುದು ಮೇಲೆ ತಿಳಿಸಿದ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ತೆಂಗಿನಕಾಯಿಗಳನ್ನು ಎಣಿಕೆಯ ಲೆಕ್ಕದಲ್ಲಿ ಮಾರಲಾಗುತ್ತಿತ್ತು. ಇಂದಿಗೂ ಈ ಕ್ರಮ ಬಳಕೆಯಲ್ಲಿದೆ. ಅಲ್ಲದೆ ಭಂಡ ಪೇರುಗಳು ಬಂಡಿಯಲ್ಲಿ ಬರುವ ವಸ್ತುಗಳನ್ನು ಸೂಚಿಸುತ್ತವೆ. ಇದು ಒಂದು ಬಂಡಿಗೆ ಸಮಾನವಾದ ಹೊರೆಯಾಗಿದೆ. ಅಡಿಕೆಗೆ ಎತ್ತಿನ ಹೊರೆಯ ಲೆಕ್ಕದಲ್ಲಿ ಹಾಕಲಾಗುತ್ತಿತ್ತು. ಇದನ್ನು ಕ್ರಿ.ಶ. ೧೨೮೭ರ ಶಾಸನವು ತಿಳಿಸುತ್ತದೆ.[೨೪೧] ಅಡಕೆಯನ್ನು ಸಾಗಾಟ ಮಾಡುವಾಗ ಚೀಲಗಳಲ್ಲಿ ತುಂಬಿ ಸಾಗಿಸುತ್ತಿದ್ದರು. ಹಸುಬೆಯ ಚೀಲದ ಲೆಕ್ಕದಲ್ಲಿ, ಹೇಜಿನ ಲೆಕ್ಕದಲ್ಲಿಯೂ ತೆರಿಗೆ ಹಾಕಲಾಗುತ್ತಿತ್ತು. ಅಲ್ಲದೆ ಹೆಡಗೆ(ಒಂದು ಬುಟ್ಟಿ ಅಥವಾ ಪುಟ್ಟಿ) ತರಕಾರಿಗೆ ಒಂದು ಹಿಡಿಯಷ್ಟು ತೆರಿಗೆ ಹಾಕಿದುದನ್ನು. ಕ್ರಿ.ಶ. ೧೧೯೭ರ ಶಾಸನವು ತಿಳಿಸುತ್ತದೆ.[೨೪೨] ಪಿ.ವಿ.ನಾರಾಯಣರವರು ಹೆಡಗೆ ಮತ್ತು ಮೊರ ತೆರಿಗೆಯು ಅನಧಿಕೃತ ತೆರಿಗೆಯಾಗಿರಬೇಕು. ಏಕೆಂದರೆ ಹೆಡಗೆಗೆ ತೆರಿಗೆ ವಸೂಲು ಮಾಡುತ್ತಿದ್ದರು ಎಂದು ಅಭಿಪ್ರಾಯ ಪಡುತ್ತಾರೆ.[೨೪೩]

ಇಂದಿಗೂ ಸಂತೆಯಲ್ಲಿ ಮಾರುವ ತರಕಾರಿಗಳಿಗೆ 'ಜಕಾತಿ'ಯನ್ನು ಎತ್ತಲಾಗುತ್ತದೆ. ಈ ರೀತಿ ಜಕಾತಿ ವಸೂಲು ಮಾಡುವಾಗ ಒಂದು ತಟ್ಟೆ ಅಥವಾ ಒಂದು ಪುಟ್ಟ ಚೀಲಗಳಿಗೆ ಇಂತಿಷ್ಟು ನಿಗದಿ ಮಾಡಿ ವಸೂಲಿ ಮಾಡಲಾಗುತ್ತದೆ. ಈ ಹಣವು ಊರಿನ ದೇವಾಲಯ ಅಥವಾ ಪಂಚಾಯ್ತಿಗೆ ಸಲ್ಲುತ್ತದೆ. ಈ ಹಣದಲ್ಲಿ ಊರಿನ ಸ್ವಚ್ಛತೆ ಅಥವಾ ಧಾರ್ಮಿಕ ಕಾರ್ಯ ಮೊದಲಾದವುಗಳಿಗೆ ವಿನಿಯೋಗಮಾಡಲಾಗುವುದು. ಹಣ್ಣು ಹಂಪಲು, ತೆಂಗಿನಕಾಯಿ, ಕಬ್ಬು, ಅಡಿಕೆ, ಕಾಯಿಪಲ್ಯ, ವೀಳ್ಯೆದೆಲೆ, ಅಡಿಕೆ ಇತ್ಯಾದಿಗಳನ್ನು ಸೂಡಿಗಳಾಗಿ ಮಾರುತ್ತಿದ್ದರು. ವಡ್ಡಾರಾಧನೆಯು ಬಳ್ಳ ಚಿಕ್ಕಅಳತೆ, ಮತ್ತು ಖಂಡುಗ ದೊಡ್ಡದೆಂದು ತಿಳಿಸಿದೆ.[೨೪೪]

ಅರ್ಥಶಾಸ್ತ್ರಕಾರನು 'ಒಂದುಪಲ, ನೂರುಪಲ, ಇಪ್ಪತ್ತುತೊಲ, ಒಂದುಭಾರ, ಹತ್ತುಧರಣ ಇವುಗಳನ್ನು ಆಯಾಮಾನೀ ಎಂದು ಕರೆದಿರುವನು(ಇವುಗಳು ಆಯಗಳಾಗಿದ್ದು, ಇವುಗಳನ್ನೆ ತೂಕ ಮಾಡುವುದರಿಂದ ಈ ಹೆಸರು ಬಳಕೆಗೊಂಡಿದೆ). ಇವನು ಅಳತೆಗಳನ್ನು ಮತ್ತು ಅವುಗಳ ವಿಶೇಷಣಗಳನ್ನು ಮೂರು ರೀತಿಯಲ್ಲಿ ಗುರುತಿಸಿರುವನು. ವ್ಯವಹಾರಿಕ(ಇದು ಸಾಮಾನ್ಯ ಜನರು ಕ್ರಮ ವಿಕ್ರಯಗಳಿಗೆ ಬಳಸುವ ತ್ರಾಸು. ಇದು ತೊಂಭತ್ತೈದು ಪಲ. ಅಂತಃಪುರ ಭಾಜಿನಿ(ಅಂತಃಪುರದ ಜನರಿಗೆ ಸಾಮಾನುಗಳನ್ನು ತೂಗುವ ತ್ರಾಸು. ಇದು ಎಂಭತ್ತೈದುಫಲವಾಗಿತ್ತು. ಬಾಜಿನಿಯು ಸೇವಕ ವರ್ಗಕ್ಕೆ ಸಾಮಾನು ತೂಗಿಸುವ ತ್ರಾಸು, ಇದು

ತೊಂಭತ್ತು ಪಲವಾಗಿತ್ತು. ಇವುಗಳ ಪಲವು ಆಯಾ ಮಾನಿಗಿಂತ ಅರ್ಧ ಧರಣದಿಂದ ಒಂದಕ್ಕಿಂತ ಮತ್ತೊಂದು ಕಡಿಮೆ ಗೊಂಡಿರುವುವು.[೨೪೫] ಹತ್ತುಧರಣ ಒಂದುಪಲ ಆಯಮಾನೀ, ಒಂಭತ್ತೂವರೆ ಧರಣ ಒಂದು ಪಲ ವ್ಯವಹಾರಕೀ, ಒಂಭತ್ತು ಧರಣ, ಒಂದು ಪಲ ಭಾಜಿನೀ, ಎಂಟೂವರೆ ಧರಣ ಒಂದು ಪಲ ಅಂತಃಪುರ ಭಾಜಿನೀ, ಈ ತ್ರಾಸುಗಳು ಉದ್ದದಲ್ಲಿ ಆರು ಅಂಗುಲದಷ್ಟು, ತೂಕದಲ್ಲಿ ಎರಡು ಪಲ ಲೋಹಗಳಷ್ಟೂ ಒಂದಕ್ಕಿಂತ ಮತ್ತೊಂದು ಕ್ರಮವಾಗಿ ಕಡಿಮೆ ಇರುತ್ತವೆ. ಪರಿಮಾಣೀ ಮತ್ತು ಆಯಮಾನಿಗಳೆಂಬ ತ್ರಾಸುಗಳಲ್ಲಿ ತೂಗಿದಾಗ ಶೇಕಡ ಐದು ಪಲ ಪದಾರ್ಥಗಳನ್ನು ರಾಜಭಾಗ(ಪ್ರಯಾಮ)ವನ್ನಾಗಿ ಕೊಡಬೇಕು.[೨೪೬]

ಇನ್ನೂರು ಮಾಷಧಾನ್ಯಗಳ ಪಲ ಒಂದು ದ್ರೋಣ(ಇದೊಂದು ಆಯಮಾನ ಅಥವಾ ರಾಜಾದಾಯದ ಒಂದು ಅಳತೆ). ಒಂದು ನೂರ ಎಂಬತ್ತೇಳೂವರೆ ಪಲ ಒಂದು ವ್ಯವಹಾರಿಕ ದ್ರೋಣ. ಒಂದು ನೂರ ಎಪ್ಪತ್ತೈದು ಪಲ ಒಂದು ವ್ಯವಹಾರಿಕದ್ರೋಣ. ಒಂದು ನೂರಎಪ್ಪತ್ತೈದು ಪಲ ಭಾಜನೀಯ ದ್ರೋಣ. ಒಂದು ನೂರ ಅರವತ್ತೆರಡು ಪಲ, ಒಂದು ಅಂತಃಪುರ ಭಾಜನೀಯ, ದ್ರೋಣದ ೧/೪ ಭಾಗ ಅಡಕ, ಅಡಕದ ೧/೪ ಭಾಗ ಪ್ರಸ್ಥ, ಪ್ರಸ್ಥದ ೧/೪ ಭಾಗ ಕುಡುಬ, ಹದಿನಾರುದ್ರೋಣ ಒಂದುಖಾರೀ, ಇಪ್ಪತ್ತುದ್ರೋಣ ಒಂದುಕುಂಭ, ಹತ್ತುಕುಂಭ ಒಂದು ವಹ.[೨೪೭] ಇಂದಿಗೂ ಹೆಚ್ಚಾಗಿ ಮಳೆ ಬಂದಾಗ ಕುಂಭದ್ರೋಣ ಮಳೆ ಎಂದು ಕರೆಯುವುದಿದೆ. ಒಂದುಕಾಲು ಪಣ ಒಂದು ದ್ರೋಣ, ಮುಕ್ಕಾಲುಪಣ ಒಂದುಅಡಕ, ಆರುಮಾಷ–ಒಂದುಪ್ರಸ್ಥ, ಒಂದುಮಾಷ ಒಂದು ಕಡುಬ ತಕ್ಕಡಿಯು ಆರೂ ಮುಕ್ಕಾಲು ಪಣ ಎಂದಿದೆ.[೨೪೮] ಶಾಸನಗಳಲ್ಲಿ ತಿಳಿಸುವಂತೆ ಇಲ್ಲಿಯೂ ಎಣ್ಣೆಯನ್ನಳೆಯಲು ಮಾನವನ್ನು ಬಳಸಿರುವುದು ಕಂಡುಬರುತ್ತದೆ.

ಅಳತೆಮಾನಗಳನ್ನು ಮಾಡಿಸುವಾಗ ತಳಭಾಗ ಮತ್ತು ಮೇಲ್ಭಾಗ ಒಂದೇ ಸಮನಾಗಿರಬೇಕು. ಒಣಮರದಿಂದ ಅಳತೆ ಪಾತ್ರೆಗಳನ್ನು ಮಾಡಿಸಬೇಕು. ನಾಲ್ಕು ಭಾಗದಲ್ಲೂ ಧಾನ್ಯಗಳು ಅಡಕಗೊಳ್ಳುವಂತಿರಬೇಕು. ಎಣ್ಣೆ ತುಪ್ಪ ಮೊದಲಾದವುಗಳನ್ನು ಅಳೆಯುವಾಗ ಅಳತೆ ಪಾತ್ರೆಯ ಬಾಯಿಗೆ ಸಮನಾಗಿ ಅಳೆಯಬೇಕು.[೨೪೯] ಅರ್ಥಶಾಸ್ತ್ರಕಾರನು ಹೀಗೆ ಹೇಳಿರುವುದನ್ನು ಗಮನಿಸಿದರೆ, ಅಳತೆಗಳಲ್ಲಿ ಮೋಸಗಳು ಜರುಗುತ್ತಿದ್ದವೆನ್ನಿಸುತ್ತದೆ. ಹೀಗೆಯೇ ಅಳತೆ ಪಾತ್ರೆಗಳಿರಬೇಕು ಮತ್ತು ಹೀಗೆಯೇ ಅಳೆಯಬೇಕೆಂದು ಸೂಚಿಸಿರುವುದು ಈ ಅಂಶಗಳನ್ನು ಗಮನಿಸಿದಾಗ ತಿಳಿಯುತ್ತದೆ. ಹಾಗೆಯೇ ಅಳತೆಯ ಸಾಧನಗಳನ್ನು ನಾಲ್ಕು ತಿಂಗಳಿಗೆ ಒಮ್ಮೆಯಾದರೂ ಪರೀಕ್ಷಿಸಬೇಕು. ಇಲ್ಲವಾದರೆ ೨೭ ೧/೪ ದಂಡ ಎಂದು ಅರ್ಥಶಾಸ್ತ್ರಕಾರ ಉಲ್ಲೇಖಿಸಿದ್ದಾನೆ. ಏಕೆ ನಾಲ್ಕು ತಿಂಗಳಿಗೊಮ್ಮೆ ಪರೀಕ್ಷೆ ಮಾಡಬೇಕೆಂದಿದ್ದಾರೆ ಎಂದು ಆಲೋಚಿಸಿದರೆ ಅಳತೆಯ ಸಾಧನಗಳನ್ನು ಮರದಿಂದ ಮಾಡಲಾಗುತ್ತಿತ್ತು. ಅವು ಋತುಮಾನಕ್ಕೆ ಅನುಗುಣವಾಗಿ ಹಿಗ್ಗುವುದು ಕುಗ್ಗುವುದು ಆಗಿರುವ ಸಾಧ್ಯತೆಗಳಿವೆ.

ಅಳತೆಗಳು ಯಾಕೆ ಬೇಕು ಎಂದಾಗ ಭೂಮಿಗೆ ಸಂಬಂಧಿಸಿದಂತೆ ಆಗಾಗ ಭೂಸಂಬಂಧಿ ವ್ಯಾಜ್ಯಗಳು ತಲೆದೋರುತ್ತಿದ್ದವು. ಇವು ಹಿಂದೆ, ಇಂದು, ಮುಂದೆಯೂ ಇರುತ್ತವೆ. ಈ ಕಾರಣದಿಂದಾಗಿ ಮುಂದೆ ಸಂಭವಿಸುವ ಘಟನೆಗಳನ್ನು ಅರಿತು ಈ ರೀತಿ ಭೂ ಅಳತೆಯಂತಹ ಮಾಪನಗಳು ರಚನೆಗೊಂಡ ಸಾಧ್ಯತೆಗಳಿವೆ. ಭೂಮಿಯನ್ನು ಅಳತೆ ಮಾಡಿಸಿ ಪರಸ್ಪರರು ಒಪ್ಪಿಗೆ ಪಡೆದು ತಮ್ಮ ಭೂಮಿಗಳನ್ನು ಹದ್ದುಬಸ್ತು ಮಾಡಿಕೊಳ್ಳುವ ಸಲುವಾಗಿ ಅಳತೆಗಳು ಮುಖ್ಯವಾಗುತ್ತವೆ. ಅಳತೆಗಳು ಭೂಮಿಯ ಎಲ್ಲೆಗಳನ್ನು ಗುರುತಿಸಲು ಸಹಾಯವಾಗುತ್ತವೆ. ಇದಕ್ಕೆ ಸಂಬಂಧಿಸಿದಂತೆ ಚಕ್ಕುಬಂದಿಗಳನ್ನು ಗುರುತಿಸಿ ಬಾಂದು ಕಲ್ಲುಗಳನ್ನು ನೆಡುವುದು ಶಾಸನಗಳಲ್ಲಿ

ಕಂಡುಬರುತ್ತದೆ. ಭೂಮಿಯನ್ನು ದಾನ ನೀಡುವಾಗ ಆ ಭೂಮಿಗೆ ಸಂಬಂಧಿಸಿದ ನಾಲ್ಕು ಸೀಮೆಯನ್ನು ಉಲ್ಲೇಖಿಸಲಾಗುತ್ತಿತ್ತು. ಕ್ರಿ.ಶ. ೧೨೨೪ರ ಶಾಸನದಲ್ಲಿ ಆ ಗ್ರಾಮದ ಚತುಸ್ಸೀಮೆ ಮೂಡಲ್ ಹಂದಿಗೊಳನಲ್ಲಿಂ ತೆಂಕ ಹೊಂನರಳಿಯಲ್ಲಿಂ ಪಡುವ ಹಾದರಿಯೊಬ್ಬೆಯ ತವಸಿಯಲ್ಲಿಂ ತೆಂಕ ಮರುಗೂರ ದೇವದಾನದ ಕಲ್ಲಲ್ಲಿಂ ಪಡುವ ಹುಂಗಿಯ ಕೆಱೆಯ ಕೀಟ್ಟಿಯಲ ಮೂತೆ ವುಣಿಸೆಯಲ್ಲಿಂ ಬಡುವಲ್ಲುಂಡುಗಲ್ಲಲ್ಲಿಂ ಪಡುವ ಹೆರಗಿನ ಬಟ್ಟೆಯೊಳಗಣ ಸಾತಿ ಸೆಟ್ಟಿಯ ಕೊಳನಲ್ಲಿಂದಾ ಬಟ್ಟೆಯ ತಿಪ್ಪೂರ ಬಟ್ಟೆಯ ಕೂಡಲಲ್ಲಿಂ ಬಡಗಲಜೆಯ ಮೇಲಣ ಬಿಲ್ದಾಣೆಯಲ್ಲಿಂ ಬಡಗನಾಡು ಪಿರ್ದ್ದದ ರಾಸಿಗಲ್ಲಲ್ಲಿಂ ಮೂಡಲಾನೆಗಲ್ಲಲ್ಲಿಂದ ವೀಶಾನ್ಯದಡ್ಡಗಲ್ಲಿಂತೀ ಚತುಸ್ಸೀಮೆಯೊಳಗಣನು ಗ್ರಾಮಂಗಳೊಳಗೆ ದಣ್ಣಾಯಕರ ಪ್ರಭುಸ್ವಾಮ್ಯಕ್ಕೆ ದಾನ ಬಿಟ್ಟರೆಂದಿದೆ.[೨೫೦] ಈ ರೀತಿಯಾಗಿ ಭೂಮಿಯ ನಾಲ್ಕು ಮೂಲೆಗಳ ಬಗೆಗೆ ತಿಳಿಸಿ ಕಲ್ಲನ್ನು ನೆಟ್ಟಿರುವುದು ಈ ಶಾಸನದಲ್ಲಿ ಕಂಡುಬಂದಿದೆ. ಇಂದಿಗೂ ಈ ಕ್ರಮ ಜಾರಿಯಲ್ಲಿದೆ. ಊರುಗಳಿಗೂ ಸೀಮೆರೇಖೆಗಳು ಇರುತ್ತಿದ್ದವು. ಊರುಗಳಿಗೆ ಸಂಬಂಧಿಸಿದ ಭೂಮಿಯನ್ನು ಅಳತೆ ಮಾಡಿ ಊರುಗಳನ್ನು ಬೇರ್ಪಡಿಸಲಾಗುತ್ತಿತ್ತು. ಇವು ಊರಿನ ಕೊನೆಯ ಭಾಗದಲ್ಲಿದ್ದು ಇವುಗಳಿಗೆ ಗಡೀಕಲ್ಲುಗಳು ಎಂದು ಕರೆಯಲಾಗುತ್ತದೆ. ಸೀಮೆ ಸಂಬಂಧವಾಗಿ ಪ್ರಾಚೀನ ಕಾಲದಿಂದಲೂ ಯುದ್ಧಗಳು ನಡೆದು, ಅದರಲ್ಲಿ ಹೋರಾಡಿ ಮಡಿದ ವೀರರ ನೆನಪಿಗೆ ಹಾಕಿಸಿರುವ ವೀರಗಲ್ಲುಗಳು ಇಂದಿಗೂ ನಮ್ಮ ಮುಂದೆ ಸಾಕ್ಷೀಕರಿಸುತ್ತವೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಕೋರಮಂಗಲದ ದುಡ್ಡನು ಸೀಮಾಸಂಮಥಕೆ ಕಾಳಗದಲ್ಲಿ ಮಡಿದನು ಎಂದಿದೆ.[೨೫೧] ಇಂದಿಗೂ ಈ ರೀತಿಯ ಸಮಸ್ಯೆಗಳು ನಿರಂತರವಾಗಿ ಬಗೆಹರಿಯಲಾರದೆ ಉಳಿದಿರುವ ಜ್ವಲಂತ ಸಮಸ್ಯೆಗಳಾಗಿವೆ. ಚನ್ನರಾಯಪಟ್ಟಣದ ಶಾಸನವು ದಿಂಡಗನೂರಿನ ಭೂಮಿಯ ಅಳತೆಗೆ ಸಂಬಂಧಿಸಿದ ಒಪ್ಪಂದವನ್ನು ಉಲ್ಲೇಖಿಸಿದೆ.[೨೫೨] ಈ ಶಾಸನದಲ್ಲಿ ಹಿಂದೆ ಮಾಡಲಾದ ಭೂಮಾಪನವು ಸಮರ್ಪಕವಾಗಿಲ್ಲವೆಂದು ದೂರು ದಾಖಲಾಗಿರುತ್ತದೆ. ಆಗ ಅಗ್ರಹಾರದ ಮಹಾಜನರು ತಮ್ಮೂರಿನ ಭೂ ಪ್ರದೇಶದ ಪುನರ್ ಮಾಪನವನ್ನು ಅಪೇಕ್ಷಿಸಿದರು. ಭೂಮಿಯನ್ನು ಅಳತೆ ಮಾಡುವುದಕ್ಕೆ ಪ್ರತಿನಿಧಿಗಳನ್ನು ನೇಮಿಸಿದರು. ಈ ಒಪ್ಪಂದಕ್ಕೆ ಒಪ್ಪಿಕೊಳ್ಳುವ ಜನರು ಯಾವುದೇ ಕಾರಣಕ್ಕೆ ಪ್ರಕೃತಿಯ ವಿಕೋಪ ಅಥವಾ ಶತ್ರುಗಳ ಆಕ್ರಮಣದಿಂದಗಾಲೀ ಈ ಒಪ್ಪಂದಕ್ಕೆ ತೊಂದರೆ ಯುಂಟಾದರೆ ಮತ್ತೆ ಈ ಸಮಸ್ಯೆಯನ್ನು ಎತ್ತಕೂಡದು ಎಂಬ ನಿಬಂಧನೆಯನ್ನು ಈ ಒಪ್ಪಂದ ಏರ್ಪಡುವ ಮೊದಲೆ ಮಾಡಿಕೊಳ್ಳಲಾಯಿತು. ಹೀಗೆ ಪ್ರಸ್ತುತ ಒಪ್ಪಂದವು ಭೂಮಾರಾಟದ ವ್ಯವಹಾರವನ್ನು ಒಳಗೊಂಡತೆ ಎಲ್ಲ ವ್ಯವಹಾರಗಳಿಗೂ ಸಿಂಧುವಾಗತಕ್ಕದ್ದೆಂದು ಸಂಬಂಧಪಟ್ಟ ಎಲ್ಲ ಜನರೂ ಒಪ್ಪಿಕೊಳ್ಳಬೇಕಾಯಿತು.

ಇಂದಿಗೂ ಇಂತಹ ಕರಾರುಗಳು ಜೀವಂತವಾಗಿವೆ. ಅಂದು ಒಪ್ಪಂದಗಳ ಮೂಲಕ ಏರ್ಪಡುತ್ತಿದ್ದವು. ಬಗೆಹರಿಯದಿದ್ದರೆ ಅಂತಿಮವಾಗಿ ರಾಜನ ಬಳಿಗೆ ಹೋಗುತ್ತಿದ್ದವು. ಇಂದು ಒಪ್ಪಂದದ ಮೂಲಕ ಬಗೆಹರಿಯದಿದ್ದರೆ ನ್ಯಾಯಾಲಯಕ್ಕೆ ಹೋಗಲಾಗುತ್ತದೆ. ಆದರೆ ಇಂದು ಈ ರೀತಿಯ ಸಮಸ್ಯೆಗಳು ಒದಗಬಾರದು. ಭೂಮಿಗಳು ಅದಲುಬದಲು ಆಗಬಾರದೆಂಬ ಕಾರಣಗಳಿಂದಾಗಿ ಕಾನೂನಾತ್ಮಕವಾಗಿ ಸರ್ಕಾರದಿಂದಲೇ ವಿಧಿವತ್ತಾಗಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಪೋಡ್‌ಗಳನ್ನು ಅಳವಡಿಸುವ ತಂತ್ರಜ್ಞಾನ ಆರಂಭವಾಗಿ ಪ್ರಚಲಿತದಲ್ಲಿದೆ. ಇದರಿಂದಾಗಿ ಜಮೀನು ಮತ್ತು ಅದರ ಖಾತಾ ಸಂಖ್ಯೆಗಳು ಬದಲಾಗದ ರೀತಿಯಲ್ಲಿ ನಿರ್ಬಂಧಗಳನ್ನು ಹೇರಲಾಗಿದೆ. ಇದರಿಂದಾಗಿ ಜಮೀನು ಬದಲಾಗುವ ಒತ್ತುವರಿಯಾಗದಿರುವ ಸನ್ನಿವೇಶಗಳ ದೃಷ್ಟಿಯಿಂದ ಈ ತಂತ್ರಜ್ಞಾನವನ್ನು ಅಳವಡಿಸಲಾಗಿದೆ.

## ಭೂಸಂಬಂಧಿ ವ್ಯಾಜ್ಯಗಳು

ಭೂಮಿಗೆ ಸಂಬಂಧಿಸಿದಂತೆ ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ವ್ಯಾಜ್ಯಗಳು ಮುಂದುವರಿದುಕೊಂಡು ಬಂದಿವೆ. ಈ ವ್ಯಾಜ್ಯಗಳು ರಾಷ್ಟ್ರ ರಾಷ್ಟ್ರಗಳ ಮಧ್ಯೆ, ರಾಜ್ಯ ರಾಜ್ಯಗಳ ಮಧ್ಯೆ ಜಿಲ್ಲೆಗಳ, ತಾಲೂಕುಗಳ, ಹಳ್ಳಿಗಳ ಮಧ್ಯೆ ಸಾಮಾನ್ಯವಾಗಿ ಕಂಡುಬರುತ್ತದೆ. ಈ ವ್ಯಾಜ್ಯಗಳನ್ನು ತಕರಾರುಗಳು, ವಿವಾದಗಳು ಎಂತಲೂ ಕರೆಯಲಾಗುತ್ತದೆ. ಭೂಮಿಗೆ ಸಂಬಂಧಿಸಿದಂತೆ ಭೂ ಒತ್ತುವರಿ, ಭೂ ಕಬಳಿಕೆ ಮೊದಲಾದವುಗಳು ಕಂಡುಬರುತ್ತವೆ.

ಕ್ರಿ.ಶ. ೧೨೭೪ರ ಶಾಸನದಲ್ಲಿ ಊರಿನ ಗವುಡುಗಳು ಪ್ರಜೆಗಳು ಮೊದಲಾದವರ ಸಮಕ್ಷಮದಲು ಕೊಟ್ಟ ವೋಲೆಯ ಕ್ರಮವೆಂತೆಂದಡೆ ಕಮಟೇಶ್ವರದೇವರ ಸ್ಥಾನದ ಭೂಮಿಯಲ್ಲಿ ಹೆಚ್ಚು ಕುಂದುಂಟೆಂದು ವಿವಾದಿಸಿದಲ್ಲಿ ಆ ಸ್ಥಳದ ಪ್ರಜೆಗಳೂಂ ಆ ಪೊಂನಚ್ಚಸೆಟ್ಟಜೀಯರೂಂ ಆ ಗವುಡುಗಳೂಂ ಚವುಗಾವೆಯವರೂಂ ನೆರೆದು ಆ ಸ್ಥಳವ ನೋಡಿ ಅನಾದಿ ತೊಡಗಿ ದೇವದಾನವಲ್ಲ ಎಂದು ತಿಳಿದು ನೋಡಿಯದನು ನೀವು ವಿವಾದಿಸುವ ಮರಿಯಾದೆ ಅಲ್ಲ ಎಂದು ಆ ಸೆಟ್ಟಿಯರೂಂ ಆಗವುಡಗಳೂಂ ಆ ವೂರ ಪ್ರಜೆಗಳೂಂ ಆ ಚವುಗಾವೆಯವರೂಂ ಆ ಸ್ಥಾನಿಕರಿಗೆ ಹೇಳಲು ಆ ಸ್ಥಾನಿಕರು ವೊಡಂಬಟ್ಟು ವಿವಾದವ ಮಾಡೆವು ಈ ದಿನಂ ಮೊದಲಾಗಿ ತಂಮ ಎಲ್ಲಾ ಸ್ಥಾನಂಗಳ ಭೂಮಿಯಲಿ ಅನಾದಿ ತೊಡಗಿ ತಾವು ಭೋಗಿಸುವ ಭೂಮಿ ಎಂಮದು ಅಗ್ರಹಾರವಾದಂದು ತೊಡಗಿ ಮಹಾಜನಂಗಳು ಭೋಗಿಸುವ ಭೂಮಿ ಮಹಾಜನಂಗಳದು ಎವಗೆವುಂ ಮಹಾಜನಂಗಳಿಗೆವುಂ ಭೂಮಿ ವಿಷಯವಾಗಿ ಹಳ್ಳಿ ಹಿರಿಯೂರಲು ಕಾವಣಕರವಿಲ್ಲೆಂದು ಆ ಮಹಾಜನಂಗಳಿಗೆ ಆಸ್ಥಾನಿಕರು ಕೊಟ್ಟ ವೊಲೆಯಿಂತಪ್ಪುದಕ್ಕೆ ಸಾಕ್ಷಿಗಳು ಶ್ರೀ ಮನ್ಮಹಾವಡ್ಡಬ್ಯವಹಾರಿ ಪೊಂನಚ್ಚ ಸೆಟ್ಟಿಯರು ಮೊದಲಾದವರು ಸಹಿ ಹಾಕಿದರೆಂದಿದೆ.[೨೫೩]

ಈ ಶಾಸನದಲ್ಲಿ ಸ್ಥಾನಿಕರು ಮತ್ತು ಮಹಾಜನರ ಮಧ್ಯೆ ಭೂಮಿಯ ಸಲುವಾಗಿ ವ್ಯಾಜ್ಯ ಸಂಭವಿಸಿದೆ. ಮಹಾಜನರ ಭೂಮಿಯನ್ನು ದೇವಾಲಯದ ಭೂಮಿ ಎಂದು ಸ್ಥಾನಿಕರು ಭೋಗಿಸುತ್ತಿದ್ದರು. ಈ ಭೂಮಿಯಲ್ಲಿ ಸಮಸ್ಯೆ ಇದೆ ಎಂದು ಊರಿನ ಪ್ರಮುಖರೆಲ್ಲ ಸೇರಿ ಅದನ್ನು ಪರಿಶೀಲಿಸಿದಾಗ ಅದು ದೇವದಾನದ ಭೂಮಿಯಲ್ಲಿ ಮಹಾಜನರಿಗೆ ಸೇರಿದ್ದು ಎಂದು ತಿಳಿದು ಮಹಾಜನರಿಗೆ ಕೊಡಿಸುತ್ತಾರೆ. ಆಗ ಸ್ಥಾನಿಕರು ನಮಗೂ ನಿಮಗೂ ಭೂಮಿಯ ವಿಷಯದಲ್ಲಿ ಯಾವುದೇ ತಕರಾರಿಲ್ಲೆಂದು ಒಪ್ಪಿ ಸಹಿ ಹಾಕಿಕೊಟ್ಟರು. ಇದನ್ನು ಗಮನಿಸಿದರೆ ಭೂ ವಿವಾದಗಳು ಭೂ ಒಡೆತನದ ಪ್ರಶ್ನೆಗಳಾಗಿ ಕಂಡುಬರುತ್ತವೆ. ಇವುಗಳನ್ನು ಊರಿನ ಪ್ರಮುಖರು ನ್ಯಾಯ ತೀರ್ಮಾನ ಮಾಡುವ ಮೂಲಕ ಬಗೆಹರಿಸಬೇಕಾಗಿತ್ತು. ಇಂದಿಗೂ ಇಂತಹ ವ್ಯಾಜ್ಯಗಳು ಕಂಡುಬರುತ್ತವೆ. ಊರಿನ ಪ್ರಮುಖರಿಂದ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಾಗದೇ ಹೋದಲ್ಲಿ ಕಾನೂನು, ನ್ಯಾಯಾಲಯಗಳ ಮೊರೆ ಹೋಗುವುದು ಕಂಡುಬರುತ್ತಿದೆ. ಲೆಕ್ಕವಿಲ್ಲದಷ್ಟು ಭೂಸಂಬಂಧಿ ಫಿರ್ಯಾದುಗಳು ನ್ಯಾಯಾಲಯದ ಅಂಗಳದಲ್ಲಿರುವುದು ಸಾಮಾನ್ಯ ಸಂಗತಿಯಾಗಿದೆ. ಅರ್ಥಶಾಸ್ತ್ರಕಾರನು ಇಂತಹ ವಿವಾದಗಳನ್ನು ಪರಿಹರಿಸುವ ಉಪಾಯಗಳನ್ನು ಅಂದೇ ತಿಳಿಸಿರುವುದು ಕಂಡುಬರುತ್ತದೆ. "ಹೊಲಗದ್ದೆಗಳ ವಿವಾದವನ್ನು ಸನಿಹದ ಗ್ರಾಮವೃದ್ಧರು ಬಗೆಹರಿಸಬೇಕು. ಅವರಲ್ಲಿ ಮತಭೇದವೊದಗಿದರೆ ಒಳಗೂ ಹೊರಗೂ ಶುದ್ಧರೂ ಲೋಕ ಸಮ್ಮತರೂ ಆದ ಜನರು ಹೆಚ್ಚಾಗಿ ಯಾರ ಕಡೆಗೆ ವಾಲುವರೋ ಆ ಕಡೆಗೆ ತೀರ್ಪನ್ನೀಯಬೇಕು. ಉಭಯ ಪಕ್ಷವನ್ನೂ ವಹಿಸಿ ಸಮನಾಗಿ ಹಂಚಿಬಿಡಬೇಕು. ಬಹುಜನರಿತ್ತ ತೀರ್ಪನ್ನೂ, ಸಮಾನವಾಗಿ ಹಂಚಿಕೊಳ್ಳಬೇಕೆಂಬ ವಾದವನ್ನು ಒಪ್ಪಿಕೊಳ್ಳದಿದ್ದರೆ ವಿವಾದಗ್ರಸ್ತವಾದ ಹೊಲಗದ್ದೆಗಳನ್ನು ರಾಜನು ವಶಪಡಿಸಿಕೊಳ್ಳಬೇಕು.

ಒಡೆಯನು ಸತ್ತು ಹೋಗಿರುವ ಪ್ರಯುಕ್ತ ವಾರಸುದಾರರಿಲ್ಲದ ಹೊಲಗದ್ದೆಗಳೇ ಮುಂತಾದವನ್ನು ರಾಜನು ವಹಿಸಿಕೊಳ್ಳಬೇಕು. ಇಲ್ಲವೇ ಯೋಗ್ಯರಾದ ಹಕ್ಕುದಾರರಿಗೆ ಅವನ್ನು ಹಂಚಿಬಿಡಬೇಕು. ಬಲತ್ಕಾರದಿಂದ ಹೊಲ, ಮನೆ, ಗದ್ದೆಗಳನ್ನು ವಶಪಡಿಸಿಕೊಂಡವನಿಗೆ ಚೋರದಂಡವನ್ನು ವಿಧಿಸಬೇಕು.[೨೫೪] ಭೂ ವ್ಯಾಜ್ಯಕ್ಕೆ ಸಂಬಂಧಿಸಿದ ವಿವಾದಗಳನ್ನು ಬಗೆಹರಿಸುವಾಗ ಪಕ್ಷಪಾತಗಳು ಕೆಲವೊಮ್ಮೆ ನಡೆಯುತ್ತಿದ್ದವು. ಇಂದಿಗೂ ಸಹ ಇವು ಕಂಡುಬರುತ್ತವೆ. ಪ್ರಾಚೀನ ಸಂದರ್ಭದಲ್ಲಿ ಜನರ ಬಳಿಯಲ್ಲೂ, ಬಗೆಹರಿಯದಿದ್ದರೆ ನ್ಯಾಯಾಧಿಕಾರಿಯಾದ ರಾಜನ ಬಳಿ ವಿವಾದಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ರಾಜನ ತೀರ್ಮಾನ ಅಂತಿಮ ತೀರ್ಮಾನವಾಗಿರುತ್ತಿತ್ತು. ಅಲ್ಲೂ ಬಗೆಹರಿಯದೇ ಹೋದಲ್ಲಿ ಭೂಮಿಯನ್ನು ರಾಜನೇ ತನ್ನ ಬಳಿ ಇಟ್ಟುಕೊಂಡಿರುವುದು ಕಂಡುಬರುತ್ತದೆ. ಆದರೆ ಇಂದು ಊರುಗಳಲ್ಲಿ ಬಗೆಹರಿಯದ ವ್ಯಾಜ್ಯಗಳು ಸುಪ್ರೀಂಕೋರ್ಟ್ ಅಂಗಳವನ್ನು ತಲುಪಿ ಅಲ್ಲಿ ಅಂತಿಮಗೊಳ್ಳುತ್ತವೆ. ಈ ಕೋರ್ಟಿನ ತೀರ್ಪು ಅಂತಿಮವಾಗಿರುತ್ತದೆ. ಈ ತೀರ್ಪನ್ನು ಪ್ರಶ್ನಿಸದೆ ಒಪ್ಪಿಕೊಳ್ಳಬೇಕಾಗುತ್ತದೆ. ಕ್ರಿ.ಶ. ೧೨೯೭ರ ಶಾಸನದಲ್ಲಿ ಭೂವಿವಾದವನ್ನು ಬಗೆಹರಿಸುವ ಹೊಣೆಗಾರಿಕೆ ಆ ಊರಿನ ಮಹಾಜನರಿಗೆ ಸೇರಿತ್ತು ಎಂಬುದನ್ನು ತಿಳಿಸಿದೆ. ಈ ಶಾಸನವು ಕ್ರಯದಾನ ಶಾಸನವಾಗಿದೆ. ಈ ಶಾಸನದಲ್ಲಿ ದೇವದಾನದ ಭೂಮಿಯನ್ನು ಅಯ್ಯಂಣ್ನನವರಿಗೆ 'ಸೂಳೆಕೆಱೆಯ ಚತುಸ್ಸೀಮೆಯೊಳಗೆ ಉಳ್ಳ ಭೂಮಿಯೊಳಗೆ ಪೂರ್ವ್ವದಲಿ ಉಳ ಕೊಡಗಿ ದೇವದಾನದ ಭೂಮಿ... ನೂಱುಗದ್ಯಾಣಕ್ಕೆ ಮಹಾಜನಂಗಳು ಕ್ರಯಕ್ಕೆ(ಅಂದರೆ ಮಾರಾಟಕ್ಕೆ) ಕೊಟ್ಟಿದ್ದಾರೆ. ಅಯ್ಯಂಣ್ನನವರು ಆ ಹಳಿಗೆ ಸಿದ್ಧಾಯ ಗದ್ಯಾಣ ನಾಲ್ವತ್ತನ್ನು ಪುಷ್ಯಮಾಸದಲ್ಲಿ ಕೊಡುತ್ತಾ ಬರಬೇಕು. ಭೂಮಿಯ ಚತುಸ್ಸೀಮೆಯೊಳಗುಳ್ಳ ಭೂಮಿ ಸೀಮಾ ವಿವಾದ ಬಂದೆಡೆ ಆ ಮಹಾಜನರು ಪರಿಹರಿಸಕೊಡುವರು... ಆ ಅಯ್ಯಂಣ್ನನವರಿಗೆ ಆದಿ ಕ್ರಯದಾನಕ್ಕೆ ಸಲುವಂತಾಗಿ ಆ ಚಂದ್ರಾರ್ಕ್ಕಷ್ಟಾಮಿ ಆಗಿ ಮಹಾಜನಂಗಳು ಆ ಅಯ್ಯಂಣ್ನನವರಿಗೆ ಸ್ವರುಚ್ಯಾ ವೊಡಂಬಟ್ಟು ಧಾರಾಪೂರ್ವಕಂ ಮಾಡಿ ಕೊಟ್ಟರೆಂದಿದೆ.[೨೫೫] ಈ ಶಾಸನದಿಂದ ಗಮನಿಸಬೇಕಾದ ಅಂಶವೆಂದರೆ ದೇವಾಲಯದ ಭೂಮಿಯು ಮಹಾಜನರ ಆಳ್ವಿಕೆಗೆ ಒಳಪಟ್ಟಿತ್ತು. ಅದರ ಒಡೆತನವು ಅವರ ಕೈಯಲ್ಲಿ ಕೇಂದ್ರೀಕೃತವಾಗಿತ್ತು. ಮಾರುವ ಅಧಿಕಾರವನ್ನು ಅವರು ಹೊಂದಿದ್ದರು. ಹಾಗೆಯೇ ಅಂತಹ ಜಮೀನಿಗೆ ಸಂಬಂಧಿಸಿದ ವ್ಯಾಜ್ಯಗಳು ಬಂದಾಗ ಅವರೇ ಸ್ವತಃ ಬಗೆಹರಿಸುತ್ತಿದ್ದರು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ.

ಕ್ರಿ.ಶ. ೧೨೭೫ರ ಶಾಸನದಲ್ಲಿ ಹಳ್ಳಿಯ ಭೂಮಿಯ ಸೀಮಾ ಸಂಬಂಧವಾಗಿ ತಿಳಿಸಿರುವ ಶಾಸನವು ಈ ರೀತಿಯಾಗಿ ಹೇಳಿದೆ. "ಬಲೋತ್ಕರದಿಂದ ಕಲನಟ್ಟರೆಂದು ಆ ಮುರುಡಿ ಪುರದವರು ಮುಂಡಿಗೆಯನಿಕ್ಕಿದಡೆ ಗರುಡನಹಳ್ಳಿಯ ಕಂನ್ನೈಯನು ಯಿಕ್ಕಿದ ಒಡಂಬಡಿಕೆಯ ಬಱಿಗವಿ ನಡಿಸಿದರೊಪ್ಪ ಸಲದುನನು ಬಲೋತ್ಕರದಿಂ......ದಲ್ಲಿಯ ನಟ್ಟ ಕಲ್ಲ ಮುರಿಯದೆ ಎಂನ ಭೂಮಿ ಎಂದು ಆ ಮುರುಡಿಯನೆತ್ತಿತದನಾ ಸಿರಃಪತ್ರವ ಬರಸಿ ಶ್ರೀ ಮದ್ರಾಜದಾನಿ ದೋರಸಮುದ್ರದ ಶ್ರೀ ಹೊಯ್ಸಳೇಶ್ವರ ಸಂನಿಧಿಯಲಿ ಆ ಸಂವತ್ಸರದ ಶ್ರಾವಣ ಬ೩ ಆ ದಿನ ಆ ಕಂನಯ್ಯನು ದಿವ್ಯ ಹಿಡಿದು ಗೆದ್ದನು ಅದು ಕಾರಣ ಆ ಭಟಗವೆಯವರು ನಟ್ಟ ಕಲ್ಲು ಮೇರೆಯಾಗಿ ಆ ನಾಯ ಗರುಡನಹಳ್ಳಿಗೆ ಸಲದೆಂದು ಶ್ರೀ ವೀರನಾರಸಿಂಗದೇವರ್ಸರು ಗರುಡನಹಳ್ಳಿ ಸೆರನ ಗರುಡನಹಳ್ಳಿಯ ಉರುಕುಪಯಲಿ ಬೆದ್ದಲುಳ೦೦ ದೊಡೇರಿಯ....ಗದ್ದೆಸ೨....ಅಂತು ಸಳ ನು ಶ್ರೀ ವೀರನಾರಸಿಂಗದೇವರಸರು ಆ ಕಂನಯ್ಯಂಗೆ ದಿಬ್ಯವ ತುಡಿಕೆ ಗೆದ್ದಲಿರೆ ಕಾರುಣ್ಯಮ ಕೊಟ್ಟ.[೨೫೬]

ಈ ಶಾಸನದಲ್ಲಿ ಮುರಡಿಪುರದವರಿಗೂ ಗರುಡನಹಳ್ಳಿಯ ಕಂನ್ನೈಯನಿಗೂ ಭೂಮಿಗೆ ಸಂಬಂಧಿಸಿದಂತೆ ವ್ಯಾಜ್ಯ ಏರ್ಪಟ್ಟಿದೆ. ಮುರಡಿಪುರದವವರು ಭೂಮಿ ತಮ್ಮದೆಂದು ಕಲ್ಲು ನೆಟ್ಟಾಗ

ಕನ್ನಯ್ಯನು ತಾನು ಬರೆಸಿದ ಸಿರಃ ಪತ್ರವನ್ನು ತೆಗೆದುಕೊಂಡು ರಾಜಧಾನಿ ದೋರಸಮುದ್ರಕ್ಕೆ ತೆಗೆದುಕೊಂಡು ಹೋಗಿ ಪ್ರಮಾಣ ಮಾಡಿ ಗೆಲ್ಲುತ್ತಾನೆ. ರಾಜನಾದ ವೀರನಾರಸಿಂಗ ದೇವನು ಈ ವ್ಯಾಜ್ಯಯನ್ನು ಬಗೆಯರಿಸಿ ಕನ್ನಯ್ಯನ ಕಡೆಗೆ ತೀರ್ಪು ನೀಡುತ್ತಾನೆ. ಕನ್ನಯ್ಯನಿಗೆ ಸೇರಬೇಕಾದ ಭೂಮಿ ಅವನಿಗೆ ಲಭಿಸುತ್ತದೆ. ಭೂವಿವಾದವನ್ನು ರಾಜನು ಬಗೆಹರಿಸಿದನೆಂದು ಈ ಶಾಸನವು ತಿಳಿಸುತ್ತದೆ. ಈ ಕಾರಣಗಳ ಹಿನ್ನೆಲೆಯಲ್ಲಿ ಅಳತೆಗಳು ಬಹುಮುಖ್ಯ ಪಾತ್ರವಹಿಸುತ್ತಿದ್ದವು. ಅಳತೆಗಳನ್ನು ಮಾಡಿ ಕರಾರು ಒಪ್ಪಂದ ಪತ್ರಗಳನ್ನು ಬರೆಸಿರುವುದು ಈ ಶಾಸನದಲ್ಲಿ ಕಂಡುಬಂದಿದೆ. ಇದರಿಂದಾಗಿ ನಿಜವಾದ ಭೂಮಿಯ ಒಡೆಯರಿಗೆ ಭೂಮಿಯನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತದೆ. ಇಂದಿಗೂ ಈ ವ್ಯವಸ್ಥೆ ಮುಂದುವರಿದುಕೊಂಡು ಬಂದಿದೆ.

**ಇತರೆ ಅಳತೆಗಳು**

ಎಱೆಯಂಗಗಾವುಂಡ್ಡನ ಶಾಸನದಲ್ಲಿ ಬೆಟ್ಟಿಯ ಭತ್ತದಲ್ಲಿ ನೂರು ಭತ್ತವನ್ನು ಕೊಟ್ಟರೆಂದಿದೆ.[೨೫೭] ಅಂದರೆ ನೂರು ಸಾಲು ಭತ್ತ ನೀಡಿರುವ ಸಾಧ್ಯತೆಗಳಿವೆ. ಕ್ರಿ.ಶ. ೭–೮ನೆಯ ಶತಮಾನದ ಶಾಸನದಲ್ಲಿ 'ಆಱುಕಟನಿಉಂ' ಎಂದು ಉಲ್ಲೇಖಿಸಿದೆ.[೨೫೮] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ಬಡಗಣ ಬೇಲಿ ಮೂಡಣ ಬೇಲಿಗಳ ಉಲ್ಲೇಖವಿದೆ.[೨೫೯] (ಬೇಲಿ ಎಂದರೆ ಇದೊಂದು ಭೂಮಿಯ ಅಳತೆಯಾಗಿದೆ). ಕ್ರಿ.ಶ. ೯೧೨ರ ಶಾಸನದಲ್ಲಿ ಒನ್ದು ಬೇಲಿಯ ಉಲ್ಲೇಖವಿದೆ.[೨೬೦] ಕ್ರಿ.ಶ. ೧೦೪೯ರ ಶಾಸನವು ನೂರು ಭತ್ತದ ಮಣ್ಣು ಕೊಟ್ಟರೆಂದಿದೆ.[೨೬೧] ನೂರುಚೀಲ ಭತ್ತ ಬೆಳೆಯುವ ಭೂಮಿ ಅಥವಾ ನೂರು ಸಾಲು ಭತ್ತಬೆಳೆಯುವ ಭೂಮಿಯನ್ನು ದಾನ ನೀಡಿರುವ ಸಾಧ್ಯತೆಗಳಿವೆ. ಕ್ರಿ.ಶ.೧೧೯೮ರ ಶಾಸನದಲ್ಲಿ ಒಂದು ಸಾವಿರ ಗುಳಿಯ ಮಣ್ಣು ಕೊಟ್ಟರೆಂದಿದೆ.[೨೬೨] ಕ್ರಿ.ಶ. ೧೧೪೯ರ ಶಾಸನದಲ್ಲಿ ಸಲಗೆ ಗದ್ದೆವೊಂದು ಬೇಲಿ ಬೆದ್ದಲೆಯ ಉಲ್ಲೇಖವಿದೆ.[೨೬೩] ಕ್ರಿ.ಶ. ೧೧೬೪ ಶಾಸನದಲ್ಲಿ ಮಂಣ್ಣು ಗುಳಿ ೧೫೦೦ ಎಂದಿದೆ.[೨೬೪] ಕ್ರಿ.ಶ. ೧೧೯೧ರ ಶಾಸನದಲ್ಲಿ ಗದ್ದೆಸಲಗೆ, ಕೊಳಗ ಹತ್ತು ಮುನ್ನೂಱು ಗುಳಿ ಮಣ್ಣು ಕೊಟ್ಟ ಗರಿಕೆ ಹೊಲ ವರಹ೫ ಎಂದಿದೆ. ಅಲ್ಲದೆ ಇರ್ಕುಳ ಗುಳಿಮಣ್ಣುಂ ಗು ೫೦ ಗಳನ್ನು ಉಲ್ಲೇಖಿಸಿದೆ.[೨೬೫] ಕ್ರಿ.ಶ. ೧೧೨೧ರ ಶಾಸನದಲ್ಲಿ ೩೦ ಸಲಗೆ, ಬೆದ್ದಲೆ ಬೇಲಿ ೨ ತೋಂಟ ೫೦೦ ಗುಳಿಯುಂ ಎಂದಿದೆ.[೨೬೬] ಕ್ರಿ.ಶ. ೧೧೧೧ರ ಶಾಸನವು ಎರಡು ಸಲಗೆಯ ಬೆದೆಗದ್ದೆ ಬೆದ್ದಲೆವೊಂದು ಬೇಲಿ ಎಂದಿದೆ.[೨೬೭]

ಗುಳಿ ಅಥವಾ ಕುಳಿಯು ತಮಿಳು ದಾಖಲೆಯಲ್ಲಿಯೂ ಕಂಡುಬರುತ್ತದೆ. ದಕ್ಷಿಣ ಕರ್ನಾಟಕದ ಬಹುಭಾಗಗಳಲ್ಲಿ ಇದು ಕಂಡುಬಂದಿರುವುದು ಶಾಸನಗಳಿಂದ ತಿಳಿಯುತ್ತದೆ. 'ಕುಳಿಯು ಇಂದಿನ ೫೭೬ ಅಡಿಗೆ ಸಮ ಮತ್ತೆ ಕೆಲವು ಪ್ರದೇಶದಲ್ಲಿ ೧೪೪ ಅಡಿಗಳಿಗೆ ಸಮವೆನ್ನಲಾಗಿದೆ.[೨೬೮] ಇದನ್ನು ಗಮನಿಸಿದರೆ ಅಳತೆಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದ್ದವೆಂದು ತಿಳಿದುಬರುತ್ತದೆ.

ಭೂಮಿ ಅಥವಾ ಮಣ್ಣು ಎಂಬುದನ್ನು ಶಾಸನಗಳು ಉಲ್ಲೇಖಿಸಿರುವುದನ್ನು ಕ್ರಿ.ಶ. ೧೧೬೪ರ.[೨೬೯] ಶಾಸನವು ತಿಳಿಸಿದೆ. ಈ ಅಂಶಗಳನ್ನು ಮೇಲೆ ಗಮನಿಸಲಾಗಿದೆ. ಅಳತೆಗಳು ಸ್ಥಳದಿಂದ ಸ್ಥಳಕ್ಕೆ ಭಿನ್ನವಾದ ಕಾರಣ ಈ ಹೆಸರಿನಿಂದ ಬಳಕೆಯಾದ ಸಾಧ್ಯತೆಗಳಿವೆ. 'ವಾಟಲುಭೂಮಿ, ಗಟ್ಟಸ್, ಪುಟ್ಟಲು, ಮಣ್ಣು, ಸಿವನೆ, ಬಿನ್ನಗ, ಹೊಡ, ಮತ್ತು ಸಿಂದಗಳು' ಅಳತೆಗಳಾಗಿ ಕಂಡುಬರುತ್ತವೆ.[೨೭೦]

ಸಲಗೆಯನ್ನು ಧಾನ್ಯ ಮತ್ತು ಭೂಮಿಯನ್ನು ಅಳೆಯಲು ಬಳಸಲಾಗುತ್ತಿತ್ತು. ಇದು ಕರ್ನಾಟಕದ ಬಹುಭಾಗದಲ್ಲಿ ಕಂಡುಬರುತ್ತದೆ. ಹೆಚ್ಚಾಗಿ ಮಧ್ಯ ಕರ್ನಾಟಕ ಮತ್ತು ದಕ್ಷಿಣ

ಕರ್ನಾಟಕದ ಭಾಗಗಳಲ್ಲಿ ಕಂಡುಬರುತ್ತದೆ. ಇದು 'ಮೋಜಣಿದಾರನ ಭೂಮಿ ಅಳತೆಯ ಕಬ್ಬಿಣದ ಕೋಲು, ಚೈನ್, ಸಲಕಿ ಎನ್ನುವ ಸಾಧನದಿಂದ ಉಗಮವಾಗಿದೆ. ಗಂಗರ ಅವಧಿಯಲ್ಲೂ ಇದು ಬಳಕೆಯಾಗಿದ್ದು, ಇದು ಖಂಡುಗಕ್ಕೆ ಸಮಾನವಾಗಿ ಬಳಕೆಯಾಗಿತ್ತು. ಹೊಯ್ಸಳರ ಕಾಲದಲ್ಲಿಯೂ ಮುಂದುವರೆಯಿತು.[೨೭೧] ಎಂದು ತಿಳಿದುಬಂದಿದೆ. ಕಳೆದ ೧೫ ವರ್ಷಗಳವರೆಗೂ ಭೂಮಿಯನ್ನು ಅಳೆಯುವುದಕ್ಕೆ ಮೋಜಿಂದಾರಿಕೆ ಎನ್ನಲಾಗುತ್ತಿತ್ತು. ಭೂಮಿ ಅಳೆಯುವವರನ್ನು ಮೋಜಿಂದಾರರು ಎಂದು ಕರೆಯಲಾಗುತ್ತಿತ್ತು.

ಬೇಲಿಯು ತಮಿಳಿನಲ್ಲಿ ವೇಲಿ ಎಂದು ಬಳಕೆಯಾಗುತ್ತಿತ್ತು. ಇಂದು ೬.೬ ಎಕರೆಗಳಿಗೆ ಸಮವಾಗಿದ್ದು, ಬೆಂಗಳೂರು, ಕೋಲಾರ ಕೊಡಗುಗಳಲ್ಲಿ ಕಂಡುಬಂದಿದೆ.[೨೭೨]

ಹೀಗೆ ಅಳತೆಗಳು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದು ಕಂಡುಬರುತ್ತದೆ. ಕೆಲವೊಂದು ಅಳತೆ ಮತ್ತು ತೂಕಗಳು(ಸೇರು, ಮಣ, ಮೊದಲಾದವು) ಇಂದಿಗೂ ಬಳಕೆಯಲ್ಲಿವೆ. ಅಳತೆಗಳನ್ನು ಕ್ರಿ.ಶ. ೧೨೭೬ರ ಶಾಸನದಲ್ಲಿ ಗದ್ಯಾಣಂ ಎಂಬತ್ತರ ಉಲ್ಲೇಖವಿದೆ. ಗದ್ದೆ ಸಲಗೆ ಇನ್ನೂಱಕ್ಕಂ ಗುತ್ತಗೆ ಸಲಗೆ ವೊಂದಕ್ಕೆ ಗದ್ಯಾಣಂ ವೊಂದಱಲೆಕ್ಕದೆ ಆಗು ಮಾಡಿಕೊಂಬ ಗದ್ಯಾಣ ಇನ್ನೂಱ ಎಂದಿದೆ. ಕೇಶವ ದೇವರ ಅಮೃತಪಡಿಗೆ ದಿನವೊಂದಕ್ಕೆ ನಿತ್ಯಪಡಿ ಅಕ್ಕಿ ಸಲಗೆ ಐದುಕೊಳಗ ಹದಿನಾಱು ಬಳ್ಳವೊಂದು ಮಾನ ಮೂಱಕ್ಕಂ ಐದೆರಡಱಲೆಕ್ಕದೆ ಮಿದಿ ಕೂಲಿ ಸಹಿತ ಸಲಗೆ ಹದಿನಾಲ್ಕು ಕೊಳಗ ಹನ್ನೊಂದು ಬಳ್ಳ ಮೂಱಱ ಲೆಕ್ಕದೆ ವರ್ಷವೊಂದಕ್ಕೆ ನೆಲ್ಲು ಸಲಗೆ ಐದು ಸಾಸಿರದ ಇನ್ನೂಱ ಐವತ್ತೊಂದು ಕೊಳಗಗಳ ಉಲ್ಲೇಖವಿದೆ.[೨೭೩]

ಭೂಮಿಯನ್ನು ಮಾರುವಾಗ ಕೊಳ್ಳುವಾಗ ಹಣ ಕೊಡುವ ಮತ್ತು ಪಡೆಯುವ ವ್ಯವಹಾರಗಳು ಶಾಸನಗಳಲ್ಲಿ ಕಂಡುಬರುತ್ತವೆ. ಕೊಡುವ ಮತ್ತು ಕೊಳ್ಳುವ ಮಧ್ಯದಲ್ಲಿ ಹಣ ಅಥವಾ ಪಣ, ಗದ್ಯಾಣಗಳು ಅಥವಾ ಹಣದ ಮಾನಗಳು ಪ್ರಮುಖ ಕಾರ್ಯನಿರ್ವಹಿಸುತ್ತಿದ್ದವು. ವ್ಯಾಪಾರಿಗಳು ವಸ್ತುಗಳನ್ನು ತೂಗುವ, ಅಳೆಯುವ, ಎಣಿಸುವ ಲೆಕ್ಕದಲ್ಲಿ ವ್ಯಾಪಾರವನ್ನು ನಡೆಸುತ್ತಿದ್ದರು. ಭೂಮಿಯನ್ನು ಮತ್ತರು, ಕಮ್ಮ, ಲೆಕ್ಕದಲ್ಲಿ ಕೋಲುಗಳ ಮೂಲಕ ಅಳೆಯುತ್ತಿದ್ದುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಗದ್ಯಾಣ, ಪಣ, ಕಾಣಿ, ವೀಸ ಮೊದಲಾದವುಗಳು ಬಳಕೆಯಾಗುತ್ತಿತ್ತು. ಇದನ್ನು ೯೬ grs ಎಂದು ಡಾ.ಅಲ್ಟೇಕರರು ತಿಳಿಸಿದ್ದಾರೆ.[೨೭೪] ಇದನ್ನು ೯೬ grs ಎಂದು ಅಲ್ಟೇಕರರು ತಿಳಿಸಿದ್ದಾರೆ. ಅಪ್ಪಾದೊರ್ರೈರವರು ಇದನ್ನು ೬೩ grs ಎಂದು ಅಭಿಪ್ರಯವನ್ನು ವ್ಯಕ್ತಪಡಿಸಿದ್ದಾರೆ. ಆಧುನಿಕ ಸಂದರ್ಭಕ್ಕೆ ಹೋಲಿಸುವಾಗ ಒಮ್ಮತ ಅಭಿಪ್ರಾಯ ವಿದ್ವಾಂಸರಲ್ಲಿ ಕಂಡುಬರುವುದಿಲ್ಲ. ಗದ್ಯಾಣ= ಹತ್ತು ಪಣ, ಒಂದು ಪಣ= ಎರಡು ಅಡ್ಡ(ಸಂ ಅರ್ಧ; ಪಾಲಿ ಅಡ್ಢ) ಒಂದು ಪಣ= ನಾಲ್ಕು ಹಾಗ(ಮುಪ್ಪಗ ೩/೪ ಪಣ) ಒಂದು ಪಣ=ಹದಿನಾರು ವೀಸ(೨೦ ವೀಸ) ಒಂದು ಹಾಗ= ಎರಡು ಬೇಳೆ.[೨೭೫] ವೀಸವು ಅತ್ಯಂತ ಕಡೆಯ ನಾಣ್ಯವಾಗಿದ್ದು ಬ್ರಹ್ಮಶಿವನು ಸಮಯ ಪರೀಕ್ಷೆಯಲ್ಲಿ ಹೀಗೆ ಉಲ್ಲೇಖಿಸಿದ್ದಾನೆ. 'ಕೂಸಿಂಗೆ ಕುತ್ತವಾದೊಡೆ। ದೇಶದ ಬಳರಿಯರ್ಗೆ ಕುಡುವರೊಳ್ಳರ್ಚನೆಯಂ। ಶಾಸನ ದೇವತೆಗೆಂದೊಡೆ। ವೀಸದ ಪುಷ್ಪಮುಮನೀಯರ್ ಅಱುಗುಲಿವೆಂಡಿರ್[೨೭೬] ಎಂದು ಹೇಳಿದ್ದಾನೆ. ಇದಲ್ಲದೆ ಕಾಕಿಣಿ ಎಂಬ ನಾಣ್ಯವು ಇತ್ತು. ಅವನ್ನು ಭಾಸ್ಕರಾಚಾರ್ಯನು ತನ್ನ ಲೀಲಾವತಿಯಲ್ಲಿ 'ಒಂದು ಪಣಕ್ಕೆ ನಾಲ್ಕು ಕಾಕಿಣಿಗಳು ಎಂದಿರುವನು.[೨೭೭] ಇವಲ್ಲದೆ ನಿಷ್ಕ ಎಂಬ ನಾಣ್ಯವು ಪ್ರಾಚೀನ ಭಾರತದಲ್ಲಿ ಪ್ರಚಾರದಲ್ಲಿತ್ತು. ಋಗ್ವೇದದ ಶತಪತ ಬ್ರಾಹ್ಮಣದಲ್ಲಿ ನಾಲ್ಕು ಸುವರ್ಣಗಳ ತೂಕಕ್ಕೆ ಒಂದು ನಿಷ್ಕವು ಸಮವೆಂದಿದೆ.[೨೭೮] ಕ್ರಿ.ಶ. ೧೧೩೦ರ ಶಾಸನದಲ್ಲಿ ಒಂದು ನಿಷ್ಕಕ್ಕೆ ಒಂದು ಖಂಡುಗ ಗದ್ದೆ ಸಿಗುತ್ತಿತ್ತೆಂದು ತಿಳಿಸುತ್ತದೆ.[೨೭೯] ಮಂಗರಾಜನ

ನಿಂಘಟು ಪ್ರಕಾರ ಹತ್ತು ಪಣದ ತೂಕಕ್ಕೆ ಒಂದು ನಿಷ್ಕ ಸಮ ಎಂದಿದೆ.[೨೮೦] ಇದನ್ನು ಗಮನಿಸಿದರೆ ನಿಷ್ಕ ಮತ್ತು ಗದ್ಯಾಣಗಳು ಸಮವೆನಿಸುತ್ತವೆ. ಕ್ರಿ.ಶ. ೯೮೭ರ ಶಾಸನವು ಧರಣ ಪೂನ್ ಅನ್ನು ಉಲ್ಲೇಖಿಸಿದೆ.[೨೮೧] ಇದು ಹೊನ್ನು ಅಥವಾ ಪೊನ್ನು, ಗದ್ಯಾಣದ ಕಾಲು ಭಾಗಕ್ಕೆ ಸಮವೆನ್ನಲಾಗಿದೆ.[೨೮೨] ದ್ರಮ್ಮ ದೀನಾರ ಎಂಬ ನಾಣ್ಯಗಳು ಕಂಡುಬರುತ್ತವೆ. ಬುದ್ದನ ಕಾಲದಲ್ಲಿಯೂ ಇವುಗಳು ಬಳಕೆಯಲ್ಲಿದ್ದವು. ಅಲ್ಲದೆ ಇವು ರೋಮನ್ ನಾಣ್ಯಗಳಾಗಿವೆ. ಕ್ರಿ.ಶ. ೯೫೧ರ ಶಾಸನದಲ್ಲಿ ದ್ರಮ್ಮದ ಉಲ್ಲೇಖವಿದೆ.[೨೮೩] ಈ ದ್ರಮ್ಮವು ಬಸವಣ್ಣನವರ ಕಾಲಕ್ಕ ಖೊಟ ನಾಣ್ಯವಾಗಿತ್ತು. ಇದರ ಜೊತೆಗೆ ವಡ್ಡಾರಾಧನೆಯಲ್ಲಿ ದಿನಾರ ನಾಣ್ಯದ ಉಲ್ಲೇಖ ಕಂಡುಬರುತ್ತದೆ.[೨೮೪] ಕನ್ನಡದ ಮತ್ತರು ಅಳತೆಯು ಸಂಸ್ಕೃತದಲ್ಲಿ ನಿವರ್ತನವೆಂದು ಬಳಕೆಯಾಗಿದೆ. ಶಾಸನಗಳಲ್ಲಿ ಪನ್ನಾಸ, ಪನ್ನಾವೀಸ ಮತ್ತು ವೀಸ ಅಳತೆಗಳು ಬಳಕೆಯಾಗಿವೆ.[೨೮೫] ರಾಷ್ಟ್ರಕೂಟರ ಕಾಲದಲ್ಲಿ ಭೂಮಿಗಳನ್ನು, ದ್ರವರೂಪದ ಎಣ್ಣೆ, ಧಾನ್ಯಗಳು ಮೊದಲಾದವುಗಳನ್ನು ಅಳೆಯಲು ಬಳಸಿದ ಮಾನಗಳು ಇಂತಿವೆ. ಪಳೆ, ಸಾಮ್ಪು, ಅರೆಸಾಮ್ಪು, ಮಣ, ಖಂಡುಗ, ಮೊರ, ವೀಸ, ಸೊಲ್ಲಗೆ, ಮಾನ, ವಳ್ಳ(ಬಳ್ಳ), ಪಡಿ, ಬಳ್ಳ, ಸೊಂಟಿಗೆ, ಹೇಱು, ಗೊಳ, ತಕ್ಕಡಿ ಕಲಂ, ಚಿನ್ನಮ್, ಮಾಕಾಣಿ, ಕಾಣಿ, ಕಾಣಂ, ಅರೈ ಮೊದಲಾದವುಗಳನ್ನು ಬಳಸಿದರೆನ್ನಲಾಗಿದೆ.[೨೮೬] ಅಲ್ಲದೆ ಇವರ ಕಾಲದಲ್ಲಿ ದ್ರಮ್ಮ, ಕರಿಯದ್ರಮ್ಮ, ಕೊಮರ ಗದ್ಯಾಣ, ವೀಸ, ಮತ್ತರ್ವಣ, ವಣದ ದ್ರವ್ಯ ಸುವರ್ಣ ಶಲಾಕಾ ದ್ರಮ್ಮ, ಏಡಾರ್ಪ್ಪುರಮ್ ಕವಿಞ್ಜು ಆರೈಗಳು ಬಳಕೆಯಲ್ಲಿದ್ದವೆನ್ನಲಾಗಿದೆ.[೨೮೭]

ಒಂದು ಹಾಗ ೫ ವೀಸ, ಒಂದು ವೀಸ ನಾಲ್ಕು ಕಾಣಿಗೆ ಸಮವಾಗಿರುತ್ತದೆ. ಒಂದುವರಹ ೨ ಹೊನ್ನು, ೨ ಹೊನ್ನು, ೫ ಹಣ ಒಂದು ಹಣ ಎರಡು ಅಡ್ಡ, ಒಂದು ಅಡ್ಡ–ಎರಡು ಹಾಗ, ಒಂದು ಹಾಗ ಎರಡು ಬೇಳೆ, ಒಂದು ಬೇಳೆ ಎರಡು ವೀಸ, ಒಂದು ವೀಸ ಎರಡು ಕಾಣಿ, ಒಂದು ಕಾಣಿ ನಾಲ್ಕು ಗಿದ್ದಾಣಿ.[೨೮೮] ಚಿದಾನಂದಮೂರ್ತಿಯವರು ವೀಸ ಕನಿಷ್ಟ ಕೊನೆಯ ನಾಣ್ಯವೆಂದಿರುವರು. ಆದರೆ ಗಿದ್ದಾಣಿ ಕೊನೆಯ ನಾಣ್ಯವಾಗಿ ಇಲ್ಲಿ ಕಂಡುಬರುತ್ತದೆ.

ಕ್ರಿ.ಶ. ೧೦೭೦ರ ಶಾಸನದಲ್ಲಿ ಪೊನ್ನಱಿಕೊಟ್ಟು ಮಣ್ಣಱಿ ಕೊಣ್ಡು ಮತ್ತು ಖಣ್ಡುವೆಯ ಆಡವಲಂ ಎಂದಿದೆ.[೨೮೯] ಇನ್ನೊಂದು ಶಾಸನದಲ್ಲಿ 'ಆಡವಲಂ ಗದ್ಯಾಣ'[೨೯೦] ಎಂದಿದೆ. ಕ್ರಿ.ಶ. ೧೨೪೩ರ ಶಾಸನದಲ್ಲಿ ಆನೆಯ ಸೇಸೆ ಗದ್ಯಾಣ, ನಲ್ಲಾವು ನೆಲ್ಲೆತ್ತು ಗದ್ಯಾಣ, ಕುದುರೆಯ ಸೇಸೆ ಗದ್ಯಾಣ, ವೀರ ಸೇಸೆ ಗದ್ಯಾಣ, ಕುಮಾರ ಗದ್ಯಾಣ ಮೊದಲಾದ ಉಲ್ಲೇಖಗಳಿವೆ.[೨೯೧] ತೆರಿಗೆಗಳನ್ನು ಗದ್ಯಾಣದಲ್ಲಿ ಅಳೆದು ಅಥವಾ ಲೆಕ್ಕದಲ್ಲಿ ಕೊಟ್ಟಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೧೪ರ ಶಾಸನದಲ್ಲಿ ನಾಗಜೀಯಂ ತನ್ನ ಭಾಗದ ಭೂಮಿಯಂ ಮಾರಜೀಯಂಗೆ ಪೊನ್ನಱಿ ಕೊಣ್ಡು ಮಣ್ಣಱಿಕೊಟ್ಟ ಎಂದಿದೆ[೨೯೨] ಭೂಸಂಬಂಧಿ ಸಾಂಸ್ಕೃತಿಕ ಅಂಶಗಳು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದು ಕಂಡುಬಂದಿದೆ. ಇಂದಿಗೂ ಈ ಪ್ರಕ್ರಿಯೆಗಳು ಕಂಡುಬರುತ್ತವೆ. ಆದರೆ ಘಟನೆ ಮತ್ತು ಸಂದರ್ಭಗಳಲ್ಲಿ ಅಲ್ಪ ವ್ಯತ್ಯಾಸಗಳು ಕಂಡುಬರುತ್ತವೆ. ಹೊನ್ನು, ಪೊನ್ನು ಅಥವಾ ಹಣಕ್ಕೆ ಭೂಮಿಯನ್ನು ಮಾರುವ ಕೊಳ್ಳುವ ಪ್ರಕ್ರಿಯೆಗಳು ಶಾಸನಗಳಲ್ಲಿ ಅನಾವರಣಗೊಂಡಿವೆ. ಭೂಮಿಯನ್ನು ಮಾರುವವನಿಗೆ ಏನು ಅಗತ್ಯಗಳಿತ್ತೋ ತಿಳಿಯದು. ಆದರೆ ಕೊಳ್ಳುವವನು ದೇವಾಲಯ, ಬಸದಿನಿರ್ಮಾಣ, ನಿರ್ವಹಣೆ, ಕೆರೆ ನಿರ್ಮಾಣ ನಿರ್ವಹಣೆಗಳಂತಹ ಧಾರ್ಮಿಕ, ಸಾಮಾಜಿಕ ಕಾರ್ಯಗಳಿಗೆ ದಾನ ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಮೇಲ್ನೋಟಕ್ಕೆ ಇದು ದಾನದ ಪ್ರಕ್ರಿಯೆಯಾಗಿ ದಾನ ನೀಡಿದ ವ್ಯಕ್ತಿಯು ತನ್ನ ಶ್ರೇಯೋಭಿವೃದ್ಧಿಗೆ ನೀಡಿದಂತೆ ಶಾಸನವು ಹೇಳಿದೆ. ಸಮಾಜದಲ್ಲಿ ಇದರಿಂದ ಭೂಮಿ ಇಲ್ಲದ ಸಾಮಾಜಿಕವಾಗಿ ಕೆಳಸ್ತರಕ್ಕೆ ತಳ್ಳಿದ ಕೃಷಿ ಕೂಲಿ ಕಾರ್ಮಿಕರಿಗೆ, ಸಾಗುವಳಿಗಾರರಿಗೆ, ಜೀವನ ನಿರ್ವಹಣೆಯಂತಹ ಸೂಕ್ಷ್ಮ ಅಂಶಗಳು

ಇದರ ಹಿಂದೆ ಅಭಿವ್ಯಕ್ತಗೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ದಾನದ ಹಿಂದಿರುವ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಅಂಶಗಳಲ್ಲಿರುವ ಸೂಕ್ಷ್ಮ ಎಳೆಗಳನ್ನು ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ. ಕ್ರಿ.ಶ. ೧೦೩೨ರ ಶಾಸನದಲ್ಲಿ ದೊರೆಯ್ಯ ಸೆಟ್ಟಿಯು ಪತ್ತು ಕೊಳಗ ಬೆದೆಗಟ್ಟಿಯ ಪೊನ್ನು ಕೊಟ್ಟು ಮಣ್ಣಱ ಕೊಣ್ಡು ಬಿಡಿಸಿದಂ ಎಂದಿದೆ.[೨೯೩]

ಕ್ರಿ.ಶ. ೯೧೨ರ ಶಾಸನದಲ್ಲಿ ಹೆಮಣ್ಣನು ಹೊನ್ನಟಿ ಕೊಟ್ಟು ಮಣ್ಣಟಿ ಬಿಟ್ಟ ಭೂಮಿ ಐನೂರು ಕಮ ಎಂದಿದೆ.[೨೯೪] ಕ್ರಿ.ಶ. ೧೦೭೦ರ ಶಾಸನದಲ್ಲಿ ಬಸವಸೆಟ್ಟಿಯು ಪದಿನಯ್ಗುಳ ನೀರ್ಮಣ್ಣು ಅಯ್ಗುಳ ಪೊಂಬೊಲನುಂ ಪೊನ್ನಱಕೊಟ್ಟು ಮಣಱಂ ಕೊಣ್ಡುಮ್ ದೇವಾಲಯಕ್ಕೆ ಬಿಟ್ಟನೆಂದಿದೆ. ಅಲ್ಲದೆ ಪದಿನಯ್ದು ಕೊಳಗ ಬೆಡೆಗಟ್ಟಿಯುಂ, ಅಯ್ದುಕೊಳಗ ಬೆದೆ ಪೊಂಬೊಲನುಮಿದು. ದಾನ ನೀಡಿದನೆಂದಿದೆ.[೨೯೫] ಕ್ರಿ.ಶ. ೧೦೮೯ರ ಶಾಸನದಲ್ಲಿ ಅಡಕೆಯ ಒಂದು ಎಲೆಯ ಹೇರಿಗೆ ಒಂದು ಕಾಣಿ, ಉಳಿಗೆಪಾಗ, ಏಣಿಗಪಾಗಗಳ ಉಲ್ಲೇಖವಿದೆ.[೨೯೬] ಕ್ರಿ.ಶ. ೯೩೬ರ ಶಾಸನದಲ್ಲಿ ರಾಜದ್ರವ್ಯಮಾದುದೆಲ್ಲವಂ ಬಿಟ್ಟರೆ ಎಂದಿದೆ.[೨೯೭] ಕ್ರಿ.ಶ. ೯೯೧ರ ಶಾಸನದಲ್ಲಿ ಮೊಕ್ಕಲಲು ಹಾಗ ತಲೆವೊಱಗೆ ಬೆಳೆ ಎಂದಿದೆ.[೨೯೮] ಕ್ರಿ.ಶ. ೧೦೩೫ ಶಾಸನದಲ್ಲಿ ಧಾನ್ಯ ಉಪ್ಪನ್ನು ಪೊನ್ನಿಗೆ ಎರಡು ಬಳ್ಳ ಕೊಂಡುಕೊಳ್ಳಲು ೧೦೩ ಪೊಂಗದ್ಯಾಣ ಉಲ್ಲೇಖವಿದೆ.[೨೯೯] ಕ್ರಿ.ಶ. ೧೦೮೯ರ ಶಾಸನದಲ್ಲಿ ಕಿಸುಮತ್ತರೆ ೧ ತೂಗುವ ಭಂಡಕೆ ಹೊಂಗೆ ೧ ಗಾಣಂಪ್ರತಿ ಮಾನ ೧, ಪಣ ೫, ಉಪ್ಪುಕೊಳಗ ೫, ಗದ್ಯಾಣ ೩ ಮತ್ತರು ೬ರ ಉಲ್ಲೇಖವಿದೆ.[೩೦೦] ಕ್ರಿ.ಶ.೧೨೬೧ರ ಶಾಸನದಲ್ಲಿ ಗದ್ಯಾಣ ಮೂವತ್ತೈದು ಪಣವೇಳು ಹಾಗವೊಂದು, ಗದ್ಯಾಣಂ ಐದು ಪಣವೇಳು ಬೇಳೆಯೊಂದು.[೩೦೧] ಕ್ರಿ.ಶ. ೧೧೬೭ರ ಶಾಸನದಲ್ಲಿ ಭತ್ತಾಯ ನಿಷ್ಕದ ಉಲ್ಲೇಖವಿದೆ.[೩೦೨] ರಾಜ್ಯದಿತ್ಯನ ನೀಡಿದ ಹಣದ ಕೋಷ್ಟಕ ಹೀಗೆ ಕಂಡುಬಂದಿದೆ.

ನಾಲ್ಕು ಸುವರ್ಣ = ಒಂದು ಕರ್ಷ

ಒಂದು ಕರ್ಷ = ಒಂದು ಫಲ

ಇಪ್ಪತ್ತು ಫಲ = ಒಂದು ಬಿಸಗೆ

ಐದು ಬಿಸಗೆ + ಒಂದು ತೊಲೆ

ಇಪ್ಪತ್ತು ತೊಲೆ = ಒಂದು ಬಾರ[೩೦೩]

ಇವುಗಳನ್ನು ವಸ್ತು ಖರೀದಿಸಲು ತೆರಿಗೆಯ ಲೆಕ್ಕದಲ್ಲಿ ಪಡೆಯಲು ಬಳಕೆ ಮಾಡಿಕೊಳ್ಳಾಗುತ್ತಿತ್ತು.

**ತೂಕಗಳು**

ಅಳತೆಗಳಂತೆ ತೂಕಗಳನ್ನು ಶಾಸನಗಳು ಉಲ್ಲೇಖಿಸಿವೆ. ತಕ್ಕಡಿ, ತ್ರಾಸು(ತಕ್ಕಡಿ), ಭಾರ, ತೊಲೆ, ಬಿಸಿಗೆ, ಮಳವೆ, ಪಲ, ಕೊಡುಗೆ, ಬೆಲ್ಲಳಿಗೆಗಳನ್ನು ಬಿ.ಆರ್.ಹಿರೇಮಠ ಅವರು ಸೂಚಿಸಿದ್ದಾರೆ. ಕ್ರಿ.ಶ. ೧೧೭೨ರ ಶಾಸನದಲ್ಲಿ ತ್ರಾಸು[೩೦೪] ಉಲ್ಲೇಖಗೊಂಡಿದೆ. ತ್ರಾಸು ಎಂದರೆ ತಕ್ಕಡಿ. ಇದು ಇಂದಿಗೂ ಬಳಕೆಯಲ್ಲಿರುವುದು ಕಂಡುಬರುತ್ತದೆ. ಧಾನ್ಯ, ತರಕಾರಿ ಮೊದಲಾವುಗಳನ್ನು ತೂಕ ಮಾಡಲು ಇದನ್ನು ಬಳಸಲಾಗುತ್ತಿತ್ತು. ಈ ತಕ್ಕಡಿಗಳು ಇಂದು ಕಣ್ಮರೆಯಾಗುತ್ತಿವೆ. ಇದರ ಬದಲಿಗೆ ಎಲೆಕ್ಟ್ರಾನಿಕ್ ಸ್ಕೇಲು, ಮೆಷಿನ್‌ಗಳು ಬಳಕೆಯಲ್ಲಿವೆ. ಕ್ರಿ.ಶ. ೧೧೬೦ರ ಶಾಸನದಲ್ಲಿ 'ಭಾರ' ಎಂಬ ತೂಕದ ಮಾಪನದ ಉಲ್ಲೇಖವಿದೆ.[೩೦೫] ತುಲಾಭಾರ ಮಾಡುವುದು ಎಂದು ಇಂದಿಗೂ ಬಳಕೆಯಲ್ಲಿದೆ. ಇದು ತಕ್ಕಡಿಗಿಂತ ದೊಡ್ಡ ಗಾತ್ರದಲ್ಲಿಯೂ ಚಿಕ್ಕ ಗಾತ್ರದಲ್ಲಿಯೂ ಸಂದರ್ಭಕ್ಕೆ ಅನುಸಾರವಾಗಿ ಬಳಸಿರುವ

ಸಾಧ್ಯತೆ ಇದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ತೊಲೆ(ತೊಲ) ಎಂಬ ಪದ ಉಲ್ಲೇಖಗೊಂಡಿದೆ.[೩೦೬] ತೊಲೆಯನ್ನು ತಕ್ಕಡಿಗಿಂತ ಚಿಕ್ಕದಾದ ಚಿಕ್ಕ ತಕ್ಕಡಿಗಳಲ್ಲಿ ತೂಗಲಾಗುತ್ತಿತ್ತು. ಸಾಂಬಾರ ಪದಾರ್ಥಗಳನ್ನು ತೂಗಲು ಇಂತಹ ತಕ್ಕಡಿಗಳನ್ನು ಬಳಸಲಾಗುತ್ತಿತ್ತು. ತೊಲೆಯ ಲೆಕ್ಕದಲ್ಲಿ ಈ ಪದಾರ್ಥಗಳನ್ನು ಖರೀದಿಸಲಾಗುತ್ತಿತ್ತು. ಇಂದು ಗ್ರಾಂಗಳ ಲೆಕ್ಕದಲ್ಲಿ ತೂಗಲಾಗುತ್ತಿದೆ. ಅಲ್ಲದೆ ಬಂಗಾರ, ಬೆಳ್ಳಿಗಳನ್ನು ತೊಲೆ ಲೆಕ್ಕದಲ್ಲಿ ತೂಗಲಾಗುತ್ತಿತ್ತು. ಇಂದು ಇದನ್ನು ಗ್ರಾಂ ಲೆಕ್ಕದಲ್ಲಿ ತೂಕ ಮಾಡಲಾಗುತ್ತಿದೆ. ಕ್ರಿ.ಶ. ೧೧೪೫ರ ಶಾಸನದಲ್ಲಿ 'ಬಿಸಿಗೆ'ಯನ್ನು ಉಲ್ಲೇಖಿಸಲಾಗಿದೆ.[೩೦೭] ಕ್ರಿ.ಶ. ೧೧೬೦ರ ಶಾಸನವು ಮಳವೆ ಎಂಬ ಪದವನ್ನು ಉಲ್ಲೇಖಿಸಿದೆ.[೩೦೮] ಭತ್ತದ ಮಳವೆ ಎಂದು ಕೆಲವು ಕಡೆ ಉಲ್ಲೇಖ ಗೊಂಡಿರುವುದು ಕಂಡುಬರುತ್ತದೆ. ವ್ಯವಹಾರಗಣಿತಶಾಸ್ತ್ರಜ್ಞನಾದ ರಾಜಾದಿತ್ಯನು ಕೊಡುವ ತೂಕ ಮತ್ತು ಅಳತೆಯ ಮಾನಗಳ ಪ್ರಮಾಣ ಈ ಕೆಳಗಿನಂತಿದೆ.

| | | |
|---|---|---|
| ಒಂದು ಖಂಡುಗ | – | ನಾಲ್ಕು ಪಂಚಕ |
| ಒಂದು ಪಂಚ | – | ಐದು ಕೊಳಗ |
| ಒಂದು ಕೊಳಗ | – | ನಾಲ್ಕು ಬಳ್ಳ |
| ನಾಲ್ಕು ಬಳ್ಳ | – | ನಾಲ್ಕು ಮಾನ |
| ಒಂದು ಮಾನ | – | ನಾಲ್ಕು ಸೊಲ್ಲಿಗೆ |
| ಒಂದು ಸೊಲ್ಲಿಗೆ | – | ನಾಲ್ಕು ಗಿದ್ದಿಗೆ |
| ಒಂದು ಭಾರ | – | ಇಪ್ಪತ್ತು ತೊಲ |
| ಒಂದು ತೊಲ | – | ಐದು ಬೀಸಗೆ |
| ಒಂದು ಬೀಸಗೆ | – | ಇಪ್ಪತ್ತು ಪಲ |
| ಒಂದು ಪಲ | – | ನಾಲ್ಕು ಕರ್ಷ |
| ಒಂದು ಕರ್ಷ | – | ನಾಲ್ಕು ಸುವರ್ಣ.[೩೦೯] |

ಕ್ರಿ.ಶ. ೧೨೬೭ರ ಶಾಸನದಲ್ಲಿ ಬೆಂಡೆಯ ಮಳವೆ, ಹತ್ತಿಪಲ, ಗೂಲ ಮಳವೆಗಳ ಉಲ್ಲೇಖವಿದೆ.[೩೧೦] ಕ್ರಿ.ಶ. ೧೧೨೨ರ ಶಾಸನದಲ್ಲಿ ಒಂದು ಪಲ ಮಣ್ಣಿನ ದಾನದ ಉಲ್ಲೇಖವಿದೆ.[೩೧೧] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ 'ಇರ್ಕ್ಕಣ್ಡುಗದಯ್ಗೊಳಂ'[೩೧೨] ಎರಡು ಖಂಡುಗ ಐದು ಕೊಳಗದ ಉಲ್ಲೇಖವಿದೆ. ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ನಾಲ್ಗಣ್ಡುಗಂ' ಮೂಗಣ್ಡುಗ ಉಲ್ಲೇಖಿಸಿದೆ.[೩೧೩] ಕ್ರಿ.ಶ. ೧೦೯೧ರ ಶಾಸನದಲ್ಲಿ ಐಯ್ವತ್ತು ಕಣ್ಡುಗ ಗದೆಯನ್ನು ದಾನ ನೀಡಿದ್ದನ್ನು ತಿಳಿಸಿದೆ.[೩೧೪] ಕ್ರಿ.ಶ. ೯–೧೦ನೆಯ ಶತಮಾನದ ಶಾಸನವು ಇರ್ಕ್ಕಣ್ಡುಗನ್ನೆಲ್ಮಣ್ಣಂ ಪಲಸರ್ಕ್ಕೋಲುಂ ದೇವಕೆಱಿಉ ಕೊಟ್ಟರ್ ಎಂದಿದೆ.[೩೧೫] ಎರಡು ಕಂಡುಗ ಭೂಮಿಯನ್ನು ಪಲಸರ್ಕ್ಕೆ ಕೋಲುಗಳನ್ನು ದಾನ ಮಾಡಿದಂತಿದೆ. ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ 'ಅಯ್ಗುಳ ಬೆದೆಮಣ್ಣು' ಉಲ್ಲೇಖವಿದೆ.[೩೧೬] ಐದು ಕೊಳಗ ಭೂಮಿಯ ದಾನದ ಬಗೆಗೆ ತಿಳಿಸಿದೆ. ಕ್ರಿ.ಶ. ೧೦೧೫–೧೬ರ ಶಾಸನದಲ್ಲಿ ಪತ್ತುಬಳ್ಳ ಮಣ್ಣು ಇರುಕಣ್ಡುಗತ್ತುಪತ್ತು ಬಳ್ಳ'ವನ್ನು ಉಲ್ಲೇಖಿಸಿದೆ.[೩೧೭] ಹತ್ತು ಬಳ್ಳ ಭೂಮಿ, ಎರಡು ಖಂಡುಗ, ಹತ್ತು ಬಳ್ಳ ಭೂಮಿಯ ದಾನವನ್ನು ತಿಳಿಸಿದೆ.

ನಂಜನಗೂಡಿನ ಶಾಸನವೊಂದರಲ್ಲಿ ಎರಡು ಖಂಡುಗ ಮತ್ತು ಹತ್ತು ಬಳ್ಳ ವಿಸ್ತಾರವಾದ ಭೂಮಿಯನ್ನು ಗ್ರಾಮಸಭೆಯವರು ಮಾರಿದರೆಂದಿದೆ. ಈ ಅಳತೆಯು ಅಂದು ಆ ಪ್ರದೇಶದಲ್ಲಿ ಬಳಕೆಯಲ್ಲಿತ್ತು. ಅಲ್ಲದೆ ಇನ್ನೆಲ ಕಣ್ಡುಗಪಡಿಯ ಉಲ್ಲೇಖವಿದೆ. ಅಂದರೆ ೨ ಮಾಕಾಣಿಗೆ ಇದು

ಸಮವಾಗುತ್ತದೆ ಎಂದು ತಿಳಿಯಲಾಗಿದೆ. ಒಂದು ಖಂಡುಗ ಮತ್ತು ಐದು ಬಳ್ಳ ಭೂಮಿಯು ಒಂದು ಮಾಕಾಣಿಗೆ ಸಮವಾಗುತ್ತದೆ.[೩೧೮] ಕ್ರಿ.ಶ. ೧೦೮೭ರ ಶಾಸನದಲ್ಲಿ ಮೂಗಣ್ಡುಗ ಬೆದೆ, ಅಯ್ಗಣ್ಡುಗದ ಉಲ್ಲೇಖವಿದೆ.[೩೧೯] ಕ್ರಿ.ಶ. ೧೧೭೬, ಕ್ರಿ.ಶ. ೧೧೯೯–೧೦ರ ಶಾಸನದಲ್ಲಿ ಗದ್ದೆ ಖಂಡುಗ, ಒಮ್ಮಾನ ಬಸದಿಗೆ ಎಣ್ಣೆ ನೀಡಿದ್ದನ್ನು ತಿಳಿಸಿದೆ.[೩೨೦]

ಈ ರೀತಿಯಾದ ಅಳತೆಗಳು ಕಂಡುಬರುತ್ತವೆ. ಕಾಲದಿಂದ ಕಾಲಕ್ಕೆ ಬದಲಾವಣೆಯನ್ನು ಮೈಗೂಡಿಸಿಕೊಂಡು ನಿರಂತರವಾಗಿ ಈ ಅಳತೆ ಮಾಪನಗಳು ಉಳಿದುಕೊಂಡು ಬಂದಿವೆ. ಅಳತೆ ಮತ್ತು ತೂಕಗಳು ಯಾವ ರೀತಿ ನಿಯಂತ್ರಣದಲ್ಲಿದ್ದವೆಂಬುದಕ್ಕೆ ಪ್ರಾಚೀನ ಕೃತಿಯಾದ ಅರ್ಥಶಾಸ್ತ್ರವು ತಿಳಿಸಿದೆ. ಆದರೆ ಶಾಸನಗಳಲ್ಲಿ ಈ ಕುರಿತು ಮಾಹಿತಿ ದೊರೆಯುವುದಿಲ್ಲ. ಪಂಪಭಾರತದಲ್ಲಿ 'ಸೆಟ್ಟಿಯ ಬಳ್ಳ ಕಿರಿದು' ಎಂದಿದೆ.[೩೨೧] ವ್ಯಾಪಾರಂ ದ್ರೋಹ ಚಿಂತನಂ ಎಂಬ ಮಾತಿನಂತೆ ಪ್ರಾಚೀನ ಕಾಲದಿಂದ ಇಂದಿನವರೆಗೂ ವ್ಯಾಪಾರಿ ವೃತ್ತಿಯು ಮೋಸದಾಯಕವಾಗಿಯೇ ಕಂಡುಬರುತ್ತದೆ. ಈ ಕಾರಣದಿಂದಾಗಿಯೇ ಪಂಪ ಹೀಗೆ ಬರೆದಿರುವ ಸಾಧ್ಯತೆಗಳಿವೆ. ವ್ಯಾಪಾರಿಗಳು ಈ ರೀತಿ ಮೋಸದ ಹಾದಿಯಲ್ಲಿ ಸಾಗದಿದ್ದರೆ ಅವರು ಲಾಭಗಳಿಸಿ ದಾನದತ್ತಿಗಳನ್ನು ನೀಡುತ್ತಿರಲಿಲ್ಲ. ಇತಿಹಾಸ ಪುಟಗಳಲ್ಲಿ ಕಾಣಸಿಗುತ್ತಿರಲಿಲ್ಲ. ಸಾಮಾನ್ಯ ಕೃಷಿ ಕೂಲಿಗಳಂತೆ ನಿರ್ಲಕ್ಷಿಸಲ್ಪಟ್ಟವರಂತೆ ಮೂಲೆಗುಂಪಾಗಿರುತ್ತಿದ್ದರು. ಬ್ರಹ್ಮಶಿವನು ಇನ್ನೊಬ್ಬರಿಂದ ಕೊಳ್ಳುವಾಗ ಹಿರಿಯಕೋಲು, ಬಳ್ಳವನ್ನು ಬಳಸಿದರೆ ಕೊಡುವಾಗಲು ಅದನ್ನೇ ಬಳಸಬೇಕೆಂದಿದ್ದಾನೆ.[೩೨೨] ಇಂದಿಗೂ ವ್ಯಾಪಾರಿಗಳಲ್ಲಿ ಈ ಗುಣಗಳು ಕಂಡುಬರುತ್ತವೆ. ನಯಸೇನನು ಧರ್ಮಾಮೃತದಲ್ಲಿ 'ಸೆಟ್ಟಿಯ ಮಾತುಳ್ಳಿದವು ಬಳ್ಳ ಕಿಱಿದೆಂಬಂತೆ' ಎಂದಿರುವನು.[೩೨೩] ಸೆಟ್ಟಿ ನಗುನಗುತ್ತಾ ಮಾತಾಡಿ ತಟ್ಟುತ್ತಾನೆ ಎಂಬ ಇಂದಿನ ಮಾತು ನಯಸೇನನ ಮಾತನ್ನು ಸೂಚಿಸುತ್ತದೆ. ಲಾಭದಾಸೆಯಿಂದ ಈ ರೀತಿಯ ಕೃತ್ಯಗಳಲ್ಲಿ ತೊಡಗುತ್ತಾರೆ. ಕೊಳ್ಳುವಾಗ ದೊಡ್ಡಬಳ್ಳ ಕೊಡುವಾಗ ಚಿಕ್ಕದು ಎಂದು ಎರಡು ರೀತಿಯಲ್ಲಿ ಮಾಡಿಸಿ ಇಟ್ಟುಕೊಂಡು ಈ ರೀತಿ ಮಾಡಲಾಗುತ್ತಿತ್ತು. ಕ್ರಿ.ಶ. ೮೦೦ರ ಶಾಸನದಲ್ಲಿ ಅಧಿಕಾರಿಯೊಬ್ಬನು ಹೊಲವನ್ನು ಅಳೆದು ನಾಲ್ಕು ಎತ್ತಿನ ಹೊಲವನ್ನು ಆರು ಎತ್ತಿನ ಹೊಲವೆಂದು ಅಳೆದು ಕೊಟ್ಟನೆಂದಿದೆ.[೩೨೪] ಇದನ್ನು ಗಮನಿಸಿದಾಗ ಮೋಸವಲ್ಲದೆ ಭ್ರಷ್ಟಾಚಾರವು ಅಧಿಕಾರಿಗಳಲ್ಲಿ ನೆಲೆಯೂರಿತ್ತು. ಹಣದ ಆಸೆಗಾಗಿ ಯಾರು ಹಣಕೊಡುವರೊ ಅವರ ಕಡೆ ಅಳತೆಯ ಪಕ್ಷಪಾತ ಮಾಡಲಾಗುತ್ತಿತ್ತು. ಭ್ರಷ್ಟಾಚಾರದ ತಳಪಾಯ ಅಂದಿನಿಂದಲೂ ಭದ್ರವಾಗಿ ಭಾರತೀಯ ಸಮಾಜದಲ್ಲಿ ಬೇರೂರಿದೆ ಎಂಬುದು ತಿಳಿದುಬರುತ್ತದೆ. ಈ ರೀತಿಯ ಅನ್ಯಾಯಗಳು ಸಂಭವಿಸಿದಾಗ ರಾಜನು ಅವುಗಳನ್ನು ಬಗೆಹರಿಸುತ್ತಿದ್ದನು. ಅರ್ಥಶಾಸ್ತ್ರಕಾರನು ಅಳತೆ ಮತ್ತು ತೂಕದ ಮೇಲೆ ರಾಜ್ಯದ ಮುದ್ರೆ ಇರಬೇಕು ಎಂದಿದ್ದಾನೆ.[೩೨೫] ಅಂದಿನಿಂದಲೇ ತೂಕ ಮತ್ತು ಅಳತೆಗಳಲ್ಲಿ ತಾರತಮ್ಯ ಮತ್ತು ಮೋಸಗಳು ನಡೆಯುತ್ತಿದ್ದವೆಂಬುದು ಅರ್ಥಶಾಸ್ತ್ರಕಾರನ ಉಲ್ಲೇಖಗಳಿಂದ ತಿಳಿಯುತ್ತದೆ. ಅದಕ್ಕಾಗಿ ಒಬ್ಬ ಪಂತಾವಾಧ್ಯಕ್ಷನೆಂಬ ಅಧಿಕಾರಿಯೂ ಇರುತ್ತಿದ್ದನೆಂದು ತಿಳಿಯಲಾಗಿದೆ.

ಸಮಾಜದಲ್ಲಿ ಇಂತಹ ಭ್ರಷ್ಟ, ಲಾಭ, ಲೋಭಗಳು ಇರುವವರೆಗೂ ಯಾವ ಕ್ಷೇತ್ರವೂ ಶುಭ್ರವಾಗಿ ಕಾಣಲು ಸಾಧ್ಯವಿಲ್ಲ. ಅದೇನಿದ್ದರು ಅಳತೆಗಳು ಕಾಲಕ್ಕೆ, ಸ್ಥಳಕ್ಕೆ ತಕ್ಕಂತೆ ಬದಲಾವಣೆಯನ್ನು ಹೊಂದಿ, ಇಂದು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಕಂಡುಬರುತ್ತಿವೆ. ಇಂದಿನ ಆಧುನೀಕ ಯುಗದಲ್ಲಿ ಎಲ್ಲವೂ ಯಾಂತ್ರಿಕೃತವಾಗಿದೆ. ಕೆ.ಜಿ, ಟನ್, ಮೆಟ್ರಿಕ್ ಟನ್‌ಗಳ ಬಳಕೆ ಕಂಡುಬರುತ್ತಿದೆ. ಎಲೆಕ್ಟ್ರಾನಿಕ್ ತೂಕ ಯಂತ್ರಗಳು ಇಂದು ಬಳಕೆಯಲ್ಲಿವೆ. ಬಂಡಿಗಳಲ್ಲಿ ಬಂದ ವಸ್ತುಗಳನ್ನು ಹಿಂದೆ ಬಂಡಿಗೆ ಇಂತಿಷ್ಟು ಎಂದು ನಿಗದಿಗೊಳಿಸುತ್ತಿದ್ದರು. ಆದರೆ ಇಂದು ಸಾಮಗ್ರಿ ತುಂಬಿದ ವಾಹನ ಸಮೇತವಾಗಿ ವೇ ಬ್ರಿಡ್ಜ್‌ಗಳಲ್ಲಿ ತೂಕ ಮಾಡುತ್ತಿರುವುದು ಕಂಡುಬರುತ್ತದೆ.

ತೂಕದಲ್ಲಿ ಸಾಕಷ್ಟು ಬದಲಾವಣೆಗಳು ಆಧುನಿಕತೆಯಿಂದ ಸಂಭವಿಸಿವೆ. ಆದರೆ ಭೂ ಅಳತೆಗಳಲ್ಲಿ ಅಂದು ಕೋಲುಗಳು ಬಳಕೆಯಾದರೆ ಇಂದು ಸರಪಳಿ, ಹಗ್ಗಗಳು ಬಳಕೆಯಾಗುತ್ತಿವೆ. ಭೂಮಿಯ ಪ್ರಮಾಣಕ್ಕೆ ಅನುಗುಣವಾಗಿ ಕರೆಯುವ ಅಳತೆಗಳ ಹೆಸರುಗಳಲ್ಲಿ ಬದಲಾವಣೆ ಕಂಡುಬರುತ್ತಿದೆ. ಅಡಿ, ಚದರ, ಗುಂಟೆ, ಎಕರೆಗಳು ಇಂದು ಪ್ರಚಲಿತದಲ್ಲಿವೆ.

### ೪.೫. ಕೃಷಿ ಮತ್ತು ಸಾಲಗಳು

ಪ್ರಾಚೀನ ಕೃಷಿಯಲ್ಲಿ ಸಾಲಗಳನ್ನು ಯಾರು ಪಡೆದರು ಎಂಬುದರ ಬಗೆಗೆ ಶಾಸನಗಳು ಉಲ್ಲೇಖಿಸುವುದು ವಿರಳವಾಗಿ ಕಂಡುಬರುತ್ತವೆ. ಅಲ್ಲದೆ ಕೃಷಿಕರೆ ಸಾಲ ಪಡೆದರೆಂಬುದಕ್ಕೆ ಮಾಹಿತಿಗಳು ದೊರೆಯುವುದು ಸಹ ವಿರಳದ ಸಂಗತಿಯೇ ಆಗಿದೆ. ಈ ಕುರಿತ ಮಾಹಿತಿಯು ಅರ್ಥಶಾಸ್ತ್ರದಲ್ಲಿ ಕಂಡುಬರುತ್ತದೆ. ಅಲ್ಲದೆ ಬಡ್ಡಿಯ ಪ್ರಮಾಣ, ವ್ಯಾಪಾರಿಗಳು ಸಾಲ ಪಡೆದಾಗ ನೀಡಬೇಕಾದ ಬಡ್ಡಿ, ಧಾನ್ಯದ ಸಾಲದ ಬಡ್ಡಿ ಮೊದಲಾದವುಗಳ ಬಗೆಗೆ ಮಾಹಿತಿ ನೀಡಿರುವುದು ಕಂಡುಬರುತ್ತದೆ. 'ಒಂದು ನೂರು ಪಣಗಳಿಗೆ ಒಂದು ಕಾಲು ಪಣ ಬಡ್ಡಿಯನ್ನು ತಿಂಗಳಿಗೆ ಕೊಡಬೇಕು.[೩೬] ಇದು ಸಾಮಾನ್ಯ ಜನರಿಗೆ ವಿಧಿಸಿದ ಬಡ್ಡಿಯದರವಾಗಿ ಕಂಡುಬರುತ್ತದೆ. ನೂರು ಪಣಗಳಿಗೆ ಹತ್ತು ಗದ್ಯಾಣವಾಗಿರುತ್ತದೆ. ತಿಂಗಳಿಗೆ ಒಂದು ಕಾಲು ಪಣ ಎಂದರೆ ೧.೨೫% ಬಡ್ಡಿ ಹಾಕಿರುವಂತೆ ತಿಳಿಯುತ್ತದೆ. ಇಂದಿನ ಬಡ್ಡಿದರಕ್ಕೆ ಹೋಲಿಸಿದರೆ ಅಂತಹ ವ್ಯತ್ಯಾಸವೇನು ಕಂಡುಬರುವುದಿಲ್ಲ. ಆದರೆ ನಿಯಮಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ರೈತರಿಗೆ ಇಂದಿನ ದಿನಗಳಲ್ಲಿ ಬ್ಯಾಂಕುಗಳಲ್ಲಿ ಕೊಡುವ ಬಡ್ಡಿಗೆ ಹೋಲಿಸಿದರೆ ಅರ್ಥಶಾಸ್ತ್ರಕಾರ ತಿಳಿಸಿದ ಬಡ್ಡಿ ದರವೇ ಹೆಚ್ಚೆನಿಸುತ್ತದೆ. 'ಸರಕುಗಳನ್ನು ಕೊಳ್ಳುವುದು, ಮಾರುವುದೇ ಮುಂತಾದ ವ್ಯವಹಾರ ಪ್ರಯೋಜನಕ್ಕಾಗಿ ಒಂದು ನೂರು ಪಣಗಳಿಗೆ ಐದು ಪಣಗಳು ಬಡ್ಡಿ. ದುರ್ಗಮವಾದ ಮಾರ್ಗಗಳಲ್ಲಿ ಸರಕುಗಳನ್ನೊಯ್ದು ಮಾರುವ ವರ್ತಕರಿಗೆ ಒಂದುನೂರು ಪಣಗಳಿಗೆ ಹತ್ತು ಪಣ ಬಡ್ಡಿ. ಸಮುದ್ರದ ಮೇಲೆ ವ್ಯಾಪಾರ ನಡೆಸುವ ವರ್ತಕರಿಗೆ ಒಂದುನೂರು ಪಣಗಳಿಗೆ ತಿಂಗಳಿಗೆ ಇಪ್ಪತ್ತು ಪಣ ಬಡ್ಡಿ.[೩೭] ಅರ್ಥಶಾಸ್ತ್ರಕಾರ ಹೇಳಿರುವ ಈ ಬಡ್ಡಿಯ ನಿಯಮಗಳು ಆದಾಯದ ಮಿತಿಗೆ ಅನುಗುಣವಾಗಿದ್ದವೆಂದು ತಿಳಿಯುತ್ತದೆ. ವ್ಯಾಪಾರಿಗಳಿಗೆ ೧೦೦ ಪಣಗಳಿಗೆ ಬಡ್ಡಿದರವು ಅವರು ವ್ಯಾಪಾರ ಮಾಡುವ ಸ್ಥಳಗಳ ಮೇಲೆ ನಿರ್ಧರಿತವಾಗಿರುವುದು ಕಂಡುಬರುತ್ತದೆ. ಇಂದಿನ ಹಣಕಾಸು ಸಂಸ್ಥೆಗಳು ಸಾಲ ತೆಗೆದುಕೊಳ್ಳುವ ಪ್ರಮಾಣದ ಮೇಲೆ ಬಡ್ಡಿ ವಿಧಿಸುವುದು ಕಂಡುಬರುತ್ತದೆ. ಸ್ಥಳದಿಂದ ಸ್ಥಳಕ್ಕೆ ಬದಲಾವಣೆಯಾಗುವ ಆಧಾರದ ಮೇಲೆ ಬಡ್ಡಿಯ ದರಗಳ ಪ್ರಮಾಣವನ್ನು ಭಿನ್ನವಾಗಿ ವಿಧಿಸಲಾಗುತ್ತಿತ್ತು. ಆಯಾ ಸ್ಥಳಕ್ಕೆ ಅನುಗುಣವಾಗಿ ೫%, ೧೦%, ೨೦% ಬಡ್ಡಿಯವರೆಗೂ ಇದ್ದಂತೆ ಕಂಡುಬರುತ್ತದೆ. ಇದನ್ನು ಮೀರಿ ಕೊಡುವಂತೆಯೂ ಇಲ್ಲ, ಪಡೆಯುವಂತೆಯೂ ಇಲ್ಲ. ಪ್ರೇರೇಪಿಸುವವರಿಗೂ ಕೇಳುವವರಿಗೂ 'ಪೂರ್ವಸಾಹಸದಂಡ, ಸಾಕ್ಷಿಗಳಿಗೂ ಪೂರ್ವಸಾಹಸದ ಅರ್ಧದಷ್ಟು ದಂಡ ಹಾಕಬೇಕು.'[೩೮] ಅಗತ್ಯತೆ ಮತ್ತು ಲಾಭದ ದೃಷ್ಟಿಯಿಂದ ತೆರಿಗೆಗಳನ್ನು ಹಾಕಿರುವುದು ಕಂಡುಬರುತ್ತದೆ. ಅಲ್ಲದೆ ರಾಜ್ಯದಲ್ಲಿ ಅಂತಿಮ ಕಡಿವಾಣವೆಂಬುದು ಇದ್ದಿತೆಂದು ದಂಡ ಹಾಕುವ ವ್ಯವಸ್ಥೆಯಿಂದ ತಿಳಿಯುತ್ತದೆ. ಸಾಮಾನ್ಯವಾಗಿ ವ್ಯಾಪಾರಿಗಳ ಲಾಭ ಮತ್ತು ಅಗತ್ಯತೆಯನ್ನು ಅನುಸರಿಯೇ ಸಮಾಜದಲ್ಲಿ ಬಡ್ಡಿಯನ್ನು ನಿಗದಿಪಸಿದಂತಿದೆ. ವ್ಯಾಪಾರಸ್ಥರಿಗೆ ಬಂಡವಾಳ ಹೂಡಿಕೆಗೆ ಹಣ ಅಗತ್ಯವಾಗಿರುತ್ತದೆ. ಇದರಿಂದ ಅಧಿಕ ಬಡ್ಡಿಯಾದರೂ ಅವರು ತೆಗೆದುಕೊಳ್ಳುವ ಅನಿವಾರ್ಯತೆ ಸೃಷ್ಟಿಯಾಗಿರುತ್ತದೆ. ಇಂತಹ ಅಗತ್ಯತೆಗಳನ್ನು ಗಮನಿಸಿಯೇ ಬಡ್ಡಿ ದರದಲ್ಲಿ ಹೆಚ್ಚಳ ಕಂಡುಬಂದಿರುವಂತಿದೆ. ಸಹಜವಾಗಿಯೇ 'ವ್ಯಾಪಾರಂ ದ್ರೋಹ ಚಿಂತನಂ' ಎಂಬ

ಮಾತಿನಂತೆ ಇವರು ಲಾಭಗಳಿಸಿರುವುದರ ಹಿಂದೆ ಮೋಸ ಮಾಡಿಯೇ ಆದಾಯ ಹೆಚ್ಚಿಸಿಕೊಂಡಿರುವ ಸಾಧ್ಯತೆಯಿಂದಾಗಿ ಇವರು ಬಡ್ಡಿಯನ್ನು ಪಾವತಿಸಿದ್ದಿರಬೇಕು.

ಅರ್ಥಶಾಸ್ತ್ರಕಾರ ತಿಳಿಸಿದ ಧಾನ್ಯದ ಮೇಲಿನ ಸಾಲವು ವರ್ಷಕ್ಕೆ ನಿಗದಿಯಾಗಿರುತ್ತಿತ್ತು. ಅದನ್ನು ಸುಗ್ಗಿಯ ಕಾಲದಲ್ಲಿ ಸಾಲ ನೀಡಿ ಪುನಃ ಸುಗ್ಗಿ ಕಾಲದಲ್ಲಿಯೇ ವಾಪಸ್ಸು ಪಡೆಯಲಾಗುತ್ತಿತ್ತು. ಆದರೆ ಯಾರು ಧಾನ್ಯ ಪಡೆಯುತ್ತಿದ್ದರು ಎಂಬುದು ತಿಳಿಯದು. 'ಬಡ್ಡಿಗಾಗಿ ಸಾಲಕೊಟ್ಟ ಧಾನ್ಯವು ಸುಗ್ಗಿ ಕಾಲದ ಹೊತ್ತಿಗೆ ಅದರ ಒಂದೂವರೆಯಷ್ಟು ಆಗುವುದು. ಅದಕ್ಕೂ ಹೆಚ್ಚಿನ ಬಡ್ಡಿಯನ್ನು ಪಡೆಯಬೇಕೆಂದಾಶಿಸಿದರೆ ಬಡ್ಡಿ ಸಹಿತವಾದ ಧಾನ್ಯಕ್ಕೆ ಬೆಲೆಯೊಂದನ್ನು ನಿರ್ಧರಿಸಿ ಅದಕ್ಕೆ ಬಡ್ಡಿದರವೊಂದನ್ನು ಗೊತ್ತುಪಡಿಸಬೇಕು. ಬಡ್ಡಿಯ ರೂಪದಲ್ಲಿ ಬಂದ ಧಾನ್ಯದ ಬೆಲೆಯು ಮೂಲಧಾನ್ಯದ ಬೆಲೆ ವ್ರಿದ್ಧಿ(ಬಡ್ಡಿ)ಯ ಅರ್ಧದಷ್ಟು ಹೆಚ್ಚುವುದು.[೩೯] ಈ ಸಾಲವನ್ನು ಕೃಷಿಕರು ಪಡೆದರೇ ಅಥವಾ ಸಮಾಜದ ಇತರವರ್ಗ ಪಡೆಯಿತೇ ಎಂಬುದರ ಬಗೆಗೆ ಖಚಿತತೆ ದೊರೆಯದು. ಕೃಷಿಕರು ಸಾಲ ಪಡೆದರೆ ಧಾನ್ಯವನ್ನೇಕೆ ಪಡೆಯುತ್ತಿದ್ದರು ಎಂಬುದು ಪ್ರಶ್ನಾತೀತವಾಗುತ್ತದೆ. ಬಡ್ಡಿಯ ಪ್ರಮಾಣವನ್ನು ಗಮನಿಸಿದರೆ ಕೃಷಿಕರಲ್ಲದವರು ಪಡೆದಿರಬೇಕು ಎನ್ನಿಸುತ್ತದೆ. ಧಾನ್ಯದ ಮೇಲಿನ ಬಡ್ಡಿಯನ್ನು ಗಮನಿಸಿದರೆ ಕೃಷಿಕರಿಗೆ ಅರ್ಥಶಾಸ್ತ್ರದ ಕಾಲದಲ್ಲಿ ಇದ್ದ ಮೌಲ್ಯದ ಬಗೆಗೆ ತಿಳಿಯುತ್ತದೆ. ಜೊತೆಗೆ ರೈತರು ಬೆಳೆದ ಬೆಳೆಗೂ ಮೌಲ್ಯವಿತ್ತೆನ್ನಿಸುತ್ತದೆ. ಧಾನ್ಯದ ಮೇಲೆ ವಿಧಿಸುತ್ತಿದ್ದ ಬಡ್ಡಿಯ ದರದಲ್ಲಿ ಎರಡು ವೈರುಧ್ಯಗಳನ್ನು ಅಥವಾ ದ್ವಂದ್ವವನ್ನು ಹೇಳಿರುವನು ಎನ್ನಿಸುತ್ತದೆ. ಒಂದು ಕಡೆ ವರ್ಷಕ್ಕೆ ಧಾನ್ಯದ ಒಂದೂವರೆಯಷ್ಟು ಬಡ್ಡಿ ಕೊಡಬೇಕು ಎಂದಿರುವುದು. ಮತ್ತೊಂದು ಕಡೆ ಬಡ್ಡಿರೂಪದಲ್ಲಿ ಬಂದ ಧಾನ್ಯದ ಬೆಲೆಯು ಮೂಲಧಾನ್ಯದ ಬೆಲೆ ವ್ರಿದ್ಧಿ(ಬಡ್ಡಿ)ಯ ಅರ್ಧದಷ್ಟು ಹೆಚ್ಚುವುದು ಎಂದಿರುವುದು. ಈ ಎರಡು ವೈರುಧ್ಯಗಳಲ್ಲಿ ಯಾವುದು ಸರಿಯಾದ ಬಡ್ಡಿಯೆಂಬ ದ್ವಂದ್ವ ಎದುರಾಗುತ್ತದೆ. ಇವೆರಡರಲ್ಲಿ ಯಾವುದು ಬಡ್ಡಿಯಾಗಿತ್ತೆಂಬ ಸಂಶಯ ಬರುತ್ತದೆ. ಅರ್ಥಶಾಸ್ತ್ರಕಾರ ಮೊದಲು ತಿಳಿಸಿದ ಪ್ರಕಾರ ಮೂಲಧಾನ್ಯಕ್ಕೆ ಬಡ್ಡಿಯ ಧಾನ್ಯ ಅದರ ಒಂದುವರೆಯಷ್ಟೆ ಹೆಚ್ಚಾಗುತ್ತದೆ. ಆದರೆ ಇಲ್ಲಿ ಅರ್ಧದಷ್ಟು ಹೆಚ್ಚಾಗುತ್ತದೆ ಎಂದು ತಿಳಿಸಿದ್ದಾನೆ. ಬಡ್ಡಿ ಬೆಳೆಯಬೇಕೆಂಬ ದುರದ್ದೇಶದಿಂದ ಸಾಲ ತೆಗೆದುಕೊಂಡವನು ಸಮಯಕ್ಕೆ ಸರಿಯಾಗಿ ಪಾವತಿಸಲು ಬಂದಾಗ ಪಡೆಯದಿದ್ದರೆ ಸಾಲಕೊಟ್ಟವನಿಗೆ ದಂಡ ಹಾಕಬೇಕು. ಅಲ್ಲದೆ ವಿಧಿಸಿದ ಬಡ್ಡಿಯಷ್ಟನ್ನು ಮಾತ್ರ ಕೊಡಲಾಗುತ್ತದೆ ಎಂಬ ನಿಯಮಗಳು ಕಂಡುಬರುತ್ತವೆ. ರಾಜಪ್ರಭುತ್ವದ ಆಳ್ವಿಕೆಯಲ್ಲಿ ಸಮಾಜದಲ್ಲಿ ನಿಯಮಗಳು ಇರುತ್ತಿದ್ದವು. ಅವುಗಳನ್ನು ಮೀರಿದವರಿಗೆ ದಂಡ ವಿಧಿಸುವ ಕ್ರಮವಿದ್ದಿತು. ಈ ಕಾರಣಕ್ಕಾಗಿ ಜನರಲ್ಲಿಯೇ ನೈತಿಕ ಜವಾಬ್ದಾರಿ ಇದ್ದಿರುವ ಸಾಧ್ಯತೆಗಳಿವೆ. ಆದರೆ ಇಂದಿನ ಪ್ರಜಾಪ್ರಭುತ್ವದಲ್ಲಿ ಈ ರೀತಿಯ ಕ್ರಮಗಳು ಕಟ್ಟುನಿಟ್ಟಾಗಿ ಜಾರಿಗೆ ಬಾರದ ಹಿನ್ನೆಲೆಯು ಸಮಾಜದ ಅನೇಕ ಸಮಸ್ಯೆಗಳಿಗೆ ದಾರಿಮಾಡಿಕೊಟ್ಟಂತೆ ಕಂಡುಬರುತ್ತದೆ. ಪ್ರಾಚೀನ ಕಾಲದ ಬಡ್ಡಿಯ ಪ್ರಮಾಣ ಮತ್ತು ದಂಡವಿಧಿಸುವ ಕ್ರಮಗಳು ಅನಗತ್ಯ ಸಾಲಗಾರರಿಗೆ ನೈತಿಕವಾಗಿ ಎಚ್ಚರಿಕೆಯ ಸಂದೇಶವನ್ನು, ಮುಂದೊದಗಬಹುದಾದ ವಾಸ್ತವ ಸ್ಥಿತಿಯನ್ನು ಅರ್ಥಮಾಡಿಸಿದಂತಿದೆ. ಒಂದು ವೇಳೆ ಸಾಲ ಪಡೆದುಕೊಂಡವರು ಪ್ರವಾಸದಲ್ಲಿದ್ದು, ಸಮಯಕ್ಕೆ ಸರಿಯಾಗಿ ಕೊಡದಿದ್ದರೆ, ಮೂಢನೂ ಧಾನ್ಯದ ಬೆಲೆಯೆರಡರಷ್ಟನ್ನು ಕೊಡಬೇಕು ಎಂದಿರುವುದು ಕಂಡುಬರುತ್ತದೆ. ಬಡ್ಡಿ ನೀಡುವವರು ಯಾವ ತೆರನಾದ ಮೋಸ ಮಾಡಲು ಅವಕಾಶಗಳು ಇದ್ದಂತೆ ಕಂಡುಬರುವುದಿಲ್ಲ. ಬಡ್ಡಿ ಸಾಲ ಕೊಡುವ ಮುನ್ನವೇ ನಿರ್ಧರಿತವಾಗಬೇಕಿತ್ತು. ಬಡ್ಡಿಯಲ್ಲಿ ಮೊದಲು ಕಡಿಮೆ, ಅನಂತರ ಹೆಚ್ಚು ಕೊಡಬೇಕೆಂಬ ಯಾವ ನಿಯಮಗಳು ಜಾರಿಯಲ್ಲಿರಲಿಲ್ಲ. ಈ ರೀತಿ ಠಕ್ಕಟಿಕ್ಕಿತನ ಮಾಡುವವರಿಗೆ ಶಿಕ್ಷೆ ವಿಧಿಸಲಾಗುತ್ತಿತ್ತು ಎಂಬುದನ್ನು ಅರ್ಥಶಾಸ್ತ್ರಕಾರ ತಿಳಿಸುವನು. ದಂಡದ

ಪ್ರಮಾಣ ಎಷ್ಟಿತ್ತೆಂದರೆ ಮೊದಲೇ ನಿಗದಿಯಾದ ಬೆಲೆಗಿಂತ ಹೆಚ್ಚು ಕೇಳುವವರಿಗೆ ಮೂಲಧನಕ್ಕೆ ನಾಲ್ಕರಷ್ಟು ದಂಡ ಹಾಕಬೇಕು. ಸಾಲ ಪಡೆದವನು ಅಲ್ಪ ಹಣವನ್ನಿತ್ತು ಹೆಚ್ಚು ಕೊಟ್ಟನೆಂದು ಸಾಕ್ಷಿಗಳಿಗೆ ತಿಳಿಸಿದರೂ ೪ರಷ್ಟು ದಂಡ ಅದರಲ್ಲಿ ೧/೩ ಭಾಗ ಸಾಲಗಾರ ೨/೩ ಭಾಗ ಸಾಲಿಗನೂ ಕೊಡಬೇಕು'[೩೩೦] ಈ ರೀತಿಯ ತಾರತಮ್ಯಗಳು ಸೃಷ್ಟಿಯಾದಾಗ ಇಬ್ಬರಲ್ಲಿಯೂ ದೋಷವಿದೆ ಎಂದು ಪರಿಗಣಿಸಿ ಇಬ್ಬರಿಗೂ ದಂಡ ಹಾಕಿರುವುದು ತಿಳಿಯುತ್ತದೆ. ಅಲ್ಲದೆ ಪ್ರಾಚೀನ ಕಾಲದಲ್ಲಿ ಮಾತಿನ ವ್ಯವಹಾರಕ್ಕಿದ್ದ ಪ್ರಾಮುಖ್ಯತೆಯನ್ನು ತಿಳಿಸುತ್ತದೆ.

ಶಾಸನಗಳಲ್ಲಿ ರೈತರು ಸಾಲ ಪಡೆದರೆ ಇಲ್ಲವೆ ಎಂಬ ವಿಚಾರದ ಬಗೆಗೆ ದಾಖಲೆಗಳು ವಿರಳ. ಆದರೆ ಸಾಲ ಕೊಡುವವರ ಬಗೆಗೆ ಹೇರಳವಾದ ದಾಖಲೆಗಳಿವೆ. ಸಾಮಾನ್ಯವಾಗಿ ಸಾಲ ಕೊಡುವವರು, ಬಡ್ಡಿಗೆ ನೀಡುತ್ತಿದ್ದರೆಂಬ ವಿಚಾರಗಳು ಸಾಲಪಡೆಯುವವರೂ ಇದ್ದರೆಂಬುದನ್ನು ಸೂಚಿಸುತ್ತವೆ. ಬಹುತೇಕವಾಗಿ ಸಾಲ ಪಡೆಯುವವರು ಸಮಾಜದಲ್ಲಿದ್ದ ಕೃಷಿಕರು ಮತ್ತು ಉದ್ಯೋಗಸ್ಥರು ಅಥವಾ ವ್ಯಾಪಾರಿವರ್ಗದವರು ಆಗಿರುವ ಸಾಧ್ಯತೆಗಳಿವೆ. ಆರ್ಥಿಕವಾಗಿ ಪ್ರಬಲವಾಗಿದ್ದ, ಅಧಿಕಾರಿ ಶಾಹಿ ವರ್ಗದವರಿಗೆ ಬಡ್ಡಿ ಸಾಲದ ಅವಶ್ಯಕತೆ ಇತ್ತೆನಿಸುವುದಿಲ್ಲ. ದೇವಾಲಯಗಳ, ಕರೆಗಳ ನಿರ್ವಹಣೆ, ಜೀರ್ಣೋದ್ಧಾರದಂತಹ ಕೆಲಸಗಳಿಗೆ ದಾನ ಬಿಟ್ಟಾಗ ಆ ದಾನದ ಬಡ್ಡಿಯಿಂದ ದೇವಾಲಯಗಳ ನಿತ್ಯಪೂಜೆ, ನೈವೇದ್ಯ, ಜೀರ್ಣೋದ್ಧಾರಗಳಂತಹ ಕಾರ್ಯಗಳು ನಡೆಯುತ್ತಿದ್ದವು. ಕೆರೆಗಳಿಗೆ ಬಿತ್ತುವಟ್ಟದಂತಹ ಭೂದಾನ ಅಥವಾ ಹಣದ ರೂಪದಲ್ಲಿ ದಾನ ನೀಡಿದಾಗ ಅದನ್ನು ಬಡ್ಡಿಕೊಟ್ಟು ಬಡ್ಡಿಯ ಹಣದಿಂದ ಕೆರೆಯ ದುರಸ್ತಿ ಮೊದಲಾದ ನಿರ್ವಹಣೆ, ಜೀರ್ಣೋದ್ಧಾರಗಳಂತಹ ಕಾರ್ಯಗಳನ್ನು ಮಾಡಲಾಗುತ್ತಿತ್ತು. ಈ ರೀತಿ ಸಾಲ ಕೊಡುವ ವ್ಯವಸ್ಥೆ ಇತ್ತು ಎಂದಾದರೆ ಇಂದಿನಂತೆ ಸಾಲ ಪಡೆಯುವವರು ಇದ್ದರು. ಈ ಸಾಲವನ್ನು ಸಮಾಜದ ಕೆಳವರ್ಗವೆಂದು ಕರೆಸಿಕೊಂಡ ಕೃಷಿಕರು, ಕೃಷಿ ಕಾರ್ಮಿಕರು, ಭೂರಹಿತ ಕೃಷಿ ಕಾರ್ಮಿಕರು, ಉದ್ಯೋಗಿಗಳು, ವ್ಯಾಪಾರಿಗಳು ಮಾಡಿರುವ ಸಾಧ್ಯತೆಗಳಿವೆ. ಶಾಸನಗಳು ಬಡ್ಡಿಯನ್ನು ವೃದ್ಧಿ ಎಂದು ಉಲ್ಲೇಖಿಸಿವೆ. ಇಂದಿಗೂ ದೇವಾಲಯ ಮೊದಲಾದ ಸಾಮಾಜಿಕ ಕ್ಷೇತ್ರಗಳಿಗೆ ನೀಡಿದ ದಾನ ದತ್ತಿಗಳು ಕಂಡುಬರುತ್ತವೆ. ಈ ರೀತಿ ಬಂದ ಹಣ ರೂಪದ ದಾನದತ್ತಿಗಳನ್ನು ಸಮಾಜದ ಜನರಿಗೆ ಕೊಡುವುದು ಕಂಡುಬರುವುದಿಲ್ಲ. ಆದರೆ ಹಣಕಾಸು ಸಂಸ್ಥೆಗಳಾದ ಬ್ಯಾಂಕ್‌ಗಳಲ್ಲಿ ಇಡಲಾಗುತ್ತದೆ. ಹೀಗೆ ಠೇವಣಿಯನ್ನಿಟ್ಟಾಗಲೂ ಜನಸಾಮಾನ್ಯರಿಗೆ ಬ್ಯಾಂಕ್‌ಗಳ ಮೂಲಕ ಆ ಹಣವನ್ನು ಬಡ್ಡಿಗೆ ಸಾಲವನ್ನು ವಿತರಿಸಲಾಗುತ್ತದೆ. ಇಲ್ಲಿ ಹಣಕಾಸು ಸಂಸ್ಥೆಗಳು ಮಧ್ಯವರ್ತಿಗಳಾಗಿ ಕಾರ್ಯನಿರ್ವಸುತ್ತವೆ. ಇಂದಿನ ಹಣಕಾಸು ಸಂಸ್ಥೆಗಳಂತೆ ದೇವಾಲಯ, ಕೆರೆ ಮೊದಲಾದ ಧಾರ್ಮಿಕ, ಸಾಮಾಜಿಕ ಸಂಸ್ಥೆಗಳ ಮೇಲ್ವಿಚಾರಣೆಯನ್ನು ನಿರ್ವಹಿಸುತ್ತಿದ್ದ ಬ್ರಾಹ್ಮಣ ಮೊದಲಾದ ಅಧಿಕಾರಿವರ್ಗಗಳು ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಇಂದಿನ ಹಣಕಾಸು ಸಂಸ್ಥೆಗಳಂತೆ ಅಂದಿನ ಅಧಿಕಾರಿ ವರ್ಗವು ನಿರ್ವಹಿಸುವ ಕಾರ್ಯಕ್ಕೆ ತಕ್ಕಂತೆ ಆದಾಯದಲ್ಲಿ ಕೆಲವು ಭಾಗವನ್ನು ತನಗಾಗಿ ಇಟ್ಟು ಕೊಂಡಿರುವ ಸಾಧ್ಯತೆಗಳಿವೆ. ಸಾಲಕ್ಕೆ ಬಡ್ಡಿಕೊಡುವಾಗ ಸಮಾಜದಲ್ಲಿ ಮೊದಲೇ ಬಡ್ಡಿಯನ್ನು ನಿಗದಿಪಡಿಸುತ್ತಿದ್ದರು. ಸಾಲ ನೀಡುವಾಗ ಅಡವು ಎರಡು ಪಸರದ ಬಾಡಿಗೆ: ಎರಡು ಹಂತದಲ್ಲಿ ವಿಧಿಸುವ ಬಾಡಿಗೆ[೩೩೧] ಎನ್ನಲಾಗಿದೆ.

ಅರುವಾರವು ಸ್ವಾಧೀನದೊಂದಿಗೆ ಭಣ ಅಥವಾ ಅಡವು ಇಡಿಸುವ ಅಥವಾ ಇಡುವ ಕ್ರಯ ಆರುವಾರ ಎಂದೆನಿಸಿಕೊಳ್ಳುತ್ತದೆ. ಹಣ ಪಡೆದು ನಂತರ ಹಣ ಕೊಟ್ಟವನಿಗೆ ಭೂಮಿಯನ್ನು ಹಿಂತಿರುಗಿಸುವ ಪದ್ಧತಿ. ಅಂತರಾರುವಾರ.[೩೩೨]ವು ಆರುವಾರಗಳಿಗೂ ಹೆಚ್ಚು ಕಾಲ ಸಾಲ ತೆಗೆದುಕೊಂಡ ನಂತರ ಅಡವು ಮಾಡುವಾಗ ತಯಾರಿಸುವ ಕಾಗದ ಪತ್ರ.

ಕೌಟಿಲ್ಯನಲ್ಲದೆ ಯಜ್ಞವಲ್ಕ್ಯ, ಸ್ಮೃತಿಕಾರ ಮನು ಇವರೂ ಸಹ ಶೇಕಡಾ ೧೫% ಬಡ್ಡಿಯ ಕುರಿತಾಗಿ ಹೇಳುತ್ತಾರೆ.[೩೩೩] ಇಂದಿನಂತೆ ಮರಿಬಡ್ಡಿ, ಚಕ್ರಬಡ್ಡಿಗಳು ಇದ್ದಿರುವ ಸಾಧ್ಯತೆಗಳು ಇರಲಿಲ್ಲವೆನ್ನಿಸುತ್ತದೆ. ಕ್ರಿ.ಶ. ೯ನೆಯ ಶತಮಾನಕ್ಕೆ ಸೇರಿದ ಅಮೋಘವರ್ಷನ ಶಾಸನವೊಂದರಲ್ಲಿಯು ಬಡ್ಡಿಯರವನ್ನು ಕುರಿತು ಹೇಳಿದೆ.[೩೩೪] 'ಸ್ಥಳೀಯ ಶಿಲಾಹಾರ ರಾಜವಂಶದ ಮಂತ್ರಿ ಬುದ್ಧನಪೂಜೆಗೆ ವರ್ಷಕ್ಕೆ ೨೦ ದ್ರಮ್ಮಗಳನ್ನು, ಕಟ್ಟಡದ ದುರಸ್ತಿಗೆ ೩ ದ್ರಮ್ಮಗಳನ್ನು ಬೌದ್ಧಸನ್ಯಾಸಿಗಳ ಉಡುಪಿಗೆ ೧೬೦ ದ್ರಮ್ಮಗಳನ್ನು ಧನಸಂಚವಾಗಿಟ್ಟನು. ಅದರಿಂದ ೧೬೦ ದ್ರಮ್ಮಗಳಿಗೆ ವರ್ಷಕ್ಕೆ ೨೯ ದ್ರಮ್ಮ ಆದಾಯ ಬರುತ್ತಿತ್ತು. ಇದು ಬಡ್ಡಿ ಹಣವಾಗಿದ್ದು ಶೇ.೧೮ರಷ್ಟು ಆಗುತ್ತದೆ.[೩೩೫] ಎನ್ನಲಾಗಿದೆ. ಪ್ರಾಚೀನ ಕಾಲದಿಂದಲೂ ಈ ರೀತಿಯ ದೇಣಿಗೆಯ ಹಣಕ್ಕೆ ಬಡ್ಡಿ ಬರುತ್ತಿತ್ತೆಂದು ಈ ಅಂಶ ತಿಳಿಸುತ್ತದೆ. ಕ್ರಿ.ಶ.೯ನೆಯ ಶತಮಾನದ ಶಾಸನವೊಂದರಲ್ಲಿ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಸಾಮಂತನಾದ ವೈದುಂಬ ಮಹಾರಾಜನ ರಾಣಿ ನೀಡಿದ ದತ್ತಿಯನ್ನು ಉಲ್ಲೇಖಿಸಿದೆ. ಅದರಲ್ಲಿ ೨೦ ಕಟಿಂಜುವಿನ ಬಡ್ಡಿಗೆ ೮ ರಿಂದ ೧೨ ಕಲಂಗಳಷ್ಟು ಬತ್ತವನ್ನು ಕೊಂಡುಕೊಳ್ಳಬಹುದಾಗಿತ್ತು. ಇದರ ಬಡ್ಡಿಯ ದರ ಶೇ.೧೦ರಿಂದ ೧೫ರಷ್ಟು ಆಗುತ್ತದೆ.[೩೩೬] ಸಾಲಕ್ಕೆ ಬಡ್ಡಿಯ ಹಣವನ್ನು ಕೊಡುವಾಗ ಹಣ ಅಥವಾ ಅದರ ಮೌಲ್ಯದ ಧಾನ್ಯವನ್ನಾದರೂ ನೀಡಲಾಗುತ್ತಿತ್ತು. 'ಬಡ್ಡಿ ಬತ್ತ ೨೦ ಕಲಂಗಳೆಂದು' ಹೇಳಿರುವುದನ್ನು ಗಮನಿಸಿದರೆ ಕೃಷಿಕರಿಗೆ ಸಾಲ ನೀಡಿರುವ ಸಾಧ್ಯತೆಗಳು ಇದ್ದಿರಬೇಕು ಎನ್ನಿಸುತ್ತದೆ. ಬಡ್ಡಿಗಾಗಿ ಸಾಲ ನೀಡುವಾಗ ಸ್ಥಳದಿಂದ ಸ್ಥಳಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಬಡ್ಡಿಯ ದರಗಳು ಭಿನ್ನವಾಗುತ್ತಿದ್ದವು. ಇದನ್ನು ಅರ್ಥಶಾಸ್ತ್ರಕಾರನು ಸ್ಪಷ್ಟಪಡಿಸಿದ್ದಾನೆ. ಹಿಂದೆ ಅದನ್ನು ಚರ್ಚಿಸಲಾಗಿದೆ(ಕಟಿಂಜುಗಳೆಂದರೆ ಒಂದು ತೂಕದ ಪ್ರಮಾಣವಾಗಿದೆ). ಬತ್ತ ಅಥವಾ ಧಾನ್ಯವನ್ನು ಕಟಿಂಜುಗಳ ಮೂಲಕ ಅಳೆದು ಅದನ್ನು ಬಡ್ಡಿಗೆ ಸಾಲ ನೀಡಿದಂತಿದೆ. ಇಂತಹ ವ್ಯವಸ್ಥೆ ಅರ್ಥಶಾಸ್ತ್ರಕಾರನಲ್ಲಿಯೂ ಉಲ್ಲೇಖವಾಗಿರುವುದನ್ನು ಹಿಂದಿನ ಪುಟದಲ್ಲಿ ಚರ್ಚಿಸಲಾಗಿದೆ. ಇದೇ ರೀತಿಯ ಮತ್ತೊಂದು ಶಾಸನ 'ಕ್ರಿ.ಶ. ೯೧೫ರ ಬಾಣಶಾಸನವಾಗಿದ್ದು ೨೦ ಕಟಿಂಜುಗಳ ಮೇಲಿನ ಬಡ್ಡಿ ೫ ಕಟಿಂಜುಗಳೆಂದು ತಿಳಿಸಿದೆ.[೩೩೭] ಕರ್ನಾಟಕಕ್ಕಿಂತ ತಮಿಳುನಾಡಿನಲ್ಲಿ ಬಡ್ಡಿಯನ್ನು ಹೆಚ್ಚಿನ ದರದಲ್ಲಿ ಕೊಡಲಾಗುತ್ತಿತ್ತು ಮತ್ತು ಪಡೆಯಲಾಗುತ್ತಿತ್ತು. ಅದು ಶೇಕಡಾ ೪೦ರ ವರೆಗೂ ಇದ್ದಿತೆನ್ನಲಾಗಿದೆ. 'ಅಣ್ಣಾಮಲೆಯ ಒಂದು ದೇವಸ್ಥಾನ ೧೫ ಇಲಕ್ಕಾಸು ಅಸಲಿನ ಮೇಲೆ ೬ ಇಲಕ್ಕಾಸು ಬಡ್ಡಿಯನ್ನು ಎಂದರೆ ಶೇಕಡಾ ೪೦ ಕೊಟ್ಟಿತು ಎನ್ನಲಾಗಿದೆ. ಮನು ಮತ್ತು ಯಜ್ಞವಲ್ಕರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಇವರಿಗೆ ಕ್ರಮವಾಗಿ ೨೪, ೩೬, ೪೮, ೬೦ ಬಡ್ಡಿಯನ್ನು ವಿಧಿಸಬೇಕೆಂದಿದೆ.[೩೩೮] ಮನು, ಯಜ್ಞವಲ್ಕರ ನೀತಿಗಳು ಸಾಮಾಜಿಕವಾಗಿ ತಾರತಮ್ಯವನ್ನು ಸೂಚಿಸುತ್ತವೆ. ಸಮಾಜದಲ್ಲಿ ವೃತ್ತಿಯ ಶೋಷಣೆಯೊಂದಿಗೆ, ವಸೂಲಾತಿಯ ಶೋಷಣೆಯು ಇತ್ತೆಂಬುದು ಸ್ಪಷ್ಟವಾಗುತ್ತದೆ. ಕಷ್ಟಪಟ್ಟು ದುಡಿದು ತಿನ್ನುವ ವರ್ಗಕ್ಕೆ ಹೆಚ್ಚಿನ ಬಡ್ಡಿ ವಿಧಿಸಿರುವುದು ಸಾಮಾಜಿಕ ಅಂತರವನ್ನು ಸೂಚಿಸುತ್ತದೆ. ಇದನ್ನು ಗಮನಿಸಿದರೆ ಅರ್ಥಶಾಸ್ತ್ರಕಾರನಲ್ಲಿ ಈ ರೀತಿಯ ನಿಯಮವಿದ್ದಂತೆ ಕಂಡುಬರುವುದಿಲ್ಲ. ಪ್ರಾಚೀನ ಕಾಲದ ಬಡ್ಡಿ ಸಾಲದ ವ್ಯವಸ್ಥೆ ಮತ್ತು ಅದಕ್ಕೆ ಸಂಬಂಧಿಸಿದ ನಿಯಮಗಳ ಕಾಠಿಣ್ಯತೆಯಿಂದಾಗಿಯೇ ಇಂದಿನಂತೆ ಆತ್ಮಹತ್ಯೆಯಂತಹ ಪ್ರಕರಣಗಳು ಕಂಡುಬಂದಿರುವ ಸಾಧ್ಯತೆಗಳಿಲ್ಲ. ಒಂದು ವೇಳೆ ಸಮಾಜದಲ್ಲಿ ಇತ್ತಾದರೂ ಅದರ ದಾಖಲೆಗಳು ದೊರೆಯುವುದಿಲ್ಲ.

ಕ್ರಿ.ಶ. ೧೦೬೦ರ ಶಾಸನದಲ್ಲಿ ದೇವರ್ಗ್ಗೆ ನಂದಾದೀವಿಗೆಗೆ ನಡೆವಂತಾಗೆ ತಿಂಗಳ್ಗೆ ಪೊನ್ನ ಹಾಗವಡ್ಡಿಯಳೂರ್ಗೆ ಕಳುಂಗೊಟು ಗದ್ಯಾಣಂ ನಾಲ್ಕು.[೩೩೯] ಎಂದಿದೆ. ಒಂದು ಪೊನ್ನಿಗೆ ಒಂದು ತಿಂಗಳಿಗೆ ಒಂದು ಹಾಗ ಬಡ್ಡಿ ಎಂದಿದೆ. ಅಂದರೆ ಒಂದು ಪೊನ್ನು ಅಥವಾ ಒಂದು ಗದ್ಯಾಣಕ್ಕೆ ೧೦

ಪಣಗಳು ಒಂದು ಪಣಕ್ಕೆ ನಾಲ್ಕು ಹಾಗಗಳು. ಒಂದು ಗದ್ಯಾಣಕ್ಕೆ ೪೦ ಹಾಗಗಳು ತಿಂಗಳಿಗೆ ಒಂದು ಹಾಗ ಲೆಕ್ಕದಲ್ಲಿ ವರ್ಷಕ್ಕೆ ಹನ್ನೆರಡು ಹಾಗಗಳು. ಅಂದರೆ ೩.೩೩% ಬಡ್ಡಿಯಾಗುತ್ತದೆ. ಅಂದರೆ ಸಾಲ ನೀಡಿದ ಅಸಲು ಹಣಕ್ಕೆ ಶೇಕಡ ೩೦ಕ್ಕೂ ಹೆಚ್ಚು ಬಡ್ಡಿ ಕೊಟ್ಟಂತಾಗುತ್ತದೆ. ಇಂದು ಈ ರೀತಿಯ ಬಡ್ಡಿಗಳು ಜಾರಿಯಲ್ಲಿವೆ. ಆದರೆ ಆರ್ಥಿಕ ಸಂಸ್ಥೆಗಳಲ್ಲಿ ಈ ಬಡ್ಡಿ ಕಂಡುಬರುವುದಿಲ್ಲ. ಖಾಸಗಿ ಲೇವಾದೇವಿಗಳಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೧೫೪ರ ಶಾಸನದಲ್ಲಿ ಊರೊಡೆಯ ಪ್ರಮುಖ ಮಹಾಜನಮಯ್ವದಿಂವರುಮ ನೆರಪಿ ಊರ ಮೇಲೆ ಕರ್ವಣಿ ವೃದ್ಧಿಯಲ್ ಕಲಿದೇವಶ್ವಾಮಿಗೆ ವಿಷ್ಣುದೇವರ್ಗೆ ನಂದಾದೀವಿಗೆಗಂ ನಿವೇದಿಯಕ್ಕಂ ಶ್ರೀಖಂಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನಯ್ದು ಆ ವೃದ್ದಿಯಲು ಎಣ್ಬರ್ ಪ್ರವಾಸಿ ಗರುಣ್ಬ ಸತ್ರಕ್ಕೆ ಕೊಟ್ಟ ಮೊದಲ್ ಗದ್ಯಾಣಮಿರ್ಪತ್ತಯ್ದು. ಸತ್ರದಡುಗೆಯ ಸವಿಧೆಗೆ ಮೊದಲ್ಗೊಟ್ಟ ಗದ್ಯಾಣಮೆರಡು. ಇಂತೀ ಧರ್ಮಮನೂರೊಡೆಯನುಂ ಊರುಂ ನಡೆಯಿಸುವರ್ ಎಂದಿದೆ.[೩೪೦] ವಿಷ್ಣುದೇವರ ನಂದಾದೀಪಗಳಿಗೆ ನಿತ್ಯದ ನೈವೇದ್ಯ ಪೂಜಾಕಾರ್ಯಗಳಿಗೆ ಮೊದಲಾದ ದೇವರ ಕಾರ್ಯಗಳಿಗೆ ಹಾಗೂ ಪ್ರವಾಸಕ್ಕೆಂದು ಬಂದ ಯಾತ್ರಾರ್ಥಿಗಳಿಗೆ ಊಟಕ್ಕಾಗಿ, ಸತ್ರಗಳಿಗೆ, ಅಡಿಗೆ ಮಾಡಲು ಸೌದೆಗೆ ಬಿಟ್ಟ ಹಣವನ್ನು ಬಡ್ಡಿಗೆ ನೀಡಿ ಬಂದ ಹಣದಿಂದ ದೇವರ ಕಾರ್ಯಗಳಿಗೆ ಸಂಬಂಧಿಸಿದ ಕೆಲಸಗಳನ್ನು ಮಾಡಬೇಕೆಂದು ಶಾಸನವು ತಿಳಿಸಿದೆ. ಕ್ರಿ.ಶ. ೧೧೭೪ರ ಶಾಸನದಲ್ಲಿ ಋಗ್ವೇದ ಬಾಲಸಿಕ್ಷೆಯ ಖಂಡಕಕ್ಕೆ ಪೊಂಗೆ ವರಿಶಕ್ಕಿಪ್ಪಣ ವೃದ್ಧಿಯ ಲೆಖ್ಖದೆ ಗದ್ಯಾಣ ೩೦ಙ ವೃದ್ಧಿಯ ನಾಲ್ಕು ಪೊನ್ನ ಖಂಡಿಕದ ಉಪಾಧ್ಯಾಯರ್ಗ್ಗೆ ಬಿಟ್ಟರೆಂದಿದೆ.[೩೪೧] ೩೦ ಗದ್ಯಾಣಗಳಿಗೆ ನಾಲ್ಕು ಪೊನ್ನು ಅಥವಾ ಗದ್ಯಾಣವನ್ನು ವರ್ಷಕ್ಕೆ ನೀಡುವುದು. ಅಂದರೆ ಶೇ.೧೩% ಬಡ್ಡಿಯನ್ನು ನೀಡಬೇಕು ಎಂಬ ಅಂಶವನ್ನು ತಿಳಿಸಿದೆ. 'ಮೊದಲನೆಯ ಅಮೋಘವರ್ಷನ ಶಾಸನವೊಂದರಲ್ಲಿ ದಾನವಾಗಿ ಕೊಟ್ಟ ಹಣದ ಬಡ್ಡಿಯನ್ನು ಆಗಗ್ಗೆ ತಿಳಿದವರು ನಿರ್ಧರಿಸಬೇಕು ಎಂದಿದೆ.[೩೪೨] ಅಂದರೆ ಬಡ್ಡಿಗಳು ಕಾಲದಿಂದ ಕಾಲಕ್ಕೆ ಪರಿಷ್ಕರಣೆಗೊಳ್ಳುತ್ತಿದ್ದವೆಂದು ತಿಳಿಯುತ್ತದೆ. ಬದಲಾದ ಸಂದರ್ಭ, ಕಾಲ, ಸನ್ನಿವೇಶಗಳಿಗೆ ಅನುಗುಣವಾಗಿ ವಸ್ತುಗಳ ಬೆಲೆ ಏರಿಕೆಯಂತಹ ಸಂದರ್ಭದಲ್ಲಿ ದೇವಾಲಯ ಮೊದಲಾದ ಧಾರ್ಮಿಕ, ಸಾಮಾಜಿಕ ಸಂಸ್ಥೆಗಳ ಕಾರ್ಯಗಳು ದುಬಾರಿಯಾದಾಗ ಸಹಜವಾಗಿಯೇ ಬಡ್ಡಿಗಳು ಪರಿಷ್ಕರಣೆಗೊಂಡು ಹೆಚ್ಚಾಗಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೨೧೭ರ ಶಾಸನದಲ್ಲಿ ಶ್ರೀ ಲಕ್ಷ್ಮೀನಾರಾಯಣ ದೇವರಿಗೆ ಬಿಟ್ಟ ಗದ್ಯಾಣ ನಾಲ್ಕನ್ನು ಬಡ್ಡಿಗೆ ನೀಡಿರುವುದು ಕಂಡುಬರುತ್ತದೆ. ಗದ್ಯಾಣ ನಾಲ್ಕಱ ವ್ರಿದ್ಧಿ ಹೊಂಗೆ ತಿಂಗಳಿಗೆ ಹಾಗ ವ್ರಿದ್ಧಿಯಲು ವರಿಷ ಬಡ್ಡಿಗೆ ಗ ೧ ಮಂ ದೀವಿಗೆಯಾ ಬಡ್ಡಿಯಲು ಬಳಿ ನಡೆಗೆ ಕೊಟ್ಟ ಗ ೩ ಅಚ್ಚಣ್ಣದೇವಣ್ಣಗಳು ಬಳಿ ನಡೆಗೆ ಕೊಟ್ಟ ಗ ೩ ಪುಣ್ಣೆಯಂಮೆ ಬಳಿ ನಡೆಗೆ ಕೊಟ್ಟ ಗ ೬ ಅನ್ತು ಗದ್ಯಾಣ ಹಂನೆರಡಱ ಬಡ್ಡಿ ಎಂದಿದೆ.[೩೪೩] ಕ್ರಿ.ಶ. ೧೨೩೭ರ ಶಾಸನದಲ್ಲಿ ಶ್ರೀ ಲಕ್ಷ್ಮೀನಾರಾಯಣ ದೇವರ ಸಂಜೆಯ ಸೊಡರಿಗೆ ಹಾಗ ವ್ರಿದ್ಧಿಯಲು ನಡೆಸಲು ಗದ್ಯಾಣವೊಂದು ಎಂದಿದೆ.[೩೪೪] ಕ್ರಿ.ಶ. ೧೨೮೯ರ ಶಾಸನದಲ್ಲಿ ಕಱೆಯ ಧರ್ಮಕ್ಕೆ ದಾನವಾಗಿ ಗದ್ಯಾಣ ೨೦೦ ಱಕ್ಕಂ ಬೆಳೆ ಬಡ್ಡಿಯಲು ವರುಷಕ್ಕೆ ಗದ್ಯಾಣಂ ಮೂವತ್ತುವನುಂ ಆ ಕೆಱೆಗೆ ಆ ತುಂಬಿಂಗೆ ಆ ಬಾಯಿಕಾಲಿಗೆ ನೀಡುವುದು ಕೆರೆಯ ನಿರ್ವಹಣೆಯನ್ನು ಮಾಡಬೇಕಾದುದರಿಂದ ಅದಕ್ಕೆ ದೊಡ್ಡ ಮೊತ್ತದ ಹಣವನ್ನು ದಾನ ನೀಡಲಾಗುತ್ತಿತ್ತು. ಈ ಶಾಸನ ತಿಳಿಸುವಂತೆ ಶೇಕಡ ೧೫ರಷ್ಟಕ್ಕೆ ಬಡ್ಡಿ ಕೊಡಲಾಗಿತ್ತೆಂದು ತಿಳಿಯುತ್ತದೆ. ದೇವಾಲಯಗಳಿಗೆ ಹೋಲಿಸಿದರೆ ಕೆರೆಯ ನಿರ್ವಹಣೆಗೆಂದು ಬಿಟ್ಟ ಹಣವನ್ನು ಕಡಿಮೆ ಬಡ್ಡಿಗೆ ಕೊಟ್ಟಂತೆ ಕಂಡುಬರುತ್ತದೆ. ಕ್ರಿ.ಶ. ೧೧೬೨-೬೩ರ ಶಾಸನದಲ್ಲಿ ಮೂಲಧನವಾಗಿ ವಾಸುದೇವ ಭಟ್ಟರು ಕೊಟ್ಟ ಹನುಮೇಶ್ವರ ದೇವರ ಸಂಜೆ ಸೊಡರಿಗೆ ಕೊಟ್ಟ ಪಣ ೫ನ್ನು ನೀಡಿ ಅದರ

ವ್ರಿದ್ಧಿಯಲ್ಲಿ ಸಂಜೆ ಸೊಡರನ್ನು ನಡೆಸಬೇಕೆಂದಿದೆ.[೩೪೫] ಕ್ರಿ.ಶ. ೧೧೯೯ರ ಶಾಸನದಲ್ಲಿ ಪಂಣಮಾಂಡ ಹೆಗ್ಗಡೆಯರು ನಂದಾದೀವಿಗೆಗೆ ಸೊಡರೆಣ್ಣೆಗೆ ೩ ಗದ್ಯಾಣವನ್ನು ದತ್ತಿ ಕೊಟ್ಟರು ಅದರ ಬಡ್ಡಿ ಹೊನ್ನಿಗೆ ಹಾಗವೆಂದು ನಿಗದಿಪಡಿಸಿದೆ. ಇದನ್ನು ನಿತ್ಯಪಡಿಯ ಸೊಡರಿಗೆ ಉಪಯೋಗಿಸಲು ಬಿಟ್ಟಿದೆ. ಇದಕ್ಕಾಗಿ ದಾನಿಯು ನಂದಾದೀಪವನ್ನು ತಾನೇ ಕೊಂಡು ದೇವಾಲಯದ ಸ್ಥಾನಿಕ ಗೋಣೀಯಜೀಯ ಪರದೇಸಿಯಪ್ಪನ ವಶಕ್ಕೆ ಕೊಟ್ಟಿದ್ದಾನೆ. ಒಂದು ಹೊನ್ನು(ಪೊನ್ನು) ಅಥವಾ ಗದ್ಯಾಣಕ್ಕೆ ಹಾಗವೆಂದು ಹೇಳಿದೆ. ಇದು ವರ್ಷಕ್ಕೊ ಅಥವಾ ತಿಂಗಳಿಗೊ ತಿಳಿಯದು. ಆದರೆ ತಿಂಗಳಿಗೆ ಒಂದು ಹಾಗವಿರುವ ಸಾಧ್ಯತೆಯಿದೆ. ಶೇಕಡ ೩% ಬಡ್ಡಿಗೆ ಕೊಟ್ಟಿರುವ ಸಾಧ್ಯತೆಗಳಿವೆ. ಇದಲ್ಲದೆ ಇದೇ ಶಾಸನದಲ್ಲಿ ಗದ್ಯಾಣವನ್ನು ಬಡ್ಡಿಗೆ ಬಿಟ್ಟರೆಂದಿದೆ. ಕ್ರಿ.ಶ. ೧೧೩೫ರ ಶಾಸನದಲ್ಲಿ ವಿಷ್ಣುದೇವರಿಗೆ ಹನ್ನೆರಡು ಗದ್ಯಾಣ ನೀಡಲಾಯಿತು. ಇ ಹೊಂಗದ್ಯಾಣವೊಂದಕ್ಕೆ ಮಾಸಂಪ್ರತಿ ಹಾಗೆ ವಿರ್ದಿಯಲು ಇ ಧರ್ಮವ ನಡೆಸುವರು.[೩೪೬] ಅಂದರೆ ಶೇಕಡ ೨೫% ಬಡ್ಡಿಯನ್ನು ವರ್ಷಕ್ಕೆ ವಿಧಿಸಿರುವುದು ಕಂಡುಬರುತ್ತದೆ. ವರ್ಷಕ್ಕೆ ೧೨ ಹಾಗ ಬಡ್ಡಿ ವಿಧಿಸಿರುವುದನ್ನು ತಿಳಿಸಿದೆ.

ಕ್ರಿ.ಶ. ೧೪ನೆಯ ಶತಮಾನದ ಶಾಸನದಲ್ಲಿ ದೇವರ ಭಂಡಾರದಿಂದ ರೈತರಿಗೆ ಸಾಲವಾಗಿ ಕೊಟ್ಟು ೧೫೦ ಗದ್ಯಾಣ ಹೊನ್ನಿಗೆ ಬರುವ ಬಡ್ಡಿಯಿಂದ ರಾಮನಾಥದೇವರಿಗೆ ಪ್ರತಿದಿನ ಸಲ್ಲ ಬೇಕಾದ ಪೂಜೆ, ನೈವೇದ್ಯ, ನಂದಾದೀಪ ಇತ್ಯಾದಿಗಳನ್ನು ನಡೆಸಬೇಕೆಂದು ಮಹಾಜನರು ಒಪ್ಪಿ ಬರೆಯಿಸಿದ ಶಾಸನವಿದೆ. "ರಾಮನಾಥ ದೇವರ ಭಂಡಾರದಲ್ಲಿ ಆ ಅಶೇಷ ಮಹಾಜನಂಗಳು ತಂವೊಕ್ಕಲು...ಗಡಣಂ....ಸಲುವ ವರಾಹ....ಅಕ್ಷರದಲ್ಲು ಗದ್ಯಾಣಂ ನೂರ ಅಇವತ್ತು ಇ ಹೊಂನಿನ ಬಡ್ಡಿಗೆ ಪ್ರತಿ ದಿವಸದಲ್ಲೆಯೂವೊಂ...ನಲ್ಲೆ ರುದ್ರಾಭಿಷೇಕ ಮೂಜು ಎಳೆನೀರು ಗಂಧಾಕ್ಷತೆ ಪತ್ರೆ ಪು ಷ್ಪಧೂಪದೀಪ ಆಹೋರಾತ್ರಂಗಳಲ್ಲೆ ನಡೆಸುವ ನಂದಾದೀವಿಗೆ ಏಳು ನೈವೇದ್ಯಕ್ಕೆ ಅಕ್ಕಿ ಅಯ್ದುಮಾನ ತುಪ್ಪ ಸೊಲಗೆ ಉಪ್ಪು ಮೆಣಸು ಸಹಿತ ಎರಡೂ ಮೇಲೋಗರ ನೈವೇದ್ಯ ಕಾಲದಲ್ಲಿ ಅಯ್ದಡಕೆ ಏಳೆಲೆಯಲಿ ವೊಂದು ವೀಳೆಯಲೊಂದು ನೀರಾ...ಎಂದಿದೆ.[೩೪೭] ದೇವರ ಭಂಡಾರದ ಹಣವನ್ನು ಬಡ್ಡಿ ಸಾಲ ಕೊಡುವುದರ ಮೂಲಕ ಆ ಭಂಡಾರವನ್ನು ಲಾಭಕರವಾಗಿ ಮಾಡಿ ಉಪಯೋಗಿಸುವ ಅಧಿಕಾರ ಮಹಾಜನರಿಗಿದ್ದಂತಿದೆ. ಇದನ್ನು ದೇವಾಲಯದ ನಿತ್ಯಕಾರ್ಯಗಳಿಗೂ ವಿನಿಯೋಗಿಸಲಾಗುತ್ತಿತ್ತು. ನೂರ ಅಯ್ವತ್ತು ಗದ್ಯಾಣವನ್ನು ಒಕ್ಕಲು ಅಥವಾ ರೈತರಿಗೆ ಸಾಲ ನೀಡಿತೆಂದು ತಿಳಿಸಿದೆ. ಆದರೆ ಬಡ್ಡಿಯ ಪ್ರಮಾಣ ಎಷ್ಟು ಎಂಬುದರ ಬಗೆಗೆ ತಿಳಿಸಿಲ್ಲ. ಈ ಶಾಸನವನ್ನು ಗಮನಿಸಿದರೆ ಸಾಲವನ್ನು ರೈತರಿಗೆ ಕೊಡಲಾಗುತ್ತಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೧೦೮ರ ಶಾಸನದಲ್ಲಿ ೧೨೦ ಗದ್ಯಾಣವನ್ನು ಬಡ್ಡಿ ನೀಡಿ ಅದರಲ್ಲಿ ದೇವಾಲಯದ ಅಂಗಭೋಗ ಪಾತ್ರ ಪಾವುಳ ನಿವೇದ್ಯ ಅನ್ನದಾನ ಘಳಿಯಾರ ಮುಂತಾದವುಗಳಿಗೆ ಬಿಟ್ಟರೆಂದಿದೆ.[೩೪೮] ಕ್ರಿ.ಶ. ೧೨೧೨ರ ಶಾಸನದಲ್ಲಿ ಫಲಮುಮಂ ಬಡ್ಡಿಯ ನಾಲ್ವತ್ತುಪೊಂಗ ಎಂದಿದೆ.[೩೪೯] ಕ್ರಿ.ಶ. ೧೧೦೮ ಶಾಸನದಲ್ಲಿ ಮಲೆಯಾಳ ವಡ್ಡ ವ್ಯವಹಾರಿ ಕೊಮರ ಮೂರ್ಕ್ಕನು ಸ್ವಯಂಭುಕಲಿದೇವರ ನಂದಾದೀವಿಗೆಗೆ ೫ ಗದ್ಯಾಣವನ್ನು ನೀಡಿ ಅದರ ಬಡ್ಡಿಯಲ್ಲಿ ನಂದಾದೀವಿಗೆಗೆ ವ್ಯವಸ್ಥೆ ಮಾಡಿದನು ಎಂದಿದೆ.[೩೫೦] ಕ್ರಿ.ಶ. ೧೧೬೮ರ ಶಾಸನದಲ್ಲಿ ಉಭಯ ನಾರಣ ನಾಯಕರು ಗದ್ದುಂಬಳ್ಳಿಯ ಅಶೇಷ ಮಹಾಜನಂಗಳಿಗೆ ಹೊಂಗೆ ತಿಂಗಳಿಗೆ ಹಾಗ ವ್ರಿದ್ಧಿಯಂ ಕೊಟ್ಟು ಗದ್ಯಾಣವಾಱು ಇವರ ವ್ರಿಧಿಯಲು ದೋರ ಸಮುದ್ರದ ಹೆದ್ದಾರಿಯಲು ಬೇಸಗೆಯ ನಾಲ್ಕು ತಿಂಗಳು ಅಱವಂಟಿಗೆಯ ನಡೆಸುವರು ಎಂದಿದೆ.[೩೫೧] ತಿಂಗಳಿಗೆ ಆರು ಗದ್ಯಾಣಕ್ಕೆ ಒಂದು ಹಾಗ ಬಡ್ಡಿಯನ್ನು ಈ ಶಾಸನವು ಹೇಳಿದೆ. ಕ್ರಿ.ಶ. ೧೧೯೯ರ ಶಾಸನದಲ್ಲಿ ಬೂಚೇಸ್ವರ ಮೊದಲಾದ ದೇವರಿಗೆ ಕಲ್ಲೇಯನು ದೇವರ ಶ್ರೀಕಾರ್ಯವನ್ನು ನಡೆಸಲು ಹೂದೋಂಟ ಹಾಗವಡ್ಡಂ ಗದ್ಯಾಣಂ ಹಂನೆರಡಱ ಬಡ್ಡಿಯಂ ಕುಡ ವಸುಧಾರೆಗೊಂದು

ಹೊನ್ನ ಬಡ್ಡಿಯಂ ಕುಡುವರು ಮೂಱು ದೇವಾಲಯಕ್ಕಂ ಧೂಪಕ್ಕೆ ಎರಡು ಹೊಂನ್ನ ಬಡ್ಡಿಯಂ ನಂದಾದೀವಿಗೆಗೆ ಮೂಱು ಹೊನ್ನ ಬಡ್ಡಿಯಂ ಕೊಡುವರು. ಬ್ರಾಹ್ಮಣರಿಗೆ ಅಷ್ಟಯಿ ಬಾವುದೇವಸ ಏಕಾದಿಸಿಯ ಅಕ್ಕಿಯನ್ನಿಕ್ಕುವರು ಎರಡು ಹೊಂನ ಬಡ್ಡಿಯಂ ಬೈರವದೇವರ್ಗ್ಗೆ ನಂದಾದೀವಿಗೆಗೆ ಒಂದು ಹೊಂನ ಬಡ್ಡಿಯಂ ಕೊಡುವಂತಾಗಿ ಹೇಳಿದೆ.[೩೫೨] ದೇವರ ನಿತ್ಯದ ಎಲ್ಲ ಕಾರ್ಯಗಳಿಗೆ, ಹೂದೋಟ, ಬ್ರಾಹ್ಮಣರ ಊಟ ಮೊದಲಾದವುಗಳಿಗೆ ಬಡ್ಡಿಯ ಹಣವನ್ನು ವಿನಿಯೋಗಿಸಲಾಗುತ್ತಿತ್ತು.

ಕ್ರಿ.ಶ. ೧೨೪೧ರ ಶಾಸನದಲ್ಲಿ ದೇವಣ್ಣನು ಶ್ರೀ ಚನ್ನಕೇಶವ ದೇವರ ಅಧಿಕಾರೋಗಣೆಗೆ ಹೊಂಗೆ ಹಾಗವೊಂದು ವ್ರಿದ್ಧಿಯಂ ಬೀಜವೊಂನಾಗಿ ಮಹಾಜನಂಗಳಿಗೆ ನಡೆಸುವಂತಾಗಿ ಕೊಟ್ಟ ಗದ್ಯಾಣ ೨.[೩೫೩] ಎರಡು ಗದ್ಯಾಣಗಳಿಗೆ ಹಾಗ ಒಂದು ಬಡ್ಡಿಯನ್ನು ನಿಗದಿಪಡಿಸಿದೆ. ಇದು ವರ್ಷಕ್ಕೊ, ಅಥವಾ ತಿಂಗಳಿಗೊ ತಿಳಿಯದು. ಕ್ರಿ.ಶ. ೧೫೯೯ರ ಶಾಸನದಲ್ಲಿ ಬೀಜವೊಂನ್ನ ಬಡ್ಡಿಯಲ್ಲಿ ಪಂಚಕೇಶ್ವರದ ಧರ್ಮ್ಮ ನಡೆವಂತಾಗಿ ಹೊಂಗೆ ತಿಂಗಳಿಗೆ ಸಲುವ ಮೂಱು ವೀಸದವೊಪಾದಿಯ ಬಡ್ಡಿಯಲ್ಲಿ ಬಂದ ಬಡ್ಡಿಯ ಹೊಂನ್ನಿಂ... ಗೋಪಂಣ್ನನವರು ಶ್ರೀ ವೈಷ್ಣವರು ಮಹಾಜನಂಗಳ ಮುಂದಿಟ್ಟು ಸಿವಡಿಯಲ್ಲಿ ಬರಸಿ ಕೊಟ್ಟ ಬೀಜವೊಂನು ಮೊದಲು ಗದ್ಯಾಣಂ ನೂಱು ಗ ೧೦೦ ಯೀ ಹೊಂನಿನ ಬಡ್ಡಿ ಇಂ ವರುಷವೊಂದಕ್ಕೆ ಬಡಗ ೨೨ ಪಣ ೫ಕ್ಕಂ ಬೀಯರುಕ್ಕುತೀಟು ೧ಲಕ್ಕಂ ಯಜುಸುತೀಟು ೧ಲಕ್ಕಂ ಗರ್ ಸಾಮತೀಟು ೬ಕ್ಕಂ ಗ ೩ ತಕ್ಕರ ಊಟ ಆ ವೀಳಯಕ್ಕೆ ಗ ೧ ಪ ೫ ಅನ್ತು ಗ ೨೨ ಪ ೫ ಎಂದಿದೆ.[೩೫೪] ದೇವಾಲಯಕ್ಕೆ ಕೊಡುವ ಹೊನ್ನು ಕಂಡುಬರುತ್ತದೆ. ಕ್ರಿ.ಶ. ೧೫೯೮ರ ಶಾಸನದಲ್ಲಿ ಕೇಶವನಾಥ ದೇವರಿಗೆ ತೇರ ಪರ್ಬ್ಬಸಮಾಪ್ತಿಯಾದ ಮಱುದಿನದ ಅಧಿಕಾರೋಗಣೆಗೆ ಬೀಜ ಒಂನ ಬಡ್ಡಿ ಇಂದ ಧರ್ಮ್ಮಾ ಆ ಚಂದ್ರರ್ಕ್ಕ ಸ್ಥಾಇಯಾಗಿ ನಡವಂತಾಗಿ ಚಿಕ್ಕ ಇಂಗುಳದ ಕಂದಾಡೆಯ ಪೆರುಮಾಳೆ ದೇವನು ತೊಡುವಡ್ಡಿಯಲ್ಲಿ ಬಂದ ಹಣಗಳಿಂದ ವಿಡಾಯಾತಿಯ ಅಧಿಕಾರೋಗಣೆ ನಡವಲ್ಲಿಗೆ ನಡೆಸ ಹೇಳಿ ವೈಷ್ಣವರು ಮಹಾಜನಂಗಳ ಮುಂದಿಟ್ಟು ಸಿವಡಿಯಲ್ಲಿ ಬರಸಿ ಆ ಪೆರುಮಾಳೆದೇವನು ಹೊಂಗೆ ತಿಂಗಳಿಂಗೆ ಸಲುವ ಮೂಱು ವೀಸದ ಬಡ್ಡಿಯಲ್ಲಿ ಕೊಟ್ಟ ಬೀಜವೊಂನು ಮೊದಲು ಗದ್ಯಾಣಂ ಆಱು ಗ೬ ಎಂದಿದೆ.[೩೫೫]

ಕ್ರಿ.ಶ. ೧೫೯೭ರ ಶಾಸನದಲ್ಲಿ ಬೆಲಹೂರ ಅಧಿಕಾರಿ ರಂಗಂಣ್ನನವರು ಸ್ಥಳಗಳ ಕಿಱುಕುಳದಿಂದ ಆಕರಿಸಿ ಧನುಮಾಸದ ತಿಂಗಳವೊಂದರ ನಿತ್ಯೋಚ್ಛವದ ರಂಗಪೂಜೆ ಬೀಜವೊಂನ ತೊಡುವಡ್ಡಿ ಇಂದ ನಡವಂತಾಗಿ ಹೊಂಗೆ ತಿಂಗಳಿಗೆ ಸಲುವ ಮೂಱು ವೀಸದೋಪಾದಿಯ ಬಡ್ಡಿಯಲ್ಲಿ ಬಂದ ಬಡ್ಡಿಯ ಹೊಂನಿಂದ ಧರ್ನುಮಾಸದ ತಿಂಗಳು ವೊಂದಱ ರಂಗಪೂಜೆ ಶ್ರೀ ವೈಷ್ಣವ ಮಹಾಜನಗಳ ಮುಂದಿಟ್ಟು ಸಿವಡಿಯಲ್ಲಿ ಬರಸಿ ಆ ಅಧಿಕಾರಿ ರಂಗಂಣ್ನ ನವರು ಕೊಟ್ಟ ಬೀಜವೊಂನು ಮೊದಲು ಗದ್ಯಾಣಂ ಇಂನೂಱು ಅರವತ್ತ ಎರಡು ಗ ೨೬೨ ಯೀ ಹೊಂನ ಬಡ್ಡಿ ವರುಷವೊಂದಕ್ಕೆ ಬಹ ೫೮ ಪರ್ ಅಕ್ಕಿಗೆ ಪ ೫ ಗೋಧುವೆ ಬೆಲ್ಲ ತುಪ್ಪಕ್ಕೆ ಪ ೧ ಎಣ್ಣೆಗೆ ಪ ೨ ಪಾಯಸದ ಹಾಲಿಂಗೆ ಪ ೧ ಹೆಸರು ಮಾದುರಕಾಇ ಪ ೧ ಅಡಕೆ ಎಲೆಗೆ ಪ ೧೧ ಅನ್ತು ದಿನಂಪ್ರತಿ ಗ ೧ ಪ ೬ ಲೆಕ್ಕ ಮೆಣಸು ಪ ೧ ಇಂಗು ಸಂಬಾರ ಪ ೧ ಏಲಕ್ಕಿ ಪ ೧ ತಿರುವೆಟೆಗೆ ಕಲಸು ಗೂಳಿನ ಅಕ್ಕಿಗ ೭ ಪ ೫ ಹುಣಿಸೆಯ ಹಂಣ್ನು ಪ ೨ ಮೊಸರು ಪ ೬ ಕೈದೀವಿಗೆ ಎಣ್ನೆ ಪ ೮ ಆ ದಿನ ಹೂವಿಂಗೆ ಪ ಖಜ್ಜಾಯಕ್ಕೆ ಪ ೨... ಅಂತು ತೊಡುವಡ್ಡಿಯ ಬ್ರಯ ಗ ೫೫ ಪ ೨... ಎಂದಿದೆ.[೩೫೬] ೨೬೨ ಗದ್ಯಾಣಕ್ಕೆ ವರ್ಷಕ್ಕೆ ೫೫ ಗದ್ಯಾಣ ಪಣ ೨ರಷ್ಟು ಬಡ್ಡಿ ಬರುತ್ತಿತ್ತು. ಅದರಲ್ಲಿ ಯಾವುದಕ್ಕೆ ಎಷ್ಟು ವಿನಿಯೋಗಿಸಬೇಕು ಎಂಬುದನ್ನು ಶಾಸನವು ವಿವರವಾಗಿ ತಿಳಿಸಿರುವುದು ಕಂಡುಬಂದಿದೆ. ಕ್ರಿ.ಶ. ೧೫೯೭ರ ಶಾಸನದಲ್ಲಿ ಉಂಮಾಳೆಯ ಕೇಶಿಯಂಣ್ನನು ಸ್ವರ್ಗಸ್ಥನದಲ್ಲಿ

ಕೇಶವನಾಥಂಗೆ ಧಾರೆಯನೆಱದು ಕೊಟ್ಟ ಕಲ್ಲುಗದ್ದೆಯನು ಆ ಅಲ್ಲಾಳನಾಥಗೆ ಗ ೨೨ಕ್ಕೆ ಕ್ರಮಯವಾಗಿ ಕೊಟ್ಟಲ್ಲಿ ಪಂಚಕೇಶ್ವರಕ್ಕೆ ಬರದ....ಕೇಶವ ದೇವನು ಸತ್ರದ ಧರ್ಮಕ್ಕೆಂದು ಕೊಟ್ಟ ೮ ಗದ್ಯಾಣದ ಹೊನ್ನನು ಪ್ರಸಾದದ ತೊಡುವಡ್ಡಿಯಲ್ಲಿ ಸತ್ರದ ಧರ್ಮಕ್ಕೆ ನೀಡಿದರೆಂದು ಹೇಳಿದೆ.[೩೫೭] ವೊತ್ತೆಯಿಟ್ಟು ಬಡ್ಡಿಕೊಡುವುದನ್ನು ಶಾಸನವು ತಿಳಿಸಿದೆ. ಕ್ರಿ.ಶ. ೧೨೨೮ರ ಶಾಸನದಲ್ಲಿ ರುದ್ರಭಟ್ಟನೆಂಬ ವಿದ್ವಾಂಸನು ತನ್ನ ಹೆಸರಿನ ಒಂದು ಭಾಗವನ್ನು ಒತ್ತೆಯಿಟ್ಟನೆಂದು ಶಾಸನವು ತಿಳಿಸುತ್ತದೆ. 'ಅದಱೋಳ್‌ನಿಜನಾಮಾಕ್ಷರವಿಡೆ ಸಾಸಿರ ಪೊಂಗೆ ಕೊಟ್ಟದಂ ಬಿಡಿಪನಿತುದಿನಂ ಪಡೆದಂ ರುದ್ರಟನೆಂಬೀ ಪಡೆಮಾತಂ ರುದ್ರಭಟ್ಟನುರ್ಬಿ ಜನದಿಂ' ಎಂದಿದೆ.[೩೫೮] ಇವನು ತನ್ನ ಹೆಸರಿನ ಕೊನೆಯಭಾಗ ಭಟ್ಟ ಎಂಬುದನ್ನು ಒತ್ತೆಯಿಟ್ಟು ಸಾಸಿರ ಪೊಂಗೆ ಪಡೆದನು ಎಂದು ಶಾಸನವು ತಿಳಿಸಿದೆ. ಸಾಲ ನೀಡುವವರು ಒತ್ತೆಯಿಡಿಸಿಕೊಂಡು ಸಾಲ ನೀಡುತ್ತಿದ್ದರು ಎಂಬುದು ಈ ಎರಡು ಶಾಸನಗಳಿಂದ ತಿಳಿಯುತ್ತದೆ. ವಿದ್ವಾಂಸರಿಗೆ ತಮ್ಮ ಹೆಸರಿನಲ್ಲಿನ 'ಭಟ್ಟ' ಪದ ಆಸ್ತಿಯಾಗಿತ್ತೆಂದು ತೋರುತ್ತದೆ. ಅಂದರೆ ಅಂದಿನ ಸಮಾಜದಲ್ಲಿ ಭಟ್ಟ ಪದಕ್ಕಿದ್ದ ಮೌಲ್ಯವನ್ನು ಇದು ಸೂಚಿಸುತ್ತದೆ. ಹೀಗೆ ಒತ್ತೆಯಿಟ್ಟು ಸಾಲ ಪಡೆಯುತ್ತಿದ್ದರೆಂಬ ಸೂಚನೆಯೂ ಸಹ ಕಂಡುಬಂದಿದೆ.

೧೨ನೆಯ ಶತಮಾನದ ಬಸವಣ್ಣನ ವಚನವೊಂದರಲ್ಲಿ ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು, ಸಾಲಬಟ್ಟಡೆ ಮಾಱಿಕೊಂಬರಯ್ಯಾ ಎಂದಿದ್ದಾರೆ. ಮಾರಿಕವ್ವೆಯ ಭಕ್ತರು ಆ ದೇವತೆಯ ಪದಕವನ್ನು ಕೊರಳಲ್ಲಿ ಕಟ್ಟಿಕೊಂಡಿದ್ದು, ಸಾಲ ಮಾಡುವಾಗ ಅದನ್ನೆ ಒತ್ತೆ ಇಡುತ್ತಿದ್ದಂತೆ ಕಂಡುಬಂದಿದೆ.[೩೫೯] ವಚನಕಾರರು ಬಡ್ಡಿ ಸಾಲವನ್ನು ಕೊಡವ, ಬಡ್ಡಿಗಾಗಿ ಆಸೆ ಪಡುವ ಶಿವಭಕ್ತರನ್ನು ವಿರೋಧಿಸಿರುವುದು ಕಂಡುಬರುತ್ತದೆ.[೩೬೦] ವಚನಕಾರರು ಸಾಮಾಜಿಕ ಚಳುವಳಿಯ ವಕ್ತಾರರು ಈ ಕಾರಣಕ್ಕಾಗಿಯೇ ಸಮಾಜದಲ್ಲಿ ಅಂದು ಇದ್ದಂತಹ ಇಂತಹ ವ್ಯವಸ್ಥೆಯನ್ನು ವಿರೋಧಿಸುರುವುದು ಕಂಡುಬರುತ್ತದೆ. ಪ್ರಾಚೀನ ಸಂದರ್ಭಗಳನ್ನು ಗಮನಿಸುತ್ತ ಹೋದರೆ ಬಡ್ಡಿ ಸಾಲಗಳು ಸಮಾಜದ ಅಡಿಗಲ್ಲುಗಳ ಒಂದು ಭಾಗವಾಗಿ ಕಂಡುಬರುತ್ತವೆ.

ಅರ್ಥಶಾಸ್ತ್ರಕಾರನು ಈ ಒತ್ತೆ ಇಟ್ಟು ಸಾಲ ಪಡೆಯುವ ಮತ್ತು ಹಿಂದಿರುಗಿಸುವ ಕುರಿತು ಈ ರೀತಿ ಹೇಳಿರುವನು. ಹಸು, ಕುದುರೆ ಮೊದಲಾದ ಪ್ರಾಣಿಗಳನ್ನು ಒತ್ತೆ ಇಟ್ಟುಕೊಂಡಾಗ ಹಣ ಪಡೆದು ಅವುಗಳನ್ನು ಹಿಂದಿರುಗಿಸುವುದು. ಈ ಒತ್ತೆ ಇಟ್ಟು ಹಣ ಪಡೆದ ಮೂಲಧನ ಬೆಳೆಯುವುದಿಲ್ಲ. ಹಣಕೊಟ್ಟು ಬಿಡಿಸಿಕೊಳ್ಳುವುದಕ್ಕೋಸ್ಕರ ಬಂದವನಿಗೆ ಅಡವಿನ ಮಾಲನ್ನು ಪ್ರತ್ಯಾರ್ಪಿಸಿದ ಧನಿಕನಿಗೆ ಹನ್ನೆರಡು ಪಣ ದಂಡವನ್ನೆಳೆಯಬೇಕು. ಹಣ ಕೊಟ್ಟವನು ದೇಶ ಬಿಟ್ಟು ಹೊರಗಿದ್ದರೆ ಗ್ರಾಮದ ಹಿರಿಯರಿಗೆ ಅಥವಾ ಹಿರಿಯ ವೃದ್ಧರಿಗೆ ಹಣಕೊಟ್ಟು ಮಾಲು ಪಡೆಯಬಹುದು. ಹಣಕೊಟ್ಟ ದಿನದಿಂದ ಬಡ್ಡಿ ಇಲ್ಲವೆಂದು ತಿಳಿಸಿ ಅವರು ಅಡುವಾದ ಮಾಲಿಗೆ ಸಾಲಗಾರನ ಎದುರಿಗೆ ಬೆಲೆಯೊಂದನ್ನು ನಿಗದಿಪಡಿಸಿ ಅದನ್ನು ಧನಿಕನಲ್ಲಿಯೇ ಬಿಡಬಹುದು. ವಸ್ತುವಿನ ಬೆಲೆ ಬಿದ್ದು ಹೋಗುವುದೆಂಬ ಭಯ, ಮಾಲು ಕೈಗೆ ಸಿಗಲಾರದ ಸನ್ನಿವೇಶದಲ್ಲಿ ಸಾಲಗಾರನಿಲ್ಲದಿದ್ದರೂ, ಅವರು ಬೆಲೆಯನ್ನು ನಿರ್ಧರಿಸಿ ಅದು ಧನಿಕನಲ್ಲಿರಲು ಅವಕಾಶ ನೀಡಬಹುದು. ಸಾಲ ಕೊಟ್ಟವನು ಧರ್ಮಸ್ಥನ ಅಪ್ಪಣೆ ಪಡೆದು ಸಾಲಗಾರನ ಎದುರಿನಲ್ಲಿಯೇ ಬೆಲೆಯನ್ನು ಹೆಚ್ಚಿಸಿ ಮಾರಿಬಿಡಬಹುದು. ಅಡವಿನ ನಿರ್ಣಯಾಧಿಕಾರಿಯ ಇಷ್ಟದಂತಾದರೂ ಅವುಗಳ ವಿಕ್ರಯವನ್ನು ಕೈಗೊಳ್ಳಬಹುದು.[೩೬೧] ಅರಸು ಮನೆತನದವರು, ವ್ಯಾಪಾರಿಗಳು, 'ಅರಮನೆಯ ಸೇವಕರು, ಅಗ್ರಹಾರದ ಮಹಾಜನರು, ಸೂಳೆಯರು, ರೇವಣಿ ಇಡುತ್ತಿದ್ದರು. ಇದರಿಂದ ಬಂದ ಹಣವನ್ನು ಕೆರೆ, ದೇವಾಲಯಗಳ ನಿರ್ಮಾಣಗಳಿಗೆ, ವ್ಯವಸಾಯದ ಅಭಿವೃದ್ಧಿಗೆ ವಿನಿಯೋಗಿಸುತ್ತಿದ್ದರು. ಹಣವನ್ನಲ್ಲದೆ ಭೂಮಿಯನ್ನು ರೇವಣಿಯಾಗಿ ಇಡಲಾಗುತ್ತಿತ್ತು. ಇದನ್ನು

ರೈತರಿಗೆ ಗುತ್ತಿಗೆಕೊಟ್ಟು ಬಂದ ಉತ್ಪನ್ನವನ್ನು ಸಾಲವಾಗಿ ನೀಡಲಾಗುತ್ತಿತ್ತು.[೩೬೨] ಸಾಲ ಕೊಡುವಾಗ ಅಡುವು ಹಿಡಿಸಿಕೊಂಡು ಕೊಡುತ್ತಿದ್ದರು. ಇದರಲ್ಲಿ ಹಲವು ವಿಧಗಳಿವೆ. ಅವುಗಳಲ್ಲಿ ಅರುವಾರವು ಅಥವಾ ಆರುವಾರ ಒಂದಾಗಿದೆ. ಅಂದರೆ ಸ್ವಾಧೀನದೊಂದಿಗೆ ಭಣ ಅಥವಾ ಅಡವು ಇಡಿಸುವ ಅಥವಾ ಇಡುವ ಕ್ರಯ ಆರುವಾರ ಎಂದೆನಿಸಿಕೊಳ್ಳುತ್ತದೆ. ಹಣ ಪಡೆದು ನಂತರ ಹಣ ಕೊಟ್ಟವನಿಗೆ ಭೂಮಿಯನ್ನು ಹಿಂತಿರುಗಿಸುವ ಪದ್ಧತಿ. ಮತ್ತೊಂದು ಅಂತರಾರುವಾರ.[೩೬೩] ಅಂದರೆ ಆರುವಾರಗಳಿಗೂ ಹೆಚ್ಚು ಕಾಲ ಸಾಲ ತೆಗೆದುಕೊಂಡ ನಂತರ ಅಡವು ಮಾಡುವಾಗ ತಯಾರಿಸುವ ಕಾಗದ ಪತ್ರ. ಎರಡು ಪಸರದ ಬಾಡಿಗೆ: ಎರಡು ಹಂತದಲ್ಲಿ ವಿಧಿಸುವ ಬಾಡಿಗೆ.[೩೬೪] ಹೊಯ್ಸಳರ ಅವಧಿಯ ಒಂದು ಶಾಸನವು ಸೋಮೇಗೌಡನು ದೀಕ್ಷಿತ ನಾಗಣ್ಣನಿಂದ ಸಾಲ ಪಡೆಯುವಾಗ ಭೂಮಿಯನ್ನು ಆಧಾರವಾಗಿಟ್ಟು ಪಡೆದನೆಂದಿದೆ.[೩೬೫] ಈ ರೀತಿ ಸ್ಥಿರಾಸ್ಥಿಯನ್ನು ಒತ್ತೆಯಿಟ್ಟು ದಾನ ಪಡೆದಿರುವುದು ಈ ಶಾಸನದಲ್ಲಿ ಕಂಡುಬಂದಿದೆ. ಈ ರೀತಿ ಸ್ಥಿರಾಸ್ತಿಯನ್ನು ಅರ್ಥಶಾಸ್ತ್ರಕಾರನು 'ಪ್ರಯಾಸಭೋಗ್ಯ, ಫಲಭೋಗ್ಯ' ಎಂದು ಎರಡು ವಿಧಗಳನ್ನಾಗಿ ವಿಂಗಡಿಸಿದ್ದಾನೆ. ಭೂಮಿ, ಮರ, ಗಿಡಗಳೇ ಮುಂತಾದವುಗಳನ್ನು ಒತ್ತೆ ಇಡಿಸಿಕೊಂಡು ಶಾರೀರಿಕ ಪರಿಶ್ರಮದಿಂದ ಅನುಭವಿಸುವುದು ಪ್ರಯಾಸಭೋಗ್ಯ. ಒತ್ತೆಯಿಟ್ಟವನ ಪರಿಶ್ರಮದ ಪರಿಣಾಮವಾಗಿ ಕೈ ಸೇರಿದ ಫಲವನ್ನು ಅನುಭವಿಸತಕ್ಕದ್ದು ಫಲಭೋಗ್ಯ, ವ್ಯಾಪಾರದಲ್ಲಿ ಲಾಭ ಬಂದರೆ ಇಷ್ಟನ್ನು ಕೊಡುವೆನೆಂದು ಮಾಡಿಕೊಂಡು ನಿರ್ಣಯದ ಫಲವಾಗಿ ಬಂದ ಬಡ್ಡಿಯು ಪ್ರಕ್ಷೇಪವೃದ್ಧಿ. ಅದರಿಂದ ಮೂಲಧನವನ್ನು ತೀರಿಸಿಕೊಂಡು ಅನುಭವದಲ್ಲಿರುವ ಒತ್ತೆ ಮಾಲನ್ನು ಬಿಟ್ಟುಕೊಡಬೇಕು.[೩೬೬]

ಅರ್ಥಶಾಸ್ತ್ರಕಾರನ ಪ್ರಕಾರ ಅಡವಿಟ್ಟ ವಸ್ತುಗಳನ್ನು ದುರುಪಯೋಗಪಡಿಸಿಕೊಳ್ಳಬಾರದು. ಅನುಮತಿ ಇಲ್ಲದೆ ಒತ್ತೆಯನ್ನು ಅನುಭವಿಸುವ ಸಾಲಿಗನು ಮೂಲ್ಯಶುದ್ಧವಾದ ಲಾಭವನ್ನು ಒತ್ತೆಯಿಟ್ಟವನಿಗೂ, ರಾಜನಿಗೊಂದು ದಂಡವನ್ನು ಸಲ್ಲಿಸಬೇಕು. ಇವೆರಡಕ್ಕೂ ಹಾಗಿ ಮಿಕ್ಕ ಹಣವನ್ನು ಮೂಲಧನಕ್ಕೆ ತೆಗೆದುಕೊಳ್ಳುವುದು. ಅಡವಿನ ನಿಯಮಗಳಿಗೆ ಅನ್ವಯಿಸುವ ಎರಡು ನಿಯಮಗಳನ್ನು ಹೇಳುವನು. ಒಬ್ಬನಿಗೆ ಕೊಡೆಂದು ನುಡಿದು ಮತ್ತೊಬ್ಬನ ವಶಕ್ಕೆ ಒಪ್ಪಿಸಿದುದು 'ಆದೇಶ'. ಇಷ್ಟು ದಾರಿಯವರೆಗೆ ನೀನಿದನ್ನು ರಕ್ಷಿಸಿಕೊಡು ಎಂದು ಅರ್ಪಿತವಾದುದು ಅಸ್ವಾಧಿ. ಈ ಅಸ್ವಾಧಿಯನ್ನು ಹೊಂದಿ ವರ್ತಕ ಸಂಘದೊಂದಿಗೆ ಹೋಗುವವನು, ಮಾರ್ಗ ಮಧ್ಯದಲ್ಲಿ ಮೃತನಾದರೆ ದಾಯಾದಿಗಳು ಕೊಡುವ ಅಗತ್ಯವಿಲ್ಲವೆಂದು ತಿಳಿಸಿದ್ದಾನೆ.[೩೬೭] ಹೀಗೆ ಅಡವಿಟ್ಟು ಅಥವಾ ಒತ್ತೆಯಿಟ್ಟ ವಸ್ತುಗಳ ಬಗೆಗೆ ಅರ್ಥಶಾಸ್ತ್ರಕಾರ ಅಂದೇ ಹೇಳಿರುವ ನಿಯಮಗಳು ಕೆಲವೊಂದು ಇಂದಿಗೂ ಅನ್ವಯಿಸುತ್ತವೆ. ಆದರೆ ಅಂದು ಇದ್ದ ಕಟ್ಟು ನಿಟ್ಟಿನ ನಿಯಮಗಳು, ದಂಡ ಮೊದಲಾದವುಗಳು ಇಂದಿನ ಕಾನೂನು ವ್ಯವಸ್ಥೆಯಲ್ಲಿ ಇರದ ಕಾರಣದಿಂದಾಗಿ ಅರ್ಥಶಾಸ್ತ್ರಕಾರನ ನಿಯಮಗಳು ಪ್ರಸ್ತುತ ಸಮಾಜಕ್ಕೆ ಅನ್ವಯವಾಗುವುದು ವಿರಳ. ಇಂದು ಒತ್ತೆ ಇಡುವುದನ್ನು ಗಿರವಿ ಇಡುವುದು ಎಂದು ಕರೆಯುವುದಿದೆ. ಈ ರೀತಿ ಒತ್ತೆ ಇಡುವಾಗ ಪತ್ರಗಳನ್ನು ಬರೆಸಲಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಶಾಸನವೊಂದರಲ್ಲಿ ಹೀಗೆ ನಿರೂಪಿತವಾಗಿದೆ. ಇದು ಸಾಲ ಪಡೆಯುವುದಕ್ಕೂ ಅನ್ವಯಿಸುತ್ತದೆ. ಕ್ರಿ.ಶ. ೧೨೭೮ರ ಶಾಸನದಲ್ಲಿ ಸೋವಂಣ ಹೊಣೆಯ ಕೊಟ್ಟುಕೊಂಡ ಪತ್ರ ಸಾಲದ ಹೊಂನ್ನಿಂಗೆ ಆಸೋವಂಣ್ನ ಕಾಳವೆಯ ಕೇಶವದೇವಂಗಳು ಆ ಮಲ್ಲಿನಾಥ ದೇವಂಗೆ ವಾಮಿಗವುಂಡಂಗೆ ಕೈಯ್ಯ ಕೊಡಿಸಿದ ಹೊಂನ್ನಿಂಗೆ ಆ ವಾಯಿಗವುಂಡಂಗೆ ಆ ಕೊಂಮ್ಮನ ಕೆಱೆಯ ಕೆಳಗೆ ಅಕರವಾಗಿ ಆ ಸಾಲವ ತಿದ್ದಿದ ಹೊಂನೆ ಕ್ರಯವಾಗಿ ಧಾರೆಯನೆಱೆದುಕೊಟ್ಟ ಗದ್ದೆ ಕಂಬ ೧೦ ವಾಮಿಗವುಡನ ಕಯ್ಯಲು ಕೊಳ್ಳಿಯ ಸೋವಂಣ್ನ ಕ್ರಯವ ಕೊಂಡು ಅಕರವಾಗಿ ಧಾರೆಯನೆಱೆದು[೩೬೮] ಎಂದಿದೆ. ಸಾಲಕೊಡುವಾಗ ಪತ್ರ ಬರೆಸಿಕೊಂಡು ಅಥವಾ ಬರದುಕೊಟ್ಟು ಸಾಲ ಪಡೆಯುವ ಕ್ರಮವಿತ್ತೆಂಬುದು

ಈ ಶಾಸನದಿಂದ ತಿಳಿದುಬಂದಿದೆ. ನಯಸೇನನ ಧರ್ಮಾಮೃತದಲ್ಲಿ ಸಾಲವನ್ನು ತೆಗೆದುಕೊಳ್ಳುವವನು ಸಾಕ್ಷಿಗಳ ಮುಂದೆ ಸಾಲಪತ್ರವನ್ನು ಬರೆದುಕೊಡುತ್ತಿದ್ದನು.[೩೬೯] ಸಾಲಪತ್ರದ ಒಕ್ಕಣೆಯನ್ನು ನಂಬಿಯಣ್ಣನ ರಗಳೆಯಲ್ಲಿ ತಿಳಿಸಿದೆ. ಧರ್ಮಾಮೃತದಲ್ಲಿ ಸಾಲವನ್ನು ತೆಗೆದುಕೊಂಡವನು ಕೊಡಬೇಕಾದ ಸಾಲವನ್ನು ಹಿಂದಿರುಗಿಸಿದ ಮೇಲೆ ಪತ್ರವನ್ನು ಸೀಳಿ ಹಾಕುತ್ತಿದ್ದನು. ಸಾಲ ಕೊಟ್ಟವನ ಮತ್ತು ತೆಗೆದು ಕೊಂಡವನ ಮಧ್ಯೆ ವಿವಾದ ಉಂಟಾದರೆ ಊರಿನ ಹಿರಿಯರು ಸಭೆ ಸೇರಿ ಇತ್ಯಾರ್ಥ ಮಾಡುತ್ತಿದ್ದರೆಂದು ನಂಬಿಯಣ್ಣನ ರಗಳೆ ತಿಳಿಸುತ್ತದೆ.[೩೭೦] ಅರ್ಥಶಾಸ್ತ್ರಕಾರನು ಸಾಲಿಗ ಮತ್ತು ಸಾಲಗಾರರ ಮಧ್ಯೆ ವಿವಾದ ಉಂಟಾದರೆ ವಿಶ್ವಾಸಾರ್ಹರೂ, ಒಳಗೂ ಹೊರಗೂ ಪರಿಶುದ್ಧರು ವಾದಿ ಪ್ರತಿವಾದಿಗಳಿಬ್ಬರಿಗೂ ಬೇಕಾದವರು ಮೂರುಜನ ಅಥವಾ ಉಭಯ ಸಮ್ಮತರಾದ ಇಬ್ಬರಾಗಲಿ ಸಾಲ ತೀರ್ಮಾನದ ವಿಷಯದಲ್ಲಿ ಸಾಕ್ಷಿ ಹೇಳಲು ಅರ್ಹರಾಗಿರುತ್ತಾರೆ. ಅವರನ್ನು ಬ್ರಾಹ್ಮಣರು ನೀರು ತುಂಬಿದ ಪಾತ್ರೆ ಮೇಲೆ ಬೆಂಕಿ ಮುಂದಿಟ್ಟು ಸತ್ಯ ಹೇಳಬೇಕೆಂದು ಹೇಳಿ ಸಾಕ್ಷಿಗಳ ಆಧಾರದ ಮೇಲೆ ನ್ಯಾಯ ತೀರ್ಮಾನ ಮಾಡಬೇಕೆಂದು ಹೇಳಿರುವನು.[೩೭೧] ಕ್ರಿ.ಶ. ೧೧೦೦-೦೧ರ ಶಾಸನದಲ್ಲಿ ಕೆಱೆಗೆ ಕೊಟ್ಟರ್ತ್ಥ ೧೯೦೦ ಮುಗುಳಿಯ ನೆಲವಾಟ್ಟಿಗೆ ಕೊಟ್ಟ ಅರ್ತ್ಥ ಮೊದಲು ೧೩೦ ವ್ರಿದ್ಧಿ ಸಹಿತಂ ಮುನೂಱು ಎಂದಿದೆ.[೩೭೨] ಕ್ರಿ.ಶ. ೧೨೮೦ರ ಶಾಸನದಲ್ಲಿ ಪಾತ್ರದ ಆನೆಯ ಮಾಳೌವೆ ಕೊಟ್ಟ ಗ ೩ ವೊಂಗೆ ವರ್ಷವೊಂದಕ್ಕೆ ಪಣವೆರಡಱ ಬಡ್ಡಿಯಲು ಶ್ರೀ ಹೊಯ್ಸಳೇಶ್ವರ ದೇವರ ಭಂಡಾರಿ ಪೊಂನಯ್ಯ ಕೊಂಡ ಗದ್ಯಾಣಂವೊಂದು ಆ ದೇವರ ಭಂಡಾರಿ ರಾಮಂಣಕೊಂಡ ಗದ್ಯಾಣಂ ನಾಲ್ಕು ೫ ಹೊನ್ನಿನ ಬಡ್ಡಿಯಲು ವರ್ಷಂಪ್ರತಿ ಚ್ಛಾತ್ರ ಭಿಕ್ಷೆಯ ವೇಡಿವಂದ ಬ್ರಾಹ್ಮಣರಿಗೆ ಕೊಡುತ ಬಹರು.[೩೭೩] ಎಂದಿದೆ.

ಶಿಕಾರಿಪುರದ ಶಾಸನವೊಂದರಲ್ಲಿ ನಾಗರಖಂಡದ ಮೇಲಿನ ಸಾಲಬಾಧೆಯಿಂದ ಹೊರಬರಲು ಜಕ್ಕಿಯಬ್ಬೆ ದೇವಾಲಯಕ್ಕೆ ದಾನ ಮಾಡಿದಳೆಂದಿದೆ.[೩೭೪] ಕ್ರಿ.ಶ. ೧೨೮೪ರ ಶಾಸನದಲ್ಲಿ ಬಂಯಣದಂಣ್ಣಾಯಕರು ಶ್ರೀ ಹೊಯಸಳೇಶ್ವರ ದೇವರ ಪಂಚಿಕೇಶ್ವರ ದೇವರ ಧವಿಸೆಯ ಪೂಜೆಗೆ ಹೊಂಗೆ ವರಿಷಕ್ಕೆ ಹಣವೆರಡಱ ಬಡ್ಡಿಯಲು ಆಚಾರ್ಯ ಪ್ರಮುಖವಾದ ದೇವಾಲಯದ ಮಹಾಜನಂಗಳು...ಬಿಟ್ಟ ಗದ್ಯಾಣ ಹತ್ತು ಎಂದಿದೆ.[೩೭೫]

ಬಡ್ಡಿ ಸಂಬಂಧಿತ ಶಾಸನಗಳನ್ನು ಗಮನಿಸಿದಾಗ ಹೊಯ್ಸಳರ ಕಾಲಕ್ಕೆ ಸಂಬಂಧಿಸಿದ ಅಧಿಕ ಶಾಸನಗಳು ಬಡ್ಡಿ ಸಾಲದ ಬಗೆಗೆ ಮಾಹಿತಿ ನೀಡುತ್ತವೆ. ಇದಕ್ಕೆ ಕಾರಣವೇನು ಎಂದು ನೋಡಿದರೆ ಹೊಯ್ಸಳರ ಕಾಲದಲ್ಲಿ ಕೃಷಿಯು ಅಭಿವೃದ್ಧಿ ಸಾಧಿಸಿದ್ದು, ಈ ನಿಟ್ಟಿನಲ್ಲಿ ಅವರು ಭೂಮಿಯನ್ನು ಸಾಗುವಳಿಗೆ ಒಳಪಡಿಸುವುದರ ಜೊತೆಗೆ ಉತ್ಪಾದನೆಯ ಹೆಚ್ಚಳಕ್ಕಾಗಿ ನೀರಾವರಿ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿದರು. ವ್ಯವಸಾಯವನ್ನು ಪ್ರೋತ್ಸಾಹಿಸುವ, ಉತ್ತೇಜಿಸುವ ಸಲುವಾಗಿ 'ಕಂದಾಯ ವಿನಾಯಿತಿ ಕೊಡುವ ಮೂಲಕ ಕೃಷಿಕರನ್ನು ಆಕರ್ಷಿಸುತ್ತಿದ್ದರು.[೩೭೬] ಇದರೊಂದಿಗೆ ಉತ್ಪಾದನೆ ಹೆಚ್ಚಿಸುವ ಮತ್ತು ಬೇಸಾಯದ ಅಭಿವೃದ್ಧಿಗಳು ಅವರ ಕಂದಾಯದ ಅಭಿವೃದ್ಧಿಗೆ ದಾರಿ ಮಾಡಿಕೊಟ್ಟವು. ಕೃಷಿ ಉತ್ಪನ್ನ ಹೆಚ್ಚಿದಂತೆ ದೇವಾಲಯಗಳಿಗೆ, ಕೆರೆಗಳಿಗೆ ಹೆಚ್ಚಾಗಿ ದೇಣಿಗೆಯ ರೂಪದಲ್ಲಿ ಹಣ ಹರಿದು ಬಂದಿರುವ ಸಾಧ್ಯತೆಗಳಿವೆ. ಇದನ್ನು ಮತ್ತಷ್ಟು ಅಭಿವೃದ್ಧಿಪಡಿಸುವ, ದ್ವಿಗುಣಗೊಳಿಸುವ ಸಲುವಾಗಿ ಮತ್ತು ವ್ಯವಸಾಯ ವ್ಯಾಪಾರ, ವೃತ್ತಿಗಳನ್ನು ಉತ್ತೇಜಿಸುವ ಸಲುವಾಗಿ ಹೆಚ್ಚಾಗಿ ಬಡ್ಡಿ ಸಾಲ ನೀಡಿರುವ ಸಾಧ್ಯತೆಗಳು ಹೊಯ್ಸಳರ ಅವಧಿಯಲ್ಲಿಯೇ ಅಧಿಕವಾಗಿ ಕಂಡುಬರುತ್ತವೆ. ಅಲ್ಲದೆ ವ್ಯವಸಾಯದ ಅಭಿವೃದ್ಧಿಗಾಗಿ ಕೆರೆಕಟ್ಟಿಸುವವರಿಗೆ ಜಮೀನನ್ನು ಕೊಡುಗೆ ಕೊಡುವ ಮೂಲಕ ಆಕರ್ಷಿಸುತ್ತಿದ್ದರು. ಇವೆಲ್ಲವುಗಳ ಭಾಗವಾಗಿ, ಆರ್ಥಿಕ ಅಭಿವೃದ್ಧಿಯ ಭಾಗವಾಗಿಯೇ ಬಡ್ಡಿ ಸಾಲಗಳನ್ನು ವಿತರಿಸಿರುವ ಸಾಧ್ಯತೆಗಳಿವೆ.

ಅರ್ಥಶಾಸ್ತ್ರಕಾರನು ರೋಗಿಗಳಿಗೆ, ಗುರುಕುಲದಲ್ಲಿ ಓದುವವರಿಗೆ, ಲೋಕಯಾತ್ರೆಯನ್ನರಿಯದವರಿಗೆ ಬಡ್ಡಿಸಾಲ ನೀಡಿದಾಗ ಅವರ ಬಡ್ಡಿ ಬೆಳೆಯುವುದಿಲ್ಲ. ಸಾಲಪಡೆದವ ಮರಣ ಹೊಂದಿದಾಗ ಮೃತನ ಮಕ್ಕಳು, ದಾಯಾದಿಗಳು ಅದನ್ನು ತೀರಿಸಬೇಕು. ಇಂದು ಇದನ್ನು ಋಣಭಾರ ಎಂದು ಕರೆಯುತ್ತಾರೆ. ಹಲವಾರು ಕಡೆ ಸಾಲ ಮಾಡಿದವರು ರಾಜ ಮತ್ತು ಶ್ರೋತ್ರಿಯರ ಸಾಲವನ್ನು ಮೊದಲು ತೀರಿಸಬೇಕೆಂದು ತಿಳಿಸಿದ್ದಾನೆ. ಅಲ್ಲದೆ ರೈತರನ್ನು, ಅಧಿಕಾರಿಗಳನ್ನು ಅವರ ಕೆಲಸದ ಮೇಲಿರುವಾಗ ಸೆರೆಹಿಡಿಯ ಕೂಡದು. ಗಂಡನ ಸಾಲದ ಬಗ್ಗೆ ತಿಳಿಯದ ಹೆಂಡತಿಯನ್ನು ಸೆರೆಯಿಡಿಯುವಂತಿಲ್ಲ. ಆದರೆ ಸ್ತ್ರೀ ಪ್ರಧಾನರಾಗಿದ್ದು ಅವರಿಗೆ ಸಾಲದ ಬಗೆಗೆ ತಿಳಿಸಿದ್ದರೆ ಕೃಷಿಗೈಯುವ ಮಡದಿಯನ್ನು ಸೆರೆಹಿಡಿಯಬಹುದು. ಸಾಲಿಗ ಮತ್ತು ಸಾಲಗಾರರ ಮಧ್ಯ ತಕರಾರುಗಳು ಬಂದಾಗ ಸಾಕ್ಷಿಗಳನ್ನು ಕೇಳಲಾಗುತ್ತಿತ್ತು.[೩೭೭] ಹೀಗೆ ಸಾಲ ಕುರಿತ ಮೊದಲಾದ ಅಂಶಗಳನ್ನು ಅರ್ಥಶಾಸ್ತ್ರಕಾರನು ತಿಳಿಸುವನು.

ಶಾಸನಗಳನ್ನು ಗಮನಿಸಿದಾಗ ಕೆಲವು ಕಡೆ ಅಧಿಕ ಬಡ್ಡಿ ಮತ್ತೆ, ಕೆಲವು ಕಡೆ ಕಡಿಮೆ ಬಡ್ಡದರಗಳು ಕಂಡುಬರುತ್ತವೆ. ಮೊದಲೇ ತಿಳಿಸಿದಂತೆ ಬಡ್ಡಿಯ ದರಗಳು ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ ಪರಿಷ್ಕೃತಗೊಳ್ಳುತ್ತಿದ್ದವು. ಅಲ್ಲದೆ ಧಾರ್ಮಿಕ, ಸಾಮಾಜಿಕ ಕಾರ್ಯಗಳಿಗಾಗಿ ಬಡ್ಡಿ ನೀಡುತ್ತಿದ್ದುದರಿಂದ ಒಮ್ಮೊಮ್ಮೆ ಅಧಿಕ ಬಡ್ಡಿ ಕಂಡುಬರುತ್ತದೆ. ರೈತರನ್ನು ಒಳಗೊಂಡಂತೆ ಸಮಾಜದ ಇತರ ವರ್ಗದವರೂ ಸಾಲ ತೆಗೆದುಕೊಂಡಿರುವುದು ಕಂಡುಬರುತ್ತದೆ. ಅದು ಅರ್ಥಶಾಸ್ತ್ರಕಾರನಿಂದಲೂ ಶಾಸನಗಳಲ್ಲಿಯೂ ಉಲ್ಲೇಖಗೊಂಡಿರುವುದು ತಿಳಿದುಬಂದಿದೆ. ಸಾಲಕೊಡುವಾಗ ಸಾಮಾನ್ಯವಾಗಿ ಪತ್ರವ್ಯವಹಾರ ನಡೆದುಬಂದುದು ಶಾಸನಗಳಿಂದ ತಿಳಿಯುತ್ತದೆ.

ಪ್ರಸ್ತುತ ಸಮಾಜಕ್ಕೆ ಪ್ರಾಚೀನ ಸಮಾಜವನ್ನು ಮುಖಾಮುಖಿಗೊಳಿಸಿದಾಗ, ಅನುಸಂಧಾನಗೊಳಿಸಿದಾಗ, ಕೆಲವು ಅಂಶಗಳು ತಿಳಿಯುತ್ತವೆ. ಪ್ರಾಚೀನ ಸಂದರ್ಭದ ಸಾಲಗಳಲ್ಲಿ ವಿಧಿಸಲಾದ ಕರಾರುಗಳು, ಒಪ್ಪಂದಗಳು ಅದನ್ನು ಮೀರಿದರೆ ವಿಧಿಸುತ್ತಿದ್ದ ದಂಡಗಳು ಮತ್ತು ಅದರ ಪ್ರಮಾಣ ಇಂದಿನ ಸಮಾಜದ ಕಾನೂನಿನ ಚೌಕಟ್ಟಿನಲ್ಲಿ ಕಂಡುಬರುವುದಿಲ್ಲ. ಇದ್ದರೂ ಅದು ಕಟ್ಟುನಿಟ್ಟಾಗಿ ಪಾಲನೆಯಾಗುತ್ತಿಲ್ಲ. ಪ್ರಾಚೀನ ಸಂದರ್ಭದ ಸಾಲದ ನಿಯಮಗಳು ಅನಗತ್ಯ ಸಾಲಕ್ಕೆ ಕಡಿವಾಣ ಹಾಕಿದಂತಿದೆ. ಸಾಲ ಮಾಡಲು ಇಷ್ಟು ನಿಯಮ ನಿಬಂಧನೆಗಳಿರುವ ಕಾರಣಕ್ಕೆ ಆತ್ಮಹತ್ಯೆಯಂತ ಉಲ್ಲೇಖಗಳಿರುವ ಸಾಧ್ಯತೆಗಳಿಲ್ಲ. ಇದು ಒಂದು ಕಾರಣವಾದರೆ, ಪ್ರಾಚೀನ ಕೃಷಿ ಆರ್ಥಿಕ ಲಾಭಗಳಿಕೆಯ ತೀರದ ಆಸೆಯನ್ನು ಹೊಂದಿರಲಿಲ್ಲ. ಕೃಷಿ ವೆಚ್ಚದಾಯಕವಾಗಿರಲಿಲ್ಲ. ಆದರೂ ಕೃಷಿಕರು ಸಾಲ ತೆಗೆದುಕೊಂಡಂತೆ ಶಾಸನವು ತಿಳಿಸಿದೆ. ಯಾವ ಕಾರಣಕ್ಕೆ ಸಾಲಪಡೆದರೆಂಬ ಅಂಶಗಳು ತಿಳಿಯದು. ಕೃಷಿ ನಷ್ಟ ಅನುಭವಿಸಿದಾಗ ಸಾಲಮನ್ನದಂತಹ ಅಂಶಗಳು ತಿಳಿಯದು. ಆದರೆ ತೆರಿಗೆ ಮನ್ನ ಮಾಡಿದ ದಾಖಲೆಗಳು ದೊರೆಯುತ್ತವೆ. ಅಸಹಾಯಕರಿಗೆ ಸಾಲಮನ್ನ ಮಾಡಿದ ವಿರಳ ನಿದರ್ಶನಗಳನ್ನು ಅರ್ಥಶಾಸ್ತ್ರ ತಿಳಿಸುತ್ತದೆ. ಆದರೆ ಶಾಸನಗಳಲ್ಲಿ ಇದು ಕಂಡುಬರುವುದಿಲ್ಲ. ಯಾಕಾಗಿ ರೈತರು ಸಾಲ ಮಾಡುತ್ತಿದ್ದರು, ಸಾಲಕ್ಕೂ ಕೃಷಿಗೂ ಏನು ಸಂಬಂಧ ಎಂದು ಗಮನಿಸಿದಾಗ ಪ್ರಾಚೀನ ಕೃಷಿಯಲ್ಲಿ ಉಲ್ಲೇಖಗಳಿಲ್ಲ. ಆದರೆ ಇಂದಿನಂತೆ ಅಂದು ಬಿತ್ತನೆ ಬೀಜಕ್ಕಾಗಲಿ, ರಾಸಾಯನಿಕ ಗೊಬ್ಬರ ಮೊದಲಾದವುಗಳಿಗೆ ಸಾಲಮಾಡಿರುವ ಸಾಧ್ಯತೆಗಳು ಕಡಿಮೆ. ಕಾರಣ ಸಾಂಪ್ರದಾಯಿಕ ಕೃಷಿಯಲ್ಲಿ ಪಾರಂಪರಿಕ ಜ್ಞಾನದ ಹಿನ್ನಲೆಯಿಂದ ಕೃಷಿ ಮಾಡುತ್ತಿದ್ದ ಪ್ರಾಚೀನ ಕೃಷಿಕರು ತಾವೇ ಬಿತ್ತನೆ ಬೀಜಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಬಿತ್ತನೆಬೀಜದಲ್ಲಿ ಸ್ವಾವಲಂಬಿಗಳಾಗಿದ್ದರು. ಗೊಬ್ಬರಕ್ಕಾಗಿ ಅವರು ಪರರ ಆಶ್ರಯ ಬೇಡಿರುವ ಸಾಧ್ಯತೆಗಳು ವಿರಳ. ಕೃಷಿಯೊಂದಿಗೆ ಪಶುಪಾಲನೆಯಲ್ಲಿ ತೊಡಗಿದ್ದರಿಂದ

ಪಶುಗಳ ತ್ಯಾಜ್ಯವನ್ನು ಗೊಬ್ಬರವಾಗಿ ಬಳಸುತ್ತಿದ್ದರು. ಆದರೆ ಹಿಂದೆ ಮತ್ತು ಇಂದು ನಿರಂತರವಾಗಿ ಕೆಲವು ಬದಲಾವಣೆಯೊಂದಿಗೆ ಮಾತ್ರ ಸಂಭವಿಸುತ್ತಿದ್ದ ಪ್ರಕೃತಿ ವಿಕೋಪಗಳು ಕೃಷಿ ಸಾಲಗಳಿಗೆ ಕಾರಣವಾಗಿರುವ ಸಾಧ್ಯತೆಗಳಿವೆ. ಇಂದಿನಂತೆ ಅಂದೂ ಸಹ ಕೃಷಿಯೊಂದಿಗೆ ಮಳೆಯು ಆಟವಾಡುತ್ತಿತ್ತು. ಒಮ್ಮೆ ಅತಿವೃಷ್ಟಿ ಸಂಭವಿಸಿದರೆ ಮತ್ತೊಮ್ಮೆ ಅನಾವೃಷ್ಟಿ ಸಂಭವಿಸಿ ಬೆಳೆ ಬಾರದ ಸಂದರ್ಭಗಳು ಎದುರಾಗುತ್ತಿದ್ದವು. ಈ ಹಿನ್ನೆಲೆಯಲ್ಲಿ ರೈತರು ಸಾಲಗಾರರಾದಂತೆ ಕಂಡುಬರುತ್ತದೆ. ಇಂದಿನಂತೆ ಅಂದೂ ಸಹ ಧಾರ್ಮಿಕ, ಸಾಮಾಜಿಕ ಕಾರ್ಯಗಳಿಗೆ ಹಣವನ್ನು ವ್ಯಯಮಾಡಿರುವ ಸಾಧ್ಯತೆಗಳಿವೆ. ವೈದಿಕ ಸಂಸ್ಕೃತಿಯ ಪ್ರಭಾವ, ಪ್ರೇರಣೆಗೆ ಪ್ರಾಚೀನ ಜನರು ಸದಾ ಒಳಗಾಗುತ್ತಲೇ ಬಂದಿರುವರು. ನಿರಂತರವಾಗಿ ಈ ಸಂಸ್ಕೃತಿ ಜನರನ್ನು ಪ್ರಭಾವಿಸಿದೆ. ಈ ಹಿನ್ನಲೆಯಲ್ಲಿ ಒಂದು ಸಂಸ್ಕೃತಿಯ ಜನರು ಮತ್ತೊಂದು ಸಂಸ್ಕೃತಿಯ ಅನುಕರಣೆಗೆ ಒಳಗಾಗುತ್ತಿದ್ದರು. ಮಧ್ಯಮ ಮತ್ತು ಕೆಳವರ್ಗದ ರೈತರು ಒಬ್ಬರನ್ನೊಬ್ಬರು ಕ್ರಮವಾಗಿ ಮೇಲ್ವರ್ಗದ ಸಂಸ್ಕೃತಿಯ ಪ್ರೇರಣೆಯಿಂದಾಗಿ ಶ್ರೀಮಂತ ಸಂಸ್ಕೃತಿಯನ್ನು ಅನುಸರಿಸುತ್ತಿದ್ದರು. ಬದಲಾವಣೆ ಸಂಸ್ಕೃತಿಯ ನಿಯಮವೂ ಹೌದು. ಹೀಗಿರುವಾಗ ಧಾರ್ಮಿಕ ವಿಧಿ-ವಿಧಾನಗಳು, ವಿವಾಹ ಮೊದಲಾದ ಸಮಾರಂಭಗಳಿಗೆ ಹಣವನ್ನು ವ್ಯಯಿಸಿದುದರ ಕಾರಣದಿಂದಾಗಿ ಸಾಲ ಮಾಡಿರುವ ಸಾಧ್ಯತೆಗಳು ಕಂಡುಬರುತ್ತವೆ. ಭೂರಹಿತ ಕೃಷಿ ಕಾರ್ಮಿಕರು ದೇವಸ್ಥಾನ, ಬ್ರಾಹ್ಮಣ ಮೊದಲಾದವುಗಳ ದಾನದ ಭೂಮಿಯಲ್ಲಿ ಉಳುಮೆ ಮಾಡಿದಾಗ ಉತ್ಪನ್ನದ ಭಾಗಗಳನ್ನು, ಅವುಗಳಿಗೆ ಸಲ್ಲಿಸಿದ ನಂತರ ತನಗೆ ಉಳಿಯದಿದ್ದ ಕೆಲವು ಸಂದರ್ಭಗಳು ಎದುರಾಗಿರುವ ಸಾಧ್ಯತೆಗಳಿವೆ. ಇದರಿಂದ ತನ್ನ ಜೀವನ ನಿರ್ವಹಣೆಗಾಗಿ ಪ್ರಾಚೀನ ಕೃಷಿಕರು ಸಾಲಗಳನ್ನು ಮಾಡಿದಂತಿದೆ. ಆದರೆ ಇಂದಿನ ಕೃಷಿ ಬದುಕು ಪ್ರಾಚೀನ ಕೃಷಿಗಿಂತ ತದ್ವಿರುದ್ಧವಾಗಿ ಕಂಡುಬರುತ್ತದೆ. ಪ್ರಾಚೀನ ಕೃಷಿ ಆರ್ಥಿಕ ಅಭಿವೃದ್ಧಿಯ ಕಡೆಗೆ ಹವಣಿಸಿತ್ತಾದರೂ ಪೈಪೋಟಿ ಆರೋಗ್ಯಕರವಾಗಿತ್ತು. ಆಧುನಿಕ ಕೃಷಿಕರು ದುಬಾರಿ ಬಿತ್ತನೆ ಬೀಜ ರಾಸಾಯನಿಕ ರಸಗೊಬ್ಬರ, ಆಧುನಿಕ ಉಪಕರಣಗಳ ಬಳಕೆ ಮೊದಲಾದ ಕಾರಣಗಳಿಂದ ಸಾಲೊಂದಿಗರಾಗುತ್ತಾರೆ. ಪ್ರಾಚೀನ ಸಮಾಜದಂತೆ ಅವಿಭಕ್ತ ಕುಟುಂಬ ವ್ಯವಸ್ಥೆ ಕಂಡುಬರುವುದಿಲ್ಲ. ಇಂದಿನ ಬದಲಾದ ಸಾಮಾಜಿಕ ಸ್ಥಿತ್ಯಂತರ ಮತ್ತು ವಿಘಟನೆಯಿಂದಾಗಿ, ಅವಿಭಕ್ತ ಕುಟುಂಬಗಳು ವಿಘಟಿತ ಗೊಂಡು ವಿಭಕ್ತ ಕುಟುಂಬಗಳು ರಚನೆಗೊಂಡಿವೆ. ಹಿಂದಿನ ಕೃಷಿ ಪರಸ್ಪರ ಸಹಬಾಳ್ವೆ, ಸಾಮರಸ್ಯ, ಸಹಕಾರಿ ಮನೋಧರ್ಮದಿಂದ ನಡೆಯುತ್ತಿತ್ತು. ಮುಯ್ಯಾಳಿನಂತಹ ವ್ಯವಸ್ಥೆ ಶ್ರಮಶಕ್ತಿಯ ಭಾಗವಾಗಿತ್ತು. ಪಶುಪಾಲನೆ ಕೃಷಿಯ ಭಾಗವಾಗಿತ್ತು. ಇಂದು ಇವೆಲ್ಲ ಕಣ್ಮರೆಯಾಗುತ್ತಿವೆ. ಈ ಕಾರಣಗಳು ಕೃಷಿಕ್ಷೇತ್ರದ ಸೋಲಿಗೆ ಕಾರಣವಾಗುತ್ತಿವೆ. ಜೊತೆಗೆ ರೈತನ ಸಾಲದ ಹೊರೆಗೆ ನೇರ ಕಾರಣಗಳಾಗುತ್ತಿವೆ. ಆಧುನಿಕ ಸಮಾಜದಲ್ಲಿ ಮಾನವನ ವಿಕೃತಕಾರಿ ಪರಿಸರ ವಿನಾಶದಿಂದ ಅತಿವೃಷ್ಟಿ ಅನಾವೃಷ್ಟಿಗಳು ಹೆಚ್ಚಾಗಿ ಸಂಭವಿಸುತ್ತವೆ. ಇದು ಕೃಷಿಯ ಸೋಲಿಗೆ ಕಾರಣವಾಗುತ್ತಿದೆ. ವ್ಯವಸಾಯದ ಭೂಮಿಯಲ್ಲಿ ವಾಣಿಜ್ಯೋದ್ಯಮ ಕಾರ್ಖಾನೆಗಳ ಸ್ಥಾಪನೆಯಾಗುತ್ತಿವೆ. ಇದರಿಂದಾಗಿ ಕೃಷಿಕರು ಭೂಮಿ ಕಳೆದುಕೊಳ್ಳುತ್ತಿದ್ದರೆ 'ಕೂತು ತಿನ್ನುವವನಿಗೆ ಕುಡಿಕೆ ಹೊನ್ನು ಸಾಲದಂತೆ' ಎಷ್ಟು ದಿನ ರೈತರು ಕೂತು ತಿನ್ನಲು ಸಾಧ್ಯ. ಈ ಪ್ರಕ್ರಿಯೆಯಿಂದಲೂ ಸಾಲಗಾರರಾಗುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಈ ರೀತಿಯ ಕಾರ್ಖಾನೆ ಮೊದಲಾದುವುಗಳನ್ನು ಅತಿಕಡಿಮೆ ಮಳೆಬೀಳುವ, ವ್ಯವಸಾಯಕ್ಕೆ ಯೋಗ್ಯವಲ್ಲದ ಭೂಮಿಯಲ್ಲಿ ಸ್ಥಾಪಿಸುವುದು ಒಳಿತೆನಿಸುತ್ತದೆ.

ಆಧುನಿಕ ಕೃಷಿಯಲ್ಲಿ ಅತಿಯಾದ ಆಧುನೀಕ ರಾಸಾಯನಿಕಗಳು ಮೊದಲಾದವುಗಳ ಅಳವಡಿಕೆಯಿಂದಾಗಿ ನಿರೀಕ್ಷಿಸಿದ ಪ್ರಮಾಣದಲ್ಲಿ ಬೆಳೆ ರೈತನಿಗೆ ಇಳುವರಿ ಕೊಡುತ್ತಿಲ್ಲ. ಪರಂಪರಾನುಗತವಾಗಿ ಬಂದ ಕೃಷಿ ಉಪಕರಣಗಳು ಅನಗತ್ಯವಾಗಿ ಹೆಚ್ಚುವ ವೆಚ್ಚವನ್ನು ತಗ್ಗಿಸುತ್ತವೆ.

ಆದರೆ ಬಿತ್ತನೆ ಬೀಜಗಳಿಂದ ಹಿಡಿದು ಸಾಗಾಣಿಕೆಯವರೆಗೂ ಕೃಷಿಕರು ಯಾಂತ್ರೀಕರಣಗೊಂಡಿದ್ದಾರೆ. ಅಲ್ಲದೆ ಬೀಜ, ಗೊಬ್ಬರ ಮೊದಲಾದವುಗಳಲ್ಲಿಯೂ ಪರಾವಲಂಬಿಗಳಾಗಿದ್ದಾರೆ. ವೆಚ್ಚದಾಯಕ ಕೃಷಿಯಿಂದಾಗಿ ಅಂದರೆ ಅಧಿಕ ಖರ್ಚು, ಕಡಿಮೆ ಆದಾಯಗಳಿಂದಾಗಿ ರೈತರು ಸಾಲದಲ್ಲಿ ಮುಳುಗುತ್ತಿದ್ದಾರೆ. ಬಹು ಬೆಳೆಯ ಬದಲಿಗೆ ಏಕ ಬೆಳೆಗೆ ಜಾರಿರುವುದು, ಆಹಾರದ ಬೆಳೆಗಳ ಬದಲಿಗೆ ಅಧಿಕ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿರುವುದು, ಸರ್ಕಾರಗಳು ಆಹಾರ ಬೆಳೆಗಳನ್ನು ನಿರ್ಲಕ್ಷಿಸಿ ಅದಕ್ಕೆ ನ್ಯಾಯ ಒದಗಿಸದಿರುವುದು ಪ್ರಮುಖ ಕಾರಣಗಳಾಗಿವೆ. ಪರೋಕ್ಷವಾಗಿ ರೈತರು ತಮ್ಮ ತೀರದ ಆಸೆಗಳಿಗೆ ಬಲಿಯಾಗುತ್ತಿದ್ದಾರೆ. ಸಂಸ್ಕೃತಿ ಯಾವಾಗಲು ತನ್ನದಲ್ಲದ ಸಂಸ್ಕೃತಿಯನ್ನು ತನ್ನದಾಗಿಸಿಕೊಳ್ಳಲು ಹವಣಿಸುತ್ತಿರುತ್ತದೆ. ಮತ್ತು ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿರುತ್ತದೆ. ಇದರಂತೆ ಈ ರೀತಿಯ ಸಂಸ್ಕೃತಿಯ ಪ್ರತಿನಿಧಿಗಳಿಂದ ಮಧ್ಯಮ ವರ್ಗದ ಜನರು ಶ್ರೀಮಂತ ಸಂಸ್ಕೃತಿಯ ಜೊತೆ ಹೆಜ್ಜೆ ಹಾಕಲು ಸದಾ ಹಂಬಲಿಸುತ್ತಿರುತ್ತಾರೆ. ಈ ಹಿನ್ನೆಲೆಯಲ್ಲಿ ತಮ್ಮ ಶಕ್ತಿಮೀರಿ ಧಾರ್ಮಿಕ ಸಮಾರಂಭಗಳನ್ನು ಮಾಡುತ್ತಾರೆ. ಆಗಾದರೆ ಕೃಷಿಕರು ಹಂಬಲಿಸುವುದು, ಹವಳಿಸುವುದು ತಪ್ಪೇ? ಎಂದು ಪ್ರಶ್ನಿಸಿದರೆ ಆಸೆಪಡುವುದು ತಪ್ಪಲ್ಲ, ಮಿತಜೀವನ ವ್ಯವಸ್ಥೆಯನ್ನು ರೂಪಿಸಿಕೊಳ್ಳುವುದು ಒಳಿತು. ಮುಂದಿನ ಆಗುಹೋಗುಗಳನ್ನು ಅರಿತು ಬದುಕಿದರೆ ಕೃಷಿ ಜೀವನದಲ್ಲಿ ಮುಂದೆ ಒದಗಬಹುದಾದ ವಿಪತ್ತುಗಳಿಂದ ತಪ್ಪಿಸಿಕೊಳ್ಳುವ ಸಾಧ್ಯತೆಗಳಿವೆ.

ಈ ಮೇಲೆ ತಿಳಿಸಿದ ಒಂದಲ್ಲ ಒಂದು ಕಾರಣಗಳಿಗೆ ಬಲಿಯಾಗಿ ರೈತರು ಸಾಲಗಾರರಾಗಿ ಆತ್ಮಹತ್ಯೆಗೆ ಬಲಿಯಾಗುತ್ತಾರೆ. ಇಂದು ಆತ್ಮಹತ್ಯೆಗಳ ಸಂಖ್ಯೆ ದಿನದಿಂದ ದಿನಕ್ಕೆ ಹನುಮಂತನ ಬಾಲದೋಪಾದಿಯಲ್ಲಿ ಬೆಳೆಯುತ್ತಿದೆ. ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಒಣಬೇಸಾಯ ನಡೆಸುತ್ತಿದ್ದ ಕೃಷಿಕರು ವಾಣಿಜ್ಯ ಬೆಳೆಗಳನ್ನು ಬೆಳೆಯುವ ಹಂಬಲದಿಂದ ನೀರಾವರಿ ಬೇಸಾಯವನ್ನು ಅನುಕರಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಅಂತರ್ಜಲದ ಮೊರೆ ಹೋಗುತ್ತಾರೆ. ಕೊಳವೆ ಬಾವಿಗಳನ್ನು ತೋಡಿಸುತ್ತಾರೆ. ಈ ಕೊಳವೆ ಬಾವಿಗಳಿಂದ ನೀರು ತೆಗೆಸುವ ವಿಧಾನ ಜೂಜಾಟವಾಡಿದಂತಹ ಅನುಭವವನ್ನು ಒದಗಿಸುತ್ತದೆ. ಈ ಕಾರಣಗಳಿಂದಾಗಿ ಒಂದೆಡೆ ಅಂತರ್ಜಲ ಬರಿದಾಗುತ್ತಿದೆ. ಅಂತರ್ಜಲ ನಂಬಿಕೊಂಡು ಕೊಳವೆ ಬಾವಿಗಳನ್ನು ತೋಡಿಸುವ ಸಲುವಾಗಿ ಸಾಲ ಮಾಡಿದವನು ಆತ್ಮಹತ್ಯೆಗೆ ಬಲಿಯಾಗುತ್ತಿದ್ದಾನೆ. ಇದೊಂದು ಇಂದಿನ ಆತ್ಮಹತ್ಯೆಗೆ ಪ್ರಮುಖ ಕಾರಣವಾಗಿದೆ. ಒಣಬೇಸಾಯ ವಿಧಾನದಲ್ಲಿಯೂ ಆತ್ಮಹತ್ಯೆಗಳು ಕಂಡುಬರುತ್ತವೆಯಾದರೂ ಸಂಖ್ಯೆಯಲ್ಲಿ ವಿರಳವೆನಿಸುತ್ತವೆ.

ಇಂತಹ ಸಮಸ್ಯೆ ಸವಾಲುಗಳಿಂದ ಹೊರಬರಲು ಪ್ರಾಚೀನ ಕೃಷಿಯ ಮೊರೆ ಹೋಗುವುದು ಇಂದು ಸೂಕ್ತವಾದ ದಾರಿಗಳಲ್ಲೊಂದಾಗಿದೆ. ರೈತ ಬೆಳೆದ ಬೆಳೆಗೆ ಬೆಂಬಲ ಬೆಲೆಗಳು ಸಿಗುತ್ತಿಲ್ಲ. ಒಮ್ಮೆ ಬೆಲೆ, ಮತ್ತೊಮ್ಮೆ ಬೆಳೆಗಳು ಕೃಷಿಕರನ್ನು ಆಟವಾಡಿಸುತ್ತಿವೆ. ಬೆಳೆಗಳ ವ್ಯಾಪಾರದಲ್ಲಿ ಬಹುತೇಕ ಆದಾಯ ಮಧ್ಯವರ್ತಿಗಳ ಪಾಲಾಗುತ್ತಿದೆ. ರೈತರ ಬೆಳೆಗಳು ಕೈಗಾರಿಕೆಗಳಿಗೆ ಆಹಾರವಾಗುತ್ತಿವೆ. ಈ ಹಿನ್ನೆಲೆಯಲ್ಲಿ ವಾಣಿಜ್ಯ ಬೆಳೆಗಳ ಸಂಖ್ಯೆ ಹೆಚ್ಚಾಗುತ್ತಿವೆ. ಆಧುನಿಕ ಜೀವನ ಶೈಲಿ, ಕೃಷಿಕರ ವ್ಯಸನಗಳು, ಬೆಳೆಗೆ ಕೀಟಬಾಧೆ, ಬೆಳೆ ಧಾನ್ಯಗಳನ್ನು ಸಂರಕ್ಷಿಸಲು ಸಂರಕ್ಷಣಾ ಸ್ಥಳದ ಕೊರತೆ, ಭೂಮಾಫಿಯಾ ಈ ಎಲ್ಲಾ ಕಾರಣಗಳಿಂದಾಗಿ ರೈತರು ಸಾಲಮಾಡಿ, ಬಡ್ಡಿಯು ದಿನದಿಂದ ದಿನಕ್ಕೆ ಏರಿಕೆಯಾಗುತ್ತದೆ. ಆಗ ರೈತನು ಆತ್ಮಹತ್ಯೆಗೆ ಶರಣಾಗುತ್ತಾನೆ. ಸಮಾಜದಲ್ಲಿ ಸಂಭವಿಸುತ್ತಿರುವ ಘಟನೆಗಳಿಗೆ ಪ್ರಾಚೀನ ಕೃಷಿಯ ಅನುಸಂಧಾನದ ಅಗತ್ಯತೆಯಿದೆ. ಪ್ರಾಚೀನ ಕೃಷಿ ಆಧುನೀಕ ಕೃಷಿಯ ವಿಫಲತೆಗೆ ಉತ್ತರದಾಯಿಯಾಗಿ ಬೆನ್ನಿಗೆ ನಿಲ್ಲಬಲ್ಲದು. ಇದನ್ನು ಆಳುವ ವರ್ಗ ಮತ್ತು ಉಳುವ ಕೃಷಿಕರು ಮನಗಾಣುವ ಅಗತ್ಯತೆಯಿದೆ. ಅನಾದಿಕಾಲದಿಂದಲೂ ಕೃಷಿ ಕುಟುಂಬಕ್ಕೆ 'ನೀನು ಸಾಯ,

ನಿನ್ನ ಮನೆ ಮಂದಿ ಸಾಯ' ಎಂಬ ಮಾತುಗಳು ಪ್ರಾಚೀನ ಕೃಷಿಯೊಂದಿಗೆ ಆಧುನಿಕ ಕೃಷಿ ಅನುಸಂಧಾನವಾದಾಗ ಹುಸಿಯಾಗುವ ಸಾಧ್ಯತೆಗಳಿವೆ. ಕೃಷಿ ಬದುಕು ನೆಮ್ಮದಿಯ ರೂಪುತಳೆಯಲು ಸಾಧ್ಯವಾಗುತ್ತದೆ.

**೪.೬. ಕೃಷಿ ಮತ್ತು ಪಶುಪಾಲನೆ**

ಕೃಷಿ ಮತ್ತು ಪಶುಪಾಲನೆಗಳು ಜೊತೆಯಲ್ಲಿಯೇ ಹೆಜ್ಜೆ ಹಾಕಿಕೊಂಡು ಬಂದಿವೆ. ಇವುಗಳಿಗೆ ಒಂದಕ್ಕೊಂದು ಪರಸ್ಪರ ಸಂಬಂಧವಿರುವುದು ಕಂಡುಬರುತ್ತದೆ. ಇವೆರಡರಕ್ಕೂ ಏನು ಸಂಬಂಧವಿದೆ? ಕೃಷಿಗೆ ಪಶುಸಂಗೋಪನೆ ಅಗತ್ಯವೇ ಎಂಬ ಮೊದಲಾದ ಅಂಶಗಳನ್ನು ಚರ್ಚಿಸುವ ಅಗತ್ಯವಿದೆ. ಪಶುಸಂಬಂಧಿ ಸಂಘರ್ಷಗಳು ಯಾಕೆ ಸಂಭವಿಸಿದುವು? ಏನು ಕಾರಣ ಎಂಬುದನ್ನು ಸಹ ಚರ್ಚಿಸುವ ಅಗತ್ಯವಿದೆ. ಕ್ರಿ.ಪೂ. ೯೦೦೦ದ ವೇಳೆಗೆ ಅಂದರೆ ನವಶಿಲಾಯುಗದಲ್ಲಿ ವ್ಯವಸಾಯ ಹರಡಿದಂತೆ ಪಶುಪಾಲನೆ ಗಟ್ಟಿಗೊಳ್ಳಲಾರಂಭಿಸಿತು.[೩೭೮]. ಪಶುಪಾಲನೆಯಿಂದಾಗಿ ಮಾನವನು ಹಂತ ಹಂತವಾಗಿ ಬೇಟೆಯಾಡುವುದನ್ನು ಕಡಿತಗೊಳಿಸುತ್ತಾ ಬಂದನು. ಪ್ರಾಣಿಗಳ ಪಳಗಿಸುವಿಕೆ ಮತ್ತು ಕೃಷಿ, ನವಶಿಲಾಯುಗದ ಆರಂಭಘಟ್ಟದಲ್ಲಿ ಕಂಡುಬಂದವು.[೩೭೯] ಈ ಅವಧಿಯಲ್ಲಿಯೇ 'ಕಾಡು ಎತ್ತು' ಪಳಗಿಸಿದರು ಎಂದು ತಿಳಿದುಬರುತ್ತದೆ. ಕ್ರಿ.ಪೂ. ೬೭೦೦ರಲ್ಲಿ ಬಲೂಚಿಸ್ತಾನ ಮತ್ತು ಪಶ್ಚಿಮಸಿಂಧ್‌ನಲ್ಲಿ ಕಾಡು ಮೇಕೆಗಳನ್ನು ಪಳಗಿಸಿರುವುದು ಕಂಡುಬರುತ್ತದೆ.

ವೇದಗಳ ಕಾಲದಲ್ಲಿ ಸಾವಿರಾರು ದನಗಳನ್ನು ದಕ್ಷಿಣೆಯಾಗಿ ನೀಡಿದ ಉಲ್ಲೇಖಗಳಿವೆ. ಗೋವುಗಳ ಪ್ರವೇಶಕ್ಕೆ ಇದ್ದ ಮನೆಯ ಬಾಗಿಲೇ ಗೋಪ್ರ ಅಥವಾ ಗೋಪುರ. ಇವರು ದನ ಅಥವಾ ಹಸುವನ್ನು 'ಅನಘ' ಎಂದು ಕರೆಯುತ್ತಿದ್ದರು.[೩೮೦] ಋಗ್ವೇದದಲ್ಲಿ ಬಾವಿಗಳಿಂದ ನೀರನ್ನು ಎತ್ತಲು ಎತ್ತುಗಳನ್ನು ಬಳಸಲಾಗುತ್ತಿತ್ತು.[೩೮೧] ಋಗ್ವೇದದಲ್ಲಿ "ಗೋವುಗಳನ್ನು ಹೊಂದಿದ ಶ್ರೀಮಂತನನ್ನಾಗಿಸು ಎಂಬ ಪ್ರಾರ್ಥನೆ ಕಂಡುಬರುತ್ತದೆ.[೩೮೨].

ಪಶು ಎಂದರೆ ಚಿಕ್ಕದು, ಕಟ್ಟು, ಕಟ್ಟಿಹಾಕು, ಬಂಧಿಸು ಎಂಬ ಅರ್ಥವನ್ನು ಕೊಡುತ್ತದೆ. ಪಾಲನೆ ಎಂದರೆ ಪಳಗಿಸು, ಸಾಕು, ಕಾಪಾಡು, ನಡೆಸು ಎಂಬರ್ಥವನ್ನು ಕೊಡುತ್ತದೆ. ಅಂದರೆ ತನಗೆ ಉಪಯೋಗವಾಗುವ ದೃಷ್ಟಿಯಿಂದ ಚಿಕ್ಕ ಪ್ರಾಣಿಗಳನ್ನು ಅಥವಾ ಮರಿಗಳನ್ನು ತಂದು ಪಳಗಿಸಿದನು. ಹೀಗೆ ಪಳಗಿಸುವ ಮೂಲಕ ಸಾಕು ಪ್ರಾಣಿಗಳನ್ನಾಗಿಸಿಕೊಂಡನು. ಕೃಷಿಯಿಂದಾಗಿ ಪಶುಪಾಲಕರು ಸಹ ನೆಲೆ ನಿಲ್ಲುವಂತಾಯಿತು. ದನಗಾಯಿ ಅಥವಾ ಪಶುಪಾಲಕರು ತಮ್ಮ ವೃತ್ತಿ ಮಾಡುತ್ತ ಅಲೆದಾಡುತ್ತಿದ್ದರು. ಅವನ ಕುಟುಂಬ ವರ್ಗವು ಬಿಡುವಿನ ಅವಧಿಯ ಅನಿವಾರ್ಯ ಕಾರಣಗಳಿಂದಾಗಿ, ಪರ್ಯಾಯ ವ್ಯವಸ್ಥೆಯೊಂದನ್ನು ರೂಪಿಸಿಕೊಳ್ಳುವುದು ಅನಿವಾರ್ಯವಾಯಿತು. ಆಗ ಪಶುಪಾಲಕರೂ ಕೃಷಿಯನ್ನು ಆರಂಭಿಸಿರುವ ಸಾಧ್ಯತೆಗಳಿವೆ.

ಅರ್ಥಶಾಸ್ತ್ರಕಾರನು ಹಸುಕಾಯುವವನನ್ನು 'ಗೋಪಾಲಕ' ಎಂತಲೂ ಎಮ್ಮೆ ಕಾಯುವವನನ್ನು 'ಪಿಂಡಾರಕ' ಎಂತಲೂ ಕರೆದಿದೆ. ಹಸುಗಳನ್ನು ಕೊಲ್ಲುವವನೂ, ಕೊಲ್ಲಿಸುವವನೂ, ಕದ್ದೊಯ್ಯುವವನೂ, ಕದ್ದೊಯ್ಯುವಂತೆ ಪ್ರೇರಿಸುವವನೂ ವಧಾರ್ಹರು. ಮತ್ತೊಬ್ಬರ ಹಸುಗಳಿಗೆ ರಾಜಕೀಯ ಮುದ್ರೆಯನ್ನೊತ್ತಿ ತನ್ಮೂಲಕ ರೂಪಭೇದವನ್ನು ಪ್ರತಿಪಾದಿಸುವವನಿಗೆ ಪೂರ್ವಸಾಹಸ ದಂಡವನ್ನಿಕ್ಕಬೇಕು. ಕಳ್ಳಕಾಕರಿಂದ ಕದ್ದೊಯ್ಯಲ್ಪಟ್ಟ ಸ್ವದೇಶದ ಹಸುಗಳನ್ನು ಬಿಡಿಸಿ ತಂದು ಅವನ್ನು ಅವುಗಳ ಯಜಮಾನರಿಗೆ ಒಪ್ಪಿಸಿ ತನ್ಮೂಲಕ ಅವರಿಂದ ಪ್ರತಿಯೊಂದಕ್ಕೂ ಒಂದೊಂದು ಪಣವೆತ್ತಬೇಕು. ಪರದೇಶದ ಪಶುಗಳನ್ನು ಬಿಡಿಸಿಕೊಳ್ಳುವವನು

ಅವುಗಳ ಬೆಲೆಯ ಅರ್ಧದಷ್ಟನ್ನು ದಂಡಕೊಡಬೇಕು.[೩೮೩] ಇಂದಿಗೂ ದನಗಳ ದೊಡ್ಡಿಗಳು ಊರಿಗೊಂದರಂತೆ ಅಲ್ಲಲ್ಲಿ ಕಂಡುಬರುತ್ತವೆ. ತಪ್ಪಿಸಿಕೊಂಡು ಬಂದ ದನಗಳು ಅಥವಾ ದನಗಾಯಿಗಳ ನಿರ್ಲಕ್ಷ್ಯದಿಂದ ಬಂದ ದನಗಳನ್ನು ಅಲ್ಲಿ ಕೂಡಲಾಗುತ್ತದೆ.

ದಂಡವನ್ನು ಪಾವತಿಸಿ, ದನಗಳ ಮಾಲೀಕರು ಅವರ ದನಗಳನ್ನು ಕೊಂಡ್ಯೊಯುವ ನಿಯಮಗಳು ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತವೆ. ಪಶುಪಾಲಕರಿಗೂ ಕೃಷಿಕರಿಗೂ ಮಧ್ಯೆ ಏಕೆ ಸಂಘರ್ಷಗಳು ಏರ್ಪಡುತ್ತಿದ್ದವು. ಎಂಬುದನ್ನು ಗಮನಿಸಿದಾಗ, ಪಶುಪಾಲಕರು ತಮ್ಮ ನಿರ್ಲಕ್ಷ್ಯದಿಂದಲೋ ಮತ್ತಿತರ ಕಾರಣಗಳಿಂದ ರೈತರ ಬೆಳೆಗಳನ್ನು ಮೇಯಿಸಿದ ಸಂದರ್ಭಗಳು ಬರುತ್ತಿದ್ದವು. ಆಗ ಪಶುಪಾಲಕ ಮತ್ತು ಕೃಷಿಕರ ಮಧ್ಯೆ ಸಂಘರ್ಷಗಳು ಏರ್ಪಡುತ್ತಿದ್ದವು. ಕೃಷಿಕರಿಗೆ ಬೆಳೆ ಅವರ ಆ ವರ್ಷದ ಜೀವನಾಡಿಯಾಗಿರುತ್ತದೆ. ಅದನ್ನು ಪಶುಪಾಲಕರು ದನಗಳನ್ನು ಬಿಟ್ಟು ಒಂದು ದಿನದಲ್ಲಿ ಹಾಳು ಮಾಡಿದಾಗ ಸಂಘರ್ಷಗಳು ಏರ್ಪಟ್ಟು ಬೆಳೆಗೆ ಪರಿಹಾರವನ್ನು ಕಟ್ಟಿಕೊಡುವ ಸಂದರ್ಭಗಳು ಎದುರಾಗುತ್ತಿದ್ದವು.

ಗೋವುಗಳು ಕೇವಲ ಪ್ರಾಣಿಗಳಲ್ಲ. ಅವು ರಾಜ್ಯದ ಜನರ ಸಂಪತ್ತು. ಅವು ಕೃಷಿಕರ ಜೀವನದ ಅವಿಭಾಜ್ಯ ಅಂಗಗಳಾಗಿದ್ದವು. ಇಂದಿಗೂ ಕೃಷಿ ಸಮುದಾಯದಿಂದ ಹೊರತಾಗಿಲ್ಲ. ಕೃಷಿಯೊಂದಿಗೆ ಪಶುಪಾಲನೆ ಸಾಗುತ್ತಾ ಬರುವ ದಾರಿಯಲ್ಲಿ ಇವುಗಳಲ್ಲಿ ಯಾವುದು ಮುಂದೆ ಹೋಯಿತು. ಹಾಗೆ ಹೋದಾಗ ಸಂಘರ್ಷಗಳು ಹೇಗೆ ರೂಪುಗೊಂಡವು. ಈ ಸಂಘರ್ಷಗಳು ಸಂಭವಿಸಿ ಗೋಗ್ರಹಣದಂತಹ ಘಟನೆಗಳು ಸಂಭವಿಸಿರುವ ಸಾಧ್ಯತೆಗಳಿವೆ. ಶೇಷಶಾಸ್ತ್ರಿಯವರು ಒಂದು ಗುಂಪಿನ ಜೀವ ದನಗಳನ್ನು ಮತ್ತೊಂದು ಗುಂಪಿನ ಜನ ಅಪಹರಿಸಿದಾಗ ಅವರನ್ನು ಎದುರಿಸಿ ದನಗಳನ್ನು ಹಿಂತಿರುಗಿಸುವುದು ವೀರತನದ ಮೌಲ್ಯವೆಂದಿದ್ದಾರೆ.[೩೮೪] ಮಹಾಭಾರತದಲ್ಲಿ ದುರ್ಯೋಧನನು ವಿರಾಟರಾಜನ ಗೋವುಗಳನ್ನು ಅಪಹರಿಸಿಕೊಂಡು ಹೋದಾಗ ಅಜ್ಞಾತವಾಸದಲ್ಲಿದ್ದ ಪಾಂಡವರು ಅವುಗಳನ್ನು ಬಿಡಿಸಿಕೊಂಡು ಬಂದದು ಕಂಡುಬರುತ್ತದೆ. ಪಂಪನು ತನ್ನ ಕೃತಿ ವಿಕ್ರಮಾರ್ಜುನ ವಿಜಯದಲ್ಲಿ "ತುಱುಗೊಂಡೊಡೆ ಪಾಂಡವರಿರ್ಪಗಂಡರೇ" ಎಂದು ಹೇಳಿದ್ದಾನೆ.[೩೮೫] ರನ್ನನು ತನ್ನ ಸಾಹಸ ಭೀಮ ವಿಜಯ ಕೃತಿಯಲ್ಲಿ

ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನಂಟನೆಡಱೊಳೂರಟೆವಿನೊಳಂ
ತಱೆಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತು ಷಂಡಂ[೩೮೬]

೧೧ನೆಯ ಶತಮಾನದ ಜೀವನ ಮೌಲ್ಯಗಳನ್ನು ರನ್ನ ಕವಿಯು ಹೇಳಿರುವುದು ಇದರಿಂದ ಕಂಡುಬರುತ್ತದೆ. ಇವುಗಳಿಗೆ ಸಂಬಂಧಿಸಿದಂತೆ ಹೋರಾಡುವುದು ಪ್ರತಿಯೊಬ್ಬ ವೀರನ ಸಾಮಾಜಿಕ ಜವಾಬ್ದಾರಿ ಮತ್ತು ಹೊಣೆಗಾರಿಕೆಯಾಗಿ ಕಂಡುಬರುತ್ತವೆ. ಇವು ಅಂದಿನ ಸಮಾಜದಲ್ಲಿ ಕಾಯ್ದುಕೊಂಡಿದ್ದ ಜನರ ಮೌಲ್ಯಗಳಾಗಿಯೂ ಕಂಡುಬರುತ್ತವೆ.

ತುಱುಗೊಳ್‌ಗಳನ್ನು ಕುರಿತು ಶಾಸನಗಳು ಉಲ್ಲೇಖಿಸುವುದು ಕಂಡುಬರುತ್ತದೆ. ಯಾವ ಭಾಗಗಳಲ್ಲಿ ವಿಶಾಲವಾದ ಭೂಪ್ರದೇಶ ಮತ್ತು ಮೇಯಲು ಸ್ಥಳವಿರುತ್ತದೋ ಅಲ್ಲಿ ತುಱುಗಳು ಮತ್ತು ತುಱುಗೋಳ್ ಕದನಗಳು ಕಂಡುಬರುತ್ತವೆ. ಕ್ರಿ.ಶ. ೮೮೩ರಲ್ಲಿ ತುಱುಗೋಳ್‌ಳಲ್ಲಿ ಎಱೆಯಮ್ಮ ಕಾದಿ ಸತ್ತನೆಂದಿದೆ.[೩೮೭] ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ತುಱೂಗೊಳೊಳ್ಕಾದಿ ಸತ್ತದ್ದನ್ನು

ತಿಳಿಸುತ್ತದೆ.[೩೮೮] ಕ್ರಿ.ಶ. ೯೬೩-೬೪ರ ಶಾಸನದಲ್ಲಿ ತುಱುಗೊಳ್‌ನಲ್ಲಿ ಕಾದು ಸತ್ತುದಕ್ಕೆ ಭೂದಾನ ನೀಡಿದ ಉಲ್ಲೇಖವಿದೆ.[೩೮೯] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ 'ಕಿಜೆಯ ಕಾಮನ್ ತುಱುವಿಂಡಿನೊಳು ಕಾದುಸತ್ತಂ.'[೩೯೦] ಎಂದಿದೆ. ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ತುಱುಗೋಳೊಳೆ ಸತ್ತೊ ಪೊನ್ನವಯ್ಯನ ಪಿರಿಯಾ ಕಲ್ಲ ನಡಿಸಿ ತನ್ನ ಕೆಜಿ'ಯೊಳ್ ಅಯ್ದುಳಬೆದೆಗಟಿ'ಯಕೊ.. ಎಂದಿದೆ.[೩೯೧] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ಪೊಸವೂರ ತುಱುವಂ ಮಗುಟ್ಚಿ ಎಂದಿದೆ.[೩೯೨] ಕ್ರಿ.ಶ. ೧೦ನೆಯ ಶತಮಾನದ ಶಾಸನದಲ್ಲಿ ಕಾಡಿ ಗಾವುಣ್ಡ ತನ್ನೂರ ತುಱುಗೊಳೊಳ್ ತುಱುವಕ್ಷಿಸಿ ಕಾದಿ ಸತ್ತ ಸಿರಿವನ್ತಗಾಲೊಳ ಇಟ್ಟೊಱು ಭತ್ತದ ಮಣ್ಣು ಮಹಾದೇವಗ್ಗೇ ಬಿಟ್ಟಂ.[೩೯೩] ಎಂದಿದೆ. ವೀರನ ನೆನಪಿಗಾಗಿ ಭತ್ತದ ಮಣ್ಣನ್ನು ದೇವರಿಗೆ ಬಿಟ್ಟದನ್ನು ತಿಳಿಸುತ್ತದೆ. ಕ್ರಿ.ಶ. ೧೮೯೦-೯೧ರ ಶಾಸನವು ತುಱುಗೊಳ್‌ನಲ್ಲಿ ಕಾದುಸತ್ತದ್ದನ್ನು ತಿಳಿಸುತ್ತದೆ.[೩೯೪] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ತುಱುವ ಮಗುಳ್ಚಿ ಸತ್ತನೆಂದು ಶಾಸನವು ತಿಳಿಸುತ್ತದೆ.[೩೯೫] ಕ್ರಿ.ಶ. ೧೨೬೯ರ ಶಾಸನದಲ್ಲಿ ಗೋಗ್ರಹಣದ ಉಲ್ಲೇಖವಿದೆ.[೩೯೬] ಕ್ರಿ.ಶ. ೧೧೦೩ರ ಶಾಸನದಲ್ಲಿ ತುಱುವ ಮಗುಟ್ಚಿ ಸತ್ತದ್ದನ್ನು ತಿಳಿಸುತ್ತದೆ.[೩೯೭] ಕ್ರಿ.ಶ. ೧೦೫೬ರ ಶಾಸನದಲ್ಲಿ ತುಱುಗೊಳ್‌ನಲ್ಲಿ ಕಾದಿ ಸತ್ತದ್ದನ್ನು ತಿಳಿಸುತ್ತದೆ.[೩೯೮] ಕ್ರಿ.ಶ. ೧೧೭೩ ಶಾಸನದಲ್ಲಿ ತುಱುವಂ ಮಗುಳ್ಚಿ ಸತ್ತದ್ದನ್ನು ತಿಳಿಸಿದೆ.[೩೯೯] ಕ್ರಿ.ಶ. ೯೪೫ರ ಶಾಸನದಲ್ಲಿ ಗೋಸಹಸ್ರ ದಾನದ ಉಲ್ಲೇಖವಿದೆ.[೪೦೦] ಕ್ರಿ.ಶ. ೧೧೧೦ರ ಶಾಸನದಲ್ಲಿ ತುರುಗಳ್ಳರೊಡನೆ ಹೋರಾಡಿ ತಳಾರಿ ಕಾಳಬೋವನು ಮಡಿಯುತ್ತಾನೆ. ಇವನ ಮಗ ಬಮ್ಮನಿಗೆ ಹೊಲ ಹಾಗೂ ಮನೆಯನ್ನು ಮಾನ್ಯ ಮಾಡಿ ಬಿಡಲಾಯಿತು.[೪೦೧] ಕ್ರಿ.ಶ. ೧೦೬೧ರ ಶಾಸನದಲ್ಲಿ ಗೋಸಾಸದ ಉಲ್ಲೇಖವಿದೆ.[೪೦೨] ಕ್ರಿ.ಶ. ೧೦೬೯ರ ಶಾಸನದಲ್ಲಿ ದೇವರ ಅಭಿಷೇಕಕ್ಕೆ ಎರಡು ಹಸುಗಳನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[೪೦೩]

ಕ್ರಿ.ಶ. ೧೨,೧೩ನೆಯ ಶತಮಾನದ ಶಾಸನದಲ್ಲಿ ಇಮ್ಮಡಿ ಬಲ್ಲಾಳನ, ಪಿರಿಯರಸಿ, ಚೋಳಮಹಾದೇವಿಯು ಆಳ್ವಿಕೆ ಮಾಡುತ್ತಿದ್ದಳೆಂದು ತಿಳಿಸುತ್ತದೆ. ಈಕೆಯ ಬಗೆಗೆ ದುಷ್ಟಜನರು ನಿಷ್ಠೂರದ ಮಾತುಗಳನ್ನಾಡಿದರು ಎಂಬುದನ್ನು ಆಕೆಯ ಅಧಿಕಾರಿಗಳು ರಾಣಿಗೆ ವರದಿ ಮಾಡಿದರು. ಸ್ವಾಭಾವಿಕವಾಗಿಯೇ ಕೋಪತಪ್ತಳಾದ ರಾಣಿಯು ಅಲ್ಲಿನ ಗೋಸಂಪತ್ತನ್ನು ಸೆರೆಹಿಡಿಯಲು ಆಜ್ಞಾಪಿಸಿದಳು. ಗೋರಕ್ಷಣೆಗೆ ಮುಂದಾದ ಕೇತಮಲ್ಲನೆಂಬ ವೀರನು ಯುದ್ಧದಲ್ಲಿ ಮಡಿದನು. ಇದರಿಂದ ಪಶ್ಚಾತಾಪ ಹೊಂದಿದ ಅರಸಿಯು ಕೇತಮಲ್ಲನ ಮಗನಿಗೆ ಭೂದಾನ ಮಾಡಿದಳು.[೪೦೪]

ಮೇಲ್ನೋಟಕ್ಕೆ ದ್ವೇಷಕ್ಕಾಗಿ ನಡೆದ ಕಾಳಗ ನಿಜ. ಆದರೆ ಅರಸಿಯು ತನ್ನ ಬಗ್ಗೆ ನಿಷ್ಠುರದ ಮಾತುಗಳನ್ನಾಡಿದ ಜನರ ಮೇಲೆ ಯುದ್ಧ ಮಾಡಬಹುದಿತ್ತು. ಆದರೆ ಹಾಗೆ ಮಾಡುವುದಿಲ್ಲ. ಬದಲಿಗೆ ಆ ಪ್ರದೇಶದ ಸಂಪತ್ತಾದ ಹಸುಗಳನ್ನು ಅಪಹರಿಸುವಂತೆ ಸೂಚಿಸುತ್ತಾಳೆ. ಆ ಪ್ರದೇಶದ ಸಂಪತ್ತನ್ನು ಕಸಿದುಕೊಂಡರೆ ಅವರ ಶಕ್ತಿ ಮತ್ತು ಪ್ರಾಬಲ್ಯ ಕುಸಿಯುತ್ತದೆ ಎಂಬ ಉದ್ದೇಶದ ಹಿನ್ನಲೆಯಲ್ಲಿ ಅರಸಿಯು ಮುಂದಾಲೋಚನೆಯಿಂದ ಈ ಕಾರ್ಯ ಕೈಗೊಂಡಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೯೯ರ ಶಾಸನದಲ್ಲಿ ತುಱುವ ಮಗುಳ್ಚಿ ಸತ್ತದ್ದನ್ನು ತಿಳಿಸುತ್ತದೆ.[೪೦೫] ಕ್ರಿ.ಶ. ೧೦೪೭ರ ಶಾಸನದಲ್ಲಿ ಏಚನಾಯಕನು ಹಸುಗಳನ್ನು ಕದ್ದೊಯ್ಯುತ್ತಿದ್ದ ಕಳ್ಳರನ್ನು ಸದೆಬಡಿದು ಕೋಗಳಿಯ ಹಸುಗಳನ್ನು ಹಿಂದಿರುಗಿಸುವಾಗ ತಾನು ಸತ್ತನು.[೪೦೬] ಕ್ರಿ.ಶ. ೧೧೯೪ರ ಶಾಸನದಲ್ಲಿ ಹಸುಗಳನ್ನು ರಕ್ಷಿಸುವಾಗ ಬೇಳಗೌಡನು ಸತ್ತನೆಂದು ಹೇಳುತ್ತದೆ.[೪೦೭] ಕ್ರಿ.ಶ. ೧೧೨೬-೨೭ರ ಶಾಸನದಲ್ಲಿ ತುಱುವಂಕೊಂಡುಹೋಹಗ....ತುಱುವ ಮಗುಚಿ ಗಂಗರ ಬೋಕಿಮಯ್ಯ ಸ್ವರ್ಗಸ್ತನಾದ[೪೦೮] ಎಂದಿದೆ. ಕ್ರಿ.ಶ. ೧೧೬೩ರ ಶಾಸನದಲ್ಲಿ ತುಱುವನೆತ್ತಲು ತುಱುವ ಮಗುರ್ಚ್ಚಿ ಆಳವರಿಸಿ ಬಿದ್ದ

ಮಾರಗವಜ್[೪೦೯] ಎಂದಿದೆ. ಕ್ರಿ.ಶ. ೧೧೭೯-೮೦ರ ಶಾಸನದಲ್ಲಿ ತುಱುಗೊಳ್‌ನಲ್ಲಿ ಕಾದಿ ಮಡಿದುದನ್ನು ತಿಳಿಸಿದೆ.[೪೧೦]

ಮೇಲೆ ಉಲ್ಲೇಖಿಸಿದ ಶಾಸನಗಳಲ್ಲಿ ತುಱುಗೊಳ್ ಮತ್ತು ಗೋಸಾಸ ಶಾಸನಗಳು ಕಂಡುಬಂದಿವೆ. ಗೊಸಾಸ ಶಾಸನಗಳೆಂದರೆ ಬ್ರಾಹ್ಮಣರಿಗೆ ಗೋವುಗಳನ್ನು ದಾನ ನೀಡಿರುವ ಉದ್ದೇಶದಿಂದ ಬರೆಯಿಸಿದ ಶಾಸನಗಳಿವು. ತುಱುಗಳನ್ನು ಕದಿಯುವ ಮತ್ತು ದಾನವಾಗಿ ನೀಡಿರುವ ಹಿಂದಿರುವ ಉದ್ದೇಶಗಳೇನು ಎಂಬುದನ್ನು ಗಮನಿಸಿದರೆ ಜನರಲ್ಲಿದ್ದ ಭಾವನೆ ಮೇಲ್ನೋಟಕ್ಕೆ ಇಂದೂ ಸಂಪ್ರದಾಯದ ಪ್ರಕಾರ ಗೋದಾನ ಶ್ರೇಷ್ಠ. ಅವು ದೈವ ಸಮಾನ ಅವುಗಳನ್ನು ಕದಿಯಬಾರದು, ಅವು ನಮ್ಮ ಸೊತ್ತು ಎಂಬುದು ಒಂದು ಕಡೆ. ಆದರೆ ವಾಸ್ತವದಲ್ಲಿ ಅದರ ಹಿಂದಿರುವ ಬಹುದೊಡ್ಡ ಅಂಶವೆಂದರೆ ಅದು ಆರ್ಥಿಕ ಸಂಪತ್ತು. ತುಱುಗಳು ಹೇಗೆ ಆರ್ಥಿಕ ಸಂಪತ್ತುಗಳು. ಅವುಗಳಿಗೂ ಕೃಷಿಗೂ ಏನು ಸಂಬಂಧ ಎಂಬುದನ್ನು ಗಮನಿಸಿದಾಗ ಕೃಷಿಗೂ ತುಱುಗಳಿಗೂ ನೇರ ಸಂಬಂಧವಿದೆ. ಅವುಗಳು ಒಂದಕ್ಕೊಂದು ಕೊಂಡಿಗಳಂತೆ ಬೆಸುಗೆ ಹಾಕಿಕೊಂಡಿವೆ. ಪ್ರಾಚೀನ ಕೃಷಿಯು ಇಂದಿನಂತೆ ರಾಸಾಯನಿಕ ರಸಗೊಬ್ಬರಗಳ ಬಳಕೆಯಿಂದ ಕೂಡಿರಲಿಲ್ಲ. ಸಾಂಪ್ರದಾಯಿಕ ಕೃಷಿ ವ್ಯವಸ್ಥೆ ರೂಢಿಯಲ್ಲಿತ್ತು. ವ್ಯವಸಾಯ ಕಾರ್ಯಗಳಲ್ಲಿ ಭೂಮಿಯನ್ನು ಉಳುಮೆ ಮಾಡಲು ಎತ್ತುಗಳನ್ನು ಬಳಸಲಾಗುತ್ತಿತ್ತು. ಈ ಎತ್ತುಗಳನ್ನು ಹಸುಗಳು ಒದಗಿಸಬೇಕಿತ್ತು. ಅಂದರೆ ಹಸುಗಳು ಕೃಷಿಗೆ ಅಗತ್ಯವಿರುವ ಎತ್ತುಗಳನ್ನು ಒದಗಿಸುವ ಫಲವಂತಿಕೆಯ ಸಂಕೇತಗಳಾಗಿದ್ದವು. ಇಂತಹ ಎತ್ತುಗಳ ಹಾರೈಕೆಗೆ ಸಂಬಂಧಿಸಿದಂತೆ ಅರ್ಥಶಾಸ್ತ್ರಕಾರನು "ಎತ್ತುಗಳಿಗೆ ಕುಸುಬಲಕ್ಕಿಯನ್ನಾಗಲಿ, ಒಂದು ದ್ರೋಣ ಉದ್ದುಗಳನ್ನಾಗಲಿ, ಎಳ್ಳಿನ ಹಿಂಡಿಯನ್ನಾಗಲೀ, ಹತ್ತು ಅಡಕ ನುಚ್ಚಿನ ತೌಡನ್ನಾಗಲಿ ಹಾಕಬೇಕು ಎಂದು ತಿಳಿಸಿದ್ದಾನೆ.[೪೧೧] ಎತ್ತುಗಳಿಗೆ ಯಾಕಾಗಿ ಇಷ್ಟೊಂದು ಸತ್ವಯುತ ಆಹಾರವನ್ನು ಹಾಕಬೇಕು ಎಂದು ಗಮನಿಸಿದಾಗ. ಪ್ರಾಚೀನ ಕೃಷಿಯಲ್ಲಿ ಎತ್ತುಗಳು ವ್ಯವಸಾಯದ ಕೇಂದ್ರ ಬಿಂದುಗಳು. ಅವುಗಳಿಗೆ ಸತ್ವಯುತ ಆಹಾರವನ್ನು ನೀಡಿದರೆ ಅವು ದಷ್ಟಪುಷ್ಟವಾಗಿರುತ್ತವೆ. ಇಂತಹ ಆರೋಗ್ಯಪೂರ್ಣ ಎತ್ತುಗಳನ್ನು ಉಳುಮೆಗೆ ಬಳಸಿಕೊಳ್ಳಲಾಗುತ್ತಿತ್ತು. ಆದರೆ ಬದಲಾದ ಇಂದಿನ ಸನ್ನಿವೇಶದಲ್ಲಿ ಎತ್ತುಗಳಿಂದ ಉಳುಮೆ ಮಾಡುವ ಬೇಸಾಯ ವಿಧಾನ ಕಣ್ಮರೆಯಾಗುತ್ತಿದೆ. ಎತ್ತುಗಳ ಜಾಗವನ್ನು ವೈಜ್ಞಾನಿಕ ಉಪಕರಣಗಳಾದ ಟ್ರಾಕ್ಟರ್‌ಗಳು ಆಕ್ರಮಿಸುತ್ತಿವೆ. ಕೃಷಿಕನ ಜೀವನದಲ್ಲಿ ಎತ್ತು ಕಟ್ಟುವುದು ಅವನಿಗೆ ಪ್ರತಿಷ್ಠೆಯ ಸಂಕೇತವಾಗಿತ್ತು. ಜನಪದರು ಅಂತಹ ಸನ್ನಿವೇಶಗಳನ್ನು ಕುರಿತು ಹೀಗೆ ಹೇಳುತ್ತಾರೆ.

ಅಣ್ಣನ ಆರೆತ್ತು ತಮ್ಮನ ಮೂರೆತ್ತು
ನಮ್ಮಪ್ಪನೆತ್ತು ಹದಿನಾರು। ಬರುವಾಗ
ನಮ್ಮೂರ ಭೂಮಿ ನಡುಗ್ಯಾವ[೪೧೨]

ಕೃಷಿಯ ಭಾಗವಾಗಿರುವ ಎತ್ತುಗಳು ಕೃಷಿಕನಿಗೆ ಹೆಗ್ಗಳಿಕೆಯ ಜೊತೆಗೆ ಬಿಂಕ ತರಿಸುವ ಸಂಕೇತಗಳಾಗಿದ್ದವು. ಭೂಮಿಯನ್ನು ಕಾಲಕಾಲಕ್ಕೆ ಉಳುಮೆಗೆ ಒಳಪಡಿಸಲು, ಕೃಷಿ ಸಾಮಾನುಗಳ ಸಾಗಾಟಗಳಿಗೂ ಎತ್ತುಗಳನ್ನು ಬಳಕೆ ಮಾಡಲಾಗುತ್ತಿತ್ತು. ಇಂತಹ ಎತ್ತುಗಳನ್ನು ಹಸುಗಳು ತನ್ನ ಗರ್ಭದಿಂದ ಜನ್ಮ ನೀಡುವ ಕಾರಣಕ್ಕೆ ಹಸುಗಳು ಕೃಷಿಕರಿಗೆ ಪವಿತ್ರ ಮತ್ತು ಪೂಜ್ಯನೀಯ.

ಪಶುಪಾಲನೆಯಿಂದ ಬರುವ ಹೈನುಗಾರಿಕೆಯು ಕೃಷಿಯ ಒಂದು ಭಾಗವಾಗಿತ್ತು. ಆಧುನಿಕ ಕೃಷಿಯ ಸೋಲೂ ಸಹ ಈ ಅಂಶದ ಹಿಂದೆ ಅಡಗಿರುವುದು ಒಂದು ಕಾರಣ. ಪ್ರಾಚೀನ ಕೃಷಿಕರು ಕೃಷಿಯೊಂದಿಗೆ ಕುರಿಸಾಗಾಣಿಕೆ, ಹಸುಸಾಗಾಣಿಕೆಗಳಂತಹ ಉಪಕಸುಬುಗಳನ್ನು ರೂಢಿಸಿಕೊಂಡಿದ್ದರು.

ಇದರಿಂದ ಬರುವ ಆದಾಯವು ಕೃಷಿಕರಿಗೆ ಕೃಷಿ ಉತ್ಪನ್ನದೊಂದಿಗೆ ಉಪಉತ್ಪನ್ನವು ಸಿಗುತ್ತಿತ್ತು. ಒಂದು ವೇಳೆ ಕೃಷಿಯಲ್ಲಿ ನಷ್ಟವನ್ನು ಅನುಭವಿಸಿದಾಗ ಹೈನುಗಾರಿಕೆ ಅವರ ನೆರವಿಗೆ ಬರುತ್ತಿತ್ತು. ಇಂದಿನ ಬದಲಾದ ಆಧುನಿಕ ಕೃಷಿಯಲ್ಲಿ ಏಕಮುಖ ಬೆಳೆ ಹಾಗೂ ಏಕ ವ್ಯಕ್ತಿಯಾಧಾರಿತ ಕೃಷಿಯ ಕಾರಣದಿಂದಾಗಿ ಕೃಷಿ ಸಂಕಟಕ್ಕೀಡಾಗಿದೆ. ಈ ಸಂಕಟಗಳಿಗೆ ಪ್ರಾಚೀನ ಪರಂಪರೆಯಾಧರಿತ ಕೃಷಿ ಉತ್ತರದಾಯಿಯಾಗುತ್ತದೆ.

ಕೃಷಿ ಮತ್ತು ಪಶುಪಾಲನೆಗಳ ಮಧ್ಯೆ ಇರುವ ಮತ್ತೊಂದು ಪ್ರಬಲವಾದ ಸಂಬಂಧವೆಂದರೆ ಅದು ಪಶುಗಳು ಹೊರ ಹಾಕುವ ಘನ ತ್ಯಾಜ್ಯ. ವೈಜ್ಞಾನಿಕ ಸಂಶೋಧನೆಯ ವರದಿಯ ಪ್ರಕಾರ ಈ ಘನತ್ಯಾಜ್ಯ ಅಥವಾ ಸಗಣಿಯಲ್ಲಿ 'ಸಾರಜನಕ, ರಂಜಕ, ಪೊಟ್ಯಾಷಿಯಂಗಳು ಹೇರಳವಾಗಿವೆ. ಇದು ಶೀಘ್ರವಾಗಿ ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುತ್ತದೆ.[೪೧೩] ಹಾಗೂ ಇತ್ತೀಚಿನ ವರದಿಯ ಪ್ರಕಾರ ಸಗಣಿ ಗೊಬ್ಬರವನ್ನು ಕಾಂಪೊಸ್ಟ್ ಗೊಬ್ಬರವಾಗಿ ತಯಾರು ಮಾಡಬೇಕು. ಸಗಣಿಯೊಂದಿಗೆ ಮಣ್ಣು, ಮರದ ಎಲೆ, ಹುಲ್ಲು, ಕಳೆ, ಉರುವಲು ಬೂದಿ ಮೊದಲಾದವುಗಳನ್ನು ಬೆರೆಸಿ ಈ ಕಾಂಪೊಸ್ಟ್ ಗೊಬ್ಬರವನ್ನು ತಯಾರು ಮಾಡಲಾಗುತ್ತದೆ. ಈ ಗೊಬ್ಬರದಲ್ಲಿರುವ ಇಂಗಾಲವು ಸೂಕ್ಷ್ಮಾಣು ಜೀವಿಗಳ ಬೆಳವಣಿಗೆಯನ್ನು ಉತ್ತೇಜಿಸುತ್ತದೆ. ಅಲ್ಲದೆ ಇದರಿಂದ ಸಸ್ಯಗಳಿಗೆ ಪೋಷಕಾಂಶಗಳು ಒದಗುತ್ತವೆ.

ಪಶುಗಳಿಂದ ಉತ್ಪತ್ತಿಯಾಗುವ ಸಗಣಿ ಅಥವಾ ಮೂತ್ರದಲ್ಲಿ ಬೆರೆಸಿ, ನೆರಳಿನಲ್ಲಿ ಆರಿಸಿ ಹತ್ತಿ, ಜೋಳ ಮೊದಲಾದ ಬೀಜಗಳನ್ನು ಬಿತ್ತುವುದರಿಂದ ಜೋಳದ ತೆನೆಗಳಿಗೆ ಬರುವ ಕಾಡಿಗೆ ರೋಗವನ್ನು ತಡೆಗಟ್ಟಬಹುದು.[೪೧೪] ಅಲ್ಲದೆ ಸಗಣಿಯನ್ನು ರೋಗ ನಿರೋಧಕವಾಗಿ ಕೀಟನಿಯಂತ್ರಕವಾಗಿ ಬಳಸಲಾಗುತ್ತದೆ. ಸಗಣಿರಾಡಿಯನ್ನು ಅಡಕೆ ಸಸಿ, ರಾಗಿ, ಜೋಳ ಮೊದಲಾದ ಬೆಳೆಗಳ ಮೇಲೆ ಚೆಲ್ಲುವುದರಿಂದ, ಕೀಟಗಳ ಹಾವಳಿ ತಪ್ಪುತ್ತದೆ. ಬೆಳೆಗಳನ್ನು ಹಾಳುಮಾಡುವ ಇತರ ಪ್ರಾಣಿಗಳಾದ ಕುರಿ, ಮೇಕೆ, ಹಸು, ಕರು, ಎತ್ತು ಮೊದಲಾದವುಗಳ ಹಾವಳಿಯಿಂದಲೂ ತಪ್ಪಿಸಿಕೊಳ್ಳಬಹುದಾಗಿದೆ. ಸಗಣಿಯನ್ನು ವೇದಗಳ ಕಾಲದಲ್ಲಿ 'ಶಕೃತ್' ಎಂತಲೂ ಒಣಸಗಣಿಗೆ 'ಕರೀಷ' ಎಂತಲೂ ಕರೆಯುತ್ತಿದ್ದರು.[೪೧೫]

ಈ ಕಾರಣದಿಂದಾಗಿ ಕೃಷಿಗಳಿಂದ ಬರುವ ತ್ಯಾಜ್ಯಕ್ಕೆ ಪ್ರಾಚೀನ ಕಾಲದಲ್ಲಿ ಹೆಚ್ಚಿನ ಮೌಲ್ಯವಿತ್ತು. ಆ ಕಾಲದಲ್ಲಿ ಕಂಡುಬರುವ ತಿಪ್ಪೆ ಸುಂಕಗಳು, ಪಶುಗಳಿಂದ ಉತ್ಪತ್ತಿಯಾಗುವ ಘನ ತ್ಯಾಜ್ಯವನ್ನು ಒಂದೆಡೆ ಗುಡ್ಡೆ ಹಾಕಿದಾಗ ಅದನ್ನು ತಿಪ್ಪೆ ಎಂದು ಕರೆಯುತ್ತಿದ್ದರು. ಈ ತಿಪ್ಪೆಗಳಿಗೆ ಸುಂಕ ವಿಧಿಸಲಾಗುತ್ತಿತ್ತು. ಅದು ಶಾಸನಗಳಿಂದ ತಿಳಿದು ಬರುತ್ತದೆ. ಈ ರೀತಿಯಾಗಿ ಪಶುಗಳು ಕೃಷಿಯ ಭಾಗವಾಗಿ ಊರಿನ ಸಂಪತ್ತುಗಳಾದ ಕಾರಣಕ್ಕಾಗಿ, ನೆರೆಯವರು ತುಱುಗಳನ್ನು ಅಪಹರಿಸಲು ಬಂದಾಗ ಇಂದು ಮುಂದು ನೋಡದೆ ವೀರರು ಹೋರಾಡಿ ಮಡಿದಿರುವುದು ಕಂಡುಬರುತ್ತದೆ. ಪ್ರಾಚೀನ ಜನರಿಗೆ ಕೃಷಿ ವೃತ್ತಿಯಾಗಿರಲಿಲ್ಲ. ಬದಲಿಗೆ ಜೀವನ ವಿಧಾನವಾಗಿತ್ತು. ಕೃಷಿಯ ಭಾಗವಾಗಿರುವ ಪಶುಗಳೂ ಸಹ ಜೀವನದ ಭಾಗಗಳೇ ಆಗಿದ್ದವು. ಪಶುಗಳನ್ನು ಗೋಸಂಪತ್ತು ಎಂದು ಪರಿಗಣಿಸಲಾಗಿದ್ದು, ಅವು ಕೃಷಿಯ ಅವಿಭಾಜ್ಯ ಅಂಗಗಳಾಗಿದ್ದವು. ಇಂದಿಗೂ ದನಗಳನ್ನು ಗೋಮಾಳದ ಭೂಮಿಯಲ್ಲಿ ಮೇಯಿಸುವುದು ಕಂಡುಬರುತ್ತದೆ. ಜಂಗ್ಲಿ ದನಗಳನ್ನು ಕೂಡಿಸುವುದು ರೂಢಿಯಲ್ಲಿ ಉಳಿದುಕೊಂಡು ಬಂದಿದೆ. ಜಂಗ್ಲಿ ದನಗಳಿಂದ ಸಂಗ್ರಹಿಸಿದ ಸಗಣಿಯನ್ನು ಹರಾಜು ಕೂಗಲಾಗುತ್ತದೆ. ಮತ್ತು ಇದಕ್ಕೆ ತೆರಿಗೆಯನ್ನು ವಿಧಿಸಲಾಗುತ್ತದೆ. ತಿಪ್ಪೆಗಳಿಗೆ ಸಂಬಂಧಿಸಿದ ತೆರಿಗೆ ಸುಂಕಗಳು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದನ್ನು ಕಾಣಬಹುದಾಗಿದೆ.

‘ಊರಿನ ಇಷ್ಟದಂತೆಯೋ ಅಥವಾ ರಾಜನ ಇಷ್ಟದಂತೆಯೋ ಗೋವುಗಳು ತಿರುಗಾಡಲು ಗೋಪ್ರಚಾರ ಭೂಮಿಯನ್ನು ಮೀಸಲಿಡಬೇಕೆಂದು ವಿಜ್ಞಾನೇಶ್ವರನು ಹೇಳಿದ್ದಾನೆ.[೪೧೬] ಸವಣನ ಬಿಳಿಲಲ್ಲಿ ಸುಗ್ಗಿಯಬ್ಬೆ ಎಂಬ ರಾಣಿ ಹನ್ನೆರಡು ಮತ್ತರನ್ನು ಬಿಟ್ಟಿಕೊಟ್ಟಳೆಂದಿದೆ(ಬಿಳಿಲು, ಬೀಳಿಲು, ಗೋಮಾಳ ಎಂಬುದನ್ನು ತಿಳಿಸಿದೆ.[೪೧೭] ಗೋವುಗಳು ಮೇಯುವ ಪ್ರದೇಶವನ್ನು ಸಾರ್ವಜನಿಕ ಹುಲ್ಲುಗಾವಲು ಪ್ರದೇಶವೆಂದು ಕರೆದಿರುವ ಸಾಧ್ಯತೆಗಳಿವೆ. ಕ್ರಿ.ಶ.೧೧೯೦ರ ಶಾಸನವು ಸಂಜೆಮಟಂಪ್ರಪೆ ಗೋಪ್ರಚಾರ ವಿಶಾವಸಥ ಮುರಾರಿ ಭವನ ದ್ವಿಜಸತ್ರಂ ಎಂದಿದೆ.[೪೧೮] ಕ್ರಿ.ಶ.೧೦೬೫ರ ಶಾಸನದಲ್ಲಿ ದನಗಳ ಸಗಣಿಯ ಗೊಬ್ಬರವನ್ನು ಹೊಲಗಳಿಗೆ ಬಳಸುತ್ತಿದ್ದರು. ದನಗಳನ್ನು ಮೇಯಿಸಲು ಹೋಗುವ ಮುನ್ನ ಊರಿನ ಹೆಬ್ಬಾಗಿಲ ಬಳಿ ತರುವುತ್ತಿದ್ದರುದ್ದ. ಅಲ್ಲಿನ ಗೊಬ್ಬರವನ್ನು ಸಂಗ್ರಹಿಸಿದವರು ಊರಿಗೆ ಇಂತಿಷ್ಟು ಹಣವನ್ನು ಪಾವತಿಸಬೇಕಿತ್ತು.[೪೧೯] ಊರಿನ ಜನರು ಹಸುಗಳಿಗೆ ಬೀಜ ಕಟ್ಟಿಸಲು ಗೂಳಿಗಳನ್ನು ಬಿಡುತ್ತಿದ್ದರು. ಅದು ಯಾರ ಹೊಲದಲ್ಲಿ ಬೇಕಾದರೂ ಮೇಯಬಹುದಿತ್ತು ಎಂದು ಕ್ರಿ.ಶ. ೧೦೪೦ರ ಶಾಸನವು ತಿಳಿಸುತ್ತದೆ.[೪೨೦] ಇದು ಇಂದಿಗೂ ಕಂಡುಬರುತ್ತದೆ.

ಕ್ರಿ.ಶ. ೧೧೫೯ರ ಶಾಸನದಲ್ಲಿ ತಿಪ್ಪೆಸುಂಕವನ್ನು ಉಲ್ಲೇಖಿಸಿದೆ.[೪೨೧] ಕ್ರಿ.ಶ. ೧೧೬೧ರ ಶಾಸನದಲ್ಲಿ ತಿಪ್ಪೆಸುಂಕದ ಉಲ್ಲೇಖವಿದೆ.[೪೨೨] ಕ್ರಿ.ಶ. ೧೧೭೭ರ ಶಾಸನದಲ್ಲಿ ತಿಪ್ಪೆಸುಂಕದ ಉಲ್ಲೇಖವಿದೆ.[೪೨೩] ಕ್ರಿ.ಶ. ೧೧೯೦ರ ಶಾಸನದಲ್ಲಿ ತಿಪ್ಪೆಸುಂಕದ ಉಲ್ಲೇಖವಿದೆ.[೪೨೪] ಕ್ರಿ.ಶ. ೧೧೫೮ರ ಶಾಸನದಲ್ಲಿ ತಿಪ್ಪೇಸುಂಕದ ಉಲ್ಲೇಖವಿದೆ. ಬಾಡದ ಶಾಸನವೊಂದರಲ್ಲಿ ‘ತಿಪ್ಪೆಸುಂಕ ವಿನಿತುಂ’ ಎಂದಿದೆ.[೪೨೫] ಕ್ರಿ.ಶ. ೧೧೪೧ರ ಶಾಸನದಲ್ಲಿ ತಿಪ್ಪೆಸುಂಕದ ಉಲ್ಲೇಖವಿದೆ.[೪೨೬] ಸುಕದೆರೆಯ ಶಾಸನವೊಂದರಲ್ಲಿ ತಿಪ್ಪೆಸುಂಕದ ಉಲ್ಲೇಖವಿದೆ.[೪೨೭] ತಾಳಗುಂದದ ಬೆಳಗಾವಿ ಗ್ರಾಮದ ಚಾಳುಕ್ಯ ಜಗದೇಕಮಲ್ಲನ ಶಾಸನದಲ್ಲಿ ತಿಪ್ಪೆಸುಂಕದಲ್ಲಿ ವೊಕ್ಕಲಲೊಂದು ಹೇಱಂ ಬಿಟ್ಟರು.

ಈ ತಿಪ್ಪೆಸುಂಕಗಳನ್ನು ಗಮನಿಸಿದರೆ ಪ್ರಾಚೀನ ಕಾಲದಲ್ಲಿ ಇವುಗಳಿಗಿದ್ದ ಮಹತ್ವವು ತಿಳಿದುಬರುತ್ತದೆ. ತಿಪ್ಪೆ ಪೂಜೆಯಂತಹ ಆಚರಣೆಗಳು ಇಂದಿಗೂ ರೂಢಿಯಲಿವೆ. ದೀಪಾವಳಿಯನ್ನು ಹಟ್ಟಿಹಬ್ಬ ಎಂದು ಆಚರಿಸುವಾಗ ಸಗಣಿಯನ್ನು ಪೂಜಿಸುವುದು ಕಂಡುಬರುತ್ತದೆ. ಇದು ಕೃಷಿ ಭೂಮಿಗೆ ಫಲವತ್ತತೆಯ ಆಧಾರ ಸ್ತಂಭವಾಗಿತ್ತು. ತಿಪ್ಪೆಸುಂಕಗಳನ್ನು ಗಮನಿಸಿದರೆ ಕೃಷಿಭೂಮಿಗೆ ಸಗಣಿಯು ಪ್ರಾಚೀನ ಕಾಲದಲ್ಲಿ ಫಲವತ್ತತೆಯ ಬಹುಮುಖ್ಯ ಆಧಾರವಾಗಿತ್ತೆಂಬುದು ಇದರಿಂದ ತಿಳಿದುಬರುತ್ತದೆ.

ಊರಿನ ದನಗಳನ್ನು ಸೇರಿಸಿ ಕಾಯುವವರನ್ನು ದನಗಾಯಿಗಳು ಎನ್ನಲಾಗುತ್ತದೆ. ಇಂದಿಗೂ ಈ ರೀತಿಯ ಪರಂಪರೆ ರೂಢಿಯಲ್ಲಿರುವುದು ಇದಕ್ಕೆ ಸಾಕ್ಷಿಭೂತ ಪ್ರಜ್ಞೆಯಂತಿದೆ. ಕ್ರಿ.ಶ. ೧೧೭೪ರ ಶಾಸನದಲ್ಲಿ ‘ದನಜೀವಿದ ಪಾಳ ಹಸುಗೆಯೊಳಗೆ’ ಎಂದಿದೆ.[೪೨೮] ಪ್ರಾಚೀನ ಕಾಲದಲ್ಲಿ ಊರಿನ ಪಶುಗಳನ್ನು ಮೇಯಿಸಲು ಪ್ರತ್ಯೇಕ ಭೂಮಿ ಇರುತ್ತಿತ್ತು. ಇಂದಿಗೂ ಇಂತಹ ಭೂಮಿಗಳು ಕಂಡುಬರುತ್ತವೆ. ಇಂತಹ ಭೂಮಿಯನ್ನು ಗೋಮಾಳದ ಭೂಮಿ ಎಂದು ಕರೆಯುತ್ತಿದ್ದರು. ಇದರ ಮೇಲೆ ತೆರೆಗೆ ವಿಧಿಸಿದ್ದನ್ನು ಕ್ರಿ.ಶ. ೮-೯ನೆಯ ಶತಮಾನಕ್ಕೆ ಸೇರಿದ ಶಾಸನವೊಂದರಲ್ಲಿ ಗೋಮಾಳದ ತೆರಿಗೆಯನ್ನು ಕುರಿತು ಉಲ್ಲೇಖಿಸಿದೆ.[೪೨೯] ಪರಶುರಾಮಪುರದ ಶಾಸನವೊಂದರಲ್ಲಿ ಹಿರಿಯಕೆರೆಯೊಳಗೆ ಹುಲುಮನಿ ಕಾವಲನು ಬಿಟ್ಟು ಗೋದನಗಳು ಕೆರೇವೊಳಗೆ ಮೆಯದು ನೀರುನು ಕುಡಿದು ಹುಲನೀರನು ದರ್ಮಕೆರೇನು ಬಿಟ್ಟವು ಎಂದಿದೆ.[೪೩೦] ಈ ಶಾಸನವನ್ನು ಗಮನಿಸಿದರೆ ಗೋದನಗಳು ಮೇಯಲು ಪ್ರತ್ಯೇಕ ಭೂಮಿ ಇರುತ್ತಿತ್ತು. ಅಲ್ಲಿ ಮೇದ ದನಗಳು ನೀರನ್ನು

ಕುಡಿಯಲು ಕೆರೆಯನ್ನು ಬಿಟ್ಟಂತೆ ಶಾಸನವು ತಿಳಿಸುತ್ತದೆ. ಇದು ಪಶುಪಾಲನೆಗೆ ನೀಡಿದ ಮಹತ್ವವನ್ನು ತಿಳಿಸುತ್ತದೆ. ಕೃಷಿ ಆರ್ಥಿಕ ಭಾಗವಾದಂತೆ ಕೃಷಿಯ ಭಾಗವಾಗಿ ಪಶುಪಾಲನೆ ಕಂಡುಬರುತ್ತದೆ. ಈ ಕಾರಣದಿಂದಾಗಿ ಪ್ರಾಚೀನ ಕೃಷಿ ವೆಚ್ಚದಾಯಕವಾಗಿರಲಿಲ್ಲ. ಬದಲಿಗೆ ಕಡಿಮೆ ಖರ್ಚಿನಲ್ಲಿ ಅಧಿಕ ಆದಾಯ ಗಳಿಸುವ ವಿಧಾನವಾಗಿತ್ತು.

**ಪಶುಪಾಲನೆ ಮತ್ತು ಬಣವೆ**

ಪಶುಗಳು ಮಳೆಗಾಲದಲ್ಲಿ ಹಸಿರು ಹುಲ್ಲನ್ನು ತಿಂದು ಜೀವಿಸುತ್ತವೆ. ಬೇಸಿಗೆ ಕಾಲದಲ್ಲಿ ಏನು ತಿಂದು ಬದುಕುತ್ತಿದ್ದವು ಎಂಬುದನ್ನು ಗಮನಿಸಿದರೆ, ಕೃಷಿ, ಪಶುಪಾಲನೆ, ಪಶು ಆಹಾರ ಎಲ್ಲವುಗಳೂ ಒಂದು ಸರಪಳಿಯಂತೆ ಕಂಡುಬರುತ್ತವೆ. ಅವು ಒಂದು ಮತ್ತೊಂದಕ್ಕೆ ಪೂರಕವಾಗಿವೆ ಮತ್ತು ಕೊಂಡಿಗಳಂತಿರುವುದು ತಿಳಿದುಬರುತ್ತದೆ. ಪಶುಪಾಲನೆಯು ಕೃಷಿಗೆ ಪೂರಕವಾಗಿರುತ್ತಿತ್ತು. ಕೃಷಿಯು ಪಶುಪಾಲನೆಗೆ ಉಸಿರಾಗಿರುತ್ತಿತ್ತು. ಭೂಮಿಯನ್ನು ಉಳುಮೆ ಮಾಡಿ ಬೆಳೆ ಬೆಳೆಯಲಾಗುತ್ತದೆ. ಆ ಬೆಳೆ ಬಲಿತ ಮೇಲೆ ಕಟಾವು ಮಾಡಿ ಅದರಿಂದ ಧಾನ್ಯಗಳನ್ನು ಬೇರ್ಪಡಿಸಲಾಗುತ್ತದೆ. ಹೀಗೆ ಧಾನ್ಯಗಳನ್ನು ಬೇರ್ಪಡಿಸಿದ ಹುಲ್ಲು, ಸಿಪ್ಪೆ, ಮುಸುಕು, ಹೊಟ್ಟು ಇತ್ಯಾದಿಗಳನ್ನು ಒಂದು ಕಡೆ ಶೇಖರಿಸಿ ಮೆದೆಯಂತೆ ಒಟ್ಟುವುದಕ್ಕೆ ಬಣವೆಗಳು ಎಂದು ಕರೆಯಲಾಗುತ್ತದೆ. ಸಾಮಾನ್ಯವಾಗಿ ಮಾನವರು ತಿನ್ನುವ ಆಹಾರ ಧಾನ್ಯಗಳಿಂದ ಬೇರ್ಪಡಿಸಿದ ಹೊಟ್ಟು, ಹುಲ್ಲು ಮೊದಲಾದವುಗಳು ಪ್ರಾಣಿಗಳ ಆಹಾರವಾಗುತ್ತವೆ. ವಾಣಿಜ್ಯ ಬೆಳೆಗಳಿಂದ ಬೆಳೆಯುವ ಯಾವ ಕಡ್ಡಿ ಹುಲ್ಲುಗಳನ್ನು ಪಶುಗಳ ಮೇವಿಗೆ ಬಳಸುವುದು ವಿರಳ. ಆದರೆ ಎಳ್ಳು ಹತ್ತಿಯಂತಹ ಬೀಜದ ಇಂಡಿಯನ್ನು ಬಳಸಲಾಗುತ್ತದೆ. ಪಶು ಮತ್ತು ಪಶುಗಳ ಉತ್ಪನ್ನ ಆರ್ಥಿಕತೆಯ ಒಂದು ಭಾಗವಾಗುವಂತೆ ಪಶುಗಳಿಗೆ ಸಂಬಂಧಿಸಿದ ಮೇವು ಸಹ ಆರ್ಥಿಕ ಭಾಗವಾಗಿರುವಂತೆ ತೋರುತ್ತದೆ. ಏಕೆಂದರೆ ಇವುಗಳಿಗೂ ತೆರಿಗೆ ವಿಧಿಸಿರುವ ಮತ್ತು ದಾನ ನೀಡಿರುವ ಶಾಸನಗಳು ಕಂಡುಬರುತ್ತವೆ.

ಕೃಷಿಕರು ಬೇಸಿಗೆಯಲ್ಲಿ ಅಂದರೆ ಶಿವರಾತ್ರಿ ಹಬ್ಬ ಮುಗಿದ ೧೫ ದಿನಕ್ಕೆ ಹೋಳಿ ಹಬ್ಬ ಬರುತ್ತದೆ. 'ಹೋಳಿ ಹಬ್ಬಕ್ಕೆ ಹೋಣಿಯೆಲ್ಲ ನೀರು' ಎಂಬಂತೆ ಮಳೆ ಬರುವ ಸಾಧ್ಯತೆಗಳು ಹೆಚ್ಚಿರುತ್ತವೆ. ಶಿವರಾತ್ರಿಯ ವೇಳೆಗೆ ಕಣಸುಗ್ಗಿ ಮುಗಿಸುತ್ತಾರೆ. ಕಾರಣ 'ಶಿವರಾತ್ರಿಗೆ ಮುಡಣಗಾಳಿ ಶಿವ ಶಿವ' ಎಂದು ಹೋಗುತ್ತದೆ. ಈ ಸಂದರ್ಭದಲ್ಲಿ ಕಣ ಸುಗ್ಗಿ ಮಾಡಲು ಅಂದರೆ ಧಾನ್ಯಗಳನ್ನು ತೂರಲು, ಹಸನು ಮಾಡಲು ಕಷ್ಟವಾಗುತ್ತದೆ. ಒಂದೆಡೆ ಬೇಸಿಗೆಯ ಬಿಸಿಲು, ಮತ್ತೊಂದೆಡೆ ಗಾಳಿ ಸರಿಯಾಗಿ ಬೀಸುವುದಿಲ್ಲ. ಈ ಕಾರಣದಿಂದಾಗಿ ಶಿವರಾತ್ರಿಯ ಒಳಗಡೆಯೇ ಕಣಸುಗ್ಗಿ ಮುಗಿಸುವರು. ಈ ಸಂದರ್ಭದಲ್ಲಿ ಕಾಳುಗಳನ್ನು ಹುಲ್ಲಿನಿಂದ ಬೇರ್ಪಡಿಸುತ್ತಾರೆ. ಈ ಬೇರ್ಪಡಿಸಿದ ಹುಲ್ಲು, ಹೊಟ್ಟು, ಮುಸುಕುಗಳನ್ನು ಹೋಳಿ ಹಬ್ಬದ ವೇಳೆಗೆ ಬಣವೆಗೆ ಒಟ್ಟಬೇಕಾಗುತ್ತದೆ. ಬಣವೆ ಕಟ್ಟುವ ಕ್ರಮವು ತುಂಬಾ ತಾಂತ್ರಿಕತೆಯಿಂದ ಕೂಡಿರುತ್ತದೆ. ಬಣವೆ ಒಟ್ಟುವುದು ಒಂದು ಕೌಶಲವೇ ಸರಿ. ಬಣವೆಗಳು ಎರಡು ರೀತಿಯಲ್ಲಿ ಕಂಡುಬರುತ್ತವೆ. ಹೊಲಗಳಲ್ಲಿ ಮೆದೆಹಾಕಿ ಸಿವುಡುಕಟ್ಟಿ ಅವಗಳನ್ನು ತಂದು ಕಣಗಳಲ್ಲಿ ಒಟ್ಟುವುದು ನಂತರ ಪ್ರಾಣಿಗಳ ಸಹಾಯದಿಂದ ರೋಣುಗಲ್ಲು ಹೂಡಿ ತುಳಿಸಿ ಕಾಳು ಮತ್ತು ಹುಲ್ಲನ್ನು ಬೇರ್ಪಡಿಸುವುದು. ಇದಾದ ನಂತರ ಒಟ್ಟುವ ಬಣವೆಯು ದೀರ್ಘಕಾಲದವರೆಗೆ ಅಂದರೆ ೨ ರಿಂದ ೩ ವರ್ಷಗಳವರೆಗಿರುತ್ತದೆ. ಹೊಲದಿಂದ ತಂದು ಕಾಳುಸಹಿತ ಒಟ್ಟುವ ಬಣವೆಯು ತಾತ್ಕಾಲಿಕ ಬಣವೆಯಾಗಿರುತ್ತದೆ. ಇಂತಹ ಬಣವೆಯ ವರ್ಣನೆಯು ಪೆರಿಯಾಪುರಾಣದಲ್ಲಿ ಕಂಡುಬರುತ್ತದೆ. 'ರೈತರು ಕೊಯ್ದು ಬತ್ತದಿಂದ ಕೂಡಿದ

ಹುಲ್ಲಿನ ಸೂಡಿಗಳಿಂದಾದ ಬೈಹುಲ್ಲಿನ ರಾಶಿಗಳನ್ನು ಬೆಟ್ಟದಂತೆ ಒಂದುಗೂಡಿಸುವರು. ಆಸೆಯಿಂದ ಹಿಡಿದ ಹಲವು ಬಗೆಯ ಮೀನುಗಳನ್ನು ವಿಶಾಲವಾದ ಗುಡ್ಡದಂತೆ ರಾಶಿ ಹಾಕುವರು. ಕೆಲವರು ಸುರುಳಾಗಿರುವ ಶಂಖಗಳಿಂದ ಸುರಿದ ಮುತ್ತುಗಳಿಂದ ಕಾಂತಿಯುಕ್ತವಾದ ದೊಡ್ಡ ಗುಡ್ಡವನ್ನೆ ಮಾಡುವರು. ಕೆಲವರು ಅರಳಿದ ಹೂಗಳ ಗೊಂಚಲುಗಳಿಂದ ಜೇನಿನ ಅಬ್ಬಿಯು ಕೆಳಗೆ ಸುರಿಯಲು ಆ ಹೂಗಳು ಗಿರಿಯಂತೆ ಎತ್ತರಕ್ಕೆ ಸೇರಿಸಿಡುವರು'[೪೩೧] ಈ ರೀತಿಯಾಗಿ ಬಣವೆ ಒಟ್ಟುವ ಕ್ರಮ ತಮಿಳಿನವರಲ್ಲಿ ಕಂಡುಬರುತ್ತದೆ. ಆದರೆ ಕನ್ನಡದ ಸಂದರ್ಭದಲ್ಲಿ ಇದು ಅಲ್ಪ ವಿರಳವಾಗಿ ಕಂಡುಬರುತ್ತದೆ. ಮನೆಕಟ್ಟಲು ತಳಪಾಯ ಎಷ್ಟು ಮುಖ್ಯವೋ, ಬಣವೆಯ ತಳಪಾಯ ಅಷ್ಟೆ ಮಹತ್ವದ್ದಾಗಿರುತ್ತದೆ.'[೪೩೨] ತಳಪಾಯಕ್ಕೆ ಅಟ್ಟು ಮಾಡುವುದು ಎಂದು ಕರೆಯಲಾಗುತ್ತದೆ. ಇದನ್ನು ಮೊದಲು ಭದ್ರಪಡಿಸಲಾಗುತ್ತದೆ. ಕಾರಣ ಅಟ್ಟಿನೊಳಗಡೆ ನೀರು ಇಳಿದರೆ ಹುಲ್ಲು ಕೊಳೆಯುತ್ತದೆ. ಅಟ್ಟು ಭದ್ರವಾಗಿರಲಿಲ್ಲದಿದ್ದರೆ ಬಣವೆ ಕುಸಿಯುವುದು, ವಾಲುವುದು ಹಾಗೂ ಬೀಳುವುದು ಕಂಡುಬರುತ್ತದೆ.

ಕಲ್ಲು ಮೊದಲಾದವುಗಳನ್ನು ತಳದಲ್ಲಿಟ್ಟು, ಅದರ ಮೇಲೆ ಮರದ ತುಂಡುಗಳನ್ನು ಹೊಂದಿಸಿ ಎತ್ತರವಾಗಿ ಅಟ್ಟುಗಳನ್ನು ನಿರ್ಮಿಸುತ್ತಾರೆ. ಮಳೆಯಿಂದ ನೆಲದ ಮೇಲೆ ನೀರು ಹರಿದರು ಅಟ್ಟು ನೀರನ್ನು ಮುಟ್ಟದ ಹಾಗೆ ಅಟ್ಟು ನಿರ್ಮಿಸಲಾಗುತ್ತದೆ. ನಂತರ ಹಂತ ಹಂತವಾಗಿ ಹುಲ್ಲು ಒಟ್ಟುತ್ತಾ ಹೋಗುತ್ತಾರೆ. ಇದನ್ನು ಒಂದೇ ದಿನದಲ್ಲಿ ಒಟ್ಟುವುದಿಲ್ಲ. ಒಂದು ದಿನ ಒಂದು 'ತರ' ಒಟ್ಟುತ್ತಾರೆ. 'ತರ' ಎಂದರೆ(ಒಂದು ಸ್ಟೆಪ್) ನಂತರ ಮರುದಿನ ಅಥವಾ ಎರಡು ದಿನ ಬಿಟ್ಟು ಮತ್ತೊಂದು 'ತರ' ಒಟ್ಟುತ್ತಾ ಹೋಗುತ್ತಾರೆ. ಕಾರಣ ಒಟ್ಟಿದ ಹುಲ್ಲು ಕುಗ್ಗುವ ಉದ್ದೇಶದ ಹಿನ್ನೆಲೆಯಲ್ಲಿ ಹೀಗೆ ಮಾಡುತ್ತಾರೆ. ನಂತರ ಹುಲ್ಲು ಎತ್ತ ಹೊರಳಿಸಿದರೂ ಹೊರಳಬಾರದೆಂಬ ಉದ್ದೇಶದಿಂದ 'ಬಡಮಣಿಯಿಂದ ಅದನ್ನು ಬಡಿಯುತ್ತಾ ಹೋಗುತ್ತಾರೆ.'[೪೩೩] ಹೀಗೆ ಬಡಿದು ಮೇಲ್ಭಾಗದಲ್ಲಿ ಮಳೆ ನೀರು ಬಿದ್ದರೆ ಜಾರಿ ಕೆಳಗಡೆಗೆ ನುಣುಚಿ ಬೀಳುವಂತೆ ಬಣವೆಯ ಎರಡು ಭಾಗವನ್ನು ಇಳಿಜಾರಾಗಿ ನುಣುಪು ಮಾಡುತ್ತಾರೆ. ಅನಂತರ ಮಣ್ಣು ಮಿಶ್ರಿತವಾದ ಉಬ್ಬಲನ್ನು ಬಣವೆಯ ಮೇಲೆ ಹಾಕುತ್ತಾರೆ. ನಂತರ ಅದಕ್ಕೆ ನೀರು ಎರಚುತ್ತಾರೆ. ಕಾರಣ ಆ ಉಬ್ಬಲು ಗಾಳಿಗೆ ಹಾರಿ ಹೋಗಬಾರದು ಎಂಬ ಉದ್ದೇಶದ ಹಿನ್ನೆಲೆಯಲ್ಲಿ ಹೀಗೆ ಮಾಡಲಾಗುತ್ತದೆ. ಉಬ್ಬಲು ಮಣ್ಣು ಮಿಶ್ರಿತವಾಗಿರುವುದರಿಂದ ಅದು ಮೊದಲೇ ನೀರು ಕುಡಿದು ಗಟ್ಟಿಯಾಗುತ್ತದೆ. ಮಳೆಯಿಂದ ಬಿದ್ದ ನೀರನ್ನು ಅದು ಹೀರಿಕೊಂಡು ಹುಲ್ಲಿಗೆ ಇಳಿಸದೆ ಹೊರಗಡೆಯೇ ಬೀಳಿಸುತ್ತದೆ. ಈ ರೀತಿಯಾಗಿ ಕೃಷಿಕರು ತಮ್ಮ ಪರಂಪರೆಯ ಜ್ಞಾನದಿಂದ ಬಣವೆಗಳನ್ನು ಒಟ್ಟುವುದು ಇಂದಿಗೂ ಕಂಡುಬರುತ್ತದೆ.

ಕ್ರಿ.ಶ. ೧೧೭೪ರ ಶಾಸನದಲ್ಲಿ ಬಣವೆಯ ಉಲ್ಲೇಖವಿದೆ.[೪೩೪] ಕ್ರಿ.ಶ. ೧೦೮೯ರ ಶಾಸನವು ಬಣಂಬೆದೆಜ಼ಿಯನ್ನು ಉಲ್ಲೇಖಿಸುತ್ತದೆ.[೪೩೫] ಕ್ರಿ.ಶ. ೧೧೪೦ರ ಶಾಸನದಲ್ಲಿ ಬಣಂವೆವೆರಸುಶೂಲ್ಕಕರಬಾಧಾ ಪರಿಹಾರ.[೪೩೬] ಎಂದಿದೆ. ಕ್ರಿ.ಶ. ೧೧೦೧ರ ಶಾಸನದಲ್ಲಿ 'ಬಣಂಬೆಗಂ' ಎಂದಿದೆ.[೪೩೭] ಕ್ರಿ.ಶ. ೧೧೭೬ರ ಶಾಸನದಲ್ಲಿ 'ಬಣವೆ' ಉಲ್ಲೇಖವಿದೆ.[೪೩೮] ಕ್ರಿ.ಶ. ೧೧೦೦ರ ಶಾಸನದಲ್ಲಿ ಒಂದು ಬಣವೆಯನ್ನು ದಾನ ನೀಡಿದಂತಿದೆ.[೪೩೯] ಕ್ರಿ.ಶ. ೧೮೯೭ರ ಶಾಸನದಲ್ಲಿ ಬಣಬೆ ಗಟ್ಟಿಗಾಗಿ ಏಕಸ್ಥಳವಾಗಿ ಕೊಂಡು ಹಸುಗಳಿಗೆ ದಾನ ನೀಡಿದ್ದನ್ನು ತಿಳಿಸುತ್ತದೆ.[೪೪೦] ಕ್ರಿ.ಶ. ೧೧೮೪ರ ಶಾಸನದಲ್ಲಿ ಭವಣಿಗೆಯ ಸ್ಥಳಕ್ಕೆ ನಡೆವ ಸೇನಭೋಗ ಲಕ್ಬರಸ ಮಲ್ಲಯ್ಯಂಗಳು ಬಿಟ್ಟಪಣ ೧ ಎಂದಿದೆ.[೪೪೧] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಮೂರು ನೀಳದ ಬಣವೆವೊಟ್ಟು ಹೀರಪಸೆಟ್ಟಿಯರು ಕೊಟ್ಟರು.[೪೪೨] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಗಗ್ಗಗೇರಿಯ ಬಣವೆವೊಟ್ಟಿನ ನಾಲ್ಕು ಮೂರು ನೀಳದೆರಡು ಬಣವೆವೊಟ್ಟು.[೪೪೩] ಇವುಗಳನ್ನು

ಗಮನಿಸಿದರೆ ಪ್ರಾಚೀನ ಕಾಲದಲ್ಲಿ ಪಶುಸಂಪತ್ತು ಎಷ್ಟು ಸಮೃದ್ಧವಾಗಿತ್ತು ಎಂಬುದು ತಿಳಿಯುತ್ತದೆ. ಪ್ರಾಣಿಗಳನ್ನು ಸಾಕುವುದು, ಅವುಗಳಿಗೆ ಮೇವು ಸಂಗ್ರಹಿಸುವುದು ಪ್ರತಿಷ್ಠೆ ಮತ್ತು ಹೆಮ್ಮೆಯ ಸಂಗತಿಯಾಗಿತ್ತು. ಬಣವೆಗಳು ಮತ್ತು ಮನೆಯ ಅಂಗಳದ ಮುಂದಿರುವ ದನಗಳು ಆ ಮನೆತನದ ಆರ್ಥಿಕ ಸಮೃದ್ಧಿಯನ್ನು ಅಳೆಯುವ ಸಾಧನಗಳಾಗಿದ್ದವು. ಶಾಸನದಲ್ಲಿ ಉಲ್ಲೇಖಗೊಂಡಿರುವ ಮೂರು ನೀಳದ ಬಣವೆ, ನಾಲ್ಕು ನೀಲದ ಬಣವೆಗಳು ಇದಕ್ಕೆ ಕೈಗನ್ನಡಿಯಂತಿವೆ. ಬಣವೆ ಮತ್ತು ದನಗಳನ್ನು ನೋಡಿ ಆ ಮನೆಗೆ ಹೆಣ್ಣು ಕೊಡುವ ಪದ್ಧತಿಯು ಹಿಂದೆ ಇತ್ತೆಂಬುದಕ್ಕೆ ಇಂದಿಗೂ ಕೆಲವು ಹಳ್ಳಿಗಳಲ್ಲಿ ಈ ಸಂಪ್ರದಾಯ ರೂಢಿಯಲ್ಲಿದೆ. ಈ ಬಣವೆಗಳು ರಾಯಚೂರು, ಬಿಜಾಪುರ ಭಾಗಗಳಲ್ಲಿ ಹೆಚ್ಚಾಗಿ ಕಂಡುಬಂದಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಈ ಭಾಗಗಳಲ್ಲಿ ಬಯಲು ಭೂಮಿ ವಿಸ್ತಾರವಾಗಿದ್ದು, ಆಹಾರದ ಬೆಳೆಗಳಾದ ಜೋಳ, ಭತ್ತ, ಕಬ್ಬು ಮೊದಲಾದ ನೆಲಗಡಲೆ, ಹುರುಳಿ ಬೆಳೆಗಳನ್ನು ಹೆಚ್ಚಾಗಿ ಬೆಳೆಯುವ ಕಾರಣದಿಂದಾಗಿ ಈ ಭಾಗದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಹೀಗೆ ಪಶುಪಾಲನೆ ಮತ್ತು ಕೃಷಿ ಮಧ್ಯದ ಸಂಬಂಧಗಳು ಕಂಡುಬರುತ್ತವೆ.

ಪ್ರಾಚೀನ ಕಾಲದಲ್ಲಿ ಹಸುಗಳಿಗಾಗಿ ಏಕೆ ಯುದ್ಧಗಳು ನಡೆದವು ಎಂಬುದನ್ನು ಗಮನಿಸಿದರೆ, ಅದರ ಹಿಂದಿರುವ ಸೂಕ್ಷ್ಮತೆಗಳು ಅಧ್ಯಯನಕ್ಕೆ ತೆರೆದುಕೊಳ್ಳುತ್ತವೆ. ಹಸುಗಳು ಕೇವಲ ಪ್ರಾಣಿಗಳಲ್ಲ. ಅವು ರಾಜ್ಯದ ಸಂಪತ್ತು. ಕೃಷಿ ಸಂಪತ್ತೆಂದೇ ಅರ್ಥೈಸಬಹುದಾಗಿದೆ ಒಂದೆಡೆ ಸಂಪತ್ತುಗಳ ಭಾಗವಾಗಿ ಕಂಡರೆ ಮತ್ತೊಂದೆಡೆ ಕೃಷಿಕರಿಗೆ ಗೊಬ್ಬರ, ಹೈನುಗಳಾದ ಹಾಲು, ಮೊಸರು, ತುಪ್ಪಗಳ ಪೂರೈಕೆ, ಮತ್ತೊಂದೆಡೆ ಇದು ದೇವಾಲಯದ ಧರ್ಮಕಾರ್ಯಗಳಿಗೆ ಹಸುಗಳನ್ನು ಬಿಟ್ಟಿದ್ದು ಇವುಗಳ ಪೂರೈಕೆಯ ಉದ್ದೇಶದ ಸಲುವಾಗಿ ಎಂಬುದನ್ನು ಗಮನಿಸಿದ್ದೇವೆ. ಈ ಕಾರ್ಯವನ್ನು ದೇವಾಲಯದ ಭಕ್ತರು ಮಾಡುತ್ತಿದ್ದರು. ಯಾರೇ ಮಾಡಿದರು ಅದು ಒಂದು ಉಪಯೋಗದ ಭಾಗವಾಗಿಯೇ ಪಶು ಸಂಪತ್ತು ಕಂಡುಬರುತ್ತದೆ.

ಇಂದು ಬದಲಾದ ಸನ್ನಿವೇಶದಲ್ಲಿ ಪಶುಪಾಲನೆ ಯಾವ ಹಂತಕ್ಕೆ ಬಂದು ತಲುಪಿದೆ ಎಂಬುದು ವಿಷಾದದ ಸಂಗತಿಯಾಗಿದೆ. ಗೋಹತ್ಯೆಗಳಂತಹ ಆತಂಕಕಾರಿ ವಿಚಾರಗಳು ಇಂದು ಎದುರಾಗಿರುವ ದೊಡ್ಡ ಸವಾಲುಗಳಾಗಿ ನಿಂತಿವೆ. ಗೋಹತ್ಯೆಯಂತಹ ವಿಚಾರಗಳು ರಾಜಕೀಯಗೊಂಡಿವೆ. ಅದೇನೇ ಇದ್ದರು ಕೃಷಿಯ ವಿಚಾರಕ್ಕೆ ಬಂದಾಗ ವಯಸ್ಸಾದ, ಕೃಷಿಗೆ ಯೋಗ್ಯವಲ್ಲದ ಪ್ರಾಣಿಗಳು ಆಹಾರಗಳಾದರೆ ಕೃಷಿಯ ಮೇಲೆ ಅದು ಪರಿಣಾಮ ಬೀರುವುದಿಲ್ಲ. ಆದರೆ ಕೃಷಿಗೆ ಬಳಸುವ ಪ್ರಾಣಿಗಳನ್ನು ಹತ್ಯೆ ಮಾಡುವುದರಿಂದ ನೇರವಾಗಿ ಕೃಷಿಯ ಮೇಲೆ ದುಷ್‌ಪರಿಣಾಮವನ್ನು ಉಂಟುಮಾಡುತ್ತದೆ. ಇಂದು ಕೃಷಿಕರು ಆಧುನಿಕ ತಂತ್ರಜ್ಞಾನಕ್ಕೆ ಜಾರಿ ಹೋಗಿದ್ದಾರೆ. ಉಳುಮೆಗೆ ಅಗತ್ಯವಾಗಿ ಬೇಕಾಗುವ ದೇಶಿ ಹಸುಗಳು, ಕೃಷಿಗೆ ಅಗತ್ಯವಾಗಿ ಬೇಕಾಗುವ ಎತ್ತುಗಳಿಗೆ ಫಲವಂತಿಕೆಯ ಬೀಜಾಂಕುರಗಳಾದ ದೇಶೀತಳಿಗಳು ಕಣ್ಮರೆಯಾಗುತ್ತಿವೆ. ಆ ಜಾಗದಲ್ಲಿ ಆಧುನಿಕ ಹೈಬ್ರೀಡ್ ತಳಿಗಳು ಬೆಳೆದು ನಿಂತಿವೆ. ಇವುಗಳಿಂದ ಭೂಮಿ ಉಳುವುದು ಕಷ್ಟಸಾಧ್ಯ. ಇವುಗಳು ಹೈನುಗಾರಿಕೆಯಷ್ಟನ್ನೆ ಪೂರೈಸಲು ಬಳಕೆಯಾಗುವಂತಹ ತಳಿಗಳು. ಇವುಗಳಿಂದ ಉಳುಮೆ ಮಾಡಬಹುದಾದರೂ ಕೃಷಿ ಬದುಕು ಅಷ್ಟಾಗಿ ಶುದ್ಧವಾಗುವುದಿಲ್ಲ. ಹಸು ಮಾರಾಟಗಾರರು ವಯಸ್ಸಾದ ಹಸುಗಳನ್ನು ಮಾತ್ರ ಕೊಳ್ಳದೆ, ಕಳ್ಳದಾರಿ ಹಿಡಿದು ವಯಸ್ಸಾಗದ ಹಸುಗಳನ್ನು ಸೆಳೆದೊಯ್ಯುತ್ತಾರೆ. ಇದರಿಂದ ಕೃಷಿಯ ಮೇಲೆ ನೇರವಾಗಿ ಪೆಟ್ಟು ಬಿದ್ದಂತಾಗುತ್ತದೆ. ಯಾಂತ್ರೀಕರಣಕ್ಕೆ ಮಾರು ಹೋದ ಕೃಷಿಕರು ಪಶುಪಾಲನೆ ಮರೆತು ಮರೆಗುಳಿಗೆ ಸರಿಯುತ್ತಿದ್ದಾರೆ. ಇದು ಕೃಷಿ ಕ್ಷೇತ್ರದಲ್ಲಿ ಉಂಟಾದ ಸಮಸ್ಯೆಗೆ ಬಹುದೊಡ್ಡ ಕಾರಣವೆಂದು ತಿಳಿದುಬರುತ್ತದೆ. ಇದು

ಭೀಕರ ಸವಾಲಾಗಿಯು ಇಂದು ನಮ್ಮೆದುರಿಗೆ ನಿಂತಿರುವುದು ಕಂಡುಬರುತ್ತಿದೆ. ಇದರಿಂದ ಹೊರಬರಲು ಪುನಃ ದೇಶಿ ಕೃಷಿಗೆ ಮರಳುವ ಅಗತ್ಯವಿದೆ.

## ಅಡಿಟಿಪ್ಪಣಿಗಳು

೧. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೧.
೨. ಅದೇ ಪು. ೧೧
೩. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೯.
೪. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ೧೦೦.
೫. ಅದೇ, ಪು. ೧೦೦.
೬. ನಂಜುಂಡ ಸ್ವಾಮಿ ಎ.ಎಸ್., ಕದಂಬ-ಗಂಗರ ಇತಿಹಾಸ, ಪು. ೧೨೩.
೭. ಸಕಲೇಶ್, ಹೊಯ್ಸಳೋದಯ ಸಂಶೋಧನ, ಪು. ೧೪೩.
೮. ಕ.ವಿ.ಹಂ.ಶಾ.ಸಂ.೯, ಜಮಖಂಡಿ ೧.
೯. EC(ರೈ.ಸಂ). Vol. Vll, ಶಿಕಾರಿಪುರ ೧೧೮.
೧೦. EC.Vol. lll, ನಂಜನಗೂಡು ೩೫೪.
೧೧. ಕ.ವಿ.ಹಂ.ಶಾ.ಸಂ.೮, ಬಸವಕಲ್ಯಾಣ ೬.
೧೨. ಅದೇ, ೧೭.
೧೩. ಅದೇ, ಬಿದರ್ ೬೯.
೧೪. ಅದೇ, ೭೦.
೧೫. EC. Vol. Xll, ತರೀಕೆರೆ ೯೬.
೧೬. ಅದೇ, lV,ಚಾಮರಾಜನಗರ ೧೪೬
೧೭. ಅದೇ, X,ಅರಸೀಕೆರೆ ೩೩.
೧೮. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೧೨.
೧೯. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೧೦೧.
೨೦. EC (ರೈ.ಸಂ). Vol. Xl, ದಾವಣಗೆರೆ ೧೦೫.
೨೧. MAR (೧೯೩೬) p. ೪೭.
೨೨. ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು. ೧೨೨.
೨೩. EC. Vol. Xlll , ಶಿವಮೊಗ್ಗ ೩೫.
೨೪. EC(ರೈ.ಸಂ). Vol. Xl, ದಾವಣಗೆರೆ ೫೯.
೨೫. ಅದೇ, ೧೦೫.
೨೬. ಅದೇ, Vll, ಶಿಕಾರಿಪುರ ೩೧೨.
೨೭. Sll. Vol. lX-part-1, ೩೭೯.
೨೮. ಅದೇ, ೩೪೩.
೨೯. EC. Vol. VII, ಅರಕಲಗೂಡು ೧೫.
೩೦. ಅದೇ, XII, ತರೀಕೆರೆ ೪೫.
೩೧. EC(ರೈ.ಸಂ). Vol . XI, ಹೊಳಲಕೆರೆ ೩೪.
೩೨. ಕ.ವಿ.ಹಂ.ಶಾ.ಸಂ.೯, ಹುನಗುಂದ ೧೨೭.

೩೩. ಅದೇ, ೧, ಬಿಜಾಪುರ ೩.

೩೪. EC. Vol. Vll, ಮಂಡ್ಯ ೭೧.

೩೫. ಮಂಜುನಾಥ್. ಸಿ.ಯು., ಶಾಸನಗಳು ಮತ್ತು ಕರ್ಣಾಟಕ ಸಂಸ್ಕೃತಿ, ಪು. ೨೪೭.

೩೬. ಚಂದ್ರಕಾಂತ ಎಂ.ಜಿ., ಮಹದೇವಪ್ಪ ಎಂ.,(ಸಂ) ಭಾರತೀಯ ಸಂಸ್ಕೃತಿ ಮತ್ತು ಕೃಷಿ, ಪು. ೧.

೩೭. ಬಾಲಗೋಪಾಲ್ ಕೆ.,(ಅನು). ಶ್ರೀಮತಿ ಎಚ್.ಎಸ್., ಪ್ರಾಚೀನ ಭಾರತದ ಚರಿತೆ, ಪು. ೧೧೭.

೩೮. ಅದೇ, ಪು. ೨೪೭.

೩೯. ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂದತಭಾರತೀ ಸ್ವಾಮಿಗಳು,(ಅನು) ಕೌಟಿಲೀಯ ಅರ್ಥಶಾಸ್ತ್ರ, ಪು. ೧೦೨.

೪೦. ಬಾಲಗೋಪಾಲ್ ಕೆ., ಪ್ರಾಚೀನ ಭಾರತದ ಚರಿತೆ,(ಅನು) ಶ್ರೀಮತಿ ಎಚ್.ಎಸ್., ಪು. ೧೭೭.

೪೧. ಕರ್ನಾಟಕ ಪರಂಪರೆ, ಸಂ. ೧,(ಸಂ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪು. ೨೧೫.

೪೨. SII. Vol. IX, I, ೩೪೧.

೪೩. ಕರ್ನಾಟಕ ಪರಂಪರೆ, ಸಂ. ೧,(ಸಂ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೧೫.

೪೪. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೧೩.

೪೫. ಅದೇ, ೯, ಬಾಗಲಕೋಟೆ ೩೮.

೪೬. KI. Vol. III Part I, ೨.

೪೭. ಅದೇ, ೫೩.

೪೮. SII. Vol. IX Part I, ೨೦೦.

೪೯. ಇರ್ಫಾನ್ ಹಬೀಬ್, ವಿವೇಕಾನಂದ ಝಾ., ಮೌರ್ಯರ ಕಾಲದ ಭಾರತ,(ಅನು) ನಗರಗೆರೆ ರಮೇಶ್, ಪು. ೪೦.

೫೦. ಅದೇ ಪು. ೩೯,೪೦.

೫೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಾಯನ, ಪು. ೪೪೨.

೫೨. EC. Vol. VIII, ಅರಕಲಗೂಡು ೩೯.

೫೩. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೨.

೫೪. ಅದೇ, ಲಿಂಗಸುಗೂರು ೧೭.

೫೫. ಅದೇ, ಮಾನ್ವಿ ೭೫.

೫೬. ಅದೇ, ೧೦, ಬಿಜಾಪುರ ೧.

೫೭. ಅದೇ, ೩.

೫೮. ಅದೇ, ೩೧.

೫೯. ಅದೇ, ೩೨.

೬೦. ಅದೇ, ೩೪.

೬೧. ಅದೇ, ೯, ಬದಾಮಿ ೬೯.

೬೨. EC(ರೈ.ಸಂ). Vol. VII, ಶಿಕಾರಿಪುರ ೧೦೪.

೬೩. ಮಂಜುನಾಥ್ ಸಿ.ಯು., ಶಾಸನಗಳು ಮತ್ತು ಕರ್ಣಾಟ ಸಂಸ್ಕೃತಿ, ಪು. ೨೫೯.

೬೪. ಕ.ವಿ.ಹಂ.ಶಾ.ಸಂ.೨, ಗಂಗಾವತಿ ೨.
೬೫. ಅದೇ, ೧೦, ಬಿಜಾಪುರ ೩೮.
೬೬. ಕೂಡಲೀ ಶೃಂಗೇರಿ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಿಲೀಯ ಅರ್ಥಶಾಸ್ತ್ರ, ಪು. ೧೭೭.
೬೭. ಅದೇ, ಪು. ೧೭೮.
೬೮. EC. Vol. VIII, ಅರಕಲಗೂಡು ೩೯.
೬೯. SII. Vol. XXVII, ೩೪೧.
೭೦. EC(ರೈ.ಸಂ). Vol. XI, ದಾವಣಗೆರೆ.
೭೧. ಅದೇ, IX, ಬೆಂಗಳೂರು ೬.
೭೨. ಅದೇ, ದೊಡ್ಡಬಳ್ಳಾಪುರ ೩೧.
೭೩. K. l. Vol. lll ಭಾಗ. l, ೧೪.
೭೪. EC(ರೈ.ಸಂ). Vol.VII, and VIII, ಶಿವಮೊಗ್ಗ ೩೩೪.
೭೫. ಅದೇ, ೫೮೨.
೭೬. EC. Vol. VIII, ಹೊಳೆನರಸೀಪುರ ೪೨.
೭೭. ಅದೇ, XIII, ಶಿವಮೊಗ್ಗ ೫೮.
೭೮. EC(ರೈ.ಸಂ). Vol. XI, ದಾವಣಗೆರೆ ೨೦.
೭೯. ಕ.ವಿ.ಹಂ.ಶಾ.ಸಂ.೧, ಹರಪನಹಳ್ಳಿ ೫೨.
೮೦. EC(ರೈ.ಸಂ). Vol. VII, ಶಿಕಾರಿಪುರ ೧೧೮.
೮೧. ಕ.ವಿ.ಹಂ.ಶಾ.ಸಂ.೨, ಯಲಬುರ್ಗ ೩೯.
೮೨. ಅದೇ, ೯, ಹುನಗುಂದ ೧೨೭.
೮೩. EC. Vol. VIII, ಹೊಳೆನರಸೀಪುರ ೯೭.
೮೪. ಅದೇ, ಅರಕಲಗೂಡು ೧೫.
೮೫. ಅದೇ, Xll, ಕಡೂರು ೬೪.
೮೬. ಅದೇ, ೬೭.
೮೭. ಅದೇ, Xl ಮೂಡಗೆರೆ ೧೬.
೮೮. ಅದೇ, ೮೯.
೮೯. ಮಂಜುನಾಥ್ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೨೬೩-೨೬೪.
೯೦. EC. Vol. lX, ಬೇಲೂರು ೫೫.
೯೧. ಅದೇ, X, ಅರಸೀಕೆರೆ ೧೬೧.
೯೨. ಅದೇ, lX, ಬೇಲೂರು ೧೬೩.
೯೩. ಅದೇ, ೫೬೨.
೯೪. ಅದೇ, lV, ಯಳಂದೂರು.
೯೫. ಅದೇ, ಚಾಮರಾಜನಗರ ೩೦೩.
೯೬. ಅದೇ, ೪.

ಕಡಿಮೆ ಪ್ರಮಾಣದಲ್ಲಿಯಾದರೂ ಹೊಂದಿದ್ದರೆಂದು ತಿಳಿದುಬರುತ್ತದೆ. ಕ್ರಿ.ಶ. ೧೧೮೫ರ ಶಾಸನದಲ್ಲಿ ಬಡಗಿ, ಕಮ್ಮಾರರು ವೊಕ್ಕಲಲೊನ್ದು ಹೊರೆಯಮಂ ಹನ್ನಸುಂ ಧ್ಯಾನದಲು ಬಳ್ಳವನ್ನು ಸಂಕ್ರಮಣದಲು ಕಮ್ಮಟಕ್ಕೆ ಬಿಟ್ಟರೆಂದಿದೆ.[೮೯] ಕ್ರಿ.ಶ. ೧೧೮೯ರ ಶಾಸನದಲ್ಲಿ ಶ್ರೀ ಕುಮಾರ ಬೊಂತೇಶ್ವರ ದೇವರಿಗೆ ವ್ಯವಸಾಯಿಗಳೆನಿಸಿದ ಪೋಬುಳ್ಳದ ಜುವತ್ತೊಕ್ಕಲುಂ ವೊಕ್ಕಲಲೊಂದು ಮಾಡಹೊಜ್ ಬಣ್ಣಿಗೆಗೊಳಗಮಂ ಬಿಟ್ಟರ್ ಎಂದಿದೆ.[೯೦] ವೊಕ್ಕಲಿಗರು ತೆರಿಗೆಯನ್ನು ರಾಜ್ಯದ ಆದಾಯಕ್ಕೆ ಪಾವತಿಸುತ್ತಿದ್ದರು. ಈ ಹಿನ್ನಲೆಯಲ್ಲಿ ಕೃಷಿಕರ ದುಡಿಮೆ ರಾಜ್ಯದ ಆದಾಯಕ್ಕೆ ಒಂದು ಭಾಗವಾಗಿತ್ತು. ಇದಲ್ಲದೆ ಕೃಷಿಕರು ಜಿಪುಣತನದಿಂದ ಹಣಗಳಿಸಿ ಸಾಮಾಜಿಕ, ಧಾರ್ಮಿಕ ಕಾರ್ಯಗಳನ್ನು ಸಮಾಜದಲ್ಲಿ ನಿರ್ವಹಿಸುತ್ತಿದ್ದರು. ಕ್ರಿ.ಶ. ೧೧೧೫ರ ಶಾಸನವು ಮೇಣ್ಪೆಯ ಬರ್ಮಣ್ಣನು ಮಾಡಿದ ಕಾರ್ಯಗಳ ಬಗೆಗೆ ತಿಳಿಸುತ್ತದೆ. ಕೃಷಿಕರ ಸಂಪೂರ್ಣ ಜೀವನ ಚಿತ್ರಣವನ್ನು ಈ ಶಾಸನವು ಬಿಂಬಿಸುತ್ತದೆ.

ಪಡೆದಪೆವೆಂದು ನೆತ್ತಿಯ ಬೆಮರು ಮಿಡಿಯಿಂದಿಳಿವನ್ತುದುಕ್ಕದಲು
ದುಡಿಯುತಮಿರ್ಪ್ಪರಲ್ಲದೆ ಜಸಂಬಡೆವಲ್ಲಿಗೆ ಧರ್ಮ್ಮದಲ್ಲಿಗೇಂ
ಬಿಡುವರೆ ಪೊಂನನೊಕ್ಕಲಿಗರಮ್ಮಬಬಾಪ್ಪೆನೆ ವಿಷ್ಣುಗೇಹಮಂ
ನಿಡುವಣಿಯಲ್ಲಿ ಮಾಡಿಸಿದ ಮೇಣ್ಡೆಯ ಬರ್ಮ್ಮಣನನ್ತಿರೋರ್ವ್ವರುಂ॥
ಗಿಡಗಡಿದುರ್ತ್ತು ಬಿತ್ತಿ ಫಲಮಂ ಪಡೆದುಣ್ಣದೆ ಲಾಬಲೋಬದಿಂ
ಮಡಗಿ ಬಳಕ್ಕೆ ಗಾವಣಿಗೆ ಗಂಟಿಗೆ ಟೊಪ್ಪರವಿಟ್ಟುಕೊಳ್ವ
ನಿಗ್ಗಡಿ ನ್ರಿಪಜ್ಗತ್ತ ತೆತ್ತು ಬಜಿದಾಗಿ ಬೆಗಳ್ಮೊಗದಿಂದವಿರ್ಪ್ಪ
ಬೆಳ್ಗುಡಿಯರನೇಕೆ ಪೋಲಿಸುವೆ ಬರ್ಮ್ಮಣನೊಳು ಹಿತಧರ್ಮ
ಕಾರ್ಯ್ಮನೊಳ್॥ ತಾನುಣ್ಣದೆ ಪೆರಜಿರ್ಗ್ಗಿಕ್ಕದೆ ಪೇನಿಯಂ
ಪೆರ್ವ್ವಡುಕೆಯನಿಸಿ ಮಡಗದೆ ಧನಮಂ ಮಾನವರತ್ನಂ
ಬರ್ಮ್ಮಣನಾನಂದದೆ ವಿಷ್ಣುಭವನಮಂ ಮಾಡಿಸಿದಂ[೯೧]

ಈ ಶಾಸನದಲ್ಲಿ ರೈತರ ಸಂಪೂರ್ಣ ಜೀವನ ಚಿತ್ರಣ ಅನಾವರಣಗೊಂಡಿದ್ದು, ಎರಡು ಬಗೆಯ ರೈತನ ಬಗೆಗೆ ತಿಳಿಸುತ್ತದೆ. ಒಂದು ಕಡೆ ಕಷ್ಟದಿಂದ ದುಡಿದು ಬೆಳೆಯ ಲಾಭವನ್ನು ಪಡೆಯದೆ, ಬೆಲೆಯು ಇನ್ನಷ್ಟು ಹೆಚ್ಚುತ್ತದೆಂಬ ಆಸೆಯಿಂದ ಬೆಳೆದ ಬೆಳೆಯನ್ನು ಮುಗ್ಗಲು ಹಿಡಿಸಿ, ತೊಗಸೆಗಟ್ಟಿಸಿಕೊಂಡು ಹಾನಿಗೊಳಗಾಗುವ ರೈತ ಸಮೂಹ ಒಂದು ಕಡೆ. ಬೆಳೆಯನ್ನು ಸಮಯಕ್ಕೆ ಸರಿಯಾಗಿ ಮಾರಾಟ ಮಾಡಿ ತಾವು ಉಣ್ಣದೆ, ಬೇರೆಯವರಿಗೂ ನೀಡದೆ ಜಿಪುಣತನದಿಂದ ಜೀವನ ಸಾಗಿಸುವ ರೈತಸಮೂಹ ಮತ್ತೊಂದು ಕಡೆ ಈ ರೀತಿ ಕೂಡಿಟ್ಟು, ದೇವಾಲಯ ಮೊದಲಾದ ಧಾರ್ಮಿಕ, ಸಾಮಾಜಿಕ ಕಾರ್ಯಗಳಲ್ಲಿ ತೊಡಗಿದ ರೈತನ ಬಗೆಗೆ ಶಾಸನವು ಅಭಿವ್ಯಕ್ತಪಡಿಸುತ್ತದೆ. ಇಂದಿಗೂ ಈ ರೀತಿ ಹಣವನ್ನು ಕೂಡಿಟ್ಟು ಹರಕೆ ಮಾಡಿಕೊಂಡು ಹರಕೆ ತೀರಿಸುವ ರೈತಸಮೂಹ ಕಂಡುಬರುತ್ತದೆ. ತಿರುಪತಿ ತಿಮ್ಮಪ್ಪ ಮೊದಲಾದ ತಮ್ಮ ಕುದೈವಗಳಿಗೆ ರೈತರು ಹಣವನ್ನು ಮುಡುಪಿಟ್ಟು ವರ್ಷಂ ಪ್ರತಿ ಸಲ್ಲಿಸುವ, ದೇವಾಲಯ ಕಾರ್ಯಗಳನ್ನು ನಡೆಸಲು ದಾನದತ್ತಿ ನೀಡುವ, ಸಾಂಪ್ರದಾಯಿಕ ಧಾರ್ಮಿಕ ಅಂಶಗಳು ಇಂದಿಗೂ ಮುಂದುವರೆದುಕೊಂಡು ಬಂದಿದೆ. ಜೊತೆಗೆ ಸಾಲ ಮಾಡಿಯಾದರು ಯಾತ್ರೆಗಳನ್ನು ಮಾಡಿ, ಸಾಲದ ಬಡ್ಡಿಗೆ ಜೀತಕ್ಕೆ ದುಡಿಯುವ

ವರ್ಗವಾಗಿಯೂ ಸಹ ಈ ಸಮುದಾಯ ಕಂಡುಬರುತ್ತದೆ. ಈ ರೀತಿಯ ಧಾರ್ಮಿಕ ನಂಬಿಕೆಗಳು ತಳ ಸಮುದಾಯವೆಂದು ಕರೆಯಲ್ಪಡುವ ಕೃಷಿಕ ವರ್ಗದವರ ಮನಸ್ಸಿನಲ್ಲಿ ಬೇರೂರಿವೆ.

ರಾಜ್ಯದ ಆದಾಯಕ್ಕೆ ಕೃಷಿಕರು ತೆರಿಗೆಯನ್ನು ಕೊಡುತ್ತಿದ್ದರು. ಶಾಸನಗಳು ಕೆಲವು ತೆರಿಗೆಗಳ ಜೊತೆಗೆ ಒಕ್ಕಲುದೆಱೆಯನ್ನು ಉಲ್ಲೇಖಿಸುತ್ತವೆ. ಜೊತೆಗೆ ದೇವಾಲಯ ಮೊದಲಾದವುಗಳಿಗೆ ಇಂತಿಷ್ಟು ಪಡಿಯನ್ನು ಕೃಷಿಕರು ನೀಡುತ್ತಿದ್ದರು. ಕ್ರಿ.ಶ. ೯೭೭ರ ಶಾಸನದಲ್ಲಿ ಒಕ್ಕಲೊಳೊನ್ದು ಪೊಱೆಯುಂಕಯುಂ ಪದಿರ್ಕೊಳಂ ಭತ್ತಮುಂ ಮೀಸಲುಂ ಬಿಳಿವತ್ತಮುಂ ಸಲ್ವದು ಎಂದಿದೆ.[೨] ಚಿಕ್ಕೇಶ್ವರ ದೇವರಿಗೆ ಈ ದಾನ ನೀಡಿದುದಾಗಿ ತಿಳಿದುಬರುತ್ತದೆ. ದೇವರ ಭೂಮಿಯನ್ನು ಉಳುಮೆ ಮಾಡಿದವರು ಮಾತ್ರವೇ ದೇವಾಲಯಕ್ಕೆ ಭೂಮಿಯ ಕೆಲವು ಉತ್ಪನ್ನವನ್ನು ನೀಡುವುದು ಸೀಮಿತವಾಗಿರಲಿಲ್ಲ. ಊರಿನ ಎಲ್ಲ ಒಕ್ಕಲಿಗರೂ ಸುಗ್ಗಿಯಲ್ಲಿ ದೇವಾಲಯಕ್ಕೆ ಇಂತಿಷ್ಟು ಪಡಿಸಲ್ಲಿಸುವ ಕ್ರಮ ಇಂದಿಗೂ ರೂಢಿಯಲ್ಲಿದೆ. ಜೊತೆಗೆ ಆಯಗಾರಿಕೆ ಪದ್ಧತಿಯಲ್ಲಿ ಈ ರೀತಿ ಪಡಿ ಸಲಿಸುವ ಮೂಲಕ ದೇವಾಲಯಕ್ಕೆ ಆಯ ಕೊಡುವ ಕ್ರಮ ಬೆಳೆದು ಬಂದಿದೆ.

ಭೂಮಾಲೀಕ ಕೃಷಿಕರು ಕೆರೆ ನಿರ್ಮಾಣ ಮತ್ತು ದೇವಾಲಯಗಳ ದೈನಂದಿನ ಕಾರ್ಯ ಮೊದಲಾದ ಸಾಮಾಜಿಕ, ಧಾರ್ಮಿಕ ಕಾರ್ಯಗಳಿಗೆ ದಾನ ನೀಡಿರುವುದು ಕಂಡುಬರುತ್ತದೆ. ಅಧಿಕಾರಿ ವರ್ಗದವರು ಹೊಂದಿದಷ್ಟು ಭೂಮಿಯನ್ನು ಇವರು ಹೊಂದಿಲ್ಲವಾದರೂ ಸಣ್ಣ ಪ್ರಮಾಣದಲ್ಲಿ ಆದರೂ ಭೂಮಿ ಹೊಂದಿದವರು ಆಗಿರುತ್ತಾರೆ. ಈ ಮೂಲಕ ಸಮಾಜದ ಸಾಮಾಜಿಕ, ಧಾರ್ಮಿಕ ಕಾರ್ಯಗಳಿಗೆ ದಾನ ನೀಡಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೪೨ರ ಶಾಸನದಲ್ಲಿ ಯಾದವ ಸಿಂಘನು ಕರೆಕಟ್ಟಿಸಿದ್ದನ್ನು ತಿಳಿಸುತ್ತದೆ.[೩] ಬೊಪ್ಪಯ್ಯ ಎಂಬುವವನು ಬಮ್ಮಯ್ಯನಿಂದ ಭೂದಾನ ಪಡೆದು ಅರವಂಟಿಗೆ ಕಟ್ಟಿದನೆಂದಿದೆ.[೪] ಕ್ರಿ.ಶ. ೧೧೨೬ರ ಬಾಗಳಿ ಶಾಸನವು ಚಿಕ್ಕ ದೇವಿಮಯ್ಯನು ಎಡೆವ ಬರಯಣ್ಣನಿಗೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ.[೫] ಕ್ರಿ.ಶ. ೧೦೬೮ರ ಶಿರೂರು ಶಾಸನದಲ್ಲಿ ಗೌರಬ್ಬೆಯ ಗಂಡ ನಿಂಬಕುಳದ ದೇವರಾಯ ತೆರಿಗೆ ರಹಿತ ಭೂಮಿಯನ್ನು ದಾನ ಬಿಟ್ಟನೆಂದಿದೆ.[೬] ಕ್ರಿ.ಶ. ೧೧೨೮ರ ಮಂಕಣಿ ಶಾಸನವು ಸಾದೇವನೆಂಬುವವನು 'ಪಿರಿದಾಗಿ ನೆರಪಿದ್ಯೆನೂರ್ವರಿಗಿತ್ತಂ ಭೂಮಿದಾನಮಂ'[೭] ಎಂದಿದೆ. ಈ ಅಂಶಗಳು ಸಾಮಾನ್ಯ ಜನತೆಯೂ ಸಹ ಭೂದಾನದ ಕಾರ್ಯಗಳಲ್ಲಿ ನಿರತರಾಗಿದ್ದರು ಎಂಬುದನ್ನು ತಿಳಿಸುತ್ತವೆ.

ಪ್ರಾಚೀನ ಕೃಷಿಕರು ಭೂಮಿಯಲ್ಲಿ ಶ್ರಮವಹಿಸಿಯೇ ದುಡಿಯಬೇಕಿತ್ತು. ಇಂದಿನಂತೆ ಯಾವ ವಿಧದ ವೈಜ್ಞಾನಿಕ ಉಪಕರಣಗಳಿರಲಿಲ್ಲ. ಪಾರಂಪರಿಕ ಜ್ಞಾನದ ಮೂಲಕ ಶ್ರಮದ ಬದುಕಿನೊಂದಿಗೆ ನಿರಾಯಾಸವಾಗಿ ದುಡಿಯುತ್ತಿದ್ದರು. ಇದಕ್ಕೆ ಪ್ರಮುಖ ಕಾರಣ ಕೃಷಿ ಬದುಕು ಅವರ ಜೀವನ ವಿಧಾನವಾಗಿತ್ತು. ಅವರ ನಿತ್ಯದ ಚಟುವಟಿಕೆಗಳು ಕೃಷಿಯೊಂದಿಗೆ ಮಿಳಿತಗೊಂಡ ಕಾರಣಕ್ಕಾಗಿ ಕೃಷಿ ಬದುಕು ಅವರಿಗೆ ನಿರಾಯಾಸದಾಯಕವಾಗಿತ್ತು.

ಕೃಷಿಕರು ಶ್ರಮವಹಿಸಿ ದುಡಿದ ಉತ್ಪನ್ನವು ಸಮಾಜದ ಎಲ್ಲ ಜನರ ಅನುಭೋಗದ ಜೀವಧಾರೆಯ ಭಾಗವಾಗಿತ್ತು. ಕೃಷಿಕರು ಶ್ರಮವಹಿಸಿ ದುಡಿಯುವುದು ಮಾತ್ರವಲ್ಲ ಹೀಗೆ ದುಡಿದ ಉತ್ಪನ್ನದಿಂದ ಬರುವ ಆದಾಯದಲ್ಲಿ ತೆರಿಗೆಯನ್ನು ಪಾವತಿಸಬೇಕಿತ್ತು. ಈ ಕಾರಣದಿಂದಾಗಿ ಕೃಷಿಕ ಆದಾಯದಿಂದ ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುವ ತೆರಿಗೆಗೆ ನೀಡಿದ ಪ್ರಾಮುಖ್ಯತೆ ಅವರ ಶ್ರಮಕ್ಕೆ ದೊರೆತಿರುವುದು ಕಂಡುಬಂದಿರುವುದಿಲ್ಲ. ಉಳ್ಳವರ ಅರಸಕೇಂದ್ರಿತ ಅಧ್ಯಯನದ ನೆಲೆಯಲ್ಲಿ ಸಾಗಿದ ಅಧ್ಯಯನಗಳು ಚರಿತ್ರೆಯಲ್ಲಿ ಕೃಷಿಕನ ಶ್ರಮವನ್ನು ಗೌಣವಾಗಿಸಿ ತೆರಿಗೆ ಪಾವತಿಸುವ ಸರಕಾಗಿ ಕೃಷಿಕರನ್ನು ಪರಿಭಾವಿಸಿರುವುದು ತಿಳಿದುಬರುತ್ತದೆ.

**ಭೂರಹಿತ ಕೃಷಿ ಕಾರ್ಮಿಕರು:** ಭೂಮಿಯನ್ನು ಹೊಂದಿರದ, ಅಧಿಕಾರ ವರ್ಗ ಮತ್ತು ಇನ್ನಿತರ ಶ್ರೀಮಂತವರ್ಗದವರ ಭೂಮಿಯಲ್ಲಿ ಭೂಮಿಯನ್ನು ಗೇಣಿಗೆ ಪಡೆದು ದುಡಿಯುವ ವರ್ಗವಿದು. ಬ್ರಹ್ಮದೇಯ, ದೇವದಾನ ಮೊದಲಾದ ದಾನದ ಭೂಮಿಯಲ್ಲಿ ತಮ್ಮ ಹೊಟ್ಟೆಪಾಡಿಗಾಗಿ ದುಡಿಯುವ ವರ್ಗವಿದು. ಭೂ ಆರ್ಥಿಕ ಅರ್ಥವ್ಯವಸ್ಥೆಯಲ್ಲಿ ದಾನದ ಭೂಮಿಯನ್ನು ಉಳುವ ಮೂಲಕ ಹೆಚ್ಚುವರಿ ಉತ್ಪಾದನೆಗೆ ಕಾರಣವಾದವರಿವರು. ಬಸವಣ್ಣನವರ ಒಂದು ವಚನದ ಸಾಲುಗಳನ್ನು ಭೂರಹಿತ ಕೃಷಿ ಕಾರ್ಮಿಕರಿಗೆ ಅನ್ವಯಿಸಬಹುದಾಗಿದೆ.

ಕಾಯದ ಕಳವಳಕ್ಕಂಜಿ ಕಾಯಯ್ಯ ಎನ್ನೆನು

ಜೀವನೋಪಾಯಕ್ಕಾಗಿ ಈಯಯ್ಯ ಎನ್ನೇನು

ಉರಿಬರಲಿ ಸಿರಿಬರಲಿ ಬೇಕು ಬೇಡನ್ನೆನಯ್ಯಾ......

ಎಂಬ ವಚನದ ಸಾಲುಗಳು ಶ್ರಮವನ್ನು ತಮ್ಮ ಜೀವನದ ಉಸಿರಾಗಿಸಿಕೊಂಡು ವಾಸ್ತವದ ನೆಲೆಯಲ್ಲಿ ಬದುಕಿದ ವರ್ಗ ಈ ಕೃಷಿಕ ವರ್ಗವಾಗಿದೆ ಎಂಬುದನ್ನು ಸೂಚಿಸುತ್ತವೆ. 'ಆಡಳಿತದ ವಿಕೇಂದ್ರೀತ ವ್ಯವಸ್ಥೆಯಿಂದಾಗಿ ಸಾಮಂತ ಅರಸರ ಪ್ರಾಬಲ್ಯತೆ, ರಾಜಕೀಯ ಪ್ರೇರಿತ ನೂತನ ಸಂಬಂಧಗಳು, ಬ್ರಾಹ್ಮಣರು, ಧಾರ್ಮಿಕ ಸಂಸ್ಥೆಗಳು, ಅಧಿಕಾರಿ ವರ್ಗದವರಿಗೆ ನೀಡಿದ ಭೂದಾನಗಳು, ಭೂಮಾಲೀಕ ಮಧ್ಯವರ್ತಿಗಳ ಹುಟ್ಟು ಮತ್ತು ಅವರ ಸ್ವತಂತ್ರ ಕಾರ್ಯನಿರ್ವಹಣೆ,[೮೮] ಮೊದಲಾದವುಗಳು ಉತ್ಪಾದನ ವರ್ಗದ ಶೋಷಣೆಗೆ ಕಾರಣವಾದವು. ಅರಸ ಮತ್ತು ರೈತರ ಮಧ್ಯೆ ಕೊಂಡಿಯಾಗಿ ಕಾರ್ಯನಿರ್ವಹಿಸಿದ ಭೂಮಾಲೀಕ ವ್ಯವಸ್ಥೆಯು ಸಮಾಜದಲ್ಲಿ ಕೃಷಿಕ ಸಮುದಾಯದ ಅಂತರವನ್ನು ಕಾಯ್ದುಕೊಳ್ಳುವಂತೆ ಮಾಡಿತು. ಇದರಿಂದಾಗಿ ಸಮಾಜದ ಏಣಿಶ್ರೇಣಿ ವ್ಯವಸ್ಥೆಯಲ್ಲಿ, ಕೃಷಿಕರು ತಳಸಮುದಾಯದ ಊಳಿಗದವರಂತೆ ಕಾರ್ಯನಿರ್ವಹಿಸಿಕೊಂಡು ಬಂದರು. 'ಈ ವರ್ಗವು ಬೃಹತ್ತಾದ ವರ್ಗವೆಂದು ಪರಿಗಣಿತವಾಗಿದ್ದು, ಮೌರ್ಯರ ಅಂತಾರ್ರಚನೆ, ಸಾಮಾಜಿಕ ಹಾಗೂ ಸೈನ್ಯ ಸಂಬಂಧಿತ ಚಟುವಟಿಕೆಗಳನ್ನು ನಿರ್ವಹಿಸಿದರು.[೯೯] ಮಳೆಗಾಲದಲ್ಲಿ ಕೃಷಿ ಭೂಮಿಯಲ್ಲಿ ದುಡಿದು, ಬೇಸಿಗೆಯ ಸಂದರ್ಭದಲ್ಲಿ ಅರಸ ಮತ್ತು ರಾಜ್ಯಕ್ಕಾಗಿ ಯುದ್ಧ ಮಾಡುವ ಸೈನಿಕವೃತ್ತಿ ಎರಡನ್ನು ಕೃಷಿಕವರ್ಗ ನಿಭಾಯಿಸಿರುವುದು ಇದರಿಂದ ತಿಳಿಯುತ್ತದೆ. ಆದರೆ ರೈತಾಪಿ ವರ್ಗಗಳು ದಂಗೆಯೇಳುವುದನ್ನು ತಡೆಯಲು ಕೃಷಿಕರಿಗೆ ಶಸ್ತ್ರಾಸ್ತ್ರಗಳನ್ನು ನೀಡುತ್ತಿರಲಿಲ್ಲ ಎನ್ನಲಾಗಿದೆ. 'ಬೌದ್ಧಗ್ರಂಥಗಳು ರೈತರ ಮೇಲೆ ದಬ್ಬಾಳಿಕೆಗಳು ನಡೆಯುತ್ತಿದ್ದವು ಎನ್ನುವಾಗ ರಾಜನು ಗಡಿಪಾರಾಗುವ ಸನ್ನಿವೇಶವನ್ನು ಉಲ್ಲೇಖಿಸಿವೆ. ದಂಗೆ ಹೇಳುವುದಕ್ಕಿಂತ ಪಕ್ಕದ ರಾಜ್ಯಗಳಿಗೆ ವಲಸೆ ಹೋಗವುದು ಉತ್ತಮವೆಂದು ಇವು ತಿಳಿಸಿವೆ.'[೧೦೦] ಇದರಿಂದಾಗಿ ರೈತಾಪಿ ವರ್ಗವು ತಮಗೆ ಶೋಷಣೆ ಅತಿಯಾದಾಗ ದಂಗೆ ಎದ್ದಿರುವ ಸಾಧ್ಯತೆಗಳಿವೆ. ಪ್ರಭುತ್ವವು ಅಂತಹ ಸಂದರ್ಭವನ್ನು ನಿಭಾಯಿಸಲು, ಪ್ರಭುತ್ವ ಯಶಸ್ವಿಯಾಗಲು ತಕ್ಕಸಿದ್ಧತೆ ಮತ್ತು ಪರಿಹಾರೋಪಾಯಗಳನ್ನು ಕಂಡುಕೊಂಡಿತ್ತು ಎಂಬುದು ತಿಳಿದುಬರುತ್ತದೆ. ಆದರೆ ಅರಸ ಕೇಂದ್ರಿತ ಅಧ್ಯಯನದ ನೆಲೆಯಲ್ಲಿ ಇಂತಹ ಅಂಶಗಳು ತೆರೆಮರೆಗೆ ಸರಿದಿವೆ. ಮೊದಲೆ ಉಲ್ಲೇಖಿಸಿದಂತೆ ಅಶೋಕನು ಕಳಿಂಗ ಯುದ್ಧದಲ್ಲಿ ಸೆರೆಯಾದ ಸೈನಿಕರನ್ನು ಬೀಡು ಭೂಮಿಯಲ್ಲಿ ದುಡಿಯಲು ಬಳಸಿದನೆಂಬ ಅಂಶಗಳು ಭೂರಹಿತ ಕೃಷಿಕನ ದುಡಿಮೆಯನ್ನೆ ಸೂಚಿಸುತ್ತವೆ.

'ಕ್ರಿ.ಶ. ೨ನೆಯ ಶತಮಾನದ ತಮಿಳು ಪ್ರಾಚೀನ ಕೃತಿಯಾದ ಮಣಿ ಮೇಖಲೈಯಲ್ಲಿ ಇಳಂಗೋ ಅಡಿಗಳ ಸೂಚಿಸುವಂತೆ ಭೂಮಿಯ ಒಡೆಯರೂ, ಸೇನಾ ವೃತ್ತಿಯವರೂ ಆದ ವೆಲ್ಲಾಳರು ಸ್ವತಃ ತಾವು ಕೃಷಿ ಮಾಡುತ್ತಿರಲಿಲ್ಲ. ಕೂಲಿಯವರಿಂದ ಮಾಡಿಸುತ್ತಿದ್ದರು ಎಂದಿದೆ.[೧೦೧]

ವಿಲ್ ಡ್ಯುರಾಂಟ್‌ರವರು ತಮ್ಮ ಕೃತಿ ಓರಿಯಂಟಲ್ ಹೆರಿಟೇಜ್‌ನಲ್ಲಿ ಯುದ್ಧಕಾಲದಲ್ಲಿ ಸೆರೆ ಹಿಡಿದವರನ್ನು ಗುಲಾಮಗಿರಿ ಮಾಡಿ ಕೃಷಿಗೆ ಬಳಸುವ ವಿಧಾನ ಜಗತ್ತಿನಲ್ಲೆಲ್ಲ ಬೆಳೆಯಿತು. ಕೃಷಿಯು ನಾಗರೀಕತೆಯ ಹುಟ್ಟಿಗೆ ಕಾರಣವಾದಂತೆ ಖಾಸಗಿ ಆಸ್ತಿಗೆ ದಾರಿ ಮಾಡಿಕೊಟ್ಟು ಗುಲಾಮಗಿರಿಗೂ ಅವಕಾಶ ಮಾಡಿಕೊಟ್ಟಿತು ಎಂದಿದ್ದಾರೆ.[೧೦೨] ಇದರಿಂದ ಒಂದೆಡೆ ಸೆರೆ ತಂದವನ ರಕ್ಷಣೆಯ ಮೂಲಕ ಆರ್ಥಿಕ ಉತ್ಪನ್ನವನ್ನು ಹೆಚ್ಚಿಸುವ ಉದ್ದೇಶ ಸಾಧನೆ, ಅವನ ಜೀವಿತಕ್ಕೆ ಭರಿಸುವ ವೆಚ್ಚದ ಸಂಪಾದನೆ ಮತ್ತು ಇದರಿಂದ ಕೃಷಿ ಕಾರ್ಮಿಕರ ಪೂರೈಕೆಯಾಗುತ್ತಿತ್ತು. ಇದನ್ನು ಗುಲಾಮಗಿರಿ ಎನ್ನುವುದಕ್ಕಿಂತ ದುರ್ಬಲರ ಮೇಲೆ ಪ್ರಬಲರು ಸಾಧಿಸಿದ ಮೇಲುಗೈ ಎಂದು ಅರ್ಥೈಸಬಹುದಾಗಿದೆ.

ಕೊಸಾಂಬಿಯವರು ಮಗದ ಚರಿತ್ರೆಯಲ್ಲಿ ವರ್ಗ ನಿರ್ಮಾಣದ ಚರಿತ್ರೆಯನ್ನು ಕುರಿತು ತಿಳಿಸುತ್ತಾರೆ. ಕೃಷಿಕರು ಮತ್ತು ವಣಿಕರನ್ನು ಸಾಮಾನ್ಯರೆಂದೇ ಪರಿಗಣಿಸಬೇಕೆಂದಿಲ್ಲ. ನೇಗಿಲು ಹಿಡಿದು ಹೊಲವನ್ನು ಉಳುವ ರೈತರೂ ಸಹ ಅಧಿಕ ಸಂಪತ್ತನ್ನು ಹೊಂದಿದ್ದರು. ಈ ಕಾಲದಲ್ಲಿ ಕೃಷಿಕರು ಮುಖ್ಯವಾಗಿ ವೈಶ್ಯರೇ ಆಗಿದ್ದರಿಂದ ಶೂದ್ರರು ಅವರಲ್ಲಿ ಕೂಲಿಗಳಾಗಿ ದುಡಿಯುತ್ತಿದ್ದರು. ಇಗಂದ ಮಾತ್ರಕ್ಕೆ ಅವರು ಭೂಸ್ವಾಮಿಗಳಾಗಿದ್ದರೆಂದು ಹೇಳಲಾಗುವುದಿಲ್ಲ. ಆಗಿನ್ನೂ ಭೂಮಿಯ ವಿಚಾರದಲ್ಲಿ ಸಮಷ್ಟಿ ಒಡೆತನದ ಕಲ್ಪನೆ ಇದ್ದಿತೇ ಹೊರತು ವ್ಯಕ್ತಿಯ ಒಡೆತನದ ಕಲ್ಪನೆ ಇರಲಿಲ್ಲ.[೧೦೩] ಸಮಷ್ಟಿ ಒಡೆತನದಲ್ಲಿ ದೊಡ್ಡ ಪ್ರಮಾಣದ ಭೂಮಿ, ಪಶುಸಂಪತ್ತು, ಕೃಷಿ ಸಂಪತ್ತು ಒಟ್ಟುಗೂಡಿತ್ತು.

'ಧರ್ಮಶಾಸ್ತ್ರಕಾರನು ಕೃಷಿಯು ಉತ್ತ ಭೂಮಿಯಲ್ಲಿ ಮುಂದುವರಿಯದೆ ಅರಣ್ಯ ಮತ್ತು ಬಂಜರು ಭೂಮಿಗಳನ್ನು ಉಳಲಾಗುತ್ತಿತ್ತು ಎಂಬ ಹಿನ್ನೆಲೆಯಲ್ಲಿ 'ಉಳುವವನಿಗೆ ಭೂಮಿ' ಎಂದು ತಿಳಿಸಿದ್ದಾನೆ[೧೦೪] ಆದರೆ ಈ ಉಕ್ತಿ ಎಲ್ಲಿಯವರೆಗೆ ರೂಢಿಯಲ್ಲಿತ್ತೆಂಬುದು ಪ್ರಶ್ನೆಯಾಗುತ್ತದೆ. ಕೃಷಿಯು ಲಾಭದಾಯಕ ವೃತ್ತಿಯಾಗುವವರೆಗೆ, ಆರ್ಥಿಕತೆಯ ಕಡೆಗೆ ಮುಖ ಮಾಡುವವರೆಗೆ ಈ ರೀತಿಯ ಬೆಳವಣಿಗೆ ಕಂಡುಬಂದಿರುವ ಸಾಧ್ಯತೆಗಳಿವೆ. ಆದರೆ ಆನಂತರದಲ್ಲಿ ಇದು ಬದಲಾದಂತೆ ಕಂಡುಬರುತ್ತದೆ. ರಾಜ್ಯದ ಅರಣ್ಯ, ಬಂಜರು ಮೊದಲಾದ ಭೂಮಿಗಳು ರಾಜನ ನಿಯಂತ್ರಣದಲ್ಲಿ ಇರುತ್ತಿದ್ದವು. ಇಂತಹ ಭೂಮಿಯನ್ನು ಉಳುಮೆ ಮಾಡುವ ರೈತರು ರಾಜನಿಗೆ ಸೇರಬೇಕಾದ ತೆರಿಗೆ ಮೊದಲಾದ ಕೃಷಿ ಉತ್ಪನ್ನದ ಇಂತಿಷ್ಟು ಭಾಗವನ್ನು ಸಲ್ಲಿಸಬೇಕಾಗಿತ್ತು. ಈ ಪ್ರಕ್ರಿಯೆಯು ಕ್ರಿ.ಶ. ೮ನೆಯ ಶತಮಾನದ ನಂತರ ಹೆಚ್ಚಾಗಿ ಕಂಡುಬರುತ್ತದೆ. ಕ್ರಿ.ಶ. ೭ನೆಯ ಶತಮಾನದ ಶಾಸನದಲ್ಲಿ ಪೈಂಗರ ಶ್ರೀಧರನು ಭೂತೇಶ್ವರ ಭಟಾರನಿಗೆ ೮ ಮತ್ತರು ಉತ್ತಮ(ಸದ್ಭೂತ) ಭೂಮಿಯನ್ನು ದಾನ ನೀಡಿದನು. ಇದನ್ನು ಉಳುಮೆ ಮಾಡಿ ಇದರ 'ಉತ್ಪನ್ನ ನೀಡದವರನ್ನು ದೇವಸ್ವದೋಷದಲ್ಲಿ ಸಿಕ್ಕವರೆಂದು ಶಾಸನವು ತಿಳಿಸುತ್ತದೆ.[೧೦೫] ಭೂರಹಿತ ಕೃಷಿಕರು ದೇವದಾನ, ಬ್ರಹ್ಮದೇಯ, ಭೂಮಾಲೀಕರ ಭೂಮಿಯನ್ನು ಗೇಣಿ ಪಡೆದು ಉಳುಮೆ ಮಾಡುತ್ತಿದ್ದರು. ಕ್ರಿ.ಶ. ೧೧೧೪–೧೫ರ ಶಾಸನವು ಕರಿಹಾಳ ಮುಕ್ಕುಪೆಯಲ್ಲಿ ಭೂಮಿಯ ಉಳುಮೆಗೆ ಸಂಬಂಧಿಸಿದ ನಿಯಮಗಳು ಮತ್ತು ಅದರ ಮೇಲೆ ವಿಧಿಸಿ ತೆರಿಗೆಯ ಬಗೆಗೆ ತಿಳಿಸುತ್ತದೆ.

ಮುಕ್ಕಪ್ಪೆಯ ಭಾಗಂ ಮೊಸದಟ್ಕೆ ಪ(೦)
ನ್ನೆರಡಱ ಭಾಗಂ ವರ್ಷಪ್ರತಿ
ಒನ್ದು ಭಾಗಂ ಇಳಿಯುತುಂ
ಬನ್ದು ಮುಕ್ಕಪ್ಪೆಯೊಳೆಲ್ಲಾ ಕಾಲಕ್ಕಂ ನಡುವುದು ಮಾಗೆ
ಕಿಸುಕಾಡು ಅಯ್ದನೆಯ ಭಾಗಂ.....[೧೦೬]

ಎಂದಿದೆ. ಕರಿಯಹಾಳ ಮುಕ್ಕಪ್ಪೆಯಲ್ಲಿ ಹೊಸದಾಗಿ ಉಳುವವರು ಹನ್ನೆರಡರ ಭಾಗದಲ್ಲಿ ವರ್ಷಕ್ಕೆ ಒಂದು ಭಾಗವು ಇಳಿಸಿಕೊಳ್ಳುವಂತೆ ನಿಗಧಿಪಡಿಸಿದ್ದನ್ನು ತಿಳಿಸಿದೆ. ಈ ಭಾಗದ ಇಳಿಕೆಯು ಕಿಸುಕಾಡ ನಾಡಿನಲ್ಲಿರುವಂತೆ ಅಯ್ದು ಭಾಗಕ್ಕೆ ನಿಗದಿಪಡಿಸಿದಂತೆ ಕಂಡುಬರುತ್ತದೆ.

ಕ್ರಿ.ಶ. ೯೨ರ ಶಾಸನದಲ್ಲಿ ಗಾವುಂಡರು ಮತ್ತು ಸೆಟ್ಟಿಯರು ಬ್ರಾಹ್ಮಣರಿಗೆ ಮತ್ತು ಪಂಚಮಠಗಳಿಗೆ ಭೂಮಿಯನ್ನು ನೀಡಿದರು. ಆ ಭೂಮಿಯನ್ನು ಉಳುವವರು ಕೊಡಬೇಕಾದ ತೆರಿಗೆಯನ್ನು ನಿರ್ದೇಶಿಸಿರುವುದು ಈ ಶಾಸನದಲ್ಲಿ ಉಲ್ಲೇಖಗೊಂಡಿದೆ. ಕಾಡಾಯಯಂ ನೋಡಿಯುಂ ಕೀಟಿಕೊಕ್ಕಲ್ ಪಸುಗೆಗೆ ಮೂವತ್ತು ಮತ್ತರುಮೊನ್ದು ತೋಂಟಯುಮಾಗೆ ಬಟಿಕ್ಕೆ ಪತ್ತಿ ಮೂವತ್ತೆರಡುಮನ್ತೆಪತ್ತಿಗರವಣಂ ಮೂಱು ಗದ್ಯಾಣಂ ಮಟ್ಟಿ ಪೊರಿಸಂಬಿಟ್ಟ ಮರ್ಯಾದೆ। ಎಂಟನೆಯ ಶ್ರಾಹೆಗೆ ಪತ್ತಿಗೆ ಮೂರು ಧರಣಂ ಮೂಱನೆಯ ಶ್ರಾಹೆಗೆ ತೆಱೆನಱಿದು ಮೂರು ಗದ್ಯಾಣಮಂತಿಱುವರೆಲ್ಲಾ ಕಾಲಕ್ಕಮಿದುವೆ ಮರ್ಯಾದೆ ಎಂದಿದೆ. ಅಲ್ಲದೆ ಶಾಸನ ಮುಂದುವರಿದು ಕೀಟಿಕೊಕ್ಕಲುಟ್ಟಬರಿಸಂ ಪಟ್ಟಿಮರ್ಯಾದೆ ಎರಡನೆಯ ಶ್ರಾಹೆಗೆ ಪದಿನಯ್ದರವೆ। ಮೂರನೆಯ ಶ್ರಾಹೆಗೆ ಪೂರ್ಬಸ್ಥಿತಿಯೊಳ್ಕೊರೆ ಎಂದಿದೆ. ಅಲ್ಲದೆ ಫಲವಾದ ಮಣ್ಣೆ ಅರುವಣವಿಲ್ಲವೆಂದು ತಿಳಿಸಿದೆ.[೧೦೭] ಕಾಡು ಮೊದಲಾದ ಭೂಮಿಯನ್ನು ಉಳುಮೆಗೆ ಒಳಪಡಿಸುವ ಮೊದಲವರ್ಷ ತೆರಿಗೆಯನ್ನು ಹಾಕುತ್ತಿರಲಿಲ್ಲ. ನಂತರ ಎರಡನೆಯ ವರ್ಷ ತೆರಿಗೆ ವಿಧಿಸಿ ಮೂರನೆಯ ವರ್ಷ ಸಾಗುವಳಿಯಾದ ಎಲ್ಲ ಭೂಮಿಗೆ ಅನ್ವಯವಾಗುವಂತೆ ಈ ಭೂಮಿಗೂ ತೆರಿಗೆ ವಿನಾಯಿತಿ ಇರಲಿಲ್ಲ. ಈ ಭೂಮಿಗೆ ತೆರಿಗೆ ಕಡ್ಡಾಯವಾಗಿತ್ತು. ಕಾಡು ಮೊದಲಾದ ಭೂಮಿಯನ್ನು ಭೂರಹಿತ ಕೃಷಿಕರೆ ಉಳುಮೆ ಮಾಡಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೧೫೫ರ ಶಾಸನದಲ್ಲಿ ಅಂಗಭೋಗಕ್ಕೆ ನಡೆದು ಬಂದ ಭೂಮಿಯನ್ನು ಚಾಲುಕ್ಯ ತ್ರಿಭುವನ ಮಲ್ಲನ ರಾಣಿ ಪದುಮಲದೇವಿಯು ಬಿಟ್ಟಳು. ಅಲ್ಲದೆ ಆ ಭೂಮಿಯ ಮೇಲಿನ 'ಊಳಿಗ ಮಾನ್ಯ ಭಾದೆಯನ್ನು ಬಿಟ್ಟಳು ಎಂದಿದೆ.[೧೦೮] ದೇವಾಲಯಕ್ಕೆ ದಾನ ನೀಡುವ ಭೂಮಿಯ ಮೇಲೆಯೂ ತೆರಿಗೆ ವಿಧಿಸುತ್ತಿದ್ದರೆಂಬುದು ಇದರಿಂದ ತಿಳಿದುಬರುತ್ತದೆ. ಇದನ್ನು ಉತ್ತು ತಿನ್ನುವವ ಆ ತೆರಿಗೆಯನ್ನು ಪಾವತಿಸಬೇಕಿತ್ತು. ಇಂತಹ ತೆರಿಗೆ(ಬಾಧೆ)ಯನ್ನು ರಾಣಿಯು ಮಾನ್ಯ ಮಾಡಿದವಳೆಂದು ಶಾಸನವು ತಿಳಿಸುತ್ತದೆ. ಭೂಮಿಯನ್ನು ಉಂಬಳಿಗೆ ಪಡೆಯುವ ರೈತರು ತೆರಿಗೆ ಪಾವತಿಸಿರುವ ಸಾಧ್ಯತೆಗಳಿವೆ. ಕ್ರಿ.ಶ. ೧೨೬ರ ಶಾಸನದಲ್ಲಿ ದವಸಾಯದಲು ಕೊಟ್ಟ ಗದ್ಯಾಣಮೆರಡು ಅಂತು ಗದ್ಯಾಣಳನ್ನು ಕೇಣಿವೊಳಗೆಳಿಹಿ ಪ್ರತಿಪಾಳಿಸುವರು ಎಂದಿದೆ.[೧೦೯] ಈ ಶಾಸನವನ್ನು ಗಮನಿಸಿದರೆ ಭೂಮಿಯನ್ನು ಗೇಣಿಗೆ ಉಳುವವರು ತೆರಿಗೆ ಕಟ್ಟಬೇಕಿತ್ತು ಎಂಬುದು ತಿಳಿಯುತ್ತದೆ. ಇದೇ ಸ್ಥಳದ ಕ್ರಿ.ಶ. ೧೨೬ರ ಶಾಸನವು ಪಾಂಡ್ಯನಾಡ ಪಡಿಕೇಣಿಯ ಸ್ಥಳದ ಕೋಗಳಿನಾಡ ದವಸಾಯದೊಳಗೆ ಪ್ರತಿ ವರ್ಷ ನಿಬಂಧಿಯಾಗಿ ಸಲುವ ಗದ್ಯಾಣ ೧ ಪಣ ೫ ಇದನ್ನು 'ಆವಧಿಕಾರಿ ಬಂದಡಂ ಕೇಣಿವೊಳಗೆಳಹಿ'[೧೧೦] ಈ ಶಾಸನವು ಗೇಣಿ ಭೂಮಿಯನ್ನು ಉಳುಮೆ ಮಾಡುವವರು ಸಲ್ಲಿಸುವ ಪಡಿಯನ್ನು ಕುರಿತು ತಿಳಿಸುತ್ತದೆ. ಕ್ರಿ.ಶ. ೯೩೧ರ ಶಾಸನದಲ್ಲಿ ಪಡಿಗನೊಂಬ ಎಂಬುವವನು ಊರ ದಾಳಿಯಲ್ಲಿ ಸತ್ತಾಗ ಕೋಗಳಿಯನ್ನು ಆಳುತ್ತಿದ್ದ ಅಯ್ಯಪಯ್ಯನು ಸತ್ತವರ ಕುಟುಂಬಕ್ಕೆ ನೀರ್ಮಣ್ಣು ಗದ್ದೆ ಮತ್ತು ಹೊಲವನ್ನು ದಾನ ನೀಡಿದನೆಂದಿದೆ.[೧೧೧] ಪಡಿಗನೊಂಬ ಎಂಬ ಹೆಸರನ್ನು ಗಮನಿಸಿದರೆ ಕೃಷಿ ಕಾರ್ಯವನ್ನು ನಿರ್ವಹಿಸಿ ಆ ಮೂಲಕ ಅದರ ಉತ್ಪನ್ನವನ್ನು ಪಡಿಸಲಿಸುತ್ತಿದ್ದ ಕೃಷಿಕನಿರುವ ಸಾಧ್ಯತೆಗಳಿವೆ. ಭೂರಹಿತ ಕೃಷಿಕರು ಭೂಮಿಯಲ್ಲಿ ದುಡಿಯುವುದರೊಂದಿಗೆ, ಊರದಾಳಿ ಮೊದಲಾದ ಯುದ್ಧಗಳಲ್ಲಿ ಹೋರಾಡುತ್ತಿದ್ದರೆಂದು ಇದರಿಂದ ತಿಳಿದುಬರುತ್ತದೆ.

ಅಧಿಕಾರಿವರ್ಗ ಮೊದಲಾದ ಶ್ರೀಮಂತರ ಭೂಮಿಯಲ್ಲಿ ಕೃಷಿಕಾರ್ಯ ಮಾಡುವುದಲ್ಲದೆ, ಕೂಲಿಗಾಗಿ ಕೆಲವು ವೃತ್ತಿಗಳನ್ನು ಕೃಷಿಕಾರ್ಯ ಸಂಬಂಧಿಯಾಗಿಯೇ ಕೆಲವರು ನಿರ್ವಹಿಸುತ್ತಿದ್ದರು. ಕ್ರಿ.ಶ. ೧೧೩೬ರ ಶಾಸನವು ತೋಟಿಗರು, ಕೊನೆಕಾರರು, ದೇವರಿಗೆ ಉಳಿಗೆಪಾಗ, ಏಣಿಗಪಾಗ ಬಿಟ್ಟರೆಂದು ತಿಳಿಸುತ್ತದೆ.[೧೧೨] ತೋಟಿಗರೆಂದರೆ ತೋಟದಲ್ಲಿ ಕೆಲಸ ಮಾಡುವವರು. ಇವರು ಬ್ರಹ್ಮದೇಯ, ದೇವದಾನ, ಕೆರೆಗೆ ದಾನವಾಗಿ ಬಿಟ್ಟ ತೋಟಗಳಲ್ಲಿ ಕೆಲಸ ಮಾಡುತ್ತಿದ್ದರು. ಇದಕ್ಕೆ ಪ್ರತಿಯಾಗಿ ಇವರಿಗೆ ಪ್ರತ್ಯೇಕವಾಗಿ ಭೂಮಿಯನ್ನು ನೀಡುತ್ತಿದ್ದರು. ಅದನ್ನು 'ತೋಟಿಗ ಸಮಯ' ಎಂದು ಕರೆಯಲಾಗುತ್ತದೆ. ಈ ರೀತಿ ಕೆಲಸ ನಿರ್ವಹಿಸಿದ್ದಕ್ಕೆ ಉಂಬಳಿಯಾಗಿ ಕೊಡುವ ಭೂಮಿಯ ಆದಾಯದಲ್ಲಿ ಉಳಿಗಪಾಗವನ್ನು ತೋಟಿಗರು ಕೊಡಬೇಕಾಗಿತ್ತೆಂದು ಇಲ್ಲಿ ತಿಳಿದುಬರುತ್ತದೆ. ಕ್ರಿ.ಶ. ೧೦೬೯ರ ಶಾಸನವು ತೋಟ ಮಾಡುವವನನ್ನು ಮಾಲಗಾರ ಎಂದು ಕರೆದಿದೆ.[೧೧೩] ದೇವರ ಹೂದೋಟ ನೋಡಿಕೊಳ್ಳುವವರು ಅಥವಾ ಕೆಲಸ ಮಾಡುವವರು ಮಡಿಯಲ್ಲಿ ಹೂವುಗಳನ್ನು ದೇವರಿಗೆ ಅರ್ಪಿಸಬೇಕೆಂಬ ನಿಯಮವು ಈ ಶಾಸನದಿಂದ ತಿಳಿದುಬರುತದೆ. ಅಡಕೆ ತೋಟಗಳಲ್ಲಿ ಅಡಿಕೆಯನ್ನು ಕೊಯ್ಯುವವರಿಗೆ 'ಕೊನೆಕಾರ' ಎಂದು ಕರೆಯುವರು. ಇವರಿಗೂ ಸಹ ಊರಿನ ಸಮಸ್ತ ತೋಟದ ಬೆಳೆಗಾರರು ಉಂಬಳಿಯಾಗಿ ಭೂಮಿ ನೀಡಿರುವ ಸಾಧ್ಯತೆಗಳಿವೆ. ಇಂದಿಗೂ ಈ ರೀತಿಯ ವ್ಯವಸ್ಥೆ ಕಂಡುಬರುವಂತೆ, ಈ ಕೊನೆಕಾರರಿಗೆ ಕೂಲಿಯೊಂದಿಗೆ ಕೊಯ್ಲಿನ ಕೊನೆಯಲ್ಲಿ ಪ್ರತಿ ತೋಟದವರು ಆಯದೋಪಾದಿಯಲ್ಲಿ, ತೋಟದ ಪ್ರಮಾಣಕ್ಕೆ ಅನುಗುಣವಾಗಿ ಅಡಕೆಯನ್ನು ಕೊಡುವುದಿದೆ. ಈ ಅಡಕೆಯನ್ನು ಪಡೆಯಲು ಕೊನೆಕಾರರು ತೋಟದ ಮಾಲೀಕನ ಬೆಳೆಯನ್ನು ಕೊಯ್ದ ನಂತರ ಆ ಬೆಳೆಯ ಸಾಗಾಣಿಕೆಗೆ ಸಹಾಯ ಮಾಡಬೇಕು. ಅಡಕೆ ಕೊನೆ ಬಡಿಯಬೇಕು. ರಾಶಿ ಹಾಕಬೇಕು ಈ ಎಲ್ಲ ಕೆಲಸಗಳನ್ನು ನಿರ್ವಹಿಸಿದರೆ ಅವನಿಗೆ ಸಲ್ಲಬೇಕಾದ ಆಯದ ಅಡಕೆಯನ್ನು ಕೊಡುವ ವಾಡಿಕೆ ರೂಢಿಯಲ್ಲಿದೆ. ಇದು ಪ್ರಾಚೀನ ಕಾಲದಲ್ಲಿಯೂ ಅನ್ವಯವಾದಂತೆ ಕಂಡುಬರುತ್ತದೆ. ಇಂತಹ ಕೊನೆಕಾರರು ಏಣಿಗಪಾಗವನ್ನು ಕೊಡಬೇಕೆಂದು ಶಾಸನಗಳು ತಿಳಿಸಿರುವುದು ಕಂಡುಬರುತ್ತದೆ. ಕೆಲವೊಮ್ಮೆ ದೇವರ ಭೂಮಿಯನ್ನು ಉಳುಮೆ ಮಾಡುವ ರೈತನಿಗೆ ತೆರಿಗೆಯನ್ನು ಮಾನ್ಯವಾಗಿ ಬಿಟ್ಟಂತೆಯೂ ಶಾಸನವೊಂದು ತಿಳಿಸುತ್ತದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನವೊಂದು 'ದೇವರಕೆಯಿ ಮಾಡುವ ಒನ್ದುಕ್ಕಲಿಗೆ ಸರ್ವಬಾಧಾ ಪರಿಹಾರ ಎಂದಿದೆ.'[೧೧೪] ರೈತರು ಹಾಗಾಗ ಪ್ರಕೃತಿಯಲ್ಲಿ ಸಂಭವಿಸುವ ಅತಿವೃಷ್ಟಿ, ಅನಾವೃಷ್ಟಿಯಂತಹ ಘಟನೆಗಳಿಂದಾಗಿ ಬೆಳೆ ಬಾರದ ಕೆಲವು ಸಂದರ್ಭದಲ್ಲಿ ಸಂಕಷ್ಟಕ್ಕೀಡಾಗುತ್ತಿದ್ದರು. ಇಂತಹ ಕೆಲವೊಂದು ಸಮಯದಲಿ ಈ ರೀತಿ ತೆರಿಗೆಗಳನ್ನು ಹಾಕದೆ ಮನ್ನಾ ಮಾಡಿದ ಸಂದರ್ಭಗಳು ಕಂಡುಬರುತ್ತವೆ. ಇದರಿಂದ ರೈತ ಶೋಷಣೆಗೆ ಒಳಪಟ್ಟಿರಲಿಲ್ಲವೆಂದು ಹೇಳುವುದು ಕಷ್ಟಸಾಧ್ಯ. ಕೆಲವೊಮ್ಮೆ ಮಾತ್ರ ತೆರಿಗೆ ಮಾನ್ಯದಂತಹ ಸಂದರ್ಭಗಳಿದ್ದರೂ ಹೆಚ್ಚಿನ ಸಂದರ್ಭಗಳು ತೆರಿಗೆಯನ್ನು ಕಟ್ಟಬೇಕಾದ ಸಂದರ್ಭಗಳು ಇರುತ್ತಿದ್ದವು. ಕೃಷಿಯಿಂದ ಉಳಿಗ ಭೂಮಿಯಲ್ಲಿ ಕೆಲಸ ಮಾಡುವ ರೈತರು ಉತ್ಪನ್ನದ ಕೆಲವು ಭಾಗವನ್ನು ಭೂಮಾಲೀಕನಿಗೆ ನೀಡಿ ತೆರಿಗೆಯನ್ನು ಕಟ್ಟುವುದು ಬಾಧೆಯೇ ಸರಿ. ಜೇಡರ ದಾಸಿಮಯ್ಯನವರು ತಮ್ಮ ವಚನದಲ್ಲಿ ಹೇಳಿರುವ ಮಾತುಗಳು ಇದಕ್ಕೆ ಪೂರಕವೆಂಬಂತಿವೆ.

ಹರಿದ ಗೋಣಿಯಲೊಬ್ಬ ಕಳವೆಯ ತುಂಬಿ
ಇರುಳೆಲ್ಲಾ ನಡೆದನಾ ಸುಂಕಕಂಜಿ
ಕಳವೆಯೆಲ್ಲಾ ಹೋಗಿ ಬರಿಗೋಣಿ ಉಳಿಯಿತ್ತು
ಅಳಿಮನದವನ ಭಕ್ತಿ ಇಂತಾಯಿತ್ತು.

ಈ ವಚನವು ರೈತನು ಸುಂಕಕ್ಕೆ ಹೆದರಿ ರಾತ್ರಿಯಲ್ಲಿ ತಾನು ಬೆಳೆದ ಭತ್ತವನ್ನು ಸಾಗಟ ಮಾಡಿರುವ ಕುರಿತು ತಿಳಿಸುತ್ತದೆ. ಇದರಿಂದ ರೈತನಿಗೆ ಸುಂಕವು ಹೊರೆಯಾಗಿತ್ತು ಎಂಬ ಅಂಶವು ತಿಳಿದುಬರುತ್ತದೆ. ಕ್ರಿ.ಶ. ೧೦೬೮ರ ಶಾಸನದಲ್ಲಿ ಬ್ರಾಹ್ಮಣ ವೃತ್ತಿಯ ಸೂದ್ರನಾಳಲು ವರ್ಷಂ ಪ್ರತಿ ವೀಸಕೆ ಮೂಱು ಪಣವಿನ ತೆಱೆಯನಾ ಬಾಯಗೆ ೫೨ ಗದ್ಯಾಣ ಪೊನ್ನವೃದ್ಧಿಗೆ ಪೆಱಿರುಣುತಿರೆ ತೊಣಕಲಿಯ ಮಹಾದೇವಯ್ಯನೆಲ್ಲಾವೆಡೆಯಲುಂ ಸಾಮ್ಯಮೆನ್ನದೆ ತೆಱೆಯಂ ಕೊಳುವಂತಾಗಿಯಾ...ಪೊನ್ನಂ ಕೊಟ್ಟು ಮಾಱುಗೊಣ್ಡು ಪಿರಿಯಕೆರೆಗೆ ಬಿಟ್ಟನೆಂದಿದೆ.[೧೧೫] ಈ ಶಾಸನವು ಬ್ರಾಹ್ಮಣರ ಭೂಮಿಯಲ್ಲಿ ಶೂದ್ರನು ಉಳುಮೆ ಮಾಡುತ್ತಿದ್ದನು ಎಂದು ತಿಳಿಸುತ್ತದೆ. (ಶೂದ್ರನೆಂದರೆ ರೈತ. ಜಾತಿಸೂಚಿಕವಾಗಿ ಬಳಸಿಲ್ಲ) ಪ್ರಾಚೀನ ಕಾಲದಲ್ಲಿ ಶೂದ್ರರೆಂದರೆ ಅವರು ಕೃಷಿಕಾರ್ಯ ಮಾಡುವವರಾಗಿರುತ್ತಿದ್ದರು. ಈ ಭೂಮಿಯ ಉತ್ಪನ್ನವನ್ನು ಬೇರೆಯವರು ದುರುಪಯೋಗಪಡಿಸಿಕೊಂಡ ಕಾರಣಕ್ಕಾಗಿ ಮಹಾದೇವಯ್ಯನೆಂಬುವವ ಇದನ್ನು ಕೊಂಡು ಊರಿನ ಕೆರೆಗೆ ದಾನ ನೀಡಿದನೆಂದು ಶಾಸನವು ತಿಳಿಸಿದೆ. ಕ್ರಿ.ಶ. ೧೧೬೩ರ ಶಾಸನದಲ್ಲಿ ಕೆಱೆಯ ಕೆಳಗಿನ ಭತ್ತದ ಗದ್ದೆ, ಹರಳು ಭಾಗಮಾದ ಭೂಮಿಯೊಳುಯುಮನು ಜೇರಿಜವಾಡದೊಳಗೆ ಕೆಯಿಮಾಡು ವೊಕ್ಕಲಿಂಗೆ ರಾಜಹಸ್ತದಲು ೪೦ ಕಯ್ಯದ್ಧ ಮನೆ ೨೦ ಕಯ್ಯ ಗೊಟ್ಟಗೆ ಮನೆ ಕೊಟ್ಟನೆಂದಿದೆ.[೧೧೬] ಇದರಿಂದ ಕೃಷಿಕರಿಗೆ ಮನೆ ಮತ್ತು ರಾಜ್ಯದ ಸಂಪತ್ತಾದ ದನಗಳನ್ನು ಸಾಕಲು ಕೊಟ್ಟಿಗೆ ಮನೆಗಳನ್ನು ನಿರ್ಮಿಸಲು ಕೊಟ್ಟಿರುವುದು ತಿಳಿದುಬರುತ್ತದೆ. ಒಂದೆಡೆ ಕೃಷಿ ಅಭಿವೃದ್ಧಿಯನ್ನು ಸಾಧಿಸುವ ಉದ್ದೇಶವಿದೆ. ಮತ್ತೊಂದೆಡೆ ಕೃಷಿಕರ ಜೀವನ ನಿರ್ವಹಣೆಯ ಸ್ಥಿತಿ ಅನಾವರಣಗೊಂಡಿದೆ. ವಾಸಿಸಲು ಮನೆಯಿಲ್ಲದ ಕೃಷಿಕ ಸಮುದಾಯ ಇತ್ತೆಂಬುದು ಇದರಿಂದ ತಿಳಿಯುತ್ತದೆ. ಅಂದಿನ ಅಂತಹ ಸ್ಥಿತಿ ಇಂದಿಗೂ ಮುಂದುವರೆದುಕೊಂಡು ಬಂದಿದೆ. ಕ್ರಿ.ಶ, ೧೦೬೨ರ ಶಾಸನದಲ್ಲಿ ವೊಕ್ಕಲುಪೇಜೆ ಬನ್ದ ಸೂಳೊಳ್ ಒಕ್ಕಲಲು ಬಳ್ಳವೊನ್ದು ಎಂದಿದೆ.[೧೧೭] ಕೃಷಿಕರು ತಾವು ಧಾನ್ಯಗಳನ್ನು ಸಾಗಾಣಿಕೆ ಮಾಡಲು ಸುಂಕ ತೆರಬೇಕಿತ್ತೆಂಬುದನ್ನು ಈ ಶಾಸನವು ತಿಳಿಸುತ್ತದೆ. ಕೃಷಿಕರು ದೇವಾಲಯದ ಭೂಮಿಯಲ್ಲಿ ಉಳುಮೆ ಮಾಡುತ್ತಿದ್ದರು. ಕೆಲವೊಮ್ಮೆ ಉಳುಮೆ ಮಾಡುವ ಕೆಲಸದಿಂದಲೂ ಅವರನ್ನು ಹೊರದೂಡಲಾಗುತ್ತಿತ್ತು. ಇಂತಹ ಸನ್ನಿವೇಶಕ್ಕೆ ವಿರುದ್ಧವೆಂಬಂತಹ ನಿದರ್ಶನವೊಂದು ಶಾಸನದಲ್ಲಿ ಉಕ್ತವಾಗಿದೆ. ಕ್ರಿ.ಶ. ೧೨೬೬ರ ಶಾಸನದಲ್ಲಿ[೧೧೮] ಈಗಾಗಲೇ ಭೂಮಿಯನ್ನು ಉಳುತ್ತಿದ್ದ ಒಕ್ಕಲುಗಳನ್ನು ಹೊರದೂಡದೆ, ದೇವರಿಗೆ ದತ್ತಿ ಬಿಟ್ಟ ಭೂಮಿಯನ್ನು ಮಹಾಜನಗಳಿಗೆ ವಹಿಸಿಕೊಟ್ಟರು. ಈ ರೀತಿ ಭೂಮಿಯ ಒಡೆತನವು ಬದಲಾದ ಸಂದರ್ಭದಲ್ಲಿ ಭೂಮಿಯನ್ನು ಉಳುವ ಒಕ್ಕಲುಗಳು ಬದಲಾಗುತ್ತಿದ್ದ ಸಾಧ್ಯತೆಗಳಿವೆ. ಆದರೆ ಈ ಶಾಸನದಲ್ಲಿ ಮೊದಲೇ ಉಳುತ್ತಿದ್ದ ಒಕ್ಕಲುಗಳನ್ನು ಮುಂದುವರೆಸಿದಂತೆ ತಿಳಿಯುತ್ತದೆ. ಕ್ರಿ.ಶ. ೧೨೯೬ರ ಶಾಸನದಲ್ಲಿ[೧೧೯] ಆಲುಗೋಡಿನ ಮಹಾಜನರು ನಾಲ್ವರು ಸೆಟ್ಟಿಗಳಿಗೆ ಸೆಟ್ಟಿಗುತ್ತಿಗೆಯಾಗಿ ಊರೊಂದರಲ್ಲಿ ಭೂಮಿಯನ್ನು ಬಿಟ್ಟಿದ್ದಾರೆ. ಈ ಭೂಮಿಯು ಕೆರೆಯ ಕೆಳಗಿನ ಭೂಮಿಯಾಗಿದ್ದು, ಸೆಟ್ಟಿಕಾರನು ಭೂಮಿಗೆ ಸರಿಯಾಗಿ ನೀರು ಹರಿಯುವಂತೆ ಸ್ವತಃ ನೋಡಿಕೊಳ್ಳಬೇಕಾಗಿತ್ತು. ಭೂಮಿ ಪಡೆದವರು ಮಹಾಜನಗಳಿಗೆ ಬೆಳೆಯಲ್ಲಿ ಸರಿಪಾಲು ಕೊಡುವುದಲ್ಲದೆ ೩ ಹಣವನ್ನು ಕಟ್ಟುಗುತ್ತಗೆಯಾಗಿ ತೆರಬೇಕಾಗಿತ್ತು. ಕ್ರಿ.ಶ. ೧೩೧೨ರ ಶಾಸನವು ಕೋರುವಾರುವನ್ನು ಉಲ್ಲೇಖಿಸಿದೆ.[೧೨೦] ಬೆಳೆದ ಬೆಳೆಯಲ್ಲಿ ಸಮಪಾಲು ನೀಡುವುದನ್ನು ಇದು ಸೂಚಿಸುತ್ತದೆ. ಕ್ರಿ.ಶ. ೧೨೦೦ರ ಶಾಸನದಲ್ಲಿ ಅಮೃತೇಶ್ವರ ದೇವರಿಗೆ ಮಾರುಗೊಂಡು ಸಾವಿರ ಕಮ್ಮ ದಾನ ಮಾಡಿದ ಭೂಮಿಯಲ್ಲಿ, ಗುತ್ತಗೆಯ ರೂಪದಲ್ಲಿ ಭೂಮಿ ಪಡೆದು ಉಳುಮೆ ಮಾಡುವವರು ಎರಡು ಸಮಯದ ನೈವೇದ್ಯ ಮೊದಲಾದವುಗಳಿಗೆ ಒಂದು ಗದ್ಯಾಣ ನೀಡಬೇಕೆಂದಿದೆ.[೧೨೧] ಹೊಯ್ಸಳರ ಕಾಲಕ್ಕೆ ಒಕ್ಕಲಿಗರು ಪಟ್ಟಣಗಳಿಗೆ ವಲಸೆ ಹೋದಂತೆ ಕಂಡುಬರುತ್ತದೆ. ಕ್ರಿ.ಶ. ೧೨೬೬ರ ಶಾಸನವು

ಪಟ್ಟಣಕ್ಕೆ ಹೊಸದಾಗಿ ಬಹ ವೊಕ್ಕಲಿಗೆ ಎರಡು ವರ್ಷ ಮನೆದೇಜ್ ಮಾನ್ಯ ಮಾಡಿದಂತೆ ತಿಳಿಸುತ್ತದೆ.[೧೨೨] ಪಟ್ಟಣಕ್ಕೆ ಏಕೆ ವಾಸಿಸಲು ಹೋದರೆಂಬ ಅಂಶವು ತಿಳಿಯದು. ಆದರೆ ಇಂತಹವರಿಗೆ ಅಧಿಕಾರಿ ವರ್ಗದಿಂದಲೇ ಆರಂಭದ ಪಟ್ಟಣ ಜೀವನಕ್ಕೆ ಮನೆ ತೆರಿಗೆಯನ್ನು ಮಾನ್ಯ ಮಾಡಿರುವುದು ತಿಳಿದುಬಂದಿದೆ. ಭೂಮಿಯನ್ನು ಉಳುಮೆಗಾಗಿ ಕೃಷಿಕರಿಗೆ ಕೊಡುವಾಗ ಸಮಯಕ್ಕೆ ಸರಿಯಾಗಿ ನಿಗದಿಪಡಿಸಿದ ಪಾಲನ್ನು ಕೃಷಿಕರು ನೀಡದಿದ್ದಾಗ ದಂಡವಿಧಿಸಿರುವುದು ಒಂದು ಕಡೆ ಕಂಡುಬಂದಿರುತ್ತದೆ. ಇದರಿಂದ ಕೆಲವೊಮ್ಮೆ ಕಠಿಣ ಕರಾರುಗಳನ್ನು ವಿಧಿಸಿದ್ದರೆಂದು ತಿಳಿಯುತ್ತದೆ. ಆದರೆ ಮತ್ತೆ ಕೆಲವು ಸಲ ವಿನಾಯಿತಿ ನೀಡಿ ಕರಾರುಗಳನ್ನು ಸಡಿಲಗೊಳಿಸಿದಂತೆ ಕಂಡುಬರುತ್ತದೆ. ಕ್ರಿ.ಶ. ೧೧೨೩ರ ಶಾಸನದಲ್ಲಿ[೧೨೩] ಸಮೃದ್ಧ ಮತ್ತು ಅಲ್ಪ ಬೆಳೆಯನ್ನು ಪರಿಗಣಿಸಿ ಅದಕ್ಕೆ ಅನುಗುಣವಾದ ಪ್ರಮಾಣದಲ್ಲಿ ಅಂತಹ ಪಡಿನೀಡಬೇಕೆಂದು ತಿಳಿಸಿದೆ. ಇದನ್ನು ಗಮನಿಸಿದರೆ ಒಕ್ಕಲುತನದಲ್ಲಿ ಉಂಟಾಗುವ ಏರುಪೇರುಗಳು, ಸಮಸ್ಯೆ, ಸವಾಲುಗಳು, ಪರಿಣಾಮ ಮತ್ತು ಪರಿಹಾರೋಪಾಯಗಳು ಆಯಾ ಕಾಲಕ್ಕೆ ಸಂಬಂಧಿಸಿದ ಆಳರಸರು ಮತ್ತು ಅಧಿಕಾರಿಗಳು ತೆಗೆದುಕೊಳ್ಳುವ ಸಂದರ್ಭೋಚಿತ ನಿರ್ಧಾರಗಳಿಗೆ ಅನುಸಾರವಾಗಿದ್ದವೆಂದು ತಿಳಿಯುತ್ತದೆ.

ದುಡಿಯುವ ವರ್ಗದ ಆರ್ಥಿಕ ಮತ್ತು ಸಾಮಾಜಿಕ ಅಭದ್ರತೆಗಳು ಭೂಮಾಲೀಕರಿಗೆ ಬಂಡವಾಳವಾದಂತಿವೆ. ಕೃಷಿ ವಿಸ್ತರಣೆಯಾದಂತೆ ಭೂರಹಿತ ಕೃಷಿ ಕಾರ್ಮಿಕರ ಸಮಸ್ಯೆ ಮತ್ತು ಸವಾಲುಗಳ ಹೆಚ್ಚಳಕ್ಕೆ ಕಾರಣವಾಯಿತು. ಸಾಮಾಜಿಕ ಅಸಮಾನತೆ ಮತ್ತು ಸಂಪತ್ತಿನ ಹಂಚಿಕೆಯಲ್ಲಾದ ಏರುಪೇರುಗಳು ಭೂಮಾಲೀಕರು ಮತ್ತು ಭೂರಹಿತ ಕೃಷಿಕರ ಮಧ್ಯೆ ಬಿರುಕುಗಳನ್ನು ಉಂಟು ಮಾಡುತ್ತಿದ್ದವು. ಭೂಮಾಲೀಕರ ಆಜ್ಞೆಯಂತೆ ಗೇಣಿಗೆ ಪಡೆದ ಭೂರಹಿತ ಕೃಷಿಕರು ಷರತ್ತುಗಳಿಗೆ ಒಳಪಡುತ್ತಿದ್ದರು. ಇವರನ್ನು ಸ್ಥಳಾಂತರಿಸುವ, ಬೇಕೆಂದೆಡೆ ಕಳುಹಿಸುವ ತೀರ್ಮಾನಗಳನ್ನು ಭೂಮಾಲೀಕರು ತೆಗೆದುಕೊಳ್ಳುತ್ತಿದ್ದ ಸಾಧ್ಯತೆಗಳಿವೆ. ಈ ರೀತಿಯ ಸಂದರ್ಭಗಳಲ್ಲಿ ಒಕ್ಕಲಿಗರ ಭಾವನಾತ್ಮಕ ಸಂಬಂಧದ ಮೇಲೆ ಕೊಡಲಿಪೆಟ್ಟು ಕೊಟ್ಟಂತಾಗುತ್ತಿತ್ತು. ಈ ವರ್ಗವು ಭೂಮಿಯೊಂದಿಗೆ ಸಮಷ್ಟಿ ಪ್ರಜ್ಞೆಯನ್ನು ಹೊಂದಿತ್ತು. ಬೇರೊಂದು ಭೂಮಿಯನ್ನು ಉಳಲು ಹೋಗುವ ಸಂದರ್ಭದವರೆಗೂ ಭೂಮಿಯನ್ನು ತಮ್ಮದೆಂದು ಪರಿಭಾವಿಸಿಕೊಂಡು ನಿಸ್ವಾರ್ಥವಾಗಿ ದುಡಿದ ವರ್ಗವಿದು. ಆದರೆ ಕೆಲವೊಮ್ಮೆ ಅಗ್ರಹಾರವನ್ನು ನಿರ್ಮಿಸುವ ಸಂದರ್ಭದಲ್ಲಿ ಒಕ್ಕಲುಗಳನ್ನು ಒಕ್ಕಲೆಬ್ಬಿಸಲಾಗುತ್ತಿತ್ತೆಂಬ ಅಂಶವು ಶಾಸನವೊಂದರಿಂದ ತಿಳಿದುಬರುತ್ತದೆ.[೧೨೪] ಇದರಿಂದಾಗಿ ಬ್ರಾಹ್ಮಣ ವರ್ಗವು ಕೆಲವೊಮ್ಮೆ ಕೃಷಿಕರಿಂದ ವಿರೋಧಗಳಿಗೆ ಗುರಿಯಾಗಿತ್ತು. ಆದರೂ ಇಂತಹ ವಿರೋಧ ಮತ್ತು ಕಲಹಗಳು ಬಂದಾಗ ಪ್ರಭುತ್ವವು ಮಧ್ಯೆ ಪ್ರವೇಶಿಸುತ್ತಿತ್ತಾದಾದರೂ ಬ್ರಾಹ್ಮಣರ ಕಡೆಗೆ ತೀರ್ಪು ನೀಡಿರುವ ಸಾಧ್ಯತೆಗಳಿವೆ. ಇದಕ್ಕೆ ಕಾರಣ ಬ್ರಾಹ್ಮಣ ವರ್ಗವು ಪ್ರಭುತ್ವವನ್ನು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಅಧಿಕಾರವನ್ನು ಹೊಂದಿತ್ತು. ಕ್ರಿ.ಶ, ೧೨೫೧ರ ಶಾಸನದಲ್ಲಿ ಹಳ್ಳಿಯೊಂದರ ಕೃಷಿಕರು ತಮ್ಮ ಹಳ್ಳಿಯನ್ನು ಬ್ರಾಹ್ಮಣರಿಗೆ ನೀಡುವುದನ್ನು ವಿರೋಧಿಸಿದ್ದರ ಉಲ್ಲೇಖವಿದೆ.[೧೨೫] ಈ ರೀತಿಯ ವಿರೋಧಗಳನ್ನು ಗಮನಿಸಿದರೆ ಬ್ರಾಹ್ಮಣರಿಂದ ಕೃಷಿಕ ಸಮುದಾಯ ಹಾನಿಗೊಳಗಾದ ಅಥವಾ ಶೋಷಣೆಗೊಳಗಾದ ಸಾಧ್ಯತೆಗಳಿವೆ. ಪ್ರಭುತ್ವ ವರ್ಗವು ಬ್ರಾಹ್ಮಣ ನಿಲುವುಗಳ ಪರವಾದ ಕಾರಣದಿಂದಾಗಿ, ಭೂರಹಿತ ಕೃಷಿಕರ ವಿರೋಧವು ಬಡವನ ಸಿಟ್ಟು ದವಡೆಗೆ ಮೂಲ ಎಂಬಂತಾಗುತ್ತಿತ್ತು. ಕ್ರಿ.ಶ. ೧೦೮೦ರ ಶಾಸನವು ಕೃಷಿಗಾಗಿ ನೀರನ್ನು ಬಳಸುವ ಸಂಬಂಧವಾಗಿ ಕೃಷಿಕ ಮತ್ತು ಬ್ರಾಹ್ಮಣರ ಮಧ್ಯೆ ಕಲಹವೇರ್ಪಟ್ಟದ್ದನ್ನು ತಿಳಿಸುತ್ತದೆ.[೧೨೬] ಕ್ರಿ.ಶ. ೧೨೧೨ರ ಶಾಸನದಲ್ಲಿ ಭೂಮಾಲೀಕರಿಗೆ ಪ್ರತ್ಯೇಕ ಕೆರೆ ನಿರ್ಮಿಸುವ ಮೂಲಕ ಹೊಯ್ಸಳ ಅರಸರು ವಿವಾದ ಬಗೆಹರಿಸಿದ ಬಗೆಗೆ ಮಾಹಿತಿ ನೀಡುತ್ತದೆ.[೧೨೭] ಇದರಿಂದ ಭೂಮಾಲೀಕ ಮತ್ತು ಕೃಷಿಕರ ಮಧ್ಯೆ ಕಲಹಗಳು

ಏರ್ಪಡುತ್ತಿದ್ದವೆಂಬ ಸೂಕ್ಷ್ಮ ಅಂಶಗಳು ತಿಳಿಯುತ್ತವೆ. ಈ ರೀತಿಯ ವಿರೋಧಗಳು ಮತ್ತು ಕಲಹಗಳು ಬಂದಾಗ ಕೆಲವೊಮ್ಮೆ ಈ ರೀತಿ ಪ್ರತಿರೋಧದ ಅಲೆಗಳು ಕಂಡುಬರುತ್ತವೆ. ಆದರೂ ಸಂಖ್ಯಾ ಬಾಹುಳ್ಯದ ದೃಷ್ಟಿಯಿಂದ ವಿರಳವಾಗಿವೆ. ಈ ವಿರಳತೆಯ ಅಂಶಗಳು, ಕೃಷಿಕರ ಸಹಿಷ್ಣುತೆಯಂತಹ ವಿಚಾರಗಳು ಇತಿಹಾಸದಲ್ಲಿ ಮರೆಮಾಚಿ ಮೂಲೆಗೆ ಸರಿದಿವೆ. ಈ ಕಾರಣಗಳಿಂದಾಗಿ ಈ ರೀತಿಯ ಕ್ರಾಂತಿಯ ಕಿಡಿಗಳು ಮುಂದಿನ ಪೀಳಿಗೆಗೆ ರವಾನೆಯಾದ ಸಾಧ್ಯತೆಗಳು ವಿರಳತೆಯಿಂದ ಕೂಡಿವೆ. ಕೃಷಿಕರ ಮೌನವು ಅವರ ಶೋಷಣೆಯುಕ್ತ ಶ್ರಮದ ದುಡಿಮೆಗೆ, ಮುನ್ನುಡಿಯನ್ನು ಬರೆಯುತ್ತ ಹೋದ ಅಂಶಗಳು ಚರಿತ್ರೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅಧ್ಯಯನಕ್ಕೆ ತೆಗೆದುಕೊಳ್ಳುತ್ತವೆ.

ಕ್ರಿ.ಶ. ೧೧ನೆಯ ಶತಮಾನದವರೆಗೆ ವ್ಯಾಪಾರ, ವಾಣಿಜ್ಯ ಹಿನ್ನೆಡೆಯನ್ನು ಪಡೆಯಿತು. ಇದರಿಂದಾಗಿ ಪಟ್ಟಣಗಳು ಛಿದ್ರ ಛಿದ್ರವಾಗಿ ಹೋದವು. ಇದರಿಂದಾಗಿ ಹಳ್ಳಿಗಳಲ್ಲಿ ಜಮೀನ್ದಾರಿ ಪದ್ಧತಿ ಭದ್ರವಾಗಿ ನೆಲೆಯೂರಲಾರಂಭಿಸಿತು.[೧೨೮] ಈ ವ್ಯವಸ್ಥೆಯ ಬೇರುಗಳು ಸಮಾಜದಲ್ಲಿ ಆಲದ ಮರದ ಬಿಳಲು ಬೇರುಗಳಂತೆ ವ್ಯಾಪಿಸಿ ಕೆಲವೊಮ್ಮೆ ಬಲವಂತದಂತಹ ದುಡಿಮೆಗೆ ಕಾರಣವಾದವು. ಇಂತಹ ಅಂಶಗಳು ಹೆಚ್ಚಾಗಿ ಮಧ್ಯಕಾಲೀನ ಅವಧಿಯಲ್ಲಿ ವ್ಯಾಪಕವಾಗಿ ಕಂಡುಬಂದವು. ನಂತರ ಇದು ಸ್ವತಂತ್ರ ಪೂರ್ವ ಮತ್ತು ಸ್ವತಂತ್ರ ನಂತರದ ಅವಧಿಗೂ ಮುಂದುವರಿಯಿತು. ಶಿವರಾಮಕಾರಂತರ 'ಚೋಮನದುಡಿ' ಕಾದಂಬರಿಯು ತಳ ಸಮುದಾಯದ ರೈತನ ಸ್ಥಿತಿಯನ್ನು ಅನಾವರಣಗೊಳಿಸಿದೆ. ಸ್ವಂತಕ್ಕೆ ಭೂಮಿಯನ್ನು ಹೊಂದುವುದಿರಲಿ ಭೂಮಿಯನ್ನು ಗೇಣಿಗೆ ಪಡೆಯುವ ವ್ಯವಸ್ಥೆಯನ್ನು ಮೊಟಕುಗೊಳಿಸಿದ ಪ್ರಸಂಗ ಕಂಡುಬರುತ್ತದೆ. ಹೊಲೆಯರು ಬೇಸಾಯಗಾರರಾಗುವುದುಂಟೇ?[೧೨೯] ಈ ಮಾತುಗಳು ತಳ ಸಮುದಾಯದ ಭೂರಹಿತ ಕೃಷಿಕ ವರ್ಗವನ್ನು ವೈದಿಕ ಸಂಪ್ರದಾಯವು ಕೆಲವು ಸಿದ್ಧ ಮಾದರಿಯ ಸಂಪ್ರದಾಯದ ಕಪಿಮುಷ್ಠಿಯಲ್ಲಿ ಸಿಲುಕಿಸಿರುವ ಸಮಾಜದಲ್ಲಿ ಕಂಡುಬರುತ್ತದೆ. ಪ್ರಾಚೀನ ಕಾಲದಿಂದ ಸಾಗಿಬಂದ ವ್ಯವಸ್ಥೆ ಬರಬರುತ್ತ ಜಟಿಲ ವ್ಯವಸ್ಥೆಯಾಗಿ ರೂಪುತಾಳಿರುವುದು ಇದರಿಂದ ವ್ಯಕ್ತವಾಗುತ್ತದೆ. ಕೃಷಿಕರನ್ನು ಧರ್ಮ ಮತ್ತು ಸಂಪ್ರದಾಯದ ಕಪಿಮುಷ್ಠಿಯಲ್ಲಿ ಬಂಧಿಸಿ ಭೂಮಾಲೀಕ ವರ್ಗವು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿರುವ ಸಾಧ್ಯತೆಗಳಿವೆ. ತಳಸಮುದಾಯಗಳು ಶ್ರೀಮಂತ ಭೂಮಾಲೀಕರ ಜಮೀನಿನಲ್ಲಿ ದುಡಿಯ ಬೇಕಿತ್ತೇ ಹೊರತು ಭೂಮಿ ಹೊಂದುವಂತಿರಲಿಲ್ಲವೆಂಬ ಧೋರಣೆಗಳು ಒಂದೆಡೆ ಭೂಮಾಲೀಕತ್ವ ವ್ಯವಸ್ಥೆಯನ್ನು ನೆಲೆಗೊಳಿಸಿ ಭೂರಹಿತ ಕೃಷಿಕ ಸಮುದಾಯವನ್ನು ದುಡಿಮೆ ಮತ್ತು ಶೋಷಣೆಗೆ ಒಳಗು ಮಾಡಿರುವ ಸಾಧ್ಯತೆಗಳಿವೆ. ಇಂದಿಗೂ ಈ ವರ್ಗವು ಕೆಲವು ದರ್ಕಾಸು ಜಮೀನುಗಳಲ್ಲಿ ಉಳುಮೆ ಮಾಡಿಕೊಂಡು ಜೀವನ ಸಾಗಿಸುವ ಕುಟುಂಬಗಳಾಗಿ ಕಾಣಸಿಗುತ್ತಿರುವ ಸನ್ನಿವೇಶಗಳು ಇಂದಿಗೂ ಇಲ್ಲದಂತಿಲ್ಲ ಎನ್ನಬಹುದಾಗಿದೆ.

## ಅಡಿಟಿಪ್ಪಣಿಗಳು

೧. ಇರ್ಫಾನ್ ಹಬೀಬ್, ಭಾರತದ ಚರಿತ್ರೆಯಲ್ಲಿ ರೈತ,(ಅನು) ಸುಜ್ಞಾನ ಮೂರ್ತಿ ಬಿ., ಪು. ೫೦.
೨. ಬಾಲಗೋಪಾಲ್ ಕೆ., ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ. ಕೊಸಾಂಬಿಯವರ ಚಿಂತನೆಗಳು,(ಅನು), ಶ್ರೀಮತಿ ಎಚ್.ಎಸ್., ಪು. ೧೫೮.
೩. Raychoudary S C., Social Cultural and Economic History of India, p. 68
೪. ಬಾಲಗೋಪಾಲ್ ಕೆ., ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ. ಕೊಸಾಂಬಿಯವರ ಚಿಂತನೆಗಳು, (ಅನು), ಶ್ರೀಮತಿ ಎಚ್.ಎಸ್., ಪು. ೧೫೭.
೫. ಅದೇ, ಪು. ೧೫೭, ೧೫೮.
೬. ಅದೇ, ಪು. ೧೮೩.
೭. ಅದೇ, ಪು. ೧೮೩.
೮. ಅದೇ, ಪು. ೧೮೩.
೯. Jayaswal K.P., Hindu pality, p. 347.
೧೦. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೧೦.
೧೧. ಅದೇ, ಪು. ೪೧೦.
೧೨. EC(ರೈ.ಸಂ). Vol. V, ಅರಸೀಕೆರೆ ೧೨೭.
೧೩. EC.Vol. II, ಶ್ರವಣಬೆಳಗೊಳ ೧೭೬.
೧೪. ನಾಗಭೂಷಣ ಸ್ವಾಮಿ ಓ ಎಲ್.,(ಸಂ) ವಚನ ಸಾವಿರ, ಪು. ೬೫.
೧೫. ಚಿನ್ನಸ್ವಾಮಿ ಸೋಸಲೆ ಎನ್., ರಮೇಶನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೫.
೧೬. ಅದೇ. ಪು. ೧೪೭.
೧೭. ಕ.ವಿ.ಹಂ.ಶಾ.ಸಂ.೯, ಬಾಗಲಕೋಟೆ ೨೯.
೧೮. I.N.K.K.S, 3.
೧೯. ಮೋಹನ್‌ಕೃಷ್ಣರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೫೧.
೨೦. ಅಣ್ಣೀಗೆರೆ ಎ.ಎಂ., ಶೇಷಶಾಸ್ತ್ರಿ ಆರ್., ಶಾಸನ ಸಂಗ್ರಹ, ಪು. ೧೭, ೧೮.
೨೧. EC. Vol. X, ಅರಸೀಕೆರೆ ೫೭.
೨೨. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೨೯.
೨೩. ಅದೇ, ೨೫.
೨೪. ಅದೇ, ೬೮.
೨೫. ಅದೇ, ಇಂಡಿ ೨೨.
೨೬. ಇದೇ, ೩೫.
೨೭. ಅದೇ, ಸಿಂದಗಿ ೭೧.
೨೮. ಅದೇ, ಬಾಗೇವಾಡಿ ೩.

೨೯. ಅದೇ, ೨೧.

೩೦. EC .Vol. Vl, ಕೃಷ್ಣರಾಜಪೇಟೆ ೩೭.

೩೧. ಅದೇ, ೪೨.

೩೨. ಅದೇ, ೪೮.

೩೩. ಕ.ವಿ.ಹಂ.ಶಾ.ಸಂ.೭, ರಾಯಚೂರು ೫೫.

೩೪. ಅದೇ, ರಾಯಚೂರು ೧.

೩೫. ಅದೇ, ಲಿಂಗಸುಗೂರು ೩೪.

೩೬. ಅದೇ, ೪೯.

೩೭. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೫೩.

೩೮. ಅದೇ, ಪು. ೫೪.

೩೯. Sll. Vol. XV, ೫೭೨.

೪೦. EC. Vol. VI, ಕೃಷ್ಣರಾಜಪೇಟೆ ೮೬.

೪೧. ಅದೇ, ೯೦.

೪೨. ಕ.ವಿ.ಹಂ.ಶಾ.ಸಂ.೧೦, ಬಾಗೇವಾಡಿ ೨೪.

೪೩. EC. Vol. X, ಅರಸೀಕೆರೆ ೧೪೨.

೪೪. ಅದೇ, ೧೬೧.

೪೫. ಕ.ವಿ.ಹಂ.ಶಾ.ಸಂ.೭, ಮಾನ್ವಿ ೫೧.

೪೬. EC. Vol. X, ಅರಸೀಕೆರೆ ೧೭೪.

೪೭. ಕ.ವಿ.ಹಂ.ಶಾ.ಸಂ.೧, ಹರಪನಹಳ್ಳಿ ೧೦೭.

೪೮. ಅಣ್ಣೆಗೇರಿ ಎ. ಎಂ., ಶೇಷಶಾಸ್ತ್ರಿ ಆರ್., ಶಾಸನ ಸಂಗ್ರಹ, ಪು. ೧೭, ೧೮.

೪೯. EC. Vol. l, ಕೊಡಗು ೫೨.

೫೦. ಅದೇ, ೬೦.

೫೧. ಕ.ವಿ.ಹಂ.ಶಾ.ಸಂ.೧೦, ಬಾಗೇವಾಡಿ ೩೪.

೫೨. Appadorai A., Economic Conditions in Southern India, Vol. l, p. 107,108.

೫೩. Jayaswal K.P., Hindu Polity, p. 349.

೫೪. ಕ.ವಿ.ಹಂ.ಶಾ.ಸಂ.೧, ಹರಪನಹಳ್ಳಿ ೧೩೦.

೫೫. ಅದೇ, ೧೦, ಬಿಜಾಪುರ ೫೧.

೫೬. EC. Vol. X, ಅರಸೀಕೆರೆ ೧೭೬.

೫೭. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ ೧, ಪು. ೨೭೬, ೨೭೯.

೫೮. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೬೦.

೫೯. ಸಕಲೇಶ್ ಮ., ಹೊಯ್ಸಳೋದಯ ಸಂಶೋಧನ, ಪು. ೧೪೨.

೬೦. ಅದೇ, ಪು. ೧೪೨.

೬೧. ಅದೇ, ಪು. ೧೪೨.

೬೨. EC. Vol. Vlll, ಅರಕಲುಗೂಡು ೪೬.

೬೩. EC(ರೈ.ಸಂ). Vol. VI, ಕಡೂರು ೨೮.

೬೪. BKI.Vol. I. ii NO. ೧೩೮.

೬೫. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೩೫.

೬೬. ಅದೇ, ಪು. ೩೪.

೬೭. Irfan Habib, Essaya in Indian History p. 109.

೬೮. BKI. VoI.I.i, ೫೨.

೬೯. EC(ರೈ.ಸಂ). Vol. V, ಚನ್ನರಾಯಪಟ್ಟಣ ೨೫೧

೭೦. EC. Vol. Vlll, ಹೊಳೇನರಸೀಪುರ ೧೧೯.

೭೧. KI. ಸಂ.೧ ಭಾಗ ೧, ೫೫.

೭೨. MAR. 1928, ೧೧೨.

೭೩. KI. ಸಂ. III ಭಾಗ ೧, ೩.

೭೪. ಅದೇ, IV, ೬೩.

೭೫. ಚಿನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪು. ೨೪೬.

೭೬. ಸುರೇಂದ್ರ ರಾವ್ ಬಿ.,(ಸಂ) ಕರ್ನಾಟಕ ಚರಿತ್ರೆ ಸಂಪುಟ–೨, ಪು. ೧೮.

೭೭. ಕ.ವಿ.ಹಂ.ಶಾ.ಸಂ.೯, ಬದಾಮಿ ೧೨.

೭೮. EC. Vol. X, ಅರಸೀಕೆರೆ ೧೬೧.

೭೯. Appadorai A., Economic Conditions in Southern India, Vol. l, p. 153.

೮೦. ಮೋಹನ್‌ಕೃಷ್ಣ ರೈ.ಕೆ., ಪ್ರಭುತ್ವ ಮತ್ತು ಜನತೆ, ಪು. ೩೬.

೮೧. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೨.

೮೨. ಅದೇ, ೯, ಹುನಗುಂದ ೩೪.

೮೩. ಅದೇ, ೧, ಹಗರಿಬೊಮ್ಮನಹಳ್ಳಿ ೨೮.

೮೪. ಅದೇ, ೨೧.

೮೫. ಅದೇ, ಹೂವಿನಹಡಗಲಿ ೬೨.

೮೬. ಅದೇ, ಹರಪನಹಳ್ಳಿ ೮೮.

೮೭. ಅದೇ, ೨೧೭.

೮೮. Sll. Vol. XV, ೫೩.

೮೯. ಅದೇ, ೬೭.

೯೦. ಅದೇ, ೭೩.

೯೧. ಕ.ವಿ.ಹಂ.ಶಾ.ಸಂ.೧೦ ಬಿಜಾಪುರ ೭೯.

೯೨. EC. Vol. lll, ನಂಜನಗೂಡು ೨೯೪.

೯೩. ಕ.ವಿ.ಹಂ.ಶಾ.ಸಂ.೧, ಹರಪನಹಳ್ಳಿ ೧೮೭.

೯೪. ಅದೇ, ಹರಪನಹಳ್ಳಿ ೧೮೭.

೯೫. ಅದೇ, ೧೩೭.
೯೬. ಅದೇ, ೯, ಬಾಗಲಕೋಟೆ ೩೮.
೯೭. ಅದೇ. ೨೯.
೯೮. ಮೋಹನ್ ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೪೪.
೯೯. ರೋಮಿಲ ಥಾಪರ್, ಪ್ರಾಚೀನ ಭಾರತ,(ಅನು) ಉಮೇಶ್ ಎಚ್.ಎಸ್., ಶಶಿಕುಮಾರ್ ಜೆ., ಮತ್ತು ದೀಪ, ಪು. ೨೨೦.
೧೦೦. ಅದೇ, ಪು. ೨೨೧.
೧೦೧. ಸೂರ್ಯನಾಥ್ ಕಾಮತ್, ಒಕ್ಕಲಿಗ ಮತ್ತು ಒಕ್ಕಲುತನ: ಇತಿಹಾಸ ಅನ್ವೇಷಣೆ, ಪು. ೨೨.
೧೦೨. ಅದೇ, ಪು. ೨೨.
೧೦೩. ಗಿಲ್ಬಟ್ ನಿಕ್ವೇರಾ, ಪೂರ್ವ ಪ್ರಾಚೀನ ಭಾರತದ ಇತಿಹಾಸ, ಪು. ೧೦೮.
೧೦೪. ಅದೇ, ಪು. ೨೮೬.
೧೦೫. ಕ.ವಿ.ಹಂ.ಶಾ.ಸಂ.೯, ಬದಾಮಿ ೩೫೪.
೧೦೬. ಅದೇ, ಹುನಗುಂದ ೧೨೯.
೧೦೭. ಅದೇ, ೧, ಹಗರಿಬೊಮ್ಮನಹಳ್ಳಿ ೧೭.
೧೦೮. ಅದೇ, ಹೂವಿನಹಡಗಲಿ ೭೧.
೧೦೯. ಅದೇ, ೯೭.
೧೧೦. ಅದೇ, ೯೮.
೧೧೧. ಅದೇ, ಹರಪನಹಳ್ಳಿ ೫೩.
೧೧೨. ಅದೇ, ೮೮.
೧೧೩. BKl. l. I, ೧೦೮.
೧೧೪. ಕ.ವಿ.ಹಂ.ಶಾ.ಸಂ.೧, ಹರಪನಹಳ್ಳಿ ೯೩.
೧೧೫. ಅದೇ, ೧೩೨.
೧೧೬. SIl.V. XV.೨೩೦
೧೧೭. ಅದೇ, ೧೧೨.
೧೧೮. EC. Vol. Vll, ಮಂಡ್ಯ ೫೬.
೧೧೯. ಅದೇ, ಮಳವಳ್ಳಿ ೧೩೬.
೧೨೦. ಅದೇ, Vl, ಕೃಷ್ಣರಾಜಪೇಟೆ ೯೫.
೧೨೧. ಇತಿಹಾಸ ದರ್ಶನ-೨೦೧೭ ಪು. ೬೫, ೬೬.
೧೨೨. EC. Vol. V, ಟಿ. ನರಸೀಪುರ ೨೬೧.
೧೨೩. ಅದೇ, Vlll, ಹಾಸನ ೭೬.
೧೨೪. ಅದೇ, V, ಚನ್ನರಾಯಪಟ್ಟಣ ೧೯೭.
೧೨೫. MAR, 1936, 19.
೧೨೬. EC. Vol. Vlll, ಹಾಸನ ೩೪.
೧೨೭. ಅದೇ, ೪೨.

೧೨೮. ಇರ್ಫಾನ್ ಹಬೀಬ್, ಭಾರತ ಚರಿತ್ರೆಯಲ್ಲಿ ರೈತ,(ಅನು) ಸುಜ್ಞಾನ ಮೂರ್ತಿ ಬಿ., ಪು. ೫೦.

೧೨೯. ಶಿವರಾಮ ಕಾರಂತ ಕೆ., ಚೋಮನದುಡಿ, ಪು. ೨೩.

# ಅಧ್ಯಾಯ ಆರು

## ಕೃಷಿ, ಸಮಾಜ ಮತ್ತು ಸಂಸ್ಕೃತಿ

೬.೧. ಕೃಷಿ ಮತ್ತು ದೇವಾಲಯ

೬.೨. ಕೃಷಿ ಮತ್ತು ನಂಬಿಕೆ ಆಚರಣೆಗಳು

ಅಧ್ಯಾಯ: ಆರು

# ಕೃಷಿ, ಸಮಾಜ ಮತ್ತು ಸಂಸ್ಕೃತಿ

ಪ್ರಾಚೀನ ಕಾಲದಿಂದಲೂ ಕರ್ನಾಟಕದವನ್ನಾಳಿದ ರಾಜಮನೆತನಗಳ ರಾಜಕೀಯ ಇತಿಹಾಸದ ಕಡೆಗೆ ಗಮನಹರಿಸಿದಾಗ, ಒಂದಿಲ್ಲೊಂದು ಧಾರ್ಮಿಕ ಸಂಸ್ಕೃತಿಯ ಗಾಢ ಪ್ರಭಾವಕ್ಕೆ ಒಳಗಾಗಿರುವುದು ಕಂಡುಬರುತ್ತದೆ. ಅಲ್ಲದೆ ತನ್ನ ವಂಶಗಳನ್ನು ಪುರಾಣೀಕರಿಸುವ, ತಮ್ಮ ವಂಶಕ್ಕೆ ವೇದಕಾಲದ ಋಷಿಗಳನ್ನು ಮೂಲ ಪುರುಷರೆಂದು ಪರಿಭಾವಿಸುವ ಸಂಸ್ಕೃತಿ ಬೆಳೆದುಬಂದಿದೆ. ಉತ್ತರ ಭಾರತದ ಚರಿತ್ರೆಯಂತೆ ದಕ್ಷಿಣ ಭಾರತದ ಚರಿತ್ರೆಯಲ್ಲಿಯೂ ವೈಧಿಕ ಮೂಲವಲ್ಲದ ಜೈನ, ಬೌದ್ಧ ಮತಗಳಲ್ಲೂ ಸ್ಥಳೀಯವಾದ ನಂಬಿಕೆ ಆಚರಣೆಗಳು ಕ್ರಿ.ಶ. ಪ್ರಾರಂಭವಾಗುವುದಕ್ಕೆ ಮೊದಲೇ ದಕ್ಷಿಣ ಭಾರತಕ್ಕೆ, ಅದರಲ್ಲೂ ಕರ್ನಾಟಕಕ್ಕೆ ಬಂದು ನೆಲೆಸಿದ್ದವು. ಅವುಗಳಿಗೆ ಕರ್ನಾಟಕವನ್ನಾಳಿದ ಹಲವು ರಾಜಮನೆತನಗಳು ಆಶ್ರಯವನ್ನು ನೀಡಿ ಪೋಷಿಸಿಕೊಂಡು ಬಂದವು. ಇಂದಿಗೂ ಈ ಸಂಸ್ಕೃತಿಗಳು ಕರ್ನಾಟಕದಲ್ಲಿ ಕಂಡುಬರುತ್ತವಾದರೂ, ಸಂಖ್ಯಾ ಬಾಹುಳ್ಯದ ದೃಷ್ಟಿಯಿಂದ ವಿರಳವಾಗಿ ಕಂಡುಬರುತ್ತವೆ. ದ್ರಾವಿಡ ಸಂಸ್ಕೃತಿ ಮೂಲವಾದ ಅವೈದಿಕ ಸಂಸ್ಕೃತಿಯ ನಂಬಿಕೆ ಆಚರಣೆಗಳು ಶ್ರಮಿಕವರ್ಗದ ಮೂಲ ಪ್ರತಿಬಿಂಬಗಳಂತೆ ಕಂಡುಬರುತ್ತವೆ. ಆದರೆ ಇವುಗಳ ಮೇಲೆ ವೈದಿಕ ಸಂಸ್ಕೃತಿಯ ಪ್ರಭಾವ ಆರಂಭವಾಗಿ ಇಂತಹ ಆಚರಣೆಗಳು ತಮ್ಮ ಮೂಲ ಸ್ವರೂಪಕ್ಕಿಂತ ಬದಲಾವಣೆಯ ಮೂಲಕ ಭಿನ್ನ ಸ್ವರೂಪದೊಂದಿಗೆ ಕಂಡುಬರುತ್ತಿವೆ. ಕರ್ನಾಟಕದ ಧಾರ್ಮಿಕ ಸಂಸ್ಕೃತಿಯ ಚರಿತ್ರೆಯಲ್ಲಿ ಒಂದು ಧರ್ಮದ ಪ್ರಭಾವ ಪ್ರೇರಣೆ ಮತ್ತೊಂದು ಧರ್ಮದ ಮೇಲೆ ನಿರಂತರವಾಗಿ ಆಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿಯೇ ಸಂಸ್ಕೃತಿ ಯಾವಾಗಲೂ ತನ್ನದಲ್ಲದ್ದನ್ನು ತನ್ನದಾಗಿಸಿಕೊಳ್ಳುವ ತುಡಿತದಿಂದಾಗಿ ಆದ ಬದಲಾವಣೆಗಳು ಧರ್ಮದ ಮೂಲಕ ಪ್ರಭುತ್ವ ಮತ್ತು ಜನತೆಯ ಮೇಲೆ ನಿರಂತರವಾಗಿ ಪರಿಣಾಮ ಬೀರಿದವು. ಇವುಗಳಿಗೆ ನಂಬಿಕೆಗಳು ಪ್ರಬಲವಾದ ಭೂಮಿಕೆಗಳಾದವು. ಈ ಧಾರ್ಮಿಕ ಪ್ರಭಾವ ಮತ್ತು ನಂಬಿಕೆಗಳ ಪ್ರೇರಣೆಯ ಪ್ರತಿನಿಧಿಗಳಾಗಿ ದೇವಾಲಯಗಳ ನಿರ್ಮಾಣ ಮತ್ತು ಸಂಸ್ಕೃತಿಗಳು ಭಾರತೀಯ ಸಮಾಜದಲ್ಲಿ ಬೆಳೆದು ರೂಪುಗೊಂಡವು.

## ೬.೧. ಕೃಷಿ ಮತ್ತು ದೇವಾಲಯ

ದೇವಾಲಯಗಳು ಕೇವಲ ಕಲ್ಲು, ಇಟ್ಟಿಗೆ, ಗಾರೆಗಳಿಂದ ನಿರ್ಮಿಸಿದ ಕಟ್ಟಡಗಳಲ್ಲ. ಅವು ಆ ಸಮಾಜದ ಧಾರ್ಮಿಕ ಸಂಸ್ಕೃತಿ ಪ್ರೇರಿತ ನಂಬಿಕೆಗಳ ಮೂಲ ಪ್ರತಿನಿಧಿ ಮತ್ತು ಆಶಯಗಳಾಗಿ ಕಂಡುಬರುತ್ತವೆ. ಭಾರತದಲ್ಲಿ ಹಿಂದೂ ದೇವಾಲಯಗಳ ನಿರ್ಮಾಣಗಳಿಗೆ ಮೂಲ ಪ್ರೇರಣೆಯಾದುದು ಬೌದ್ಧ ಸ್ತೂಪಗಳು ಮತ್ತು ಜಿನಾಲಯ ಅಥವಾ ಚೈತ್ಯಾಲಯಗಳು.[೧] ಎನ್ನಲಾಗಿದೆ. 'ಪಾಚೀನ ದೇವಾಲಯಗಳ ಅವಶೇಷಗಳು ಸಾಂಚಿ, ನಾಗರಿ (ರಾಜಸ್ಥಾನ), ವಿದಿಶ(ಮಧ್ಯಪ್ರದೇಶ), ಮೊದಲಾದ ಕಡೆ ದೊರಕಿವೆ.[೨] ದಕ್ಷಿಣ ಭಾರತದಲ್ಲಿ ನಾಗಾರ್ಜುನ ಕೊಂಡದಲ್ಲಿ ೩–೪ನೆಯ ಶತಮಾನಕ್ಕೆ ಸೇರಿದ ದೇವಾಲಯಗಳು ದೊರೆತಿವೆ. ಕರ್ನಾಟಕದ ಮಟ್ಟಿಗೆ ಕ್ರಿ.ಶ. ೧೫೦ರ ಪ್ರಾಕೃತ ಶಾಸನದಲ್ಲಿ ಮಟಪಟ್ಟಿದೇವರಿಗೆ ದತ್ತಿ ಬಿಟ್ಟ ವಿಷಯವಿದೆ.[೩] ಇದರಿಂದ ದೇವಾಲಯದ ಪ್ರಾಚೀನ ಶಾಸನೋಕ್ತ ಉಲ್ಲೇಖದೊಂದಿಗೆ ಮಠ ಪರಂಪರೆ ಇತ್ತೆಂಬುದನ್ನು ಸೂಚಿಸುತ್ತದೆ. 'ಕ್ರಿ.ಶ. ೪೫೦ರ ತಾಳಗುಂದ ಶಾಸನದಲ್ಲಿ ಮಹಾದೇವ ದೇವಾಲಯದ ಉಲ್ಲೇಖ

ದೊರೆತಿದೆ. ಆದರೆ ಕರ್ನಾಟಕದ ದೇವಾಲಯಗಳಿಗೆ ಒಂದು ಕ್ರಮಬದ್ಧ ರೂಪರೇಷೆ ನಿರ್ಮಾಣಗೊಂಡದ್ದು, ಲಕುಲೀಶ, ಪಾಶುಪತ ಪ್ರವರ್ಧಮಾನದೊಂದಿಗೆ ಎನ್ನಲಾಗಿದೆ.[೪]

ದೇವಾಲಯಗಳಾಗಲಿ, ಬಸದಿಗಳಾಗಲಿ ಅವುಗಳು ನಂಬಿಕೆಯ ಆಧಾರದ ಮೇಲೆ ರಚನೆಗೊಂಡಂತವುಗಳು. ಅವುಗಳು ಕೇವಲ ವಿಗ್ರಹಗಳ ಪೂಜೆ, ಪುನಸ್ಕಾರ, ಅರ್ಚನೆ, ನೈವೇದ್ಯಗಳಿಗೆ ಸೀಮಿತವಾದವುಗಳಲ್ಲ. ವಿಶಾಲವಾದ ಕಾರ್ಯವ್ಯಾಪ್ತಿಯಲ್ಲಿ ಬೆಳೆದು ಬಂದವುಗಳಾಗಿವೆ. ದೇವಾಲಯಗಳು ಆರ್ಥಿಕತೆಯ ಭಾಗವಾಗಿಯೂ, ಆಹಾರ, ಅಭಯ, ಭೈಷಜ್ಯ, ಶಾಸ್ತ್ರಗಳ ಭಾಗವಾಗಿಯು ಕಂಡುಬರುತ್ತವೆ. ಅಲ್ಲದೆ ಕಲಾ ಪ್ರಕಾರಗಳಾದ ಸಂಗೀತ, ನೃತ್ಯ, ಚಿತ್ರಕಲೆ, ನಾಟ್ಯ ಮೊದಲಾದ ಸಾಂಸ್ಕೃತಿಕತೆಯ ಭಾಗಗಳೂ ಆಗಿದ್ದವು. ಯತಿ ಪರಂಪರೆಯ ಆವಾಸಸ್ಥಾನ, ಸಂಪತ್ತಿನ ಕೇಂದ್ರದ ಜೊತೆಗೆ ನ್ಯಾಯ ತೀರ್ಮಾನದ ಜವಾಬ್ದಾರಿಯ ಕಾರ್ಯಗಳನ್ನು ಸಮಾಜದಲ್ಲಿ ನಿರ್ವಹಿಸುವ ಹೊಣೆಗಾರಿಕೆ ಹೊತ್ತ ಧಾರ್ಮಿಕ ಸಂಸ್ಥೆಗಳಾಗಿದ್ದವು. ಹೀಗೆ ಸಮಾಜದ ಜನರ ಸರ್ವತೋಮುಖ ಅಭಿವೃದ್ಧಿಯಲ್ಲಿ ಬಹುಮುಖ್ಯ ಪಾಲುದಾರಿಕೆ ಹೊಂದಿದವುಗಳು ದೇವಾಲಯಗಳಾಗಿದ್ದವು. ಈ ಹಿನ್ನೆಲೆಯಲ್ಲಿ ಡಿ.ಎಲ್. ನರಸಿಂಹಾಚಾರ್ ಅವರು "ಹಿಂದಿನ ದೇವಾಲಯಗಳು ಊರಿಗೆ ಕಣ್ಣಾಗಿದ್ದವು. ಗ್ರಾಮ ಸಮಾಜ ಜೀವನಕ್ಕೆ ಕೇಂದ್ರಗಳಾಗಿದ್ದವು ಎಂದಿದ್ದಾರೆ.[೫] ದೇವಾಲಯಗಳ ನಿರ್ಮಾಣದ ಹಿಂದೆ ನಂಬಿಕೆಗಳು ತಳಹದಿಯಾದಂತೆ ದೇವಾಲಯಗಳ ಅಚರಣೆಗಳಿಗೂ ನಂಬಿಕೆಗಳೇ ಜೀವಾಳವಾಗಿವೆ. ಆದರೆ ಆ ನಂಬಿಕೆಗಳು ಎಲ್ಲಿಯೂ ಮೂರ್ತರೂಪದಲ್ಲಿ ಕಂಡುಬರುವುದಿಲ್ಲ. ಹಾಗೆಯೇ ಶಾಸನಗಳಲ್ಲಿ ದಾಖಲಾಗಿರುವುದು ಸಹ ಕಂಡುಬರುವುದಿಲ್ಲ. ಆದರೆ ಅವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ನಂಬಿಕೆಯಂತಹ ಅಮೂರ್ತ ಅಂಶಗಳು ಕಂಡುಬರುತ್ತವೆ. ದೇವಾಲಯಗಳನ್ನು ನಿರ್ಮಿಸುವುದು, ಅವುಗಳಿಗೆ ದಾನ ನೀಡುವುದು ಶ್ರೇಯಸ್ಸು ಉಂಟುಮಾಡುತ್ತದೆ ಎಂಬ ಭಾವನೆಯಿಂದಾಗಿ ನಿರ್ಮಾಣ ಮತ್ತು ದಾನದಂತಹ ಪ್ರಕ್ರಿಯೆಗಳು ರೂಪುಗೊಂಡವು. ಕ್ರಿ.ಶ. ೧೧೮೬ರ ಹಬ್ಬೆ ನಾಯಕನ ಶಾಸನವು 'ಈಶ್ವರ ಪ್ರತಿಷ್ಠೆ ಮಾಡಿದವನೀಶ್ವರನೆಯಕ್ಕು' ಎಂದು ತಿಳಿಸಿದೆ.[೬] ದೇವಾಲಯಗಳ ನಿರ್ಮಾಣ ಕಾರ್ಯದಿಂದ ಪುಣ್ಯ ಲಭಿಸುತ್ತದೆ. ಆದರೆ ಶಿವನ ಪ್ರತಿಷ್ಠೆ ಮಾಡುವುದರಿಂದ ತಾನೇ ಶಿವನಾಗುತ್ತೇನೆ. ಎಂದು ಹಬ್ಬೆ ನಾಯಕ ತಿಳಿಸಿರುವುದಿದೆ. ಅಂದರೆ ದೇವಾಲಯಗಳನ್ನು ನಿರ್ಮಿಸುವರು ತಾವೇ ದೇವರಾಗುತ್ತಾರೆಂಬ ಸಂದೇಶವನ್ನು ನೀಡಲಾಗಿದೆ. ಇದರಿಂದ ಹಬ್ಬೆಯ ನಾಯಕನು ಹಬ್ಬೇಶ್ವರ ದೇವಾಲಯವನ್ನು ಕಲ್ವೆಸನದಲ್ಲಿ ನಿರ್ಮಿಸಿದನೆಂದು ಈ ಶಾಸನದಲ್ಲಿ ತಿಳಿಸಿದೆ. ಅರಸನಿಂದ ಹಿಡಿದು ಸಾಮಾನ್ಯವರ್ಗದವರೂ ಸಹ ತಮ್ಮ ಶಕ್ತಿಗನುಸಾರವಾಗಿ ದೇವಾಲಯ ನಿರ್ಮಾಣ ಮತ್ತು ದಾನ ಕಾರ್ಯದಲ್ಲಿ ತೊಡಗಿರುವುದು ಕಂಡುಬರುತ್ತದೆ. ಇದರ ಹಿಂದೆ ಧಾರ್ಮಿಕ ಮೌಲ್ಯ ಮತ್ತು ನಂಬಿಕೆಗಳ ದಟ್ಟವಾದ ಪ್ರೇರಣೆಗಳು ಕಾರ್ಯನಿರ್ವಹಿಸಿವೆ. ಶಾಸನಗಳ ಚರಿತ್ರೆಯನ್ನು ಗಮನಿಸಿದಾಗ ಕಂಡುಬರುವ ಬಹುತೇಕ ಶಾಸನಗಳು ದೇವಾಲಯ ನಿರ್ಮಾಣ ಮತ್ತು ದಾನ ನೀಡಿದುದನ್ನು ತಿಳಿಸುತ್ತವೆ. ಯಾಕೆ ದೇವಾಲಯಗಳಿಗೆ ದಾನ ನೀಡಿದರೆಂದು ಪ್ರಶ್ನಿಸಿಕೊಂಡರೆ ಅದರ ಹಿಂದೆ ನಂಬಿಕೆಯಂತಹ ಬಲವಾದ ಮೌಲ್ಯಗಳ ಪ್ರಭಾವ ಎದ್ದು ಕಾಣಿಸುತ್ತದೆ. ನಂಬಿಕೆಗಳನ್ನು ಮೌಢ್ಯಗಳೆಂದು ಪರಿಭಾವಿಸಿದರೆ ನಂಬಿಕೆಯಂತಹ ಸೂಕ್ಷ್ಮ ಅಂಶಗಳು ಅಧ್ಯಯನಕ್ಕೆ ತೆರೆದುಕೊಳ್ಳುವುದಿಲ್ಲ. ಅದನ್ನು ಆ ಕಾಲದ ಜನರ ನಂಬಿಕೆಯೆಂದು ಪರಿಭಾವಿಸುವುದು ಹೆಚ್ಚು ಸೂಕ್ತವೆನ್ನಿಸುತ್ತದೆ. ದೇವರ ಬಳಿ ಹೋಗುವುದು ಅಂದರೆ ದೇವರ ದರ್ಶನಗಳಂತಹ ಭಾಗ್ಯವೆ ಸಮಾಜದ ಜನರಿಗೆ ಭಾಗ್ಯದಾಯಕ ಅಂಶವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಇಂದಿಗೂ ಧಾರ್ಮಿಕ ಕೇಂದ್ರಗಳಾದ ದೇವಾಲಯಗಳ ದರ್ಶನದಂತಹ ಆಚರಣೆಗಳು ರೂಢಿಯಲ್ಲಿವೆ. ಇಂದಿಗೂ

ಸಂಕ್ರಾಂತಿಯ ಸಮಯದಲ್ಲಿ ಅಯ್ಯಪ್ಪಸ್ವಾಮಿ ದರ್ಶನದಂತಹ ನಂಬಿಕೆಗಳು ಕಂಡುಬರುತ್ತವೆ. ದೇವರಿಗೆ ದಾನ ನೀಡುವ ಸಾಮಾನ್ಯವರ್ಗವು ತಮಗೆ ಬಂದ, ತಾವು ಕಷ್ಟಪಟ್ಟು ಸಂಪಾದಿಸಿದ ಸಂಪತ್ತು ದೇವರು ಕರುಣಿಸಿದ್ದಾನೆಂಬ ನಂಬಿಕೆಯಿಂದ ದೇವರಿಗೆ ದಾನವಾಗಿ ನೀಡುವುದು ಕಂಡುಬರುತ್ತದೆ. ಇದರ ಹಿಂದೆ ಸಂಪತ್ತು ಮತ್ತಷ್ಟು ವೃದ್ಧಿಯಾಗುತ್ತದೆ ಮತ್ತು ತಮಗೆ ಪುಣ್ಯ ಲಭಿಸುತ್ತದೆಂಬ ನಂಬಿಕೆ ಬೇರೂರಿರುತ್ತದೆ. ಕ್ರಿ.ಶ. ೧೧೫೮ರ ಶಾಸನದಲ್ಲಿ ಪಂಚಲಿಂಗೇ ದೇವರಂಗಭೋಗ ನಿವೇದ್ಯ ಮೊದಲಾದವುಗಳಿಗೆ ಅಱುವತ್ತೊಕ್ಕಲು ಒಕ್ಕಲಲಿ ಬಣ್ಣಿಗೆ ಕೊಳಗ ೧ ಹೊಱೆ ೧ ತೋಂಟಿಗರು ಒಕ್ಕಲಲ್ಲಿ ಚೈತ್ರಕ್ಕೆ ಪಾಗ ೧ ಹೊಱೆಗೆ ಅರೆವೀಸ ಬಿಟ್ಟರೆಂದು ತಿಳಿಸುತ್ತದೆ.[೭] ಕ್ರಿ.ಶ. ೧೦೨೮ರ ಶಾಸನದಲ್ಲಿ ಮುದ್ದಾಯ್ಯಗಾವುಂಡನು ಮಾಡಿಸಿದ ಎಲೆಯ ತೋಂಟದೊಳೊನ್ದು ಬಳ್ಳಿಯಂ ಅಡಕೆಯ ತೋಂಟದೊಳೊನ್ದು ಮರನುಮಂ ದೇವದೀವಿಗೆಗೊಕ್ಕಲಲೊನ್ದು ಪೊಱೆಯುಮಂ ಎಂದಿದೆ.[೮] ದೇವಾಲಯ, ಬಸದಿ ಮೊದಲಾದವುಗಳಿಗೆ ಸಾಮಾನ್ಯ ಜನರೆಂದು ಕರೆಸಿಕೊಂಡ ಒಕ್ಕಲಿಗರು ದಾನ ನೀಡಿರುವುದು ಕಂಡುಬರುತ್ತದೆ. ಇದು ಕೃಷಿಯೊಂದಿಗೆ ಸಾಮಾನ್ಯ ಜನರು ಹೊಂದಿದ್ದ ನಂಬಿಕೆಯನ್ನು ಸೂಚಿಸುತ್ತದೆ. ಕ್ರಿ.ಶ. ೧೦೭೨ರ ಶಾಸನದಲ್ಲಿ ನಕರೇಸ್ವರ ದೇವರ್ಗ್ಗೆ ಪೇಱುವೊಕ್ಕಲು ಪೇಜೆಬನ್ದ ಸೊಳೊಳ್ ಒಕ್ಕಲಲು ಬಳ್ಳವೊಂದುರ್ ಕೊಡಬೇಕೆಂದು ಶಾಸನವು ತಿಳಿಸಿದೆ. ಕ್ರಿ.ಶ. ೧೧೨೧ರ ಶಾಸನದಲ್ಲಿ ದೇವರಿಗೆ ಮೇಂಟಿಯಲು ಅಡ್ಡ ತೋಟದಲು ಅಡ್ಡ ಸಾರಿಗೆ ಒಕ್ಕಲಲು ಬತ್ತಕೊಳಗ೧ ಎಳ್ಳು ಗೋಧುವೆ ಕಡಲೆ ಬಳ್ಳನಿ ಅಂಗಡಿಯ ಒಕ್ಕಲಲು ಅಡ್ಡ ಸಲಗೆ ಬಿಟ್ಟಿದ್ದನ್ನು ತಿಳಿಸಿದೆ.[೧೦] ಕ್ರಿ.ಶ. ೧೧೨೫ರ ಶಾಸನದಲ್ಲಿ ಶ್ರೀ ವಿದುರೇಶ್ವರ ದೇವರಿಗೆ ವೊಕ್ಕಲು ಒಕ್ಕಲಲರ್ಬ್ಬಳ ಭತ್ತ ಹಡಿಕದೆ ಭಂಡಿಗಿರ್ಬ್ಬಳ ಕೊಟ್ಟರೆಂದಿದೆ.[೧೧] ಕ್ರಿ.ಶ. ೧೯೯೨ರ ಶಾಸನದಲ್ಲಿ ಕಾಡೊಳಗುಳ್ಳ ಆ ಭೂಮಿ ಮಾಡುವವರಿಗೆ ತಿರುವೆಡೆಯಾಟವಾಗಿ ನಡೆವಂತಾಗಿ ದೇವರ ಅಮೃತಪಡಿ ನಂದಾದೀವಿಗೆಗೆ ಬಿಟ್ಟರೆನ್ನಲಾಗಿದೆ.[೧೨] ಈ ಶಾಸನಗಳು ಒಕ್ಕಲಿಗರು ದೇವಾಲಯಗಳಿಗೆ ದಾನ ನೀಡಿದ್ದನ್ನು ತಿಳಿಸುತ್ತವೆ. ಒಕ್ಕಲಿಗರು ದೇವಾಲಯ ನಿರ್ಮಿಸಿದ ಉಲ್ಲೇಖಗಳೂ ಶಾಸನಗಳಲ್ಲಿ ಕಂಡುಬರುತ್ತವೆ. ಇದಕ್ಕೆ ನಿದರ್ಶನವೆಂಬಂತೆ ಕ್ರಿ.ಶ. ೧೧೧೫ರ[೧೩] ನಿಡೋಣಿಯ ಶಾಸನದಲ್ಲಿ ಮೇಣ್ಡೆಯ ಬರ್ಮ್ಮಣನು ವಿಷ್ಣುಭವನ ಮಾಡಿಸಿದನೆಂದು ತಿಳಿಸಿದೆ.

ಈ ಶಾಸನವು ಒಕ್ಕಲಿಗನಾದ ಬರ್ಮ್ಮಣನು ಮಾಡಿದ ಧರ್ಮ ಕಾರ್ಯವನ್ನು ವಿವರಿಸಿದೆ. ಒಕ್ಕಲಿಗರ ಕಷ್ಟ ನಿಷ್ಟುರಗಳನ್ನು ಈ ಶಾಸನವು ತಿಳಿಸುತ್ತದೆ. ಒಕ್ಕಲಿಗರು ಲಾಭದಾಸೆಯಿಂದ ಕಷ್ಟಪಟ್ಟು ಬಿತ್ತಿ ಬೆಳೆದ ಬೆಳೆಯನ್ನು ಹಾಳು ಮಾಡಿಕೊಳ್ಳುತ್ತಾರೆ. ಇಂತಹ ಒಕ್ಕಲಿಗರು ಹೇಗೆ ಧರ್ಮಕ್ಕಾಗಿ ಪೊನ್ನನ್ನು ನೀಡಲು ಸಾಧ್ಯವಾಗುತ್ತದೆ ಎಂದು ಶಾಸನವು ಪ್ರಶ್ನಿಸುತ್ತದೆ. ಅಲ್ಲದೆ ಈ ರೀತಿಯ ಒಕ್ಕಲಿಗರಿಗಿಂತ ಭಿನ್ನವಾಗಿ ಬರ್ಮ್ಮಣನು ಕಾಣಿಸಿಕೊಳ್ಳುತ್ತಾನೆ. ತಾನು ಊಟ ಮಾಡದೆ ಬೇರೆಯವರಿಗೂ ಕೊಡದೆ ಒಕ್ಕಲುತನದಿಂದ ಬಂದ ಹಣವನ್ನ ಕೂಡಿಟ್ಟು ದೇಗುಲ ಮಾಡಿಸಿದನೆಂದು ಶಾಸನವು ತಿಳಿಸುತ್ತದೆ. ಈ ರೀತಿ ಒಕ್ಕಲಿಗರು ಹಣವನ್ನು ಕೂಡಿಟ್ಟು ದೇವಾಲಯವನ್ನು ನಿರ್ಮಿಸುವ ಅಗತ್ಯವೇನಿತ್ತು ಎಂಬುದನ್ನು ಗಮನಿಸಿದರೆ, ಧಾರ್ಮಿಕ ಸಂಸ್ಕೃತಿ ಪ್ರೇರಿತ ನಂಬಿಕೆಯೇ ಕಾರಣವಾಗಿ ಕಂಡುಬರುತ್ತದೆ. ಅಲ್ಲದೆ ಒಕ್ಕಲಿಗರು ಬಿತ್ತುವ ಮೊದಲು ದೇವಾಲಯಗಳಿಗೆ ಪಡಿ ಸಲ್ಲಿಸಿಯೇ ಬಿತ್ತಲು ಹೊಲಕ್ಕೆ ಹೋಗುವ ಪದ್ಧತಿ ರೂಢಿಯಲ್ಲಿದೆ. ಇದು ಬೆಳೆ ಸಮೃದ್ಧವಾಗಿ ಬರಲೆಂಬ ನಂಬಿಕೆಯಿಂದ ಹೀಗೆ ಮಾಡುತ್ತಾರೆ. ಇಂದಿಗೂ ಈ ಪದ್ಧತಿ ಹಳ್ಳಿಗಳಲ್ಲಿ ರೂಢಿಯಲ್ಲಿದೆ. ದೇವಾಲಯಗಳ ನಿರ್ಮಾಣ, ಅವುಗಳ ಜೀರ್ಣೋದ್ಧಾರ ಮೊದಲಾದ ಕಾರ್ಯಗಳಿಗೆ ಅಧಿಕಾರಿ ವರ್ಗದವರು ಸಹ ದಾನ ನೀಡಿರುವ ಉಲ್ಲೇಖಗಳಿವೆ. ಈ ದಾನದ ಉದ್ದೇಶವೇನಿತ್ತು ಎಂಬುದನ್ನು ಗಮನಿಸಿದಾಗ ದೇವಾಯಗಳು ಕೇವಲ ಪೂಜೆ ಪುನಸ್ಕಾರಗಳಿಗೆ ಸೀಮಿತವಾಗಿರಲಿಲ್ಲ. ಅವು ಸಾಮಾಜಿಕ ಮತ್ತು

ಬಹುದೊಡ್ಡ ಆರ್ಥಿಕ ಸಂಸ್ಥೆಗಳಾಗಿದ್ದವು. ಇವು 'ಧರ್ಮದ ಮೂಲಕ ಸಮಾಜವನ್ನು, ಪ್ರಭುತ್ವವನ್ನು ತನ್ನ ನಿಯಂತ್ರಣಕ್ಕೆ ಒಳಪಡಿಸಿಕೊಂಡಿದ್ದವು. 'ರಾಜಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವವನ್ನು ಬಲಪಡಿಸುವ ಮೂಲಕ ಜನರ ನೀತಿ ಸಂಹಿತೆಗಳನ್ನು ರೂಪಿಸುವ ಜವಾಬ್ದಾರಿಯನ್ನು ಹೊತ್ತವು.'[೧೪] ಈ ಮೂಲಕ ರಾಜನು ನಿರ್ವಹಿಸುವ ಕಾರ್ಯಗಳನ್ನು ಮತ್ತು ಅವನ ಜವಾಬ್ದಾರಿಯ ಹೊರೆಯನ್ನು ನೈತಿಕತೆಯ ಅಸ್ತ್ರದ ಮೂಲಕವೇ ದೇವಾಲಯಗಳು ಸಮಾಜದ ಜನರ ವರ್ತನೆಯ ಮೇಲೆ ನಿಯಂತ್ರಣ ಸಾಧಿಸಿದ್ದವು. ಈ ಹಿನ್ನೆಲೆಯಲ್ಲಿ ಕರ್ನಾಟಕವನ್ನಾಳಿದ ಎಲ್ಲ ರಾಜಮನೆತನಗಳು, ಪೆರ್ಗಡೆ, ಗಾವುಂಡ, ಮಾಂಡಳಿಕ ಮೊದಲಾದ ಅಧಿಕಾರಿ ವರ್ಗದವರು, ವ್ಯಾಪಾರಿಗಳು ಮತ್ತು ಶ್ರೀಮಂತರು ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿದರು. ಅಲ್ಲದೆ ಅವುಗಳ ಜೀರ್ಣೋದ್ಧಾರ, ದೇವಾಲಯದ ದಿನನಿತ್ಯದ ಕಾರ್ಯಗಳಿಗೆ ದಾನ ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ದೇವಾಲಯಗಳು ಜನರಲ್ಲಿ ದೇವಾಲಯದ ಬಗೆಗೆ ಭಕ್ತಿ ಮೂಡಿಸುವ ಮೂಲಕ ಅವರ ನಡವಳಿಕೆಗಳನ್ನು ತಿದ್ದುವ ಜವಾಬ್ದಾರಿಯನ್ನು ಹೊತ್ತವುಗಳಾಗಿವೆ. ಈ ಮೂಲಕ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ದೇವಾಲಯಗಳು ಸಮಾಜದ ಜನರಿಗೆ ಪರೋಕ್ಷವಾಗಿ ಸಂದೇಶವನ್ನು ರವಾನಿಸಿರುವ ಸಾಧ್ಯತೆಗಳಿವೆ. ಅಧಿಕಾರಿ ವರ್ಗದವರು, ವ್ಯಾಪಾರಿಗಳು, ಒಕ್ಕಲಿಗರು ಹೀಗೆ ಮೊದಲಾದವರ ಮೂಲಕ ದೇವಾಲಯಗಳು ಭೂ ಒಡೆತನದ ಕೇಂದ್ರಗಳಾಗಿದ್ದವು. ಕ್ರಿ.ಶ. ೧೨೨೭ರ ಶಾಸನದಲ್ಲಿ ಅಚಲ ಪ್ರಕಾಶನು ದೇಗುಲವನ್ನು ಕಟ್ಟಿಸಿ ಪ್ರತಿಷ್ಠೆ ಮಾಡಿಸಿ ವರದನರಸಿಂಹ ದೇವರ ಬ್ರಹ್ಮಪುರಿಯಲ್ಲಿ ನೆಲೆಸಿದ ಅನೇಕ ಬ್ರಾಹ್ಮಣರಿಗೆ ಭೂದಾನವಿತ್ತನೆಂದಿದೆ. ಅಲ್ಲದೆ ವೀರ ಬಲ್ಲಾಳನು ಸಿದ್ಧಾಯದಿಂದ ಬರುವ ಹಣವನ್ನು ದಾನ ನೀಡಿದನೆಂದಿದೆ.[೧೫] ಹೊಯ್ಸಳ ವಿಜಯಾದಿತ್ಯನ ಶಾಸನವೊಂದರಲ್ಲಿ ಬಬ್ಬೆಯ ನಾಯಕ ಮೈದವೆಗ್ಗಡೆಯ ಹೆಸರಲಿ ದೇವಾಲಯ ನೆತ್ತಿಸಿ ಗದ್ದೆಸಲಗೆ ೨ ಬೆಳ್ದಲೆಕೊಳಗ ೧೦ ದೇವರಿಗೆ ದತ್ತಿ ಬಿಟ್ಟನೆಂದಿದೆ.[೧೬] ಕ್ರಿ.ಶ. ೧೦೯೫–೯೬ರ ಶಾಸನದಲ್ಲಿ ಬೂವಗಾವುಣ್ಡನು ದೇವಾಲಯಕ್ಕೆ ಗದ್ದೆ ಖಣ್ಡುಗ ಆಱು ಬೆದ್ದಲ್ ಮತ್ತರೊನ್ದು ದಾನ ನೀಡಿದನೆಂದಿದೆ.[೧೭] ಹೀಗೆ ಅಧಿಕಾರಿ ವರ್ಗದ ದಾನಗಳು ಹೇರಳವಾಗಿ ಶಾಸನದಲ್ಲಿ ಉಲ್ಲೇಖಗೊಂಡಿದ್ದು, ಕೆಲವೊಂದನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ. ಕ್ರಿ.ಶ. ೮–೯ನೆಯ ಶತಮಾನದ ಶಾಸನದಲ್ಲಿ ವಡಕರೆನಾಡು ೩೦೦ರನ್ನು ವಿಕ್ರಮಾದಿತ್ಯನು ಆಳುತ್ತಿದ್ದನು. ಈ ಅರಸನು ಸುಗ್ಗಿಯ ಕಾಲದಲ್ಲಿ ಅಲ್ಲಿಗೆ ಬಂದು ಧರ್ಮಕ್ಕಾಗಿ ಹಣವನ್ನಿತ್ತನೆಂದು ಎಂ.ಎಚ್.ಕೃಷ್ಣ ಅರ್ಥೈಸಿದ್ದಾರೆ. ಶಾಸನದಲ್ಲಿ ಉಲ್ಲೇಖಗೊಂಡ ಸಾಲುಗಳು ಇಂತಿವೆ. 'ಸುಗ್ಗಿಯುಳ್ವಂದು ಪೊನ್ನಿಟ್ಟ ಧರ್ಮ' ಅರಮನೆಗೆ ಬರಬೇಕಾಗಿದ್ದ ಭಟಮಾನ್ಯದಲ್ಲಿ ಒಂದು ಹೊನ್ನಿನಂತೆ ಧರ್ಮಕ್ಕೆ ವಿನಿಯೋಗಿಸಿದನೆಂದು ಅರ್ಥೈಸಿದ್ದಾರೆ.[೧೮] ಒಟ್ಟಿನಲ್ಲಿ ಸುಗ್ಗಿಯ ಸಂದರ್ಭದಲ್ಲಿ ಧರ್ಮಕಾರ್ಯಗಳಿಗೆ ಹೊನ್ನು ಕೊಟ್ಟರೆಂದು ತಿಳಿದುಬರುತ್ತದೆ.

ದೇವಾಲಯಗಳು ಮತ್ತು ಕೃಷಿ ಸಂಬಂಧವಾಗಿ ಸಮಾಜದಲ್ಲಿ ಜರುಗುತ್ತಿದ್ದ ಕಾರ್ಯಗಳಲ್ಲಿ ಸಂತೆಗಳು ಪ್ರಮುಖವಾಗಿ ಕಂಡುಬರುತ್ತವೆ. ದೇವಾಲಯಗಳನ್ನು ಸಾಮಾನ್ಯವಾಗಿ ರಾಜರು ಮೊದಲಾದ ಅಧಿಕಾರಿ ವರ್ಗದವರು ತಮ್ಮ ರಾಜಧಾನಿಯ ಸುತ್ತಲೂ ಅಥವಾ ರಾಜಧಾನಿಗಳಲ್ಲಿ ನಿರ್ಮಿಸಿರುವುದು ಬಹುತೇಕ ಕಂಡುಬರುತ್ತದೆ. ಸಂತೆಗಳು ದೇವಾಲಯದ ಸಮೀಪ ಅಥವಾ ಸುತ್ತಲು ನಡೆಯುತ್ತಿದ್ದವು ಮತ್ತು ಈ ಸಂತೆಗಳು ನಿಶ್ಚಿತವಾಗಿರುತ್ತಿದ್ದವು. ಆದರೆ ಪ್ರತಿನಿತ್ಯ ಜರುಗುತ್ತಿರಲಿಲ್ಲ. ವಾರಕ್ಕೊಂದು ದಿನದಂತೆ ಜರುಗಿರುವ ಸಾಧ್ಯತೆಗಳಿವೆ. ದೇವರಿಗೆ ಸಂಬಂಧಿಸಿದಂತೆ ಆ ದೇವರ ವಾರಗಳು ಕಂಡುಬರುತ್ತವೆ. ಆ ವಾರದಂದು ದೇವರಿಗೆ ವಿಶೇಷ ಪೂಜೆ ನಡೆಯುತ್ತಿತ್ತು.

ಅಂದು ಭಕ್ತರ ಸಂಖ್ಯೆ ಹೆಚ್ಚಾಗಿರುತ್ತಿತ್ತು. ಈ ದಿನದಂದು ಸಂತೆಗಳು ಪ್ರಾಚೀನ ಕಾಲದಲ್ಲಿ ಜರುಗಿರುವ ಸಾಧ್ಯತೆಗಳಿವೆ. ಸ್ವಾಮಿಕಾರ್ಯದ ಜೊತೆಗೆ ಸ್ವಕಾರ್ಯವು ಆಗುತ್ತದೆ ಎಂಬ ಭಾವನೆಯಿಂದ ದೇವಾಲಯಗಳಿಗೆ ಬಂದ ಜನರು ಸಂತೆಗಳಿಗೆ ಹೋಗುತ್ತಿದ್ದರು. ಇಂದಿನ ಮಾರುಕಟ್ಟೆಯಂತೆ ಜನರ ಜೀವನಾವಶ್ಯಕತೆಗೆ ಬೇಕಾದ ಎಲ್ಲ ವಸ್ತುಗಳು ಸಂತೆಯಲ್ಲಿ ದೊರೆಯುತ್ತಿದ್ದವು. ದೇವರ ದರ್ಶನವನ್ನು ಮುಗಿಸಿದ ಭಕ್ತರು ಸಂತೆಯ ಕಾರ್ಯಗಳನ್ನು ಮುಗಿಸುತ್ತಿದ್ದರು. ಭಕ್ತಿ ನಂಬಿಕೆಯ ಮೂಲಕ ವ್ಯಾಪಾರಿ ವೃತ್ತಿಕಾರ್ಯಗಳನ್ನು ದೇವಾಲಯಗಳು ನಿರ್ವಹಿಸಿವೆ. ಕ್ರಿ.ಶ. ೧೧೯೦ರ ಶಾಸನದಲ್ಲಿ ಮಾಯಿ ದೇವರಸನು ಬೇವಿನೂರಿನಲ್ಲಿ ಸಂತೆ ಮತ್ತು ಮರದ ತೋಪನ್ನು ನಿರ್ಮಿಸಿ ಭೋಗೇಶ್ವರ ದೇವರಿಗೆ ದಾನ ನೀಡಿದನು.[೧೯] ಸಂತೆಯಿಂದ ಬಂದ ಆದಾಯವು, ಅಂದರೆ ಕೊಳ್ಳುವವರು, ಮಾರುವವರು ತಾವು ಮಾರಿದ ಮತ್ತು ಪಡೆದ ವಸ್ತುಗಳಿಗೆ ನೀಡಿದ ತೆರಿಗೆ ರೂಪದ್ದಾಗಿತ್ತು. ಇದನ್ನು ದೇವಾಲಯಕ್ಕೆ ಬಿಡಲಾಯಿತೆಂದು ಶಾಸನವು ತಿಳಿಸುತ್ತದೆ.

ಕ್ರಿ.ಶ. ೧೨೮೧ರ ಶಾಸನದಲ್ಲಿ ಸಿರವಳಲದೊಳಗೆ ದೇವರಿಗೆ 'ನಾಡ ಸಂತೆಯೊಳಗೆ ಹಾನಗೆ ಭತ್ತ ಹೇಜಿಂಗೆ ಒಂದು ಮಾನ ಹೆಡಗೆಗೆ ಅರಮಾನ ಹೊಡಕೆಯಂಣೆ ಸೊಲ್ಲಿಗೆ ಹೇಜಿಂಗೆ ಕಾಯಿ ೧೨ ಹೆಡಗೆಗೆ ೬ ಹೇಜಿಂಗೆ ಎಲೆ೧೦೦ ಕೊಟ್ಟರೆಂದಿದೆ.[೨೦] ಕ್ರಿ.ಶ. ೧೨೦೭ರ ಶಾಸನದಲ್ಲಿ ದೇವರ ನಿತ್ಯ ನೈವೇದ್ಯಕ್ಕೆ ನಂದಾದೀವಿಗೆಗೆ ಅರವನದ ಸೊಟಗೆ ಯೆಣ್ಣೆ ಸಂತೆಯೊಳಗೆ ಕೂಡಕ್ಕೆ ಸೊಲ್ಲಗೆ ಸೊಟಿಗೆಯಣ್ಣೆಯೊಂದಮಂ ಬಳದ ಸಾಮ್ಯದಯ್ವತ್ತೊಕ್ಕಲು ಎಂದಿದೆ.[೨೧] ಈ ರೀತಿ ಸಂತೆಗಳ ಮೂಲಕ ಒಕ್ಕಲುಗಳು, ವ್ಯಾಪಾರಗಳು, ಗಾಣಿಗ ಮುಂತಾದವರಿಂದ ದೇವಾಲಯಕ್ಕೆ ಆದಾಯದ ಮಹಾಪೂರವೇ ಹರಿದುಬರುತ್ತಿತ್ತು. ತೆಲ್ಲಿಗರು ಗಾಣದಲರ್ಧಸೊಲ್ಲಗೆ ಎಣ್ಣೆ ಬಿಟ್ಟದ್ದನ್ನು 'ಕ್ರಿ.ಶ. ೧೧೯೮ರ ಶಾಸನವು ತಿಳಿಸುತ್ತದೆ.[೨೨] ಕ್ರಿ.ಶ. ೧೦೩೩ರ ಶಾಸನವು ಸಾಸಿರ್ವ ಮೂನೂರ್ವರು ಶ್ರೀ ಸೋಮನಾಥ ದೇವರಿಗೆ ಎಲೆಯ ಹೇಜಿಂಗೆ ವೀಸ೧ ಕಮ್ಮಗದ್ದೆ ೪೫೦ ಎಲೆಯ ತೋಟದ ಸುಂಕಾ ಪನ್ನಾಯವನ್ನು ಬಿಟ್ಟರೆಂದಿದೆ.[೨೩] ಕ್ರಿ.ಶ. ೧೨ನೆಯ ಶತಮಾನದ ಶಾಸನವು ಕೇಣಿಕಾಜಿ ವಿನಯಸಿಂಹನಪ್ಪ ಯೇಚಿಸೆಟ್ಟಿ ತನಕ್ಕಸಾಲದ ಕೇಣಿಯಲು ದೀಪಾವಳಿ ಪರ್ವ್ವದಲು ದೇವರ ವೀಳೆಯಕ್ಕೆ ಬಿಟ್ಟಡಕೆ ೪೦೦ ಎಂದಿದೆ.[೨೪] ಅಡಕೆ ತೋಟದ ಫಸಲು ಮುಕ್ತಾಯವಾಗುವುದು ದೀಪಾವಳಿಗೆ. ದಸರಾ(ನವರಾತ್ರಿ)ಗೆ ಮಾರ್ಗೋಯಿಲು, ದೀಪಾವಳಿಗೆ ಕಡೆಗೋಯಿಲು ಆದುದರಿಂದ ದೀಪಾವಳಿಗೆ ಕೇಣಿಕಾನು ತೋಟದ ಎಲ್ಲ ಆದಾಯವನ್ನು ಪಡೆಯುವ ಸಮಯವಾಗಿರುತ್ತದೆ. ಈ ಸಂದರ್ಭದಲ್ಲಿ ಕೇಣಿ ತೆಗೆದುಕೊಂಡವನು ದೇವರ ವೀಳೆಯಕ್ಕೆ ಅಡಿಕೆಯನ್ನು ಸಲ್ಲಿಸಬೇಕು. ದೇವರ ಪ್ರತಿಯೊಂದು ಕಾರ್ಯಗಳಿಗೂ ದೇವಾಲಯದಲ್ಲಿ ಅಡಕೆ ಮತ್ತು ಎಲೆಯನ್ನು ಬಳಸುವ ಸಂಪ್ರದಾಯವು ಭಾರತೀಯ ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೧೭೬ರ ಶಾಸನದಲ್ಲಿ ೩೬ ಬಾಡದ ಗ್ರಾಮಗಳ ತೆರಿಗೆಯನ್ನು ಸೋಮನಾಥ ದೇವರಿಗೆ ಬಿಟ್ಟರೆಂದಿದೆ. ಅಲ್ಲದೆ ಭತ್ತ, ಹೊಂಗೆ, ಎಲೆ, ಅಡಕೆ ಮಾರಿದರೆ, ಕೊಂಡರೆ ತೆರಿಗೆ ಭತ್ತದಲ್ಲಿ ಮಾರಿದರೆ ೧ ಮಾನ ಕೊಂಡರೆ ೧ ಮಾನ ಹೊಂಗೆ ಅಡಕೆ ೧೦ ಹೊಜಿಗೆ ಮಾರಿದರೆ ಹೊಂಗೆ ಎಲೆ೫೦ ಸಂತೆಯ ಪನಾಯ ಅಡಕೆ ಅರ್ಧ ಸೊಲ್ಲಗೆ ಹರಣದ ಭತ್ತ ರಾಸಿಯ ಸಟ್ಟುಗ ೧.[೨೫]

ಕ್ರಿ.ಶ. ೧೨೭೮ರ ಶಾಸನದಲ್ಲಿ ದೇವಿಯ ಕಂಮತದ ಭತ್ತ ದೇವಧನ ಮಾಜಿದಡಂ ಯಾಯಾ ಮಾಂನ್ಯ ದೇವಿಯ ದೊಳಗೇನನು ಮಾಜಿದ ವಸ್ತುವಿಗೆ ಯಾವ ಸುಂಕವಿಲ್ಲ ಎಂದಿದೆ.[೨೬] ದೇವಾಲಯದ ಪೂಜೆ ಮಾಡುವ ಪೂಜಾರಿ ಮಾರುವ ವಸ್ತುಗಳಿಗೆ ತೆರಿಗೆ ಹಾಕುವಂತಿಲ್ಲವೆಂದು ಶಾಸನವು ತಿಳಿಸಿದೆ. ವಿವಾಹದ ಸಂದರ್ಭದಲ್ಲಿ ವಿವಾಹ ಮಾಡಿಕೊಳ್ಳುವವರು ದೇವರಿಗೆ ದಾನ ನೀಡಿದ ಉಲ್ಲೇಖಗಳಿವೆ. 'ಕ್ರಿ.ಶ. ೧೧೬೯ರ ಶಾಸನದಲ್ಲಿ ಮದುವಳಿಗೆಯಲ್ಲಿ ಹಾಗ ೧ ಜೋಳ

ಕೊಳಗ ೩ ಪೂಜಾರಿ ತಪೋಧನನ ಕಾಪಿಂಗೆ ಬೇಳೆ ಸಂಕ್ರಾಂತಿಯ ಬೇಳೆ, ಬೇಜೂರಿಂದ ಬಂದ ಬಾಡುಕಾಯ ಭಣ್ಡಿ ೧ಕ್ಕಂ ಕಾಲರೂ ೧೨ ಉಳ್ಳಿಯ ಎಂದಿದೆ.[೨೭] ಇದರ ಹಿಂದೆಯೂ ದೇವಾಲಯಗಳ ಮೇಲಿನ ಆಧ್ಯಾತ್ಮಿಕ ಒಲವು ಮತ್ತು ನಂಬಿಕೆಯ ಪ್ರಭಾವ ದಟ್ಟವಾಗಿರುವುದು ಕಂಡುಬರುತ್ತದೆ. 'ಕ್ರಿ.ಶ. ೧೨೬೭ರ ಶಾಸನವು ಸಮಸ್ತ ಉಭಯ ನಾನಾ ದೇಸಿಗಳು ನಖರಂಗಳು ಮೊದಲಾದವರು ಸೇರಿ ಗವರೇಶ್ವರ ದೇವರ ಶ್ರೀಕಾರ್ಯ್ಯಕ್ಕಂಅಂಗಭೋಗ ರಂಗಭೋಗ ಪಂಚಾಮೃತ ಅಮೃತಪಡಿಸಗಂ ಖಂಡಸ್ಪುಟಿತ ಜೀರ್ಣೋದ್ಧಾರಕ್ಕೆಂದು ಹತ್ತಿಯ ಹೇಱು ೧೦ ಕ್ಕೆ ಪಣ ೧ ಕೊಂಡಲ್ಲಿ ಹತ್ತಿ ಪಲ ೫ ಬೆಂಡೆಯ ಮಳವೆ ೧೦ ಕೆ ಪಣ ೧ ಅರಿಸಿನದ ಹೇಱು ೧೦ ಕೆ ಪಣ ೧ ಬೆಲ್ಲದ ಹೇಱು ೧೦ ಕ್ಕೆ ಪಣ ೧ ಓಲೆಯ ಮಳವೆ ೧೦ ಕೆ ಪಣ ಉಪ್ಪಿನ ಹೇಱು ೨೦ ಕೆ ಪಣ ೧ ದವಸದ ಹೇಱು ೨೦ಕೆ ಪಣ ೧ ಅಡಕೆಯ ಹೇಱು ೧೦ಕೆ ಪಣ ೨ ಮೆಣಸಿನ ಹೇಱು ೧೦ ಕೆ ಪಣ ೨ ಏಲಕ್ಕಿಯ ಹೇಱು ೧೦ಕ್ಕೆ ಪಣ ೨ ಕಂಬಳಿಯ ಮಳವೆ ೧೦ ಕೆ ಪಣ ..ಗೂಲ ಮಳವೆ ೧೦ಕ್ಕಂ ಪಣ ೨ ಸಂಭಾರದ ಹೇಱು ೧೦ ಕೆ ಪಣ ೨ ಸೀಮೆಯ ಮಳವೆ ೧೦ ಕೆ ಪಣ ಕುದುರೆಯ ಕೊಟ್ಟಲ್ಲಿ ಪಣ ೧ ಕೊಂಡಲಿ ಪಣ ೧ ಗದೆ ಖ ೩ ಕೆಯಿ ಖ ೧೦ ಅಡಕೆಯ ಹೇಜಿಂಗೆ.........ಕೋಣನ ಹೇಱು ಎತ್ತಿನ ಹೇಱು[೨೮] ಎಂದಿದೆ. ವ್ಯಾಪಾರಗಳ ಮೂಲಕ ದೇವಾಲಯಗಳಿಗೆ ಹೇರಳವಾಗಿ ಆದಾಯ ಬರುತ್ತಿತ್ತೆಂಬುದು ಶಾಸನಗಳಿಂದ ತಿಳಿದುಬರುತ್ತದೆ. ಇವೆಲ್ಲವುಗಳಿಂದ ಬಂದ ಆದಾಯದಿಂದ ದೇವಾಲಯಗಳು ಬೃಹತ್ ಆರ್ಥಿಕ ಕೇಂದ್ರಗಳಾಗಿದ್ದವು. ಅಲ್ಲದೆ ದಾನದಿಂದ ಬಂದ ಸಂಪತ್ತನ್ನು ಇಮ್ಮಡಿಗೊಳಿಸಲು ಬಡ್ಡಿಯ ರೂಪದಲ್ಲಿ ಸಮಾಜದ ಜನರಿಗೆ, ವ್ಯಾಪಾರಿಗಳಿಗೆ ಸಾಲವನ್ನು ನೀಡುತ್ತಿದ್ದವು. ಕ್ರಿ.ಶ. ೧೧೯೯ರ ಶಾಸನವು ಬೂಚೇಸ್ವರ ಮೊದಲಾದ ದೇವರಿಗೆ ಕಲ್ಲೆಯನು ದೇವರ ಶ್ರೀ ಕಾರ್ಯವನ್ನು ನಡೆಸಲು ಹೂದೋಂಟ ಹಾಗವಡ್ಡಂ ಗದ್ಯಾಣ ಹನ್ನೆರಡರ ಬಡ್ಡಿಯಂ ಕುಡ ವಸುಧಾರೆಗೊಂದು ಹೊನ್ನ ಬಡ್ಡಿಯಂ ಕುಡುವರು ಮೂಱು ದೇವಾಲಯಕ್ಕ ಧೂಪಕ್ಕೆ ಎರಡು ಹೊನ್ನ ಬಡಿಯಂ ನಂದಾದೀವಿಗೆಗೆ ಮೂಱು ಹೊನ್ನ ಬಡ್ಡಿಯಂ ಕೊಡುವರು ಬ್ರಾಹ್ಮಣರಿಗೆ ಅಷ್ಟಾಯಿಬಾವುದೆವಸ ಏಕಾದಿಸಿಯ ಅಕ್ಕಿಯನಿಕ್ಕುವರು ಎರಡು ಹೊಂನ ಬಡ್ಡಿಯಂ ಬೈರವ ದೇವರ್ಗ್ಗೆ ನಂದಾದೀವಿಗೆ ಒಂದು ಹೊಂನ್ನ ಬಡಿಯಂ ಕೊಡುವಂತಾಗಿ ಹೇಳಿದೆ.[೨೯] ದೇವಾಲಯಗಳು ಸಮಾಜದ ಜನರಿಗೆ ಬಡ್ಡಿ ಸಾಲ ಕೊಡುತ್ತಿದ್ದವು. ಬಡ್ಡಿಯ ದರ ಅಧಿಕವಿದ್ದರೂ ಬಡ್ಡಿ ತೆಗೆದುಕೊಳ್ಳುವ ಜನರು ಪ್ರಶ್ನಿಸುತ್ತಿರಲಿಲ್ಲ. ದೇವರಿಗೆ ಕೊಡುವ ಬಡ್ಡಿಯ ಹಣವನ್ನು ಭಕ್ತಿಯಿಂದ ಪಾವತಿಸಿದಂತೆ ಕಂಡುಬರುತ್ತದೆ. ಈ ಮೂಲಕ ಬಂದ ದೇವಾಲಯದ ಸಂಪತ್ತಿನಿಂದ ದೇವಾಲಯಗಳಿಗೆ, ದೇವಾಲಯದ ಧಾರ್ಮಿಕ ಕಾರ್ಯಗಳಿಗೆ ವಿನಿಯೋಗಿಸಲಾಗುತ್ತಿತ್ತು. ದೇವಾಲಯಗಳು ಸಮಾಜದ ವಿವಿಧ ವರ್ಗದ ಜನರಿಗೆ ಉದ್ಯೋಗವನ್ನು ಒದಗಿಸುತ್ತಿದ್ದವು. ಪುಜಾರಿ, ಪರಿಚಾರಕ, ಜೋತಿಷಿಗಳು, ಮಾಲೆಕಾರರು, ಅಂಗಭೋಗದ ನರ್ತಕರು, ಸಂಗೀತಗಾರರು, ಪಾವುಳದವರು, ಪಾತ್ರದವರು ಹೀಗೆ ಮೊದಲಾದವರಿಗೆ ಉದ್ಯೋಗ ಒದಗಿಸಿತ್ತು. ಕ್ರಿ.ಶ. ೧೨೭೮ರ ಶಾಸನದಲ್ಲಿ ದೇವಾಲಯದ ತ್ರಿಕಾಲ ಪೂಜೆಗೆಂದು ದಾನ ನೀಡಿದ ಉಲ್ಲೇಖವಿದೆ.[೩೦] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಹತ್ತಿವೆರೆ ದೇವರ ರಂಗಭೋಗಕ್ಕೆ ದಾನ ನೀಡಿದ ಉಲ್ಲೇಖವಿದೆ.[೩೧] ದೇವಾಲಯದ ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲದ ಪೂಜಾ ವಿಧಿಗಳನ್ನು ಪೂಜಾರಿಯು ನೆರವೇರಿಸುತ್ತಿದ್ದನು ಎನ್ನಲಾಗಿದೆ. ಇದಕ್ಕೆ ಪ್ರತಿಯಾಗಿ ಪೂಜಾರಿಗೆ ಭೂಮಿಯನ್ನು ದಾನ ನೀಡಲಾಗುತ್ತಿತ್ತು. ಈ ಭೂಮಿಯಿಂದ ಬಂದ ಆದಾಯದಿಂದ ಪೂಜಾರಿಯ ಜೀವನ ನಿರ್ವಹಣೆಯಾಗುತ್ತಿತ್ತು. 'ದೇವಾಲಯದ ಹಣದಲ್ಲಿ ಅಕ್ಕಸಾಲಿಗರಿಗೆ, ಕುಂಬಾರರಿಗೆ, ಅಗಸನಿಗೆ ಮತ್ತು ನಾವಿದನಿಗೆ ನಿಶ್ಚಿತ ಗದ್ಯಾಣವನ್ನು ನೀಡಬೇಕೆಂದು ಕ್ರಿ.ಶ. ೧೨೬೭ರ ಶಾಸನವು ತಿಳಿಸುತ್ತದೆ.[೩೨] ದೇವಾಲಯದ ವಿವಿಧ ಸೇವೆಗಳನ್ನು ನಿರ್ವಹಿಸುವ ವ್ಯಕ್ತಿಗಳಿಗೆ ನಿಶ್ಚಿತ ಕೊಡುಗೆಯನ್ನು

ಹೆಸರಿಸುತ್ತ ಹಡಪದೋಲಗಕ್ಕೆ, ಕುಡಿನೀರವೋಲಗಕ್ಕೆ, ಶ್ರೀಗಂಧದೋಲಗಕ್ಕೆ, ಸೀಗುರಿ ಚಾಮರದೋಲಗಕ್ಕೆ, ಹನ್ನೆರಡು ಮುದ್ರೆಯವೋಲಗಕ್ಕೆ ನೀಡಬೇಕೆಂದಿದೆ.[೩೩] ಕ್ರಿ.ಶ. ೧೧೭೩ರ ಶಾಸನದಲ್ಲಿ ಬುಜಗೌಡನ ಪುರದ ಶ್ರೀಯೆಯನ ಬಸದಿಗೆ ನಿತ್ಯ ನಿವೇದ್ಯದ ಜೊತೆಗೆ ಪಾತ್ರ ಹಾರೋಳಕಂ......ದಾನಕ್ಕಂ ಎಂದಿದೆ.[೩೪] ಶಾಸನದಲ್ಲಿ ಬಳಕೆಯಾಗಿರುವ ನಟ್ಟುವ, ನಟುವ ಎಂಬ ಪದ ಸಂಗೀತ ನರ್ತನಗಳಲ್ಲಿ ಪರಿಣತನಾದ ವ್ಯಕ್ತಿಯನ್ನು ಅಥವಾ ನಾಟ್ಯಾಚಾರ್ಯನನ್ನು ಸೂಚಿಸುತ್ತದೆ.[೩೫] ಇವರಿಗೆ ದೇವಾಲಯಗಳು ಉದ್ಯೋಗವನ್ನು ಒದಗಿಸುವ ಮೂಲಕ ಸಮಾಜದಲ್ಲಿ ಸಾಂಸ್ಕೃತಿಕ ಪರಂಪರೆಯನ್ನು ಪೋಷಿಸಿಕೊಂಡು ಬಂದವು.

ಕ್ರಿ.ಶ. ೧೧೬೫ರ ಶಾಸನದಲ್ಲಿ ಪ್ರಸನ್ನ ಕೇಶವ ದೇವರಿಗೆ ಪರಮೇಶ್ವರದತ್ತಿಯಾಗಿ ತೋಟದ ಬಣ್ಣಿದೆರೆಯನ್ನು ದಾನವಾಗಿ ಕೊಡುತ್ತಾರೆ. ಹೊಟ್ಟೆಯ ಬಮ್ಮನು ತೋಟದ ಅರಣಿಗೆ ಗುತ್ತಿಗೆಯನ್ನು ಬ್ರಹ್ಮಪುರಿಯ ಮಹಾಜನಂಗಳಿಂದ ಪಡೆದು ಪ್ರತಿದಿನವೂ ದೇವರಿಗೆ ಹೂವಿನ ದಂಡೆಯನ್ನು ಸಲ್ಲಿಸಬೇಕು. ಪೂರೈಸದಿದ್ದರೆ ಅರಣಿಗೆ ಗುತ್ತಿಗೆಯನ್ನು ಕೊಡಕೂಡದು ಎಂದಿದೆ.[೩೬] ದೇವಾಲಯದ ಸೇವೆಯನ್ನು ನಿರ್ವಹಿಸುವವರಿಗೆ ಭೂದಾನವನ್ನೋ, ಹಣವನ್ನೋ, ಗುತ್ತಿಗೆಯನ್ನು ನೀಡಲಾಗುತ್ತಿತ್ತು. ಒಂದು ವೇಳೆ ದೇವರ ಕಾರ್ಯವನ್ನು ಮಾಡದಿರುವ ಸಂದರ್ಭದಲ್ಲಿ ಅದನ್ನು ಹಿಂಪಡೆದ ಉದಾಹರಣೆಗಳು ಶಾಸನಗಳಿಂದ ತಿಳಿದುಬರುತ್ತವೆ. ಕೆಲವೊಮ್ಮೆ ಬಲವಂತದಿಂದ ಭೂಮಿಯನ್ನು ಕಿತ್ತುಕೊಂಡ ಉದಾಹರಣೆಗಳು ಸಿಗುತ್ತವೆ. ಕ್ರಿ.ಶ. ೧೧೪೫ರ ಶಾಸನದಲ್ಲಿ ಮರಲೆ ಗ್ರಾಮದಲ್ಲಿ ಅಗ್ರಹಾರ ಸ್ಥಾಪನೆ ಮತ್ತು ಕಲಿದೇವರ ದೇವಾಲಯದ ನಿರ್ಮಾಣಕ್ಕಾಗಿ ಕೊಟ್ಟಿದ್ದ ಭೂಮಿಯನ್ನು ಅನ್ಯಾಯವಾಗಿ ಕಿತ್ತುಕೊಳ್ಳಲಾಯಿತು. ಕನಕವ್ವೆ ಎಂಬುವಳ ಆಸಕ್ತಿಯಿಂದಾಗಿ ಈ ಭೂದಾನಗಳನ್ನು ಮೊದಲನೆಯ ನರಸಿಂಹನ ಕಾಲದಲ್ಲಿ ನ್ಯಾಯವಾಗಿ ಸೇರಬೇಕಾದವರಿಗೆ ಕೊಡಿಸಲಾಯಿತು.[೩೭] ಕ್ರಿ.ಶ. ೯೭೫ರ ಶಾಸನವು ಐವರು ಸೂಳೆಯರೊಂದಿಗೆ, ಒಬ್ಬ ಪಾತ್ರದ ಸೂಳೆಯರಿಗೆ ದಾನ ಬಿಟ್ಟಿದ್ದನ್ನು ತಿಳಿಸುತ್ತದೆ.[೩೮] ಹೀಗೆ ದೇವಾಲಯದಲ್ಲಿ ದೇವರಿಗೆ ಸೇವೆ ಸಲ್ಲಿಸುವ ವಿವಿಧ ವರ್ಗಗಳು ಒಂದೆಡೆ ತಮ್ಮ ಜೀವನ ನಿರ್ವಹಣೆಗಾಗಿ ಮತ್ತೊಂದೆಡೆ ಧಾರ್ಮಿಕ ಶ್ರದ್ಧೆಯಿಂದ ಕಾರ್ಯನಿರ್ವಹಿಸುತ್ತಿದ್ದರು. ದೇವಾಲಯಗಳು ವಿದ್ಯಾಕೇಂದ್ರಗಳಾಗಿ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೧೬೨ರ ಬಳ್ಳಿಗಾವೆಯ ಕೇದಾರ ಮಠದ ಶಾಸನವು ಈ ಬಗೆಗೆ ಮಾಹಿತಿಯನ್ನೊದಗಿಸಿದೆ.[೩೯] ಬಳ್ಳಿಗಾವೆಯ ಕೇದಾರ ಮಠ ಅಥವಾ ಕೋಡಿ ಮಠವು ಕ್ರಿ.ಶ. ೧೧-೧೨ನೆಯ ಶತಮಾನದಲ್ಲಿ ಪ್ರಸಿದ್ಧ ಶೈವ ಕೇಂದ್ರವಾಗಿ ದಕ್ಷಿಣ ಕೇದಾರ ಎಂದು ಪ್ರಸಿದ್ಧಿ ಪಡೆದಿತ್ತು.[೪೦] ನೈಷ್ಠಿಕರಾದ ಬ್ರಹ್ಮಚಾರಿ ಮುನಿಗಳ ವಾಸಸ್ಥಾನವಾಗಿತ್ತು. ಅಲ್ಲಿ ನಾಲ್ಕು ವೇದಗಳು, ಕೌಮಾರ, ಶಾಕಟಾಯನ, ಪಾಣಿನೀಯ ಮುಂತಾದ ವ್ಯಾಕರಣ, ನ್ಯಾಯ, ವೈಶೇಷಿಕ, ಮೀಮಾಂಸ, ಸಾಂಖ್ಯಾ, ಬೌದ್ಧ ಮುಂತಾದ ದರ್ಶನಗಳ, ಲಾಕುಳ ಸಿದ್ಧಾಂತ, ಪತಂಜಲಿಯ ಯೋಗಶಾಸ್ತ್ರ, ಅಷ್ಟದಶಾ ಪುರಾಣ, ಕಾವ್ಯ, ನಾಟಕ, ನಾಟಕಿ ಮುಂತಾದವುಗಳ ಅಧ್ಯಯನ ನಡೆಯುತ್ತಿತ್ತು. ದೇಶದ ಎಲ್ಲೆಡೆಗಳಿಂದ ಅಲ್ಲಿಗೆ ದೀನರು, ಅನಾಥರು, ಕುರುಡರು, ಕುಂಟರು, ಮೂಕರು, ಕಥಕರು, ಗಾಯಕರು, ವಾದಕರು, ನರ್ತಕರು, ವೈತಾಳಿಕರು, ನಗ್ನಭಗ್ನ ಕ್ಷಪಣಕರು, ಏಕದಂಡಿ ತ್ರಿದಂಡಿ ಹಂಸ ಪರಮ ಹಂಸ ಮುಂತಾದ ಭಿಕ್ಷು, ಸಾಧು ಜನರು ಬಂದು ದಾನವನ್ನು ಸ್ವೀಕರಿಸುತ್ತಿದ್ದರು. ಅಷ್ಟೇ ಅಲ್ಲ ದೇಶದ ಎಲ್ಲೆಡೆಗಳಿಂದ ಅನಾಥರೋಗಿ ಜನರು ಬಂದು ವೈದ್ಯಕೀಯ ಚಿಕಿತ್ಸೆಯನ್ನು ಪಡೆಯುತ್ತಿದ್ದರು.[೪೧]

ಬಳ್ಳಿಗಾವೆಯ ಕೋಡಿಮಠದಲ್ಲಿ ನಡೆದಿರುವ ಧಾರ್ಮಿಕ, ಸಾಮಾಜಿಕ ಕಾರ್ಯಗಳನ್ನು ಇಂದಿನ ಯಾವ ಸಾಮಾಜಿಕ, ವೈದ್ಯಕೀಯ ಸಂಸ್ಥೆಗಳು ಅದರಷ್ಟು ಪ್ರಮಾಣದಲ್ಲಿ ಸೇವೆ ಸಲ್ಲಿಸಲು ಸಾಧ್ಯವಿಲ್ಲ. ಇದು ಪ್ರಾಚೀನ ಸಂಸ್ಕೃತಿಯ ಹೆಗ್ಗುರುತೇ ಸರಿ ಎನ್ನಿಸುತ್ತದೆ. ಕ್ರಿ.ಶ. ೧೦೫೮ರ ನಾಗಾಯಿ

ಶಾಸನವು ಪ್ರಾಚೀನ ಘಟಿಕಾ ಸ್ಥಾನವಾಗಿ ಕಂಡುಬರುತ್ತದೆ. ಚತುರ್ವೇದ ಪಾರವಾರ ಪಾರಗಮರೆನಿಸಿದ ನಾಲ್ಕೂರ್ವರ್ವ್ವಿಪ್ರೋತ್ತಮರ್ಗ್ಗೆ ಭರಣಂಗೆಯ್ಯಲಭಿನವ ಬ್ರಹ್ಮಲೋಕಮಿದೆಂಬುನ್ತು ನೆಗಳ್ತೆವೆತ್ತ ಸಕಳ ವಸುಮತೀತಳಕ್ಕೆ ಮುಖವಿದೆಂಬನ್ತಿರ್ದ್ದ ಜಿಲು ಮೂನೂರ (ರ್ಕೆ) ತಿಳಕಮರ್ಪ್ಪನ್ತಿರ್ದ್ದ ಮಹಾ(ಗ್ರ)ಹಾರಂ ನಾಗವಾವಿ ಎಂದಿದೆ.[೪೨] ಈ ಶಾಸನವು ತಿಳಿಸುವಂತೆ ಭಟ್ಟದರ್ಶನ, ನ್ಯಾಸ, ಪ್ರಭಾಕರ, ವ್ಯಾಖ್ಯಾನ ವೇತೃಗಳು ವೇದವನ್ನು ಓದಿಸುವವರು, ಗ್ರಂಥಭಂಡಾರಿಗಳು, ವೇದಾಧ್ಯಯಿಗಳು, ಹಾಗೂ ಶಾಸ್ತ್ರಾಧ್ಯಾಯಿಗಳು ಘಟಿಕಸ್ಥಾನದಲ್ಲಿದ್ದರು. ಉಪಾಧ್ಯಾಯರಿಗೆ ಉಂಬಳಿಯಾಗಿ ಭೂಮಿಯನ್ನು ನೀಡಲಾಗಿತ್ತು. ಇವರೆಲ್ಲ ಮಧುಸೂಧನ ದೇವಾಲಯದ ಉಚಿತ ನಿವೇಶನದಲ್ಲಿ ವಾಸಿಸುತ್ತಿದ್ದರು. ಏಕದಂಡಿ, ತ್ರಿದಂಡಿ, ಸ್ನಾತಕ, ಬ್ರಹ್ಮಚಾರಿ, ಹಂಸ, ಪರಮಹಂಸ ಮೊದಲಾದವರಿಗೆ ಪ್ರತ್ಯೇಕ ಭವನದ ವ್ಯವಸ್ಥೆ ಇತ್ತೆಂದು ಶಾಸನವು ತಿಳಿಸುತ್ತದೆ. ಈ ಹಿನ್ನಲೆಯಲ್ಲಿ ಪ್ರಸಿದ್ಧ ಶೈಕ್ಷಣಿಕ ಕೇಂದ್ರಗಳಾಗಿ ದೇವಾಲಯಗಳು ಕಾರ್ಯನಿರ್ವಹಿಸಿವೆ. ಇದರೊಂದಿಗೆ ಅನ್ನದಾನದಂತಹ ಶ್ರೇಷ್ಠ ಕಾರ್ಯಗಳನ್ನು ದೇವಾಲಯಗಳು ನಿರ್ವಹಿಸಿರುವುದು ಬಳ್ಳಿಗಾವೆ ಮತ್ತು ನಾಗಾವಿ ಎರಡು ಶಾಸನಗಳಿಂದಲೂ ತಿಳಿದುಬರುತ್ತದೆ. ಇಂದಿಗೂ ಕರ್ನಾಟಕದ ಹಲವಾರು ದೇವಾಲಯಗಳು ಅನ್ನದಾನ ಕಾರ್ಯವನ್ನು ಮಾಡುತ್ತಿರುವುದು ಕಂಡುಬರುತ್ತಿದೆ.

ದೇವಾಲಯಗಳಲ್ಲಿ ಹಬ್ಬ ಹರಿದಿನ ಮೊದಲಾದ ಸಂದರ್ಭಗಳಲ್ಲಿ ವಿಶೇಷ ಪೂಜೆ ನೈವೇದ್ಯಗಳು ಏರ್ಪಡುತ್ತಿದ್ದವು. ಹಬ್ಬ, ಉತ್ಸವ, ಕಾರ್ತೀಕಮಾಸ, ಸಂಕ್ರಾಂತಿಯಂದು ವಿಶೇಷ ಪೂಜೆಗಳು ನಡೆಯುತ್ತಿದ್ದವು. ಈ ಮೂಲಕ ಸಮಾಜದ ಜನರ ಸಾಂಸ್ಕೃತಿಕ ನಂಬಿಕೆಯನ್ನು ಗಟ್ಟಿಗೊಳಿಸುತ್ತಿದ್ದವು. ಕ್ರಿ.ಶ. ೧೧೭೩ರ ಶಾಸನದಲ್ಲಿ 'ಚೈತ್ರ ಪವಿತ್ರಕ್ಕಂ' ಎಂದಿದೆ.[೪೩] ಈ ರೀತಿಯ ಉಲ್ಲೇಖಗಳು ಹೇರಳವಾಗಿ ಶಾಸನಗಳಲ್ಲಿ ಕಂಡುಬರುತ್ತವೆ. ಫ್ಲೀಟ್, ಹುಲ್ಷ್, ರೈಸ್‌ರವರು ಇದು ಚೈತ್ರಮಾಸದಲ್ಲಿ ನಡೆಯುವ ಶುದ್ಧೀಕರಣದ ಉತ್ಸವ ಎಂದಿದ್ದಾರೆ.[೪೪] ಆರ್.ನರಸಿಂಹಾಚಾರ್ ಅವರು ಚೈತ್ರ ಮತ್ತು ಪವಿತ್ರ ಎರಡು ಪ್ರತ್ಯೇಕ ಉತ್ಸವಗಳೆಂದು ಅಭಿಪ್ರಾಯಪಡುತ್ತಾರೆ.[೪೫] ಇದರಿಂದ ಚೈತ್ರ, ಪವಿತ್ರ ಎಂಬುದು ದೇವಾಲಯದಲ್ಲಿ ನಡೆಯುತ್ತಿದ್ದ ಒಂದು ವಿಶೇಷ ಪೂಜೆ ಮತ್ತು ಉತ್ಸವ ಎಂದು ಉಲ್ಲೇಖಿತ ಶಾಸನಗಳಿಂದ ತಿಳಿದುಬರುತ್ತದೆ.

ಕ್ರಿ.ಶ. ೧೨೨೦ರ ಶಾಸನವು ನೂಲ ಪರ್ವ್ವವನ್ನು ಉಲ್ಲೇಖಿಸಿದೆ.[೪೬] ಕ್ರಿ.ಶ. ೧೧೨೮ರ ಶಾಸನದಲ್ಲಿ ತ್ರಿಕೂಟದ ನೀಲಕಂಠೇಶ್ವರ ದೇವಾಲಯದ ಏಕಾದಶಿಯ ಅಭ್ಯಂಜನದ ಎಣ್ಣೆಗೆ ೨ ಗಾಣ ಹೂದೋಟ ೧ ದಾನ ನೀಡಿದ್ದನ್ನು ತಿಳಿಸಿದೆ. ಶಾಸನವು ಏಕಾದಶಿಯ ಭ್ಯಂಗದೆಣ್ಣೆಗಂ ನಮಸ್ಯವಾಗಿ ಬಿಟ್ಟ ಗಾಣ ೨' ಎಂದಿದೆ.[೪೭] ಕ್ರಿ.ಶ. ೧೧೫೯ ಶಾಸನದಲ್ಲಿ ನಾಗಯ್ಯನು ತೀಕೇಶ್ವರ ದೇವರಿಗೆ ೫ ಮತ್ತರು ಭೂಮಿಯನ್ನು ದಾನವಾಗಿ ನೀಡಿದನು. ದೇವರ ತೋಟದ ಅರಣಿಗುತ್ತಿಗೆಯ ಬೀಚಣ ಮತ್ತು ಅವನ ಮಕ್ಕಳು ಪ್ರತಿನಿತ್ಯ ೧೨ ಹೂವಿನ ಸರ, ಒಂದು ಹಿಡಿ ಹರಳು, ತರಕಾರಿಯನ್ನು, ಅಭ್ಯಂಜನಕ್ಕಾಗಿ ಪ್ರತಿವರ್ಷ ಹುಣಸೆಯ ಮರವೊಂದರ ಹಣ್ಣನ್ನು ಪ್ರತಿ ದೀಪಾವಳಿಗೆ ಒಂದು ಗದ್ಯಾಣವನ್ನು ದಾನ ಕೊಟ್ಟದ್ದನ್ನು ಹೇಳುತ್ತದೆ.[೪೮] ಕ್ರಿ.ಶ. ೧೨೫೧ರ ಶಾಸನದಲ್ಲಿ ಚೈತ್ರದಲಿ ಬೇಳೆ, ಪವಿತ್ರದಲಿ ಬೇಳೆ ಪಳಿಗೆ ಎಣ್ಣೆಸಟ್ಟುಗ ಮತ್ತ ಎಂದಿದೆ.[೪೯] ಸಾಲವಾಡಗಿಯ ರಾಷ್ಟ್ರಕೂಟರ ಶಾಸನವೊಂದರಲ್ಲಿ ಮೂಲಿಗ ಮಾಕಯ್ಯನ ಮಗಳು ಸಾಳವಾಡಿಗೆಯ ಸಿದ್ಧನಾಥದೇವ, ಪಾಪವಿನಾಶ ದೇವಾಲಯಗಳಿಗೆ ಚೈತ್ರ, ಪವಿತ್ರ, ದೀವಳಿಗೆ ಹಬ್ಬಗಳಿಗೆ ಎಣ್ಣೆಯನ್ನು ಪಟ್ಟಸಾಲೆಗಳು ಮನೆಗೊಂದು ಹಾಗವನ್ನು ಕೊಡಬೇಕೆಂದಿದೆ.[೫೦] ಕ್ರಿ.ಶ. ೧೨೨೩ರ ಶಾಸನದಲ್ಲಿ ಐನೂರ್ವರು ವ್ಯಾಪಾರಿಗಳು ತಮ್ಮ ಮಾರಾಟದ ಒಂದು ಅಂಶವನ್ನು ನೀಡಿದಂತಿದೆ. ಮರುವತಿಗೆ ಅಡಂಬೇಳೆ, ವೀಳಯ ದೇವರಿಗೆ ಅಡಕೆ ೧೨ ಎಲೆ ೨೪ ಜೀಯರಿಗೆ ಅಡಕೆ ೬ ಎಲೆ ೧೨ ವೊಕ್ಕಲಲು ಚೈತ್ರಕ್ಕೆ ಬೇಳೆ ಪವಿತ್ರಕ್ಕೆ ಹಾಗ

ಸಂಕ್ರಮಣದಲು ಬೇಳೆ ಐನೂರ್ವರು ಮುಂಮರಿದಂಡಗಳು ಕೊಟ್ಟ ಸಟ್ಟುಗ ಭತ್ತ ಎಲೆ ಎಜಿಂಗೆ ೧೦೦ ಹೇಜಿಂಗೆ ೫೦ ಗಾಣಿಗರು ಎಣ್ಣೆ ಬಿಲ ಮುನೂರ್ಬ್ಬರು ಎಲೆ ೧೦೦ ಎಂದಿದೆ.[೫೧] ಕ್ರಿ.ಶ. ೧೧೪೮ರ ಶಾಸನದಲ್ಲಿ ಹಬ್ಬಗಳನ್ನು 'ಮಹಾಪರ್ವ್ವಗಳು' ಎಂದು ಕರೆದಿದೆ.[೫೨] ಕ್ರಿ.ಶ. ೧೦೦೭ರ ಶಾಸನದಲ್ಲಿ ಬಾದುಬೆ ದೀಪಾವಳಿ ಕಾರಪುಣ್ಣವೆಯನಿಪ್ಪೀ ಮೂಱು ಪರ್ವ್ವಂಗಳೊಳ್ ಬ್ರಹ್ಮಜಿನಾಲಯಕ್ಕೆ ದಾನ ಕೊಡಬೇಕೆಂದು ತಿಳಿಸಿದೆ.[೫೩] ಕ್ರಿ.ಶ. ೧೦೬೪ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯಂದು ದೇವರ ದೀಪ ನೈವೇದ್ಯಕ್ಕೆ ೩೩ ಗೇಣಗಳೆಯೊಳುಬಿಟ್ಟ ನೈಷ್ಠಿಕ ತಪೋದನರ್ಗ್ಗಂ ಬಿಟ್ಟ ಮತ್ತರ್ ೪ ಎಂದಿದೆ.[೫೪]

ಕ್ರಿ.ಶ. ೧೨೯೧ರ ಶಾಸನವು ಕಾರ ಪರ್ವವನ್ನು ಉಲ್ಲೇಖಿಸಿದೆ.[೫೫] ಕ್ರಿ.ಶ. ೧೨೮೮ರ ಶಾಸನವು ಶಿವರಾತ್ರಿ ಹಬ್ಬವನ್ನು ಉಲ್ಲೇಖಿಸಿದೆ.[೫೬] ಕ್ರಿ.ಶ. ೧೧೭೯ರ ಶಾಸನವು ದವನದ ಹುಣ್ಣಿಮೆಯನ್ನು ಉಲ್ಲೇಖಿಸಿದೆ.[೫೭] ಕ್ರಿ.ಶ. ೧೨೨೦ರ ಶಾಸನವು ವನದ ಪರ್ವವನ್ನು ಉಲ್ಲೇಖಿಸಿದೆ.[೫೮] ಕ್ರಿ.ಶ. ೧೨೨೦ರ ಶಾಸನವು ಮಹಾನವಮಿ ಹಬ್ಬವನ್ನು ಉಲ್ಲೇಖಿಸಿದೆ.[೫೯] ಕ್ರಿ.ಶ. ೧೨೩೪ ಶಾಸನದಲ್ಲಿ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ರಥೋತ್ಸವ ಮತ್ತು ವರ್ಷೋತ್ಸವಗಳನ್ನು ಉಲ್ಲೇಖಿಸಿದೆ.[೬೦] ಕ್ರಿ.ಶ ೧೧೫೪ರ ಶಾಸನವು ಮಾಘಮಾಸದ ಚತುರ್ದಶಿಯಲ್ಲಿ ಜಿನಾರಾತ್ರಿ ಮಹೋತ್ಸವಕ್ಕೆ ನೀಡಿದ ದಾನದ ವಿಷಯವನ್ನು ತಿಳಿಸಿದೆ.[೬೧] ಕ್ರಿ.ಶ. ೧೨೮೧ರ ಶಾಸನದಲ್ಲಿ ಚೈತ್ರ ಬ ೨ ನೆಯ ದಿನ ವೋಕುಳಿಯಭಿಷೇಕಕ್ಕೆ ನೀಡಿದ್ದನ್ನು ಉಲ್ಲೇಖಿಸಿದೆ.[೬೨]

ಕ್ರಿ.ಶ. ೧೧೯೦ರ ಶಾಸನದಲ್ಲಿ ಕ್ಷಿತಿರುಹ ನೋಂಪಿಯ ಉಲ್ಲೇಖವಿದೆ. ಸಿರಿದೇವಿ ಎಂಬುವವಳು ನೋಂಪಿಯ ಅಂಗವಾಗಿ ಫಲವೃಕ್ಷಗಳನ್ನು ನಡಿಸಿದಳೆಂದಿದೆ.[೬೩] ಕ್ರಿ.ಶ. ೧೧೮೧ರ ಶಾಸನದಲ್ಲಿ ಜೈನರು ತಮ್ಮ ಜಿನಾಲಯಗಳಲ್ಲಿ ಜೀವದಯಾಷ್ಟಯ, ನಂದಿಕೇಶ್ವರದಷ್ಟಮಿ ಹಬ್ಬಗಳನ್ನು ಆಚರಿಸುತ್ತಿದ್ದರು.[೬೪] ಕ್ರಿ.ಶ. ೧೧೯೨ರ ಶಾಸನದಲ್ಲಿ ನಂದೀಶ್ವರ, ಶ್ರುತಪಂಚಮೀ, ಪುಷ್ಪಾಂಜಳಿ, ಜೀವದಯಾಷ್ಟಮಿ, ಜಕ್ಕಣಬ್ಬೆಯುಯ್ಯಲಪರ್ವ ಗ್ರಹಣ, ಸಂಕ್ರಮಣ, ದೀಪೋತ್ಸವ ದಾನನೀಡಿದ ಉಲ್ಲೇಖಗಳಿವೆ.[೬೫] ಕ್ರಿ.ಶ. ೧೧೫೪ರ ಶಾಸನದಲ್ಲಿ ಜೈನ ಬಸದಿಗಳಲ್ಲಿ ನಡೆಯುವ ಉತ್ಸವಗಳನ್ನು ತಿಳಿಸಿದೆ. ವಿಮಾನಶುದ್ಧಿ, ಅಂಕುರಾರ್ಪಣ, ಬ್ರಹ್ಮಚ್ಛಾಂತಿಕ, ಮಂತ್ರನ್ಯಾಸ, ಅಂಗನ್ಯಾಸ, ಕೇವಲ ಮಹಾಹೋಮ, ಮಹಪ್ರಸನ್ನಪನಾಭಿಷೇಕಕ್ಕೆ, ಅಗೋದಕಪ್ರಭಾವನೆ, ಕಲಶಪ್ರಭಾವನೆಗಳನ್ನು ಮಾಡಿಸಿ ಪುಣ್ಯೋಪಾರ್ಜನೆಯನ್ನು ಮಾಡಿಸಿಕೊಂಡರು. ಪ್ರತಿವರ್ಷ ಅಕ್ಷಯ ತದಿಗೆಯಲ್ಲಿ ನಡೆಯುವ ಮಹೋತ್ಸವ ಪ್ರಭಾನೆಗಮಾರು ಅಷ್ಟಾಹ್ನಿಕ ಪರ್ವಗಳಿಗೆ ಶ್ರಾವಣ ಪೌರ್ನ್ನಮಿವುತ್ಸವಕ್ಕೆ ಭಾದ್ರಪದ ಶುದ್ಧ ಚತುದ್ಧಶಿ ಅನಂತರ ನೋಹಿ ಕುಳಸ ಪ್ರಭಾವನೆ ಮಹಾ ಆರಾಧನೆ ಮೊದಲಾದವುಗಳಿಗೆ ಕಾರ್ತಿಕಮಾಸದ ಕೃತಿಕೋತ್ಸವಕ್ಕೆ ಮಾಘ ಬಹುಳ ಚತುದ್ದಶಿಯಲ್ಲು ಜಿನರಾತ್ರಿ ಮಹೋತ್ಸವಕ್ಕೆ ಎಂದಿದೆ.[೬೬] ಇವುಗಳು ಜಿನನಿಗೆ ನಡೆಯುವ ದೇವ ಮಹೋತ್ಸವಗಳಾಗಿ ಕಂಡುಬರುತ್ತವೆ. ಕ್ರಿ.ಶ. ೧೦೪೫ರ ಶಾಸನದಲ್ಲಿ ಸವತಿಗಂಧ ಹಸ್ತಿ ಬಸದಿಗೆ ಸುರುಗಿಗೆ ದೇವಿಯರು ದಾನನೀಡಿದ ಉಲ್ಲೇಖವಿದೆ.[೬೭] ಕ್ರಿ.ಶ. ೧೧೩೧ರ ಶಾಸನವು ಸವತಿಗಂಧವಾರಣ ಜಿನಾಲಯ ಮಾಡಿಸಿ ಪೂಜೆ, ಆಹಾರದಾನ, ಜೀರ್ಣೋದ್ಧಾರಗಳಿಗೆ ದಾನನೀಡಿರುವುದನ್ನು ತಿಳಿಸಿದೆ.[೬೮] ಕ್ರಿ.ಶ. ೧೨ನೆಯ ಶತಮಾನದ ಶಾಸನವು ಶ್ರೀ ಗೊಂಮ್ಮಟದೇವರ ನಿತ್ಯಾರ್ಚನೆಗೆ ೨೦ ಬಾಸಿಗೆ ಹೂವಿಂಗೆ ದಾನ ನೀಡಿದ ಉಲ್ಲೇಖವಿದೆ.[೬೯] ಕ್ರಿ.ಶ. ೧೩ನೆಯ ಶತಮಾನದ ಶಾಸನದಲ್ಲಿ ಗೊಮ್ಮದೇವರ ನಿತ್ಯ ಪಡಿಗೆ ಮೂರು ಮಾನ ಹಲನು ಅಭಿಸೇಕಕ್ಕೆ ಗದ್ಯಾಣ ೩ ಕ್ಕೆ ಹೊಂನ ಬಡಿಗೆ ಹಾಲನಡೆಯಿಸುವರು ಎಂದಿದೆ.[೭೦] ಕ್ರಿ.ಶ. ೧೪ನೆಯ ಶತಮಾನದ ಶಾಸನದಲ್ಲಿ ಶ್ರೀ ಗುಂಮಟನಾಥ ಸ್ವಾಮಿಯ ಪೂಜೆಗೆ ಸಂಪಗೆಯ ಮರನ ಬಲಿ ಸಮರ್ಪ್ಪಿಸಿದ ಪಲದಿಂದ ಜಿನೇಶ್ವರನ ಚರಣಸ್ಮರಣಾಂತಃ ಕರಣನು

ಸುಖಸಮಾಧಿಯಿಂದ ಸುಗತಿ ಪ್ರಾಪ್ತನಾದನು ಎಂದಿದೆ.[೭೧] ಈ ಶಾಸನದಲ್ಲಿ ದೇವರಿಗೆ ದಾನ ಮಾಡಿದ ಫಲವಾಗಿ ಸುಖ ಮರಣ ಪ್ರಾಪ್ತಿಯಾಯಿತು ಎಂಬ ನಂಬಿಕೆಯನ್ನು ಜೈನ ಧರ್ಮದ ಜನರುಗಳಿಗೆ ತಿಳಿಸಿದಂತೆ ಕಂಡುಬರುತ್ತದೆ. ಕ್ರಿ.ಶ. ೧೨೭೮ರ ಶಾಸನದಲ್ಲಿ ನಖರಜಿನಾಲಯದಲ್ಲಿ ಅಷ್ಟವಿಧಾರ್ಚನೆ ಅಮೃತ ಪಡಿಸಹಿತ ಶ್ರೀ ಕಾರ್‍ಯ್ಯವನು ನಕರಂಗಳು ನಿಯಾಮಿಸಿಕೊಟ್ಟರು.[೭೨] ಶ್ರವಣ ಬೆಳಗೊಳದ ಶಾಸನವೊಂದರಲ್ಲಿ ದೇವರ ಪೂಜೆಗೆ ಬಳಸುವ ಕೊಳದ ಬಗೆಗೆ ಬಂದಿರುವ ಉಲ್ಲೇಖವನ್ನು ಹೀಗೆ ತಿಳಿಸಿದೆ. ಪುಟ್ಟಸಾಮಿ ಸೆಟ್ಟರ ಶ್ರೀದೇವೀರಂಮನ ಮಗ ಚೆಂನಂಣನ ಮಂಟ್ಟಪ ಆದಿ ತೀರ್ತ್ಥದ ಕೊಳ। ವಿದು ಹಾಲುಗೊಳನೊ ವಿದು ಅಮೂರ್ತ್ತಗೊಳನೊ। ವಿದು ಗಂಗೆ ನದಿಯೊ। ತುಂಗ ಬದ್ರಿಯೊ। ವಿದು ಮಂಗಲಾಗೌಉರೆಯೊ। ವಿದು ರುಂದವನವೊ। ವಿದು ಸ್ರಂಗಾರತೊಟವೊ। ಅಯಿ ಅಯಿ ಯಾ ಅಯಿ ಅಯಯೋ। ಏಳೆ ತೀರ್ತ್ಥವಳೆ ತೀರ್ತ್ಥ ಜಯಾಜಯಾ ಜಯಾಜಯ ಎಂದಿದೆ.[೭೩] ದೇವನೊಬ್ಬ ನಾಮ ಹಲವು. ಎಲ್ಲ ಧರ್ಮಗಳ ತಿರುಳೊಂದೆ ಆದರೆ ರೂಪಾಂತರಗಳು ಬೇರೆಯಾಗಿರುತ್ತವೆ. ಈ ಶಾಸನ ಜೈನ ಶಾಸನವಾಗಿದ್ದು, ಪೂಜೆಗೆ ಬಳಸುವ ಕೊಳದ ನೀರಿನ ಶ್ರೇಷ್ಠತೆಯನ್ನು ಕೊಂಡಾಡಿದೆ. ಅದರ ಜೊತೆಗೆ ಯಾರು ಸಹ ಈ ಕೊಳವನ್ನು ಹಾಳು ಮಾಡಬಾರದು. ಇದು ದೈವದ ಆವಾಸಸ್ಥಾನ ಎಂಬ ನಂಬಿಕೆಯನ್ನು ಬಿತ್ತಿದೆ. ಅಲ್ಲದೆ ಹಿಂದೂ ದೇವತೆಗಳನ್ನು ಇಲ್ಲಿ ಬಳಸಿರುವುದು ಧಾರ್ಮಿಕ ಸಮನ್ವಯವನ್ನು ಸಾರುತ್ತದೆ. ವಿವಿಧತೆಯಲ್ಲಿ ಏಕತೆಯ ಸಂಸ್ಕೃತಿಯನ್ನು ನೆಲೆಗೊಳಿಸಿರುವಂತೆ ಕಂಡುಬರುತ್ತದೆ. ಹಿಂದುಗಳು ಆಚರಿಸುವಂತೆ ಜೈನರಲ್ಲಿಯೂ ಮಹಾರಾತ್ರಿಯಂತಹ ಆಚರಣೆ ಕಂಡುಬಂದಿರುವುದನ್ನು ಈಗಾಗಲೇ ಉಲ್ಲೇಖಿಸಲಾಗಿದೆ. ಹಿಂದುಗಳ ಹಬ್ಬದ ದಿನ ಲಕ್ಕುಂಡಿಯ ಶಾಸನವು ಬಸದಿಗೆ ದಾನ ನೀಡಬೇಕೆಂದು ತಿಳಿಸಿರುವುದು ಹಿಂದುಗಳು ಆಚರಿಸುವ ಕೆಲವು ಹಬ್ಬಗಳನ್ನು ಜೈನರು ಆಚರಿಸುತ್ತಿದ್ದರೆಂದು ಅರ್ಥೈಸಿರುವ ಸಾಧ್ಯತೆಗಳಿವೆ. ಜೈನರು ವಿಶೇಷವಾಗಿ ನೋಂಪಿಗಳನ್ನು ಆಚರಿಸುತ್ತಿದ್ದರು. ಅಂದರೆ ವ್ರತಗಳನ್ನು ಆಚರಿಸುತ್ತಿದ್ದರು. ಅಲ್ಲದೆ ಸಲ್ಲೇಖನ ಮೊದಲಾದ ವ್ರತಗಳ ಆಚರಣೆ ಜೈನರಲ್ಲಿತ್ತು. ಇವೆಲ್ಲವುಗಳ ಆಶಯ ಸದ್ಗತಿ, ಮೋಕ್ಷ ದೊರೆಯುತ್ತದೆ ಎಂಬ ನಂಬಿಕೆಯನ್ನು ಆಧರಿಸಿರುವುದು ಕಂಡುಬರುತ್ತದೆ.

ಸಮಾಜದ ಆಚರಣೆಗಳು ದೇವಾಲಯದಲ್ಲಿಯೂ ನಡೆಯುತ್ತಿದ್ದವು. ಹಬ್ಬದಂದು ವಿಶೇಷ ಪೂಜೆ, ಉತ್ಸವ, ಹೋಮ, ಹವನ, ಅಭಿಷೇಕ, ನೈವೇದ್ಯ, ಅಷ್ಟವಿಧಾರ್ಚನೆ, ಪಂಚಾಮೃತ ಅಭಿಷೇಕ ಮೊದಲಾದವುಗಳು ನಡೆಯುತ್ತಿದ್ದವು. ಇವು ಜೈನ ಬಸದಿಗಳಲ್ಲಿಯೂ ಕಂಡುಬರುತ್ತವೆ. ಈ ನಂಬಿಕೆಗಳು ಸಮಾಜದಲ್ಲಿ ಗಟ್ಟಿಯಾಗಿ ಬೇರೂರಿರುವುದರಿಂದಲೇ ಸುರಕ್ಷಿತತೆಯ ವಾತಾವರಣ ಇಂದಿಗೂ ಕಂಡುಬರುತ್ತಿದೆ. ಹಬ್ಬ ಹರಿದಿನದ ಮೂಲಕ ದೇವಾಲಯಗಳು ಜನರ ಮೇಲೆ ಸಾಂಸ್ಕೃತಿಕ ಹಿಡಿತ ಸಾಧಿಸುವ ಮೂಲಕ ಜನರಲ್ಲಿ ನಂಬಿಕೆಗಳನ್ನು ನೆಲೆಗೊಳಿಸಿದ್ದವು. ಧರ್ಮ, ದೇವಾಲಯಗಳು ಹೀಗೆ ಸಮಾಜದ ಜನರಲ್ಲಿ ನಂಬಿಕೆಯ ತಳಹದಿಯನ್ನು ನಿರ್ಮಿಸುವ ಮೂಲಕ ಕಾರ್ಯನಿರ್ವಹಿಸಿವೆ. ಅಂದರೆ, ಸಮಾಜದ ಒಳಿತು ಕೆಡಕುಗಳ ಸೃಷ್ಟಿ, ವಿನಾಶಗಳೆಲ್ಲವು ದೈವದಿಂದ ಸಂಭವಿಸುತ್ತವೆ ಎಂಬ ಭಾವನೆಯಿದೆ. ಮೌರ್ಯದೊರೆ ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ರಾಜ್ಯದಲ್ಲಿ ಭೀಕರ ಬರಗಾಲ ಮತ್ತು ಕ್ಷಾಮ ಸಂಭವಿಸಿತ್ತು ಇದರಿಂದಾಗಿ ಚಂದ್ರಗುಪ್ತ ಮೌರ್ಯನು ಜೈನ ಸನ್ಯಾಸ ದೀಕ್ಷೆಯನ್ನು ಸ್ವೀಕರಿಸಿ ಕರ್ನಾಟಕದ ಶ್ರವಣಬೆಳಗೊಳಕ್ಕೆ, ತನ್ನ ಗುರು ಭದ್ರಬಾಹುವಿನೊಂದಿಗೆ ಬಂದು ಸಲ್ಲೇಖನ ವ್ರತ ಸ್ವೀಕರಿಸಿ ಇಲ್ಲಿಯೇ ಮರಣ ಹೊಂದಿದನೆಂದು ಚರಿತ್ರೆಯಲ್ಲಿ ದಾಖಲಾಗಿದೆ. ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನ ಆಳ್ವಿಕೆಯ ಕಾಲದಲ್ಲಿ ಭೀಕರ ಕ್ಷಾಮ ಮತ್ತು ಬರಗಾಲ ಸಂಭವಿಸಿತು. ಆಗ ಅವನು ಕೊಲ್ಲಾಪುರದ ಮಹಾಲಕ್ಷ್ಮಿಗೆ ತನ್ನ

ಹೆಬ್ಬೆರಳನ್ನು ಕತ್ತರಿಸಿ ದಾನ ನೀಡಿದನು. ಈ ಉಲ್ಲೇಖವು ಹೂವಿನಹಿಪ್ಪರಗಿ ಶಾಸನದಲ್ಲಿ ಕಂಡುಬರುತ್ತದೆ. ಈ ಶಾಸನದ ಪ್ರಕಾರ ನೃಪತುಂಗನು ತುಲಾಪುರುಷ ಸಮಾರಂಭದಂದು ಗೊಲೆಯಭಟ್ಟ ಎಂಬಾತನಿಗೆ ದಾನ ಕೊಟ್ಟನು.

ತೇಷ್ವೇಕೈಕಮತರ್ಪಯನ್ ಕಿಲಮಹಾಲಕ್ಷ್ಮೈಸ್ವವಾಮಾಗುಲಿಂ।

ಲೋಕೋಪದ್ರವ ಶಾಂತಯೇ ಸ್ಮದಿಶತಿ ಶ್ರೀ ವೀರನಾರಾಯಣಃ[೭೪]

ಎಂದಿದೆ. ದೇಶಕ್ಕೆ ಕ್ಷಾಮ ಬಂದಾಗ ಈ ಉಪದ್ರವದಿಂದ ಶಾಂತಿ ನೆಲೆಸುವಂತೆ ಮಾಡು ಎಂದು ತನ್ನ ಎಡಗೈ ಹೆಬ್ಬೆರಳನ್ನು ದೇವಿಗೆ ಅರ್ಪಿಸಿದನೆಂದು ತಿಳಿದುಬರುತ್ತದೆ. ಲಕ್ಷ್ಮೀ ಆರಾಧಕನಾದುದರಿಂದ ಇವನಿಗೆ 'ಲಕ್ಷ್ಮೀ ವಲ್ಲಬೇಂದ್ರ'[೭೫] ಎಂಬ ಬಿರುದಿತ್ತೆಂದು ತಿಳಿದುಬರುತ್ತದೆ. ಸಮಾಜದ ಜನರಲ್ಲಿ ಹೆಜ್ಜೆ ಹೆಜ್ಜೆಗೂ ನಂಬಿಕೆ ಬೇರೂರಿರುವುದು ಕಂಡುಬರುತ್ತದೆ. ಯುದ್ಧದಲ್ಲಿ ಹೋರಾಡುವ ವೀರರಿಗೂ ಈ ರೀತಿಯ ಧಾರ್ಮಿಕ ನಂಬಿಕೆಗಳನ್ನು ಬಿತ್ತಿರುವುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ. ೧೧೧೫ರ ಶಾಸನವು

ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಂಗನಾ

ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ[೭೬]

ಎಂದಿದೆ. ಜನರಲ್ಲಿ ವೀರತ್ವದ ನಂಬಿಕೆಯನ್ನು ಬೆಳಸುವ ಸಲುವಾಗಿ ಸೋತರೆ ವೀರ ಸ್ವರ್ಗ, ಸುರಾಂಗನೆಯರು. ಜಯಗಳಿಸಿದರೆ ಲಕ್ಷ್ಮೀ ಲಭಿಸುವಳು ಎಂಬ ನಂಬಿಕೆಯನ್ನು ನೆಲೆಗೊಳಿಸಿರುವುದು ಕಂಡುಬರುತ್ತದೆ. ಇಂದಿನ ಮಿಲಿಟರಿ ಸೇವೆಗಳಲ್ಲೂ ಸಹ ದೇಶಭಕ್ತಿಯ ನಂಬಿಕೆಯನ್ನು ಮೂಡಿಸಿ ಈ ಹಿನ್ನೆಲೆಯಲ್ಲಿಯೇ ಯೋಧರು ಗಡಿ ಕಾಯುತ್ತಿರುವುದು, ದೇಶರಕ್ಷಿಸುತ್ತಿರುವುದು ಕಂಡುಬರುತ್ತದೆ.

ಶಾಸನಗಳಲ್ಲೂ ದಾನ ನೀಡುವ ಸಂದರ್ಭದಲ್ಲಿ ಅಮವಾಸೆ, ಸೋಮಗ್ರಹಣ, ಸೂರ್ಯಗ್ರಹಣದಂದು ಹೆಚ್ಚಾಗಿ ದಾನ ನೀಡಿರುವುದು ಕಂಡುಬರುತ್ತದೆ. ಏಕೆ ಅಮವಾಸೆಯಂದು ದಾನ ನೀಡಿದರೆಂದು ಗಮನಿಸಿದಾಗ ಪ್ರಕೃತಿಯಲ್ಲಿ ಆಗಾಗ ನಡೆಯುವ ವಿಸ್ಮಯಗಳ ಮೂಲಕ ಮನುಷ್ಯ ಭಯಗೊಂಡು ಇಂತಹ ಆಚರಣೆಗಳನ್ನು ರೂಢಿಗತಗೊಳಿಸಿಕೊಂಡಿರುವ ಸಾಧ್ಯತೆಗಳಿವೆ. ಅಮವಾಸೆ ಕತ್ತಲಿನ ಸಂಕೇತ. ಅಮವಾಸೆಯಂದು ದಾನ ಮಾಡಿದರೆ ಜೀವನದ ಕತ್ತಲೆ ಕೊನೆಗೊಂಡು ಬೆಳಕು ಕಾಣಬಹುದೆಂಬ ವೈಜ್ಞಾನಿಕ ಆಶಯ ಇದರ ಹಿಂದಿರುವ ಸಾಧ್ಯತೆಗಳಿವೆ. ನಂಬಿಕೆಯ ಹಿನ್ನೆಲೆಯಲ್ಲಿ ಅಮವಾಸೆಯ ದಿನ ಅದರಲ್ಲೂ, ಸೂರ್ಯಗ್ರಹಣದಂದು ದಾನ ನೀಡಿದರೆ ಜಗತ್ತಿಗೆ ಬೆಳಕು ನೀಡುವ ಸೂರ್ಯನಿಗೆ, ಜಗತ್ತಿನ ಕಂಟಕಗಳು ಕೊನೆಯಾಗಲೆಂಬ ಉದ್ದೇಶ ಮತ್ತು ಅದರೊಂದಿಗೆ ತಮ್ಮ ಜೀವನದ ಗ್ರಹಣಗಳು ನಿವಾರಣೆಯಾಗಿ ನೆಮ್ಮದಿ ನೆಲೆಗೊಳ್ಳಲೆಂಬ ಕಾರಣವಿರುವ ಸಾಧ್ಯತೆಯಿದೆ. ಅದೇನಿದ್ದರು ಪುಣ್ಯ ಲಭಿಸುತ್ತದೆಂಬ ನಂಬಿಕೆ ಈ ಆಚರಣೆಯ ಹಿಂದಿರುವುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆ ಎಂಬಂತೆ ಕ್ರಿ.ಶ. ೭೫೪ರ ಶಾಸನವು ಅಮವಾಸ್ಯೆ ಸೂರ್ಯಗ್ರಹಣದಂದು ಆರ್ಯಭಟ್ಟನಿಂದ ೩೦ ನಿವರ್ತನ ಭೂಮಿಯನ್ನು ೩೦ ಗದ್ಯಾಣ ನೀಡಿ ಕ್ರಯಕ್ಕೆ ಪಡೆದು ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ.[೭೭]

ಕ್ರಿ.ಶ. ೧೦೬೧ರ ಶಾಸನವು ಚಂದ್ರಗ್ರಹಣವನ್ನು ಉಲ್ಲೇಖಿಸಿದೆ.[೭೮] ಈ ರೀತಿಯ ಅನೇಕ ಉದಾಹರಣೆಗಳು ಶಾಸನದಲ್ಲಿ ದೊರೆಯುತ್ತವೆ. ಇವಲ್ಲದೆ ಅನೇಕ ನಂಬಿಕೆಗಳು ಶಾಸನದಲ್ಲಿ ಬೇರೂರಿರುವುದು ಕಂಡುಬರುತ್ತದೆ. ಇದಕ್ಕೆಲ್ಲ ನಂಬಿಕೆಗಳೇ ಪ್ರಧಾನ ಅಸ್ತ್ರಗಳಂತೆ ಕಂಡುಬರುತ್ತವೆ.

ಏವೂರು ಶಾಸನವೊಂದರಲ್ಲಿ ಹಾವುಚೇಳು ಕಚ್ಚಿದಾಗ ಅದರ ವಿಷವನ್ನು, ಸುಟ್ಟಗಾಯಗಳನ್ನು ಅಲ್ಲಿನ ಸ್ವಯಂಭು ದೇವರು ಕ್ಷಣಮಾತ್ರದಲ್ಲಿ ಪರಿಹರಿಸುತ್ತಾನೆಂಬ ನಂಬಿಕೆಯನ್ನು ಉಲ್ಲೇಖಿಸಲಾಗಿದೆ.

ಅಹಿಕೊಂಡೊಡೆ ಚೆಳ್ತಿಂದಡೆ
ದಹನಂ ಪತ್ತಿದಡೆ ತತ್‌ಕ್ಷಣದೊಳ್ ತ।
ದ್ಗೃಹಮಂ ಬಲಗೊಳೆ ತದ್ವಿಷ
ರಹಿತತೆ ಮನುಜರ್ಗೆ ನಿಮಿಷಮಾತ್ರದಿನಕ್ಕುಂ[೭೯]

ಎಂದಿದೆ. ದೇವಾಲಯಕ್ಕೆ ಹೋಗಿ ದೇವರ ಸುತ್ತ ಪ್ರದಕ್ಷಿಣೆ ಹಾಕಿದರೆ ಈ ರೀತಿಯ ವಿಷ ನಿವಾರಣೆಯಾಗುತ್ತದೆ ಎಂಬ ನಂಬಿಕೆಯಿದೆ. ವೈದ್ಯಕೀಯ ಸಂಶೋಧನೆಯ ಪ್ರಕಾರ ಸಂಕಲ್ಪ ಶಕ್ತಿ. (will power), ಆತ್ಮ ಸಂಯಮ, ಸ್ವಯಂ ನಿಯಂತ್ರಣದಂತಹ ಬಲವಾದ ನಂಬಿಕೆಗಳು ಅರ್ಧ ರೋಗವನ್ನು ಶಮನ ಮಾಡುತ್ತವೆಂದು ದೃಢಪಟ್ಟಿದೆ. ದೇವಾಲಯಗಳು ಈ ರೀತಿ ನಂಬಿಕೆಯನ್ನು ಮೂಡಿಸುವ, ಜೀವಚೈತನ್ಯವನ್ನು ತುಂಬುವ ಕೆಲಸವನ್ನು ನಿರ್ವಹಿಸಿವೆ. ಕಾಶಿ ಮೊದಲಾದ ಪುಣ್ಯ ಕ್ಷೇತ್ರದಲ್ಲಿ ಜೀವನದ ಅಂತ್ಯವನ್ನು ಕಂಡರೆ ಮೋಕ್ಷ ಲಭಿಸುತ್ತದೆಂಬ ಧಾರ್ಮಿಕ ನಂಬಿಕೆಗಳು ಅಂದಿನ ಸಮಾಜದಲ್ಲಿ ಕಂಡುಬರುತ್ತಿದ್ದವು. ಧಾರ್ಮಿಕ ನಂಬಿಕೆಗಳು ಜನರ ಜೀವನಕ್ಕೆ ಭಾವುಕತೆಯನ್ನು ಉಂಟುಮಾಡುವ ಸಾಧನಗಳಂತೆ ಕಂಡುಬಂದಂತಿವೆ. ಧರ್ಮ ಭಾರತೀಯ ಸಂಸ್ಕೃತಿಯ ಜೀವಾಳ ಮತ್ತು ಬೆನ್ನೆಲುಬಾದ ಕಾರಣಕ್ಕಾಗಿ ಜನರ ಜೀವನದಲ್ಲಿ ಧರ್ಮದ ಕುರಿತ ಆಚರಣೆ, ನಂಬಿಕೆಗಳು ಹಾಸುಹೊಕ್ಕಾಗಿ ಕಂಡುಬರುತ್ತವೆ. ಅದರಲ್ಲೂ ಗ್ರಾಮೀಣ ಭಾಗದ ಜನರು ನಂಬಿಕೆಗಳನ್ನೇ ಉಸಿರಾಗಿಸಿಕೊಂಡು ಬದುಕಿ ಬಂದವರು. ಅವರ ಪ್ರತಿಯೊಂದು ಆಚರಣೆಯೂ ದೈವತ್ವದ ಪರಿಕಲ್ಪನೆಯಿಂದ ಕೂಡಿದುದಾಗಿದೆ. ಈ ಹಿನ್ನೆಲೆಯಲ್ಲಿ ಜನಪದರ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಮುಂಗೋಳಿ ಕೂಗೇದ ಮೂಡು ಕೆಂಪೇರೇದ
ರವಿ ನಾರಾಯಣ ರಥವೇರಿ। ಬರುವಾಗ
ನಾವೆದ್ದು ಕೈಯ ಮುಗಿದೇವು[೮೦]

ಗ್ರಾಮೀಣ ಜನರು ತಮ್ಮ ದಿನದ ಬೆಳಕಿಗೆ ಕಾರಣನಾದ ಸೂರ್ಯನನ್ನು ಜಪಿಸುವುದು ಈ ತ್ರಿಪದಿಯಲ್ಲಿ ಕಂಡುಬಂದಿದೆ. ಏವೂರು ಶಾಸನದಲ್ಲಿ ಉಲ್ಲೇಖಿಸಿದ ಧಾರ್ಮಿಕ ನಂಬಿಕೆಯ ಪರಿಭಾವನೆ ಜನಪದರಿಂದಲೇ ಬಂದಿತೆಂಬುದಕ್ಕೆ ಈ ಕೆಳಗಿನ ಸಾಲುಗಳು ಉದಾಹರಣೆಗಳಾಗುತ್ತವೆ.

ದೇವರ ನೆನೆದರೆ ಸಾವ್ನಟ್ಟು ನಮಗಿಲ್ಲ।
ಹಾವು ಕಚ್ಚಿದರು ವಿಷವಿಲ್ಲ। ಸರ್ಪದ
ಹೆಡೆಯ ದಾಟಿದರೂ ಭಯವಿಲ್ಲ[೮೧]

ದೇವಾಲಯವನ್ನು ಸುತ್ತಿದರೆ ಏವೂರು ಶಾಸನದಲ್ಲಿ ಹಾವುಕಚ್ಚಿದರೂ ವಿಷಹೋಗಿ ಬದುಕುತ್ತಾರೆ. ಆದರೆ ಇಲ್ಲಿನ ಜನಪದರ ನಂಬಿಕೆಯಲ್ಲಿ ದೇವರನ್ನು ನೆನೆದರೆ ಸಾಕು ಹಾವು ಕಚ್ಚಿದರು ಅದರಲ್ಲಿ ವಿಷವಿರುವುದಿಲ್ಲ. ಸಾವು ಬರುವುದಿಲ್ಲ ಎಂಬ ಅಚಲ ನಂಬಿಕೆ ಕಂಡುಬರುತ್ತದೆ. ಮತ್ತೊಂದು ತ್ರಿಪದಿಯು ದೇವಾಲಯಕ್ಕೆ ಹೋಗುವ ದಾರಿಯು ದೇವಾಲಯ ಪ್ರಭಾವದಿಂದ ಹೇಗಿರುತ್ತದೆಂಬುದನ್ನು ತಿಳಿಸಿದೆ.

ತಿರುಪತಿ ಹಾದೀಲಿ ಕಲ್ಲಿಲ್ಲ ಮುಳ್ಳಿಲ್ಲ।
ಸಾಸಿವೆ ತೋರ ಗಿಡವಿಲ್ಲ। ತಮ್ಮಪ್ಗೆ
ಸೋಸಿ ಬಿತ್ತಪ್ಪ ಜವನಾನ[೮೨]

ತಿರುಪತಿ ಇರುವುದೇ ಗುಡ್ಡದಲ್ಲಿ. ಆದರೂ ಹೋಗುವ ಹಾದಿಯಲ್ಲಿ ಕಲ್ಲು ಮುಳ್ಳುಗಳಿಲ್ಲ ಎಂದು ಜನಪದರು ಹೇಳಿರುವುದರ ಹಿಂದೆ ನಂಬಿಕೆ, ಭಕ್ತಿ ಭಾವಗಳು ಉದುಗಿರುವುದು ಕಂಡುಬರುತ್ತದೆ.

ಹೊತ್ತು ಮುಳುಗಿದರೇನು? ಕತ್ತಲಾದರೇನು?
ಅಪ್ಪನಿನ ಗುಡಿಗೆ ಬರುವೇನೋ। ಮಾದಯ್ಯ
ಮುತ್ತಿನ ಬಾಗಿಲು ತೆರಿದೀರು[೮೩]

ಎಂದು ಉಲ್ಲೇಖಿಸಿರುವ ಜನಪದರ ಮಾತುಗಳು ಎಷ್ಟು ಹೊತ್ತಾದರೂ ಸರಿಯೇ ದೇವಾಲಯಕ್ಕೆ ಹೋಗಿ, ದೇವರ ದರ್ಶನವನ್ನು ಮಾಡಿಯೇ ತೀರುತ್ತಾರೆಂಬ ಧಾರ್ಮಿಕ ಹಂಬಲವನ್ನು ನೆಲೆಗೊಳಿಸಿರುವಂತೆ ಕಂಡುಬಂದಿದೆ. ಈ ರೀತಿಯಾಗಿ ದೇವರು, ದೇವಾಲಯಗಳ ನಂಬಿಕೆಗಳು ಜನಪದರಲ್ಲಿದ್ದುದು ಕಂಡುಬರುತ್ತದೆ. ಬೆಳಗಿನಿಂದ ಅವರು ಉಣ್ಣುವ, ಹೊಲದಲ್ಲಿ ದುಡಿಯುವ, ರಾತ್ರಿ ಮಲಗುವ ಎಲ್ಲಾ ಸಂದರ್ಭಗಳಲ್ಲೂ ಧಾರ್ಮಿಕ ನಂಬಿಕೆ ಅವರ ಜೀವ ನಾಡಿಯಾಗಿ ನಾಡಿಮಿಡಿತದಂತೆ ಇರುವುದು ಕಂಡುಬರುತ್ತದೆ.

ಈ ರೀತಿಯಾಗಿ ಶಾಸನಗಳು ಮತ್ತು ಜನಪದರು ತಿಳಿಸಿದ ಉಲ್ಲೇಖಗಳಿಂದ ಸಮಾಜದಲ್ಲಿ ಧಾರ್ಮಿಕ ಸಂಸ್ಕೃತಿಯ ಪ್ರಭಾವ ಜನರ ಮೇಲಿದ್ದುದು ಕಂಡುಬರುತ್ತದೆ. ಅದು ನಂಬಿಕೆಯ ಆಧಾರದ ಮೇಲೆ ರೂಪಿತವಾಗಿ ಬೆಳೆದು ಹೆಮ್ಮರವಾಗಿರುವುದು ಶಾಸನಗಳಿಂದ ವಿಧಿತವಾಗಿದೆ. ದಾನ ನೀಡುವುದು 'ದಾನಪಾಲನ ಯೋರ್ಮಧ್ಯೇ ದಾನನಾಚ್ಛೇಯೋನುಪಾಲನಂ ದಾನಾತ್ಸ್ವರ್ಗಂ ಅವಾಪ್ನೋತಿ ಪಾಲನಾತ್ ಅಚ್ಯುತಂ ಪದಂ' ಎಂದಿದೆ.[೮೪] ದಾನ ಕೊಡುವುದು, ಕೊಟ್ಟ ದಾನವನ್ನು ಪಾಲಿಸುವುದು ಹೆಚ್ಚು ಶ್ರೇಯಸ್ಸನ್ನು ತರುತ್ತದೆ. ಇದನ್ನು ಅನುಸರಿಸಿದವರು ಅಚ್ಯುತ(ಗೋವಿಂದನ) ಪದವಿಯನ್ನು ಪಡೆಯುತ್ತಾರೆಂಬ ನಂಬಿಕೆ ಕಂಡುಬರುತ್ತದೆ. ಯಾರು ಧರ್ಮವನ್ನು ರಕ್ಷಿಸುವರೋ ಅವರನ್ನು ಧರ್ಮವು ರಕ್ಷಿಸುತ್ತದೆ.

ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ
ತಸ್ಮಾದ್ಧರ್ಮೋ ನ ಹಂತವ್ಯಸ್ಸರ್ವೈಶ್ವರ್ಯ ಫಳೇಪ್ಸುಭಿಃ॥[೮೫]

ಎಂದಿರುವ ಭಗವದ್ಗೀತೆಯ ಉಪದೇಶವು ಧರ್ಮದ ರಕ್ಷಣೆಯನ್ನು ಕುರಿತು ಹೇಳುತ್ತದೆ. ಈ ಧರ್ಮಕ್ಕೆ ಚಾಚೂ ತಪ್ಪದೆ ಸಮಾಜದಲ್ಲಿ ಬುನಾದಿ ಹಾಕಿದವುಗಳು ದೇವಾಲಯಗಳು. ಈ ದೇವಾಲಯಗಳು ನೈತಿಕತೆಯ ಆಧಾರದ ಮೇಲೆ ನಂಬಿಕೆಗಳ ಮೂಲಕ ಧರ್ಮ, ಸಮಾಜ, ಹಾಗೂ ಪ್ರಭುತ್ವವನ್ನು ಸರಿದಾರಿಗೆ ಕೊಂಡೊಯ್ಯುವ ಕೊಂಡಿಗಳಂತೆ ಕಾರ್ಯನಿರ್ವಹಿಸಿದವು.

ಹೀಗೆ ದೇವಾಲಯಗಳು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ರಾಜಕೀಯ ಶಕ್ತಿಗಳಾಗಿ ಸಮಾಜದ ಅಗ್ರಸ್ಥಾನದಲ್ಲಿ ನಿಂತು ಕಾರ್ಯನಿರ್ವಹಿಸಿದವು. ಹಲವು ರಾಜಮನೆತನಗಳು ದೇವಾಲಯಗಳನ್ನು ಕಟ್ಟಿಸಿ ದಾನದ ಮೂಲಕ ಪೋಷಿಸಿಕೊಂಡುಬಂದವು. ಈ ರೀತಿ ಬೆಳೆದು ಬಂದ ದೇವಾಲಯಗಳು ಪ್ರಭುತ್ವದಷ್ಟೆ ಅಥವಾ ಅದಕ್ಕಿಂತಲೂ ಹೆಚ್ಚು ಸಮಾಜದಲ್ಲಿ

ಪ್ರಭಾವಶಾಲಿಗಳಾಗಿದ್ದವು. ದೇವಾಲಯಗಲು ೧೨ನೆಯ ಶತಮಾನದ ನಂತರ ಬ್ರಾಹ್ಮಣರ ಭೂಮಾಲೀಕತ್ವವನ್ನು ಗಟ್ಟಿಗೊಳಿಸಿದವು. ಈ ಶತಮಾನದ ಹಿಂದೆಯೇ ಇದ್ದಿತಾದರೂ ಹೆಚ್ಚು ಗಟ್ಟಿಗೊಂಡದ್ದು ಈ ಅವಧಿಯಲ್ಲಿ. ಇದಕ್ಕೆ ಪ್ರಮುಖ ಕಾರಣ ಕಾಳಾಮುಖ ಧರ್ಮದ ದಟ್ಟ ಪ್ರಭಾವವೂ ಮೊದಲುಗೊಂಡಿತು. ಮೊದ ಮೊದಲು ದೇವಾಲಯ ನಿರ್ಮಿಸುವುದು, ದಾನ ಕೊಡುವುದು, ದೇವರನ್ನು ಮುಟ್ಟುವುದು ಶ್ರೇಷ್ಠವೆಂಬ ಭಾವನೆಗಳು ಕಾಲಕ್ರಮೇಣ ವೈದಿಕ ಸಂಪ್ರದಾಯದ ಪ್ರಭಾವಕ್ಕೊಳಗಾದವು. ದೇವಾಲಯದ ನಂಬಿಕೆ, ಆಚರಣೆಗಳಲ್ಲಿ ಬದಲಾವಣೆಗಳು ಕಂಡುಬಂದವು. ಇದರಿಂದಾಗಿ ಸಾಮಾನ್ಯ ಜನರಿಗೆ ಗರ್ಭಗುಡಿಯ ಪ್ರವೇಶವನ್ನು ನಿರಾಕರಿಸಲಾಯಿತು. ಬ್ರಾಹ್ಮಣರು ಮಾತ್ರ ವಿಗ್ರಹಗಳನ್ನು ಮುಟ್ಟುವ, ಪೂಜಿಸುವ ಅಧಿಕಾರ ಹೊಂದಿದರು. ಕಾಲಕ್ರಮೇಣ ಜನರು ಹಂತಹಂತವಾಗಿ ಗರ್ಭಗುಡಿಯ ಮುಂದೆ, ದೇವಾಲಯದ ಪ್ರಾಂಗಣದ ಮುಂದೆ, ಪೌಳಿಯಲ್ಲಿ, ಪೌಳಿಯಾಚೆ, ಕೆಲವು ಶೂದ್ರರೆಂದು ಕರೆಸಿಕೊಂಡವರಿಗೆ ದೇವಾಲಯದ ಕೇರಿಗೆ ಪ್ರವೇಶವಿಲ್ಲದಂತೆ ನಿರಾಕರಿಸಲಾಯಿತು. ಇದು ದೇವಾಲಯಗಳ ಮೇಲೆ ವೈದಿಕ ಸಂಪ್ರದಾಯದ ಪ್ರಭಾವ, ಪ್ರೇರಣೆಯಿಂದ ಸಮಾಜದಲ್ಲಿ ಸಂಭವಿಸಿದ ಧಾರ್ಮಿಕ ಸವಾಲಾಗಿ ಪರಿಣಮಿಸಿತು. ದೇವಾಲಯಗಳು ದೇವರನ್ನು ಗೌರವ ವಿಧೇಯತೆಯಿಂದ ಕಾಣಬೇಕು. ದೇವರಿಗೆ ಅಗೌರವ ತೋರಿಸಿದರೆ ಶಿಕ್ಷೆ ವಿಧಿಸುವ ಕೇಂದ್ರಗಳೂ ಆಗಿದ್ದವು. ಇದು ಸಹ ನೈತಿಕತೆಯನ್ನು ಆಧರಿಸಿತ್ತು.

ದೇವಾಲಯಗಳು ಬಹುಮುಖಿ ಕಾರ್ಯಗಳನ್ನು ನಿರ್ವಹಿಸಿರುವುದನ್ನು ಮೇಲೆ ಚರ್ಚಿಸಲಾಗಿದ್ದು, ಈ ಅಧ್ಯಯನದಿಂದ ತಿಳಿಯಲಾಯಿತು. ದೇವಾಲಯಗಳು ಸಮಾಜದ ಜನರಿಗೆ ವೃತ್ತಿ ನೀಡುವ, ವ್ಯಾಪಾರಿಗಳಿಗೆ ಸಂತೆಗಳ ಮೂಲಕ ಜೀವನ ಒದಗಿಸುವ, ಕೃಷಿಕರಿಗೆ ಸಾಲ ನೀಡುವ ಹಣಕಾಸು ಸಂಸ್ಥೆಯಂತೆ, ದಾನದ ಭೂಮಿಯ ಒಡೆತನದಿಂದಾಗಿ ಖಾಸಗಿ ಭೂಮಾಲೀಕತ್ವ ಕೇಂದ್ರಗಳಾಗಿ, ಅನ್ನದಾನ, ವಿದ್ಯಾದಾನ ಕೇಂದ್ರಗಳಾಗಿ, ಆರೋಗ್ಯ ಕೇಂದ್ರಗಳಾಗಿ, ಆಳುವ ವರ್ಗವನ್ನು ನಿಯಂತ್ರಿಸುವ, ನ್ಯಾಯಾಂಗದಂತೆ ಅಪರಾಧಿಗಳಿಗೆ ಶಿಕ್ಷಿಸುವ ಮೊದಲಾದ ಎಲ್ಲಾ ಬಗೆಯ ಅಧಿಕಾರವನ್ನು ಹೊಂದಿದ್ದು, ಕರ್ತವ್ಯವನ್ನು ನಿಭಾಯಿಸುತ್ತಿದ್ದವು. ದೇವಾಲಯಗಳು ಧಾರ್ಮಿಕ ಪ್ರಭುತ್ವದ ಪ್ರತಿನಿಧಿಗಳಾಗಿದ್ದವು. ಆ ಮೂಲಕ ರಾಜ ಪ್ರಭುತ್ವವನ್ನು ನಿಯಂತ್ರಿಸಿ ತನ್ನ ಕಪಿಮುಷ್ಠಿಗೆ ಸಿಲುಕಿಸಿಕೊಂಡು ನಿರ್ದೇಶನಗಳನ್ನು ನೀಡಿದವು. ರಾಜನ ಬೊಕ್ಕಸಕ್ಕೆ ಆದಾಯದ ಮೂಲಗಳಾದವು. ಜನರಲ್ಲಿ ನಂಬಿಕೆಯನ್ನು ನೆಲೆಗೊಳಿಸುವ ಮೂಲಕ ಅವರನ್ನು ನಂಬಿಕೆಯ ಅಸ್ತ್ರದ ಮೂಲಕ ನಿರ್ದೇಶಿಸಿದವು. ಈ ರೀತಿ ನಿರ್ದೇಶಿಸುವ ಮೂಲಕ ಜನತೆಯನ್ನು ರಾಜನ ನಿಯಂತ್ರಣಕ್ಕೆ ಒಳಪಡಿಸಿದವು.

ನಂಬಿಕೆಗಳು ಮೌಢ್ಯವೆಂಬ ಕಲ್ಪನೆಯನ್ನು ದೂರವಿಟ್ಟಾಗ ಈ ಎಲ್ಲ ಅಂಶಗಳು ನಂಬಿಕೆಯಿಂದ ಹೊರ ಹೊಮ್ಮುತ್ತವೆ. ಇವು ಕೇವಲ ನಂಬಿಕೆಗಳು, ಆಚರಣೆಗಳೆಂದು ಸೀಮಿತ ಚೌಕಟ್ಟನ್ನು ಹಾಕಿಕೊಂಡು ಈ ರೀತಿಯ ಕಪ್ಪು ಬಟ್ಟೆಯನ್ನು ಕಣ್ಣಿಗೆ ಕಟ್ಟಿಕೊಂಡು, ಅಧ್ಯಯನ ಮಾಡಲು ಹೊರಟರೆ ಮೇಲೆ ಚರ್ಚಿಸಿದ ಈ ಯಾವ ಅಂಶಗಳು ಗೋಚರಿಸುವುದಿಲ್ಲ. ನಂಬಿಕೆಗಳ ಮೇಲೆ ಸಮಾಜ ನಿಂತಿದೆ. ನಂಬಿಕೆ ಸಮಾಜದ ಆಧಾರ ಸ್ತಂಭದಂತಿದೆ. ಇಂದು ನಂಬಿಕೆಯಂತಹ ಮೌಲ್ಯಗಳು ಇಂದು ವೈಜ್ಞಾನಿಕತೆಯ ಹೆಸರಿನಲ್ಲಿ ಮೂಲೆ ಗುಂಪಾಗುತ್ತಿವೆ. ನಂಬಿಕೆಯನ್ನು ಕಳೆದುಕೊಳ್ಳುತ್ತಿರುವ ಜನತೆ ಇಂದು ವಿಸ್ಮೃತಿಯ ಹಂಚಿಗೆ ಸರಿಯುತ್ತಿದ್ದಾರೆ. ಧಾರ್ಮಿಕ ನಂಬಿಕೆಗಳ ಕ್ಷೀಣಿಸುವಿಕೆಯಿಂದ ಜನರು ಮರೆಗುಳಿಯಂತಹ ಗಾಢ ಸಮಸ್ಯೆಗಳಿಗೆ ಗುರಿಯಾಗುತ್ತಿದ್ದಾರೆ. ಜೀವನದಲ್ಲಿ ನಂಬಿಕೆ ಕಳೆದುಕೊಂಡ ವ್ಯಕ್ತಿ ನಿರುತ್ಸಾಹಿಯಾಗುತ್ತಿದ್ದಾನೆ. ರೈತರ ಆತ್ಮಹತ್ಯೆಯಂತಹ

ಪ್ರಕರಣಗಳು ಇಂದು ಸಂಭವಿಸಲು ಈ ನಂಬಿಕೆಗಳ ಅಧಃಪತನವೇ ಮುಖ್ಯ ಕಾರಣವಾಗಿದೆ. ಕೃಷಿಕರು ಭೂಮಿಯನ್ನು ನಂಬಿ ಬದುಕುತ್ತಿದ್ದರು. ತಮಗೆ ಅನ್ನ ನೀಡುವ ಭೂಮಿಯನ್ನು ತಾಯಿಯೆಂದು ನಂಬಿ, ದೈವವೆಂದು ಪೂಜಿಸುತ್ತಿದ್ದರು. ಆದರೆ ಇಂದು ಈ ನಂಬಿಕೆ ಕಣ್ಮರೆಯಾಗುತ್ತಿರುವುದು ಕೃಷಿ ರಂಗವು ಸೋಲನ್ನು ಅನುಭವಿಸಲು ಪ್ರಮುಖ ಕಾರಣಗಳಲ್ಲಿ ಒಂದಾಗಿದೆ. ನಂಬಿಕೆಯ ಕೊರತೆಯಿಂದಾಗಿ ಜನರು ರೋಗ ಪೀಡಿತರಾಗುತ್ತಿದ್ದಾರೆ. ಪುನಃ ಆಧ್ಯಾತ್ಮಿಕತೆಯ ಮೊರೆ ಹೋಗುವ ಸ್ಥಿತಿಗೆ ಬಂದು ತಲುಪಿದ್ದಾರೆ. ನಾಗಬನದ ಪೂಜೆಯಂತಹ ಆಚರಣೆಗಳು ಹಿಂದೆ ರೂಢಿಯಲ್ಲಿದ್ದವು. ಆದರೆ ಇಂದು ಈ ನಂಬಿಕೆಗಳ ಕ್ಷೀಣತೆಯಿಂದಾಗಿ ಪ್ರಕೃತಿಯನ್ನು ದೇವರೆಂದು ಪೂಜಿಸುವ ಕಲ್ಪನೆಯಿಂದ ಜನರು ದೂರ ಸರಿಯುತ್ತಿದ್ದಾರೆ. ಇಂತಹ ನಂಬಿಕೆಗಳಿಂದ ಹೊರಬಂದುದು ಕಾಡಿನ ನಾಶದಂತಹ ಪರಿಣಾಮಕ್ಕೆ ತುತ್ತಾಗಲು ದಾರಿಮಾಡಿಕೊಟ್ಟಿದೆ. ಇದರಿಂದಾಗಿ ಪ್ರಕೃತಿ ಅಳಿವಿನಂಚಿನಲ್ಲಿದೆ. ಇಂದಿಗೂ ಗ್ರಾಮೀಣ ಪರಿಸರದ ಕೆಲವು ಭಾಗಗಳು, ಬುಡಕಟ್ಟುಗಳು ನಂಬಿಕೆಗಳನ್ನು ನೆಲೆಗೊಳಿಸಿಕೊಂಡು ಬದುಕುತ್ತಿವೆ. ನಂಬಿಕೆಯಂತಹ ಅಂಶಗಳು ಜನರಲ್ಲಿರುವುದರಿಂದಲೇ ಭಕ್ತಿಯಿಂದಲೋ, ಭಯದಿಂದಲೋ ಸಮಾಜದಲ್ಲಿ ನೆಮ್ಮದಿಯ ಉಸಿರಾಟ ಸಾಧ್ಯವಾಗಿದೆ ಎನ್ನಬಹುದಾಗಿದೆ. ಈ ನೆಮ್ಮದಿಯನ್ನು ಸಮಾಜದಲ್ಲಿ ನೆಲೆಗೊಳಿಸುವುದರ ಜೊತೆಗೆ ಹಬ್ಬ ಹರಿದಿನಗಳು ಜನರಲ್ಲಿ ಐಕ್ಯತೆ, ಸಾಮರಸ್ಯದ ಭಾವನೆಯನ್ನು ಬೆಳೆಸಿದವು. ಈ ಮೂಲಕ ಧಾರ್ಮಿಕ ಸಮನ್ವಯವನ್ನು ಸಾರಿದವು. ಪ್ರಾಚೀನ ಕಾಲದಲ್ಲಿ ಜನರನ್ನು ಧರ್ಮದ ಹೆಸರಿನಲ್ಲಿ ದೇವಾಲಯ, ದಾನ, ನಂಬಿಕೆ, ಆಚರಣೆ, ಸಂಪ್ರದಾಯ ಇವುಗಳ ಮೂಲಕ ಸನ್ಮಾರ್ಗದೆಡೆಗೆ ಕೊಂಡೊಯ್ದಿರುವುದು ಕಂಡುಬರುತ್ತದೆ. ಇವು ಬಲಿಷ್ಠವಾಗಿದ್ದವೆಂಬುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

**೬.೨. ಕೃಷಿ ಮತ್ತು ನಂಬಿಕೆ ಆಚರಣೆಗಳು**

ಕೃಷಿ ಕುರಿತಾದ ಆಚರಣೆಗಳು ಪ್ರಕೃತಿಯೊಂದಿಗೆ ಮಿಳಿತಗೊಂಡಿವೆ. ಅವುಗಳ ಪೀಳಿಗೆಯ ಸಮಾವೇಶಕ್ಕೆ ಧಾರ್ಮಿಕ ಲೇಪನವನ್ನು ಹಚ್ಚಿಸಿ ಮುಂದುವರಿಸಿಕೊಂಡು ಬರಲಾಗಿದೆ. ಕಾರಣವಿಷ್ಟೆ ಪ್ರಕೃತಿಯೊಂದಿಗೆ ಒಡನಾಡಿಕೊಂಡು ಬಂದ ಮಾನವನು ಪ್ರಕೃತಿಯ ಶಿಶು. ಪ್ರಕೃತಿಯಲ್ಲಿ ಸಂಭವಿಸುತ್ತಿದ್ದ ವಿಸ್ಮಯ ಮೊದಲಾದವುಗಳಿಂದ ಭಯದಿಂದಲೋ, ಭಕ್ತಿಯಿಂದಲೋ ಪ್ರಕೃತಿಯನ್ನು ಆರಾಧಿಸಿ ನಂಬಿಕೆ, ಆಚರಣೆಗಳನ್ನು ಮುಂದುವರಿಸಿಕೊಂಡು ಬಂದಿದ್ದಾನೆ. ಪ್ರಕೃತಿ ಸಂಬಂಧದೊಂದಿಗೆ ಸಾಗಿಬಂದ ನಂಬಿಕೆ, ಆಚರಣೆಗಳು ಕಾಲಕ್ರಮೇಣ ಸಮಾಜದಲ್ಲಿ ಧರ್ಮದ ವ್ಯಾಪ್ತಿಯೊಳಗೆ ಸೇರಿಕೊಂಡು, ಧಾರ್ಮಿಕ ಆಚರಣೆಗಳಾಗಿ ಕಂಡುಬಂದಿವೆ. ಆ ಕಾರಣಕ್ಕಾಗಿಯೇ ಅವು ಸಮಾಜದಲ್ಲಿ ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಗೊಂಡು ಅಳಿದುಳಿದು ಉಸಿರಾಡುತ್ತಿರುವುದು ಕಂಡುಬರುತ್ತದೆ. ಕೃಷಿಯನ್ನು ಅವಲಂಬಿಸಿದ ಗ್ರಾಮೀಣ ಜನರಲ್ಲಿ ಈ ನಂಬಿಕೆ, ಆಚರಣೆಗಳು ಇಂದಿಗೂ ಅವರ ಬದುಕಿನ ಒಂದು ಭಾಗವಾಗಿಯೇ ಇವೆಯಾದರು ಮಸುಕಾಗುತ್ತಿವೆ. ಈ ಜನರ ಜೀವನದ ಪ್ರತಿ ಹೆಜ್ಜೆ, ಮಾತು, ಕ್ರಿಯಗಳಲ್ಲೂ ನಂಬಿಕೆ, ಸಂಪ್ರದಾಯ, ಆಚರಣೆಗಳು ಹಾಸುಹೊಕ್ಕಾಗಿವೆ. ಇವುಗಳ ಹಿಂದಿರುವ ಮಹತ್ವವೇನು? ಎಂದು ಸೂಕ್ಷ್ಮವಾಗಿ ಗಮನಿಸಿದರೆ ಅವುಗಳ ಹಿಂದಿರುವ ವೈಜ್ಞಾನಿಕ ಮೌಲ್ಯಗಳು ತೆರೆದುಕೊಳ್ಳುತ್ತವೆ. ಇವುಗಳು ಕೃಷಿಯ ನಿರಂತರತೆ ಮತ್ತು ಅಸ್ಮಿತೆಯ ಕುರುಹುಗಳು. ಪಾರಂಪರಿಕ ಕೃಷಿಯ ಸಾಕ್ಷೀಭೂತ ಪ್ರಜ್ಞೆಗಳು. ಇದರಲ್ಲಿ ಆಧುನಿಕತೆಯ ಹೆಸರಿನಲ್ಲಿ ಮಲಿನಗೊಂಡಿರುವ ಕೃಷಿಯನ್ನು ಪುನಃ ಪರಂಪರೆಯ ತೆಕ್ಕೆಗೆ ಕರೆದೊಯ್ಯಲು, ಮರು ಸ್ಥಾಪಿಸಲು ಸಮಾಜಕ್ಕೆ ಸಂದೇಶ ರವಾನೆ ಮಾಡುವ ನೈತಿಕ ಹೊಣೆಗಾರಿಕೆಗಳು. ಹಾಗೆಯೇ ಅವು ಗ್ರಾಮೀಣ ಕೃಷಿಕರ ಜೀವನ ವಿಧಾನಗಳೂ ಆಗಿ

ಕಂಡುಬರುತ್ತವೆ. 'ನಂಬಿಕೆ ಅಥವಾ ನೆಚ್ಚಿಕ್ಕೆಯು ಒಂದು ಮಾನಸಿಕ ಸ್ಥಿತಿ ಪರಂಪಾರಗತವಾಗಿ ಸ್ವೀಕೃತವಾದ ಒಂದು ಭಾವರೂಪ, ಪುನರಾವರ್ತಿತ ಹಾಗೂ ಸಾಂಪ್ರದಾಯಿಕ ಅಭಿಪ್ರಾಯೋಕ್ತಿ ವಸ್ತು ಸ್ಥಿತಿಯೊಡನೆ ಅಸಂಬದ್ಧವೂ ಅವೈಜ್ಞಾನಿಕವೂ ಆದ ಸಂಬಂಧವುಳ್ಳ ಹೇಳಿಕೆ. ಇದರಲ್ಲಿ ಮಾತು ಒಂದು ಭಾಗ, ಕ್ರಿಯೆ ಮತ್ತೊಂದು ಭಾಗ[೮೬] ಎಂಬ ಹೇಳಿಕೆಯು ಜಾನಪದ ನಂಬಿಕೆಗಳು ಎಂಬ ಕೃತಿಯ ಪ್ರಸ್ತಾವನೆಯ ಭಾಗದಲ್ಲಿದೆ. ಆದರೆ ಮಾತು, ಮನಸ್ಸು, ಕ್ರಿಯೆಗಳು ಜನರ ಬದುಕಿನ ಜೀವಾಳ. ಮಾತು ಹಾಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು, ಮಾತು ಬೆಳ್ಳಿ, ಮಾತುಮಾಣಿಕ್ಯ ಎಂಬ ಗಾದೆ ಮಾತುಗಳು ಮಾತಿಗಿರುವ ಪ್ರಾಮುಖ್ಯತೆಯನ್ನು ಹೇಳುತ್ತವೆ. ವೈಜ್ಞಾನಿಕತೆಗಿಂತ ನೈತಿಕ ಮೌಲ್ಯಗಳ ತಳಹದಿಯ ಮೇಲೆ ರೂಪಗೊಂಡವುಗಳಿವು. ಆದರೂ ಇದರಲ್ಲಿ ವೈಜ್ಞಾನಿಕತೆಯ ತಿರುಳು ಸೂಕ್ಷ್ಮವಾಗಿ ಅಂತರ್ಗತಗೊಂಡಿರುತ್ತದೆ.

'ಸಮಾಜದ ಎಲ್ಲಾ ಸ್ಥರಗಳಲ್ಲೂ ನಂಬಿಕೆ, ಆಚರಣೆಗಳು ಅಸ್ತಿತ್ವದಲ್ಲಿವೆ. ಮಾನವನು ಸಮಾಜಕ್ಕೆ, ಅದರ ಕಟ್ಟುಕಟ್ಟಳೆಗಳಿಗೆ ಬದ್ಧನಾಗಿ ನಡೆದುಕೊಳ್ಳುವುದರಿಂದ ಇವುಗಳಿಂದ ಹೊರತಾಗಿರಲು ಸಾಧ್ಯವಿಲ್ಲ. ಮೂಲ ಆಶಯ ಇವುಗಳಲ್ಲಿ ಒಂದೇ ಆಗಿದ್ದರೂ ಇವು ಭಿನ್ನ ಭಿನ್ನ ಪ್ರದೇಶಗಳಲ್ಲಿ ಸ್ವತಂತ್ರವಾಗಿ ರೂಪಗೊಳ್ಳಲು ಅವಕಾಶ ಉಂಟು ಎಂದು ಜೀನಹಳ್ಳಿ ಸಿದ್ಧಲಿಂಗಪ್ಪ ಅಭಿಪ್ರಾಯ ಪಟ್ಟಿದ್ದಾರೆ.'[೮೭] ಜನಪದರು ಹೇಳುವಂತೆ ಒಂದು ಹರ್‌ದಾರಿ (ಹರಿದಾರಿ) ಅಂದರೆ ಇಂದಿನ ಆರೂವರೆ ಕಿ.ಲೋ ಮೀಟರ್ ಎನ್ನಲಾಗಿದೆ. ಈ ಪ್ರತಿ ಹರಿದಾರಿಗೂ ಭೌಗೋಳಿಕ, ಪ್ರಾಕೃತಿಕ, ಜೈವಿಕ, ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ಪಾರಂಪರಿಕ ನಂಬಿಕೆ, ಸಂಪ್ರದಾಯ, ಆಚರಣೆಗಳ ವಿಧಾನಗಳಲ್ಲಿ ಭಿನ್ನತೆಗಳಿವೆ. ಅವು ಆಯಾ ಸಮಾಜದ ಸಂಸ್ಕೃತಿಯ ಪ್ರತಿಬಿಂಬಗಳಾಗಿ ಕಂಡುಬರುತ್ತವೆ. ಕೃಷಿಗೆ ಸಂಬಂಧಿಸಿದ ಆಚರಣೆಗಳು ಕೃಷಿಯ ಹುಟ್ಟಿನೊಂದಿಗೆ ಬೆಳೆದು ಬಂದಿರುವ ಸಾಧ್ಯತೆಗಳಿವೆ. ಒಕ್ಕಲಿಗನು ತನ್ನ ಬೇಸಾಯದಲ್ಲಿ ಕಾಲಮಾನಕ್ಕೆ ತಕ್ಕಂತೆ ಸಂಪ್ರದಾಯಗಳನ್ನು ಆಚರಿಸುತ್ತಾ ಬಂದಿದ್ದಾನೆ. 'ವಿಶೇಷವಾಗಿ ಈ ಸಂಪ್ರದಾಯಗಳು ಕರ್ನಾಟಕದಲ್ಲಿ ಶತಶತಮಾನಗಳಿಂದಲೂ ಬದಲಾಗುತ್ತಾ ಬಂದು ಮುಂದೆ ೧೨ನೆಯ ಶತಮಾನದಲ್ಲಿ ಶಿವಶರಣರ ಕಾಲಕ್ಕೆ ವಿಶೇಷ ರೂಪಗಳನ್ನು ತಾಳಿ ಈಗಲೂ ಕರ್ನಾಟಕದ ಬಹುಭಾಗಗಳಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ.'[೮೮]

ಕೃಷಿ ಆಚರಣೆಗಳು ಆಯಾ ಋತುಮಾನಕ್ಕೆ ತಕ್ಕಂತೆ ಮೇಲೆ ಹೇಳಿದಂತೆ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಾ ಹೋಗುತ್ತವೆ. ಕನ್ನಡ ಶಾಸನಗಳನ್ನು ಕೇಂದ್ರವಾಗಿರಿಸಿಕೊಂಡು ಕೃಷಿ ಸಂಬಂಧಿ ಆಚರಣೆಗಳನ್ನು ನೋಡುವುದಾದರೆ ಶಾಸನಗಳಲ್ಲಿ ಹಬ್ಬಗಳ ಉಲ್ಲೇಖಗಳು ದೊರೆತಿದ್ದು, ಹಬ್ಬಗಳನ್ನು 'ಪರ್ವ್ವ'ಗಳೆಂದು ಕರೆದಿವೆ. ಕಾರಹುಣ್ಣಿಮೆ, ಮಹಾನವಮಿ, ದೀಪಾವಳಿ, ಉತ್ತರಾಯಣ ಸಂಕ್ರಾಂತಿ, ಯುಗಾದಿ, ಶಿವರಾತ್ರಿ, ಕಾರ್ತಿಕ ಚೈತ್ರಪವಿತ್ರ, ತುಳಸಿಪೂಜೆ, ಬಾದುಬ್ಬೆ ಮುಂತಾದ ಆಚರಣೆಗಳು ಉಲ್ಲೇಖಗೊಂಡಿವೆ. ಆದರೆ ನಂಬಿಕೆ, ಆಚರಣೆಗಳ ವಿಶ್ಲೇಷಣೆಗಳು ದೊರೆಯುವುದು ತೀರಾ ವಿರಳ. ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಈ ಆಚರಣೆಗಳು ಹಬ್ಬದ ರೂಪದಲ್ಲಿ ಇವೆ. ಇವು ಅಂದಿನ ಸಮಾಜದಲ್ಲಿ ಜೀವಂತವಾಗಿ ರೂಢಿಯಲ್ಲಿದ್ದ ಕಾರಣಕ್ಕೆ ಬರವಣಿಗೆಯಲ್ಲಿ ದಾಖಲೆಗಳಾಗಿ ಉಳಿದಿವೆ. ಅವು ಸಮಾಜದಿಂದ ಹೊರತಾಗಿಲ್ಲ. ಕೃಷಿಕಾರ್ಯಗಳಾದ ಉತ್ತುವ, ಬಿತ್ತುವ, ಒಕ್ಕುವ(ಸುಗ್ಗಿಯ) ಸಂದರ್ಭಗಳಲ್ಲಿ ಅನೇಕ ನಂಬಿಕೆ, ಆಚರಣೆಗಳು ಇಂದಿಗೂ ಕಂಡುಬರುತ್ತವೆ. ಆದರೆ ಆಚರಣೆಯ ಪ್ರಮಾಣದಲ್ಲಿ ಗಣನೀಯವಾದ ಇಳಿಕೆ ಕಾಣಿಸುತ್ತಿದೆ. ಈ ಕಾರಣಕ್ಕೆ ಇವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಮರು ಚಿಂತಿಸುವ ಅಗತ್ಯವಿದೆ.

## ಯುಗಾದಿ

ಯಾಗಾದಿಯ ಆಚರಣೆಯನ್ನು ಕುರಿತು ತಗಾದಿ, ಉಗಾದಿ ಉಡಕ್ಕೊಂಡ ಹೋತು ಎಂಬ ಮಾತುಗಳು ಜನರ ಬಾಯಲ್ಲಿವೆ. ಹಿಂದಿನ ವರ್ಷದ ಎಲ್ಲ ಕೃಷಿ ಚಟುವಟಿಕೆಗಳು ಯುಗಾದಿಗೆ ಕೊನೆಗೊಂಡು, ಯುಗಾದಿಯಿಂದ ಹೊಸ ವರ್ಷದ ಆಚರಣೆಗಳು ಆರಂಭಗೊಳ್ಳುತ್ತವೆ. ಹೊಸ ವರ್ಷದ ಆರಂಭದ ದಿನಗಳನ್ನು ಎರಡು ರೀತಿಯಾಗಿ ಭಾರತದಲ್ಲಿ ಗುರುತಿಸಲಾಗುತ್ತದೆ. ಚಂದ್ರನ ಚಲನೆಯ ಅಳತೆಯನ್ನಾಧರಿಸಿ ಆಚರಿಸುವ ಆಚರಣೆಗೆ ಚಾಂದ್ರಮಾನ ಯುಗಾದಿ ಎಂದು ಕರೆಯಲಾಗುತ್ತದೆ. ಸೂರ್ಯನ ಚಲನೆಯನ್ನಾಧರಿಸಿ ಆಚರಿಸುವ ಆಚರಣೆಗೆ ಸೌರಮಾನ ಯುಗಾದಿ ಎಂದು ಕರೆಯಲಾಗುತ್ತದೆ. ಇದು ಜನವರಿ ೧೪ಕ್ಕೆ ಆರಂಭವಾಗುತ್ತದೆ. ದಕ್ಷಿಣ ಭಾರತದಲ್ಲಿ ಸಾಂಪ್ರದಾಯಿಕವಾಗಿ ಚೈತ್ರಮಾಸದಂದು ಆಚರಿಸುವ ಚಾಂದ್ರಮಾನ ಯುಗಾದಿಯನ್ನು ಆಚರಿಸಲಾಗುತ್ತದೆ. ಇಂದಿಗೂ ಕೇರಳ ಮತ್ತು ಪಶ್ಚಿಮ ಬಂಗಾಳ ರಾಜ್ಯಗಳಲ್ಲಿ ಸೌರಮಾನ ಯುಗಾದಿಯನ್ನು ಆಚರಿಸುತ್ತಾರೆ. ಹನ್ನೆರಡು ಅಮವಾಸೆಗಳಲ್ಲಿ ಉಳಿದ ಹನ್ನೊಂದು ಅಮವಾಸೆಗಳು ಅಲ್ಪವ್ಯತ್ಯಾಸ ಹೊಂದಿರುತ್ತವೆ. ಯುಗಾದಿಯಲ್ಲಿ ಬರುವ ಅಮವಾಸೆಯು ಪೂರ್ಣ ಅಮವಾಸೆಯಾಗಿರುತ್ತದೆ. ಇಲ್ಲಿಂದ ಹೊಸ ವರ್ಷ ಆರಂಭವಾಗುತ್ತದೆ. ಈ ಮಾಸವನ್ನು ವಸಂತ ಮಾಸವೆಂದು ಕರೆಯುತ್ತಾರೆ. ಚಳಿಗಾಲದಲ್ಲಿ ಮರದ ಎಲೆಗಳು ಉದುರಿ ಆಗ ತಾನೆ ಚಿಗುರಲು ಪ್ರಾರಂಭಿಸಿರುತ್ತವೆ. ಪ್ರಕೃತಿಯೊಂದಿಗೆ ನಿರಂತರ ಸಂಪರ್ಕ ಹೊಂದಿದ ಕಾರಣಕ್ಕಾಗಿಯೇ, ಮಾನವನು ಈ ರೀತಿಯ ಅರ್ಥಪೂರ್ಣ ಆಚರಣೆಗಳನ್ನು ಅನುಸರಿಸಿಕೊಂಡು ಬಂದಿರುವುದು ಇದರಿಂದ ವ್ಯಕ್ತವಾಗುತ್ತದೆ. ಯುಗಾದಿಯ ಅಮವಾಸೆಯಿಂದ ಮೂರನೆಯ ದಿನ ಸಂಜೆ ಚಂದ್ರನ ದರ್ಶನ ಮುಗಿಸಿಕೊಂಡು ಹೊಸ ವರ್ಷದ ಪಂಚಾಂಗವನ್ನು ನೋಡುವ ಪದ್ಧತಿಯಿದೆ. ಆ ವರ್ಷದ ಮಳೆ, ಬೆಳೆಗಳ ಮುನ್ಸೂಚನೆಯನ್ನು ಪಂಚಾಂಗದ ಮೂಲಕ ತಿಳಿಯುತ್ತಾರೆ. ದೇವಾಲಯಗಳಲ್ಲಿ ಪೂಜೆಮುಗಿಸಿ ಧಾನ್ಯಗಳೊಂದಿಗೆ ಊರ ಮುಂದಿನ ಕರಗಲ್ಲಿಗೆ ಪೂಜೆ ಸಲ್ಲಿಸುವ ನಂಬಿಕೆಗಳಿವೆ. ಹೊಸ ವರ್ಷದ ಮಳೆ, ಬೆಳೆಗಳು ಸಮೃದ್ಧವಾಗಲೆಂಬ ಉದ್ದೇಶದಿಂದ ಈ ಆಚರಣೆಗಳನ್ನು ಮಾಡುತ್ತಾರೆ. ಯುಗಾದಿಯ ಹಿಂದಿನ ದಿನದಂದು ಊರ ಗ್ರಾಮಸ್ಥರು ಕುಂಬಾರರ ಮನೆಯಿಂದ ಮಣ್ಣಿನ ಮಡಿಕೆಗಳನ್ನು ತರುತ್ತಾರೆ. ಆ ಮಡಿಕೆಗಳಲ್ಲಿ ಒಂಬತ್ತು ತರದ ಧಾನ್ಯಗಳನ್ನು ತುಂಬುತ್ತಾರೆ. ಅದನ್ನು ಊರ ಮುಂದಿನ ಹೊಲದಲ್ಲಿ ಒಂದು ನಿಗದಿತ ಸ್ಥಳವನ್ನು ಆಯ್ಕೆ ಮಾಡಿ ಅದಕ್ಕೆ ಎಕ್ಕೆ ಎಲೆಯನ್ನು ಮುಚ್ಚಿಟ್ಟು ಬರುತ್ತಾರೆ. ಈ ಮಡಿಕೆಗಳ ಎದುರಿಗೆ ನೊಗ ಹೂಡಿ ನಿಲ್ಲಿಸಿದ ಜೋಡೆತ್ತುಗಳನ್ನು ಮಣ್ಣಿನಿಂದ ತಯಾರಿಸಿ ಇಡುತ್ತಾರೆ. ಮರುದಿನ ಸೂರ್ಯೋದಯಕ್ಕೂ ಮೊದಲು ಪ್ರತಿಷ್ಠಾಪಿಸಿದ ಜೋಡೆತ್ತುಗಳಿಗೆ ಪೂಜೆ ಸಲ್ಲಿಸಿ, ಮಡಿಕೆಗಳ ಮೇಲೆ ಇರುವ ಎಲೆಗಳನ್ನು ನಿಧಾನವಾಗಿ ಒಂದೊಂದೆ ಎಲೆಗಳನ್ನು ತೆಗೆಯುತ್ತಾರೆ. ಒಂದೊಂದು ಎಲೆಗೂ ಒಂದೊಂದು ಮಳೆ ನಕ್ಷತ್ರವನ್ನು ನಿಗದಿ ಮಾಡಿರುತ್ತಾರೆ. ಯಾವ ಎಲೆ ಹಿಬ್ಬನಿಯ ತೇವಾಂಶದಿಂದ ನೀರಿನ ಬಿಂದುಗಳನ್ನು ಹೆಚ್ಚು ಸುರಿಸುತ್ತದೆಯೋ ಆ ಎಲೆಗೆ ಸಂಬಂಧಿಸಿದ ಮಳೆ ಮತ್ತು ಆ ಮಳೆಯಲ್ಲಿ ಬಿತ್ತಿದ ಬೆಳೆಯು ಸಮೃದ್ಧವಾಗುತ್ತದೆ ಎಂಬ ನಂಬಿಕೆ ಇದೆ.

## ಹೊನ್ನೆರು

ಹೊನ್ನಾರು, ಹೊನ್ನೇರು ಎಂದೆಲ್ಲ ಕರೆಯುವ ರೂಢಿ ಇದೆ. ಯುಗಾದಿಯ ನಂತರ ಆಚರಿಸುವ ಆಚರಣೆಯಿದು. ಯುಗಾದಿಯ ನಂತರ ಭೂಮಿಯ ಮೇಲೆ ಮಳೆ ಹನಿಗಳು ಉದುರಿದ ತಕ್ಷಣ ಈ ಕಾರ್ಯಗಳು ಆರಂಭವಾಗುತ್ತವೆ. ಇದು ಒಣಬೇಸಾಯಕ್ಕೆ ಅನ್ವಯಿಸಿದರೆ, ನೀರಾವರಿ

ಬೇಸಾಯ ಮಾಡುವವರು ಯುಗಾದಿಯ ನಂತರ ಶುಭದಿನದಂದು ತಮಗೆ ಬೇಕೆಂದಾಗ ಆಚರಿಸುವರು. ‘ಹೊನ್ನೇರು ಎಂದರೆ ಹೊನ್ನಿನವಾರು, ಅರ್ಥಾತ್ ಬಂಗಾರದ ನೇಗಿಲು’[೮೯] ಅಂದರೆ ಅನ್ನ ನೀಡುವ ಭೂಮಿತಾಯಿಗೆ ಮೊದಲಿಡುವ ನೇಗಿಲ ಗೆರೆಯು ಹೊನ್ನಿನಷ್ಟು ಅಮೂಲ್ಯವಾದುದು. ಇದು ಶುಭದಾಯಕವಾದರೆ ಭೂಮಿಯು ಬೆಳೆಯ ಹೊನ್ನು ಸುರಿಸುತ್ತದೆ ಎಂಬ ಭಾವನೆ ಕೃಷಿಕರದ್ದು. ಅಂದು ಪೂಜೆಯ ನೈವೇದ್ಯಕ್ಕೆ ತಯಾರಿಸುವ ಪಾಯಸವನ್ನು ಹೊನ್ನುಗ್ಗಿ ಎಂದು ಕರೆಯುತ್ತಾರೆ. ತೊಗರಿ, ಹೆಸರು, ಅಕ್ಕಿ ಮೊದಲಾದ ಧಾನ್ಯಗಳನ್ನು ಬಳಸಿ ಹೊನ್ನಾರಕ್ಕೆ ಹೊನ್ನುಗ್ಗಿ ಎಂದು ತಯಾರಿಸುತ್ತಾರೆ. ಅಂದಿನ ದಿನ ಎತ್ತುಗಳನ್ನು ಮೈ ತೊಳೆದು, ನೇಗಿಲು, ನೊಗಗಳನ್ನು ತೊಳೆಯಲಾಗುತ್ತದೆ. ಇವುಗಳಿಗೆ ಬಿಲ್ವಪತ್ರೆ, ಅಂಗನೂಲು ಅಕ್ಷತೆ, ಅರಿಶಿನ ಕುಂಕುಮಗಳಿಂದ ಪೂಜಿಸಲಾಗುತ್ತದೆ. ಮನೆಯಲ್ಲಿನ ಸದಸ್ಯರುಗಳಲ್ಲಿ ಯಾರ ಹೆಸರಿನಲ್ಲಿ ಶುಭದಿನ ಕೂಡಿಬಂದಿರುತ್ತದೆಯೋ ಅವರು ನೇಗಿಲ ಗೆರೆಯನ್ನು ಹೊಡೆಯುತ್ತಾರೆ. ‘ಸಾಂಕೇತಿಕವಾಗಿ ಮೂರು ಸುತ್ತು, ಐದು ಸುತ್ತು, ಕೆಲವೆಡೆ ಒಂಭತ್ತು ಸುತ್ತು ಗೆರೆ ಹೊಡೆಯುತ್ತಾರೆ. ಹೂಡಿದ ಎತ್ತುಗಳನ್ನು ಬಿಚ್ಚಿ ಮತ್ತೆ ಎಡ ಬಲಕ್ಕೆ ಹೂಡಿ ಗಳೆ ಹೊಡೆಯುವ ಪದ್ಧತಿ ಕೆಲವೆಡೆ ರೂಢಿಯಲ್ಲಿದೆ.’[೯೦] ಹೊನ್ನಾರ ಮುಗಿಸಿಕೊಂಡು ಊರಬಾಗಿಲಿಗೆ ಬಂದು ನೊಗ ಮತ್ತು ನೇಗಿಲನ್ನು ಎತ್ತಿನಿಂದ ಬೇರ್ಪಡಿಸಿ ಹೆಗಲ ಮೇಲೆ ಹೊತ್ತು ತರುತ್ತಾರೆ. ನೊಗ ಕಳಚದೆ ಹಾಗೆ ಊರ ಒಳಗೆ ಬಂದರೆ ನೊಗವನ್ನು ಮಧ್ಯೆ ಎರಡು ತುಂಡಾಗಿ ಕತ್ತರಿಸುತ್ತಾರೆ. ಇದನ್ನು ನೊಗ ಕಡಿಯುವ ಆಚರಣೆ ಎನ್ನಲಾಗುತ್ತದೆ. ಈ ಆಚರಣೆಯು ಹೆಚ್ಚಾಗಿ ಮಧ್ಯ ಮತ್ತು ದಕ್ಷಿಣ ಕರ್ನಾಟಕದ ಭಾಗದಲ್ಲಿ ಕಂಡುಬರುತ್ತವೆ.

**ಕಾರಹುಣ್ಣಿಮೆ**

ಈ ಆಚರಣೆಯನ್ನು ಕಾರಬ್ಬ, ಕಾರುಣ್ಣಿಮೆ ಎಂದು ಹಳ್ಳಿಗಳಲ್ಲಿ ಕರೆಯುತ್ತಾರೆ. ಹೆಸರೆ ಸೂಚಿಸುವಂತೆ ಹುಣ್ಣಿಮೆಯಲ್ಲಿ ಆಚರಿಸುವ ಹಬ್ಬವಾಗಿದೆ. ಈ ಆಚರಣೆಯು ಮಧ್ಯ ಮತ್ತು ಉತ್ತರ ಕರ್ನಾಟಕದ ಹಾಗೂ ದಕ್ಷಿಣ ಕರ್ನಾಟಕದ ಕೆಲವೆಡೆ ಹೆಚ್ಚಾಗಿ ಕಂಡುಬರುತ್ತದೆ. ಇದು ಮುಂಗಾರು ಬಿತ್ತನೆಯ ಕೊನೆಯ ಹಂತ, ಇದರಿಂದಾಗಿ ‘ಕಾರಬ್ಬಕ್ಕೆ ಕಡೆಗೂರಿಗೆ’ ಎಂಬ ಮಾತಿದೆ. ಆದರೆ ಇಂದಿನ ಬದಲಾದ ಸಂದರ್ಭದಲ್ಲಿ ಭಿತ್ತನೆಗಳು ಹಿಂದು ಮುಂದಾಗುತ್ತಿರುವುದು ಕಂಡುಬರುತ್ತದೆ. ಕಾರಬ್ಬಕ್ಕೆ ಕಾರೆವರಿಯುವುದು ಎಂಬ ಮಾತಿದೆ. ಮುಂಗಾರಿನ ಕೃಷಿಕಾರ್ಯಗಳು ಮುಗಿಯುವುದು ಅಥವಾ ಕೊನೆಗೊಳ್ಳುವುದು, ಅರಿವುದು(ಕತ್ತರಿಸುವುದು) ಎಂಬರ್ಥ. ಧಾರ್ಮಿಕ ಕಾರ್ಯಗಳಾದ ವಿವಾಹಗಳು ಸಹ ಈ ಕಾರಬ್ಬಕ್ಕೆ ಕೊನೆಗೊಳ್ಳುತ್ತವೆ. ಇದಕ್ಕೆ ಪ್ರಮುಖ ಕಾರಣ ಮಳೆಗಾಲದ ಸಂದರ್ಭವಿದು. ಆಚರಣೆಯ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಮುಂದೆ ಬರುವ ನಾಗರ ಪಂಚಮಿಯು ‘ಬಂದ್ಯಾ ನನ್ನ ಬಂಗಾರದ ಕರಣಿ, ಕಾರುಣ್ಣಿ ಎಂದಿತಂತೆ ಅಕ್ಕರೆಯಿಂದ. ಅದಕ್ಕುತ್ತರವಾಗಿ ಕಾರ ಹುಣ್ಣಿಮೆ ‘ಬಂದೀನಿ ತಗೊಳೋ ನಿನ್ನ ಹಿಟ್ಟಿನ ಮೂಳನ ಹಡ್ಡಿ’ ಎಂದಿತಂತೆ ವ್ಯಂಗ್ಯವಾಗಿ’[೯೧] ಯುಗಾದಿಯ ನಂತರ ಜಾತ್ರೆಗಳನ್ನು ಹೊರತು ಪಡಿಸಿದರೆ ಬರುವ ಮೊದಲ ಹಬ್ಬವಿದು. ಆ ಕಾರಣಕ್ಕೆ ಈ ರೀತಿಯ ಮಾತುಗಳು ರೂಢಿಯಲ್ಲಿವೆ.

ವಿಶೇಷವಾಗಿ ಕಾರಬ್ಬವು ಎತ್ತುಗಳ ಅಥವಾ ಜಾನುವಾರುಗಳ ಪಶು ಕೇಂದ್ರಿತವಾದ ಆಚರಣೆ. ಒಂದು ಕಡೆ ಮುಂಗಾರು ಬಿತ್ತನೆಯಿಂದ ಧಣಿವಾದ ಎತ್ತುಗಳಿಗೆ ತುಸು ವಿರಾಮದ ಆಚರಣೆಯಾಗಿದೆ. ಧಣಿದ ಎತ್ತುಗಳಿಗೆ, ವ್ಯವಸಾಯದ ಪರಿಕರಗಳಾದ ನೇಗಿಲು, ನೊಗ ಕುಂಟೆ, ಗಾಡಿ ಮೊದಲಾದವುಗಳಿಗೆ ನೀರಿನಿಂದ ತೊಳೆಯುತ್ತಾರೆ. ನಂತರ ಸುಣ್ಣ ಮತ್ತು ಹುರಮಂಜ ನೆನೆಸಿ ಚಿಮುಕಿಸುತ್ತಾರೆ. ಎತ್ತುಗಳ ಕೋಡುಗಳಿಗೆ ಬಣ್ಣ ಬಳಿದು ಗೆಜ್ಜೆ ಕಟ್ಟಿ ಸಿಂಗರಿಸುತ್ತಾರೆ. ಬಿಲ್ವಪತ್ರೆ,

ಕೊಂಡಮಾವಿನ ಪತ್ರೆ, ಲಕ್ಕಿಪತ್ರೆ, ಅಂಗನೂಲು, ಅಕ್ಷತೆ, ಅರಿಶಿನ, ಕುಂಕುಮ ಹಾಗೂ ವಿಭೂತಿಗಳಿಂದ ಪೂಜಿಸಿ ಮನೆಯೊಳಗೆ ದುಡಿಯುವ ಎತ್ತನ್ನು ಕರೆತಂದು ಪೂಜಿಸಿ ಎತ್ತಿನ ಮುಂದಿನ ಬಲಗಾಲಿಗೆ ಬಂಗಾರ ಮುಟ್ಟಿಸುತ್ತಾರೆ. ಆ ಎತ್ತು ಮೂತ್ರ ಮತ್ತು ಸಗಣಿಯನ್ನು ಮನೆಯ ಒಳಗಡೆ ಹಾಕಿದರೆ ಶುಭವೆಂಬ ನಂಬಿಕೆಗಳಿವೆ. ಅಕ್ಕಿ, ಹಲಸಿನ ತೊಳೆಯ ಮಿಶ್ರಣ ಅಥವಾ ಜೋಳದ ನುಚ್ಚಿನ ಕಿಚುಡಿಯನ್ನು ಮಾಡುತ್ತಾರೆ. ಇದರೊಂದಿಗೆ ಹಲಸು ಹಣ್ಣಿನ ತೊಳೆಗಳನ್ನು ಬೆರೆಸುತ್ತಾರೆ. ಈ ಮಿಶ್ರಣವನ್ನು ನೈವೇದ್ಯ ಮಾಡಿ ಎತ್ತುಗಳಿಗೆ ತಿನ್ನಿಸುತ್ತಾರೆ. ಈ ಆಚರಣೆಯು ಕೃಷಿ ಮತ್ತು ಪಶುಪಾಲನೆಗೆ ನೇರ ಸಂಬಂಧ ಹೊಂದಿರುವುದನ್ನು ಕಾಣಬಹುದಾಗಿದೆ. ಕಾರಬ್ಬದ ಈ ಅವಧಿಯ ಋತುಮಾನವು ಹಸು ಮತ್ತು ಎಮ್ಮೆಗಳು ಗರ್ಭಧರಿಸಲು ಸೂಕ್ತಕಾಲ. ಪ್ರತಿ ತಿಂಗಳ ೨೧ ದಿನಗಳಿಗೊಮ್ಮೆ ಮೇಟಿಂಗ್ ಅಥವಾ ಬೆದೆಕಾಲಬಂದರೂ, ಚಳಿಗಾಲ ಮತ್ತು ಮಳೆಗಾಳಿಯ ಕಾರಣದಿಂದ ವಾತಾವರಣ ತಂಪಾಗಿರುತ್ತದೆ. ಈ ಪಶುಗಳಿಗೆ ಯಾವ ತೊಂದರೆಯೂ ಇಲ್ಲದೆ ಗರ್ಭನಿಲ್ಲುತ್ತದೆಂಬ ನಂಬಿಕೆಗಳಿರುವ ಸಾಧ್ಯತೆಗಳು ಇಲ್ಲಿವೆ. ಈ ಅವಧಿಯಲ್ಲಿ ಇವುಗಳಿಗೆ ಬೀಜಾಂಕುರ ಮಾಡಲಾಗುತ್ತದೆ. ಹಾಗಾಗಿ ಬೀಜದ ಹೋರಿಯನ್ನು ಆಯ್ಕೆ ಮಾಡಲು ಸ್ಪರ್ಧೆ ಏರ್ಪಡಿಸಲಾಗುತ್ತದೆ. ಸ್ಪರ್ಧೆಯಲ್ಲಿ ಗೆದ್ದ ಹೋರಿ ಬಲಿಷ್ಠವಾದ ಹೋರಿ ಎಂದು ಭಾವಿಸಲಾಗುತ್ತದೆ. ಈ ಹೋರಿಯನ್ನು ಅಲಂಕರಿಸಿ ಮೆರವಣಿಗೆ ಮಾಡಲಾಗುತ್ತದೆ. ಹೀಗೆ ಹೋರಿಯನ್ನು ಬೀಜಾಂಕುರಕ್ಕೆ ಬಳಸಲಾಗುತ್ತದೆ. ಊರಿನ ಎಮ್ಮೆ, ಹಸು, ಕೋಣ, ಹೋರಿಗಳಿಗೆ ಕೆಮ್ಮಣ್ಣು ಮತ್ತು ಸುಣ್ಣವನ್ನು ಬಳಿಯುತ್ತಾರೆ. ಎಮ್ಮೆ ಮತ್ತು ಹಸುಗಳಿಗೆ ಒಂದು ಬಣ್ಣ, ಕೋಣ ಮತ್ತು ಹೋರಿಗಳಿಗೆ ಒಂದು ಬಣ್ಣ ಬಳಿಯುತ್ತಾರೆ. ಕಾರಣ ಈ ಸಂಕೇತ ಅವುಗಳ ಮಧ್ಯೆ ಸಂಭೋಗ ನಡೆದಿದೆ ಎಂದು ಖಚಿತಪಡಿಸಿಕೊಳ್ಳುವ ಉದ್ದೇಶವಿರುತ್ತದೆ. ಆದುದರಿಂದ ಕೋಡುಗಳಿಗೆ ಸುಣ್ಣ ಮತ್ತು ಕೆಮ್ಮಣ್ಣು ಬಳಿಯುವ ಆಚರಣೆ ಕಂಡುಬರುತ್ತದೆ. ಇವೆರಡು ಮೈಕ್ರೋ ಆಂಟಿಬೆಟಿಕ್ ಆಗಿಯೂ ಕೆಲಸ ಮಾಡುತ್ತವೆ ಎಂಬುದು ವೈಜ್ಞಾನಿಕ ಅಂಶವಾಗಿದೆ. ಈ ಪ್ರಾಣಿಗಳ ಮಧ್ಯೆ ಜಗಳವಾಗಿ ರಕ್ತಸುರಿಸಿಕೊಂಡರೆ ಸುಣ್ಣ ಮತ್ತು ಕೆಮ್ಮಣ್ಣು ಔಷಧಿಯಾಗಿ ಕಾರ್ಯನಿರ್ವಹಿಸುತ್ತದೆ ಎಂಬ ಸೂಚ್ಯತೆ ಇದರ ಹಿಂದಿರುವ ಸಾಧ್ಯತೆಗಳಿವೆ. ಈ ಆಚರಣೆಯ ಒಟ್ಟು ಮಹತ್ವ ಕೃಷಿಯನ್ನು ಕೇಂದ್ರೀಕರಿಸಿದೆ. ಕೃಷಿಯ ನಿರಂತರತೆ ಭೂಮಿಯನ್ನು ಊಳುವ ಎತ್ತುಗಳ(ಕೆಲವೊಮ್ಮೆ ಗದ್ದೆ ಮುಂತಾದವುಗಳ ಉಳುಮೆಗೆ ಕೋಣಗಳನ್ನು ಬಳಸುತ್ತಾರೆ) ಮೇಲಿದೆ. ಇವುಗಳ ಸಂತತಿಯನ್ನು ವೃದ್ಧಿಸುವ ಸಲುವಾಗಿ ಈ ಆಚರಣೆ ಕಂಡುಬರುತ್ತದೆ. ಇಂದು ಕೃಷಿಯಲ್ಲಿ ಆಧುನಿಕ ಉಪಕರಣಗಳ ಬಳಕೆಯಿಂದಾಗಿ ಇಂತಹ ಆಚರಣೆಗಳ ಪ್ರಮಾಣ ವರ್ಷದಿಂದ ವರ್ಷಕ್ಕೆ ಇಳಿಮುಖವಾಗುತ್ತಿದೆ. ಇಂತಹ ಆಚರಣೆಗಳ ಮೂಲಕವಾದರೂ ಪಶುಸಂತತಿಗಳನ್ನು ಉಳಿಸಬೇಕಿದೆ. ಕೆಲವೆಡೆ ಬಣ್ಣಬಳಿದು ಅಲಂಕರಿಸಿ ಎತ್ತುಗಳನ್ನು 'ಸಂಜೆ ಆಯಾ ಬಾಬಿನ ಮನೆತನದ ಎತ್ತುಗಳನ್ನು ಅಗಸೆ ಬಾಗಿಲಿಗೆ ತಂದು ಓಡಿಸಿ ಕರಿ ಹರಿಯುತ್ತಾರೆ. ಅಲ್ಲಿ ಯಾವ ಬಣ್ಣದ ಎತ್ತು ಮುಂದೆ ಬರುವುದೋ ಆ ಬೆಳೆ ಹುಲುಸು ಅಂದರೆ ಕೆಂದು ಬಣ್ಣದ ಎತ್ತು ಮುಂದೆ ಬಂದರೆ ಮುಂಗಾರಿ ಫಸಲು, ಬಿಳಿ ಬಣ್ಣದ ಎತ್ತು ಮುಂದೆ ಬಂದರೆ ಬಿಳಿಜೋಳದ ಫಸಲು ಹೆಚ್ಚಿಗೆ ಬೆಳೆಯುತ್ತವೆ. ಎಂಬ ನಂಬಿಕೆ ಕೃಷಿಕರದು.'[೯೨]

ಶಾಸನಗಳಲ್ಲಿ ಈ ಹಬ್ಬದ ಕುರಿತ ಉಲ್ಲೇಖಗಳು ದೊರೆತಿವೆ ಅವುಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಕ್ರಿ.ಶ ೧೧೮೪ರ ಶಾಸನದಲ್ಲಿ ಕಾರಪುಂಣಮಿಯಲು ದೇವರ್ಗ್ಗೆ ಹಬ್ಬಕ್ಕೆಂದು ಬಿಟ್ಟ ಬೆಲ್ಲ ೨೦ ಎಂದಿದೆ.[೯೩] ಕ್ರಿ.ಶ ೧೦೦೭ರ ಶಾಸನದಲ್ಲಿ ಕಾರಪುಣ್ನಮೆಯ ಪರ್ವ್ವದಲ್ಲಿ ಬ್ರಹ್ಮ ಜಿನಾಲಕ್ಕೆ ದಾನ ನೀಡಬೇಕೆಂದು ತಿಳಿಸಿದೆ.[೯೪] ಕ್ರಿ.ಶ. ೧೧೦೬ರ ಶಾಸನವು ಕಾರಪುಣ್ಣಿಮೆಯಲು ಗೆಲ್ವೆತ್ತಿನ ಸೇಸೆ ಗದ್ಯಾಣ ವೊಂದು ಎಂದಿದೆ.[೯೫] ಸಮಾಜದಲ್ಲಿ ಮಾತ್ರವಲ್ಲದೆ ದೇವಾಲಯಗಳಲ್ಲೂ

ವಿಶೇಷ ದಿನ ಮತ್ತು ಹಬ್ಬಗಳಲ್ಲಿ ಪೂಜಾ ಕಾರ್ಯಗಳು ಎಂದಿಗಿಂತ ವಿಶೇಷವಾಗಿ ಆಚರಿಸಲ್ಪಡುತ್ತಿದ್ದವು. ಈ ಸಂದರ್ಭದಲ್ಲಿ ಜನರು ದೇವಾಲಯಗಳಿಗೆ ದಾನ ನೀಡುತ್ತಿದ್ದರು. ಅದು ಶಾಸನಗಳಿಂದ ತಿಳಿದುಬರುತ್ತದೆ. 'ಕಾರುಣ್ಣಿವೆ ಕರಕೊತ ಬಂತು' ಎಂದು ಜನಪದರು ಹೇಳುವ ಮಾತೊಂದಿದೆ. ಕಾರಬ್ಬ ಕರಕೋತ ಬಂತು ಎಂಬ ಮಾತಿದೆ. ಕಾರಬ್ಬದ ವೇಳೆಗೆ ಮುಂಗಾರು ಭಿತ್ತನೆಗಳು ಮುಗಿದಿರುತ್ತವೆ. ಅಂದರೆ ಕಾರಹುಣ್ಣಿಮೆಯಿಂದ ಕೃಷಿ ಬದುಕುಗಳು ಒಂದೊಂದಾಗಿ ಆರಂಭಗೊಳ್ಳುತ್ತವೆ. ಕುಂಟೆ ಹೊಡೆಯುವುದು, ಕಳೆಕೀಳುವುದು, ಗೊಬ್ಬರ ಹಾಕುವುದು ಈ ರೀತಿಯ ಮೊದಲಾದ ಕೆಲಸಗಳು ಒಂದರ ಮೇಲೊಂದು ಬರುತ್ತಾ ಹೋಗುತ್ತವೆ. ಈ ಹಿನ್ನಲೆಯಲ್ಲಿ ಈ ಮಾತನ್ನು ಬಳಸಿರುವ ಸಾಧ್ಯತೆಗಳಿವೆ. ಈ ಹಬ್ಬ ವಿಶೇಷವಾಗಿ ದನಗಳ ಹಬ್ಬವಾಗಿದೆ. ವರ್ಷದಲ್ಲಿ ಮುಂಗಾರಿಗೆ ಬಸವ ಜಯಂತಿ. ಹಿಂಗಾರಿಗೆ ಕಾರ ಹುಣ್ಣಿಮೆಗಳನ್ನು ಎತ್ತುಗಳ ಹಬ್ಬವಾಗಿಯೇ ಆಚರಿಸುತ್ತಾರೆ. ಮುಂಜಾನೆಯೇ ಎತ್ತುಗಳಿಗೆ ಮೈತೊಳೆದು ಕೋಡುಗಳಿಗೆ ಬಣ್ಣ ಹಚ್ಚಿ ಸಿಂಗರಿಸುತ್ತಾರೆ. ದನಗಳ 'ಮೈಗೆ ಗಲ್ಲ ಕೊಟ್ಟು' ಅಂದು ಹೊಸ ಕಾಂಡಾ, ಮಗಡಾ ಗಂಟೆಸರ ಹಾಕಿ ಶೃಂಗಾರಿಸುತ್ತಾರೆ.[೬೬] ಕೃಷಿಕನಿಗೆ ಎತ್ತು ಹೇಗಿರಬೇಕೆಂಬುದನ್ನು ದನಗಾಹಿಗಳು ಅಣಿಪಣಿ ಆಟ ಆಡುವ ಸಂದರ್ಭದಲ್ಲಿ ಹೀಗೆ ಹಾಡುವರು,

ಹೋರಿ ಹೋರಿ ಯಂಗಿರಬೇಕು
ತೆನೆತಿಂದು ಸೊಕ್ಕಿರಬೇಕು
ನೂಲಿನ ಮಗಡ ಹಾಕಿರಬೇಕು
ಬಾಜರ ಹಿಡಿದು ಹೊಂಟಿರಬೇಕು[೬೭]

ರೈತನ ಕೃಷಿ ಬದುಕಿಗೆ ಎತ್ತುಗಳ ಅನಿವಾರ್ಯತೆ ಮತ್ತು ಅವುಗಳ ಹಾರೈಕೆಯ ಹಿನ್ನೆಲೆಯಲ್ಲಿ ಕೃಷಿಗೆ ಬಳಸುವ ಎತ್ತುಗಳು ಈ ರೀತಿ ಇರಬೇಕೆಂಬ ಆಶಯವನ್ನು ಈ ಹಾಡು ಧ್ವನಿಸುತ್ತದೆ. ವಿಶೇಷವಾಗಿ ತಯಾರಿಸಿದ ಕಿಚುಡಿ, ಹಲಸು, ಬಾಳೆಹಣ್ಣು, ಕಾಯಿಗಳನ್ನು ಆಹಾರವಾಗಿ ಎತ್ತುಗಳಿಗೆ ಕೊಡಲಾಗುತ್ತದೆ. ಶಾಸನದಲ್ಲಿ ಕಾರಪುಣ್ಣಿಮೆಲು ಗೆಲ್ವೆತ್ತಿನ ಸೇಸೆ ಗದ್ಯಾಣವೊಂದು ಎಂದಿದೆ. ಇದನ್ನು ಗಮನಿಸಿದರೆ ಪ್ರಾಚೀನ ಕಾಲದಿಂದಲೂ ಕಾರಹುಣ್ಣಿಮೆಯಂದು ಎತ್ತುಗಳ ಸ್ಪರ್ಧೆ ನಡೆಯುತ್ತಿತ್ತು ಎಂಬುದು ತಿಳಿಯುತ್ತದೆ. ಇಂದಿಗೂ ಈ ಆಚರಣೆ ಮುಂದುವರಿದಿದೆ. ಆದರೂ ಪ್ರಮಾಣದಲ್ಲಿ ವಿರಳವಾಗಿ ಕಂಡುಬರುತ್ತಿದೆ. ಈ ಹಬ್ಬವನ್ನು ಮುಟ್ಟುಗಳ ಹಬ್ಬವೆಂತಲೂ ಕರೆಯುತ್ತಾರೆ. 'ಉತ್ತರ ಕರ್ನಾಟಕ ಭಾಗದಲ್ಲಿ ಸಾಯಂಕಾಲ ಕರಿ ಕಡಿಯುವುದನ್ನು ಮಾಡಿ ಊದಿಸುತ್ತಾ ಬಾರಿಸುತ್ತ ದನಗಳ ಮೆರವಣಿಗೆ ಮಾಡುತ್ತಾರೆ.'[೬೮] ಕಾರಹುಣ್ಣಿಮೆಗೆ ಒಂದು ಕಡೆ ಬಿತ್ತನೆ ಕಾರ್ಯಗಳು ಮುಗಿದಿರುವ ಸಂತಸದ ವಾತಾವರಣದ ಹಿನ್ನೆಲೆಯಿದೆ. ಮತ್ತೊಂದೆಡೆ ಬೆಳೆಯ ಮಧ್ಯದ ಹುಲ್ಲು ತೆಗೆಯಲು ಕುಂಟೆ ಹೊಡೆಯಲು ಎತ್ತುಗಳನ್ನು ಸಿದ್ಧಗೊಳಿಸುವ ಹಿನ್ನೆಲೆಯಲ್ಲಿ ಈ ಹಬ್ಬದ ತಯಾರಿ ನಡೆಯುತ್ತದೆ. ಇಂದಿಗೂ ಹಳ್ಳಿಗಳಲ್ಲಿ ರಾಗಿಹುಲ್ಲು ಮತ್ತು ಹುರುಳಿ, ಶೇಂಗಾ ಹೊಟ್ಟುಗಳನ್ನು ಬಿತ್ತನೆಯ ಮುಂದೆ ಮತ್ತು ಎಡೆಕುಂಟೆಯ ಸಮಯದಲ್ಲಿ ಎತ್ತುಗಳಿಗೆ ಮೇಯಲು ಹಾಕುತ್ತಾರೆ. ಎತ್ತುಗಳಿಗೆ ಈ ಎರಡು ಸಂದರ್ಭಗಳು ಶ್ರಮದಾಯಕವಾಗಿರುತ್ತವೆ, ಶ್ರಮಕ್ಕೆ ತಕ್ಕಂತೆ ಅವುಗಳಿಗೆ ಸತ್ವಯುತ ಆಹಾರ ಕೊಡುವ ಉದ್ದೇಶದ ಹಿನ್ನೆಲೆಯಲ್ಲಿ ಈ ರೀತಿಯ ಕ್ರಮಗಳು ರೂಢಿಯಲ್ಲಿವೆ. ಕಾರಬ್ಬದ ಕೃಷಿ ಚಟುವಟಿಕೆಗಳು ಬಿತ್ತನೆಯ ನಂತರ ಆರಂಭವಾಗುವುದು ಈ ಹಿನ್ನೆಲೆಯಲ್ಲಿ ಕಂಡುಬರುತ್ತದೆ. ರೈತರ ನಂಬಿಕೆಯಲ್ಲಿ ಬೆಳೆಯುವ ಬೆಳೆಯ ಭವಿಷ್ಯವನ್ನು ನಿರ್ಧರಿಸುವ ಹಬ್ಬವಾಗಿ ಈ ಆಚರಣೆ ಕಂಡುಬರುತ್ತದೆ. ಉತ್ತರ ಕರ್ನಾಟಕ ಭಾಗದಲ್ಲಿ 'ಊರೊಟ್ಟಿನಿಂದ ಕರಗಲ್ಲ ಹತ್ತಿರ ಉಗುಣಿ ಬಳ್ಳಿಯಿಂದ ತೋರಣ ಕಟ್ಟಿ ಬೇವಿನ ಸೊಪ್ಪು

ಸಿಕ್ಕಿಸುತ್ತಾರೆ. ತೋರಣದೊಳಗೆ ಎಡೆಕುಂಟೆಯಿಟ್ಟು, ಅದರ ಮುಂದೆ ಸರ್ವ ಧಾನ್ಯಗಳನ್ನು ನೀರಿನಲ್ಲಿ ಹಾಕಿ ಹೊಸ ಮಡಕೆಯೊಂದರೊಳಗೆ ಇಡುತ್ತಾರೆ. ಊರ ಮಂದಿಯೆಲ್ಲರೂ ಸೇರಿ ನೆಂಟರವನೊಬ್ಬ ಎಡೆಕುಂಟೆ ತಳ್ಳುತ್ತಾನೆ. ಮಡಿಕೆಯು ಉರುಳಿ ನೀರು ಚೆಲ್ಲಿ ಅದರೊಳಗೆ ಯಾವ ಧಾನ್ಯ ಮುಂದೆ ಹೋಗುತ್ತದೊ ಆ ಬೆಳೆಯು ಈ ವರ್ಷದಲ್ಲಿ ಚೆನ್ನಾಗಿ ಬೆಳೆಯುತ್ತದೆ ಎಂಬ ನಂಬಿಕೆಯಿದೆ.[೯೯] ಹೀಗೆ ಕುಂಟೆಯನ್ನು ತಳ್ಳಿದ ನಂತರ ಊರಿನ ಜನರೆಲ್ಲ ನಾಮುಂದು ತಾಮುಂದು ಎಂದು 'ತೋರಣಕ್ಕೆ ಕಟ್ಟಿದ ಬೇವಿನ ಸೊಪ್ಪ ಕಿತ್ತೊಯ್ದು ತಾವು ಬಿತ್ತುವ ಬೀಜಗಳಿಗೆ ಸೇರಿಸುತ್ತಾರೆ. ಅದು ಹುಲುಸು ಎಂದು ನಂಬುತ್ತಾರೆ.[೧೦೦] ಬೀಜಗಳಿಗೆ ಬೇವಿನ ಸೊಪ್ಪು ರೋಗ ನಿರೋಧಕವಾಗಿ ಕೆಲಸ ಮಾಡುತ್ತದೆ ಎಂಬ ನಂಬಿಕೆಯಿದೆ. ಈ ನಂಬಿಕೆಯು ವೈಜ್ಞಾನಿಕತೆಯ ಹಿನ್ನಲೆಯನ್ನು ಸಹ ಮನವರಿಕೆ ಮಾಡಿಕೊಡುತ್ತದೆ. ಬಸವ ಜಯಂತಿಯು ಮುಂಗಾರು ಆರಂಭದ ಸಂಕೇತವಾಗಿ ಆಚರಿಸಲಾಗುತ್ತದೆ. ಈ ದಿನದಂದೂ ಸಹ ಎತ್ತುಗಳಿಗೆ ಮೈ ತೊಳೆದು ಸಿಂಗರಿಸಿ ಪೂಜಿಸುವ ಸಂಪ್ರದಾಯ ರೂಢಿಯಲ್ಲಿದೆ. ಮುಂಗಾರು ಬಿತ್ತನೆಗೆ ಎತ್ತುಗಳನ್ನು ಬಲಿಷ್ಠಗೊಳಿಸುವ, ಚುರುಕುಗೊಳಿಸುವ ಹಿನ್ನೆಲೆಯಲ್ಲಿ ಆಚರಿಸಲಾಗುತ್ತದೆ. 'ಉತ್ತರ ಕರ್ನಾಟಕದ ಕೆಲವು ಕಡೆ ಶ್ರೀ ಬಸವೇಶ್ವರ ಪ್ರತಿಮೆಯನ್ನು ಬಂಡಿಯಲ್ಲಿಟ್ಟು ಎತ್ತುಗಳನ್ನು ಕಟ್ಟಿ ಮೆರವಣಿಗೆ ಮಾಡುತ್ತಾರೆ. ಎತ್ತುಗಳೆಂದರೆ ಬಸವೇಶ್ವರನ ಅವತಾರವೆಂಬ ನಂಬಿಕೆಯು ಅವರಲ್ಲಿದೆ.'[೧೦೧] ಉತ್ತರ ಕರ್ನಾಟಕದ ಹಲವೆಡೆ ಕಾರ ಹುಣ್ಣಿಮೆಯ ನಂತರ ಜೇಷ್ಠಮಾಸದಲ್ಲಿ ಮಣ್ಣೆತ್ತಿನ ಅಮವಾಸೆಯನ್ನು ಆಚರಿಸುತ್ತಾರೆ. ಕಾರಹುಣ್ಣಿಮೆಯಲ್ಲಿ ಜೀವಂತ ಎತ್ತುಗಳನ್ನು ಪೂಜಿಸಿದರೆ ಎತ್ತುಗಳ ಬೊಂಬೆಗಳನ್ನು ಮಾಡಿ ಮಣ್ಣೆತ್ತಿನ ಅಮವಾಸೆಯ ದಿನ ಆಚರಿಸುವುದು ಕಂಡುಬರುತ್ತದೆ. ಈ ರೀತಿ ಎತ್ತುಗಳನ್ನೇ ಕುರಿತಾಗಿ ಪ್ರಾಚೀನರು ಹಬ್ಬಗಳನ್ನು ಆಚರಿಸಿಕೊಂಡು ಬಂದಿರುವರು. ಆದರೆ ಇಂದು ಎತ್ತುಗಳೇ ಇಲ್ಲದ ಸ್ಥಿತಿ ನಿರ್ಮಾಣಗೊಳ್ಳುತ್ತಿದೆ. ಎತ್ತುಗಳು ಸಂಖ್ಯಾ ಬಾಹುಳ್ಯದ ದೃಷ್ಟಿಯಿಂದ ವಿರಳವಾಗುತ್ತಿವೆ. ಇದರೊಂದಿಗೆ ಹಬ್ಬಗಳ ಆಚರಣೆಗಳು ಸಹ ವಿಸ್ಮೃತಿಗೆ ಸರಿಯುವ ಮೂಲಕ ಪರಂಪರಾನುಗತವಾಗಿ ಸಾಗಿ ಬಂದ ಆಚರಣೆಗಳು ಮರೆಗುಳಿಗೆ ಜಾರುತ್ತಿವೆ. ಇದರಿಂದ ಸಂಸ್ಕೃತಿಗೆ ಬಹುದೊಡ್ಡ ಪೆಟ್ಟು ಬೀಳುತ್ತಿದೆ.

ಈ ಆಚರಣೆಯ ಹಿಂದೆ ಕೃಷಿಕರ ನಂಬಿಕೆಯೇ ಪ್ರಧಾನವಾಗಿ ಕಂಡುಬರುತ್ತದೆ. ದುಡಿಯುವ ಎತ್ತುಗಳು ಬರೀ ಎತ್ತುಗಳಲ್ಲ ತಮ್ಮ ಮನೆತನವನ್ನು ಎತ್ತುತ್ತವೆ ಎಂಬ ನಂಬಿಕೆಯಿದೆ. ದುಡಿಯುವ ಎತ್ತುಗಳ ತುಸು ಕುಣಿತವನ್ನು ಇಲ್ಲಿ ಕಾಣಬಹುದೆಂಬ ಆಶಯವಿದೆ. ಆದರೂ ಮುಂದಿನ ಹಿಂಗಾರು ಬಿತ್ತನೆ ಮತ್ತು ಮುಂಗಾರು ಬಿತ್ತನೆಯ ಬೆಳೆಗಳಿಗೆ ಕಳೆ ನಿಯಂತ್ರಣ ಮಾಡಬೇಕಾಗುತ್ತದೆ. ಇದಕ್ಕಾಗಿ ರಂಟೆ ಹೊಡೆಯಲು ಎತ್ತುಗಳನ್ನು ಅಣಿಗೊಳಿಸಲಾಗುತ್ತದೆ. ಆಧುನಿಕ ಉಪಕರಣಗಳ ಬಳಕೆಯಿಂದಾಗಿ ಇಂದು ರಂಟೆ ಹೊಡೆಯಲು ಎತ್ತುಗಳ ಅಭಾವ ಸೃಷ್ಟಿಯಾಗಿದೆ. ಬಿತ್ತನೆಗೆ ಯಂತ್ರಣಗಳನ್ನು ಬಳಸಲಾಗುತ್ತಿದೆ. ಆದರೆ ಕಳೆ ನಿವಾರಣೆಗೆ ರಂಟೆ ಹೊಡೆಯಲು ಎತ್ತುಗಳ ಅಗತ್ಯವಿದೆ. ಈ ಸಂದರ್ಭಕ್ಕೆ ಸರಿಯಾಗಿ ಎತ್ತುಗಳು ದೊರೆಯದೇ ಇರುವುದು ಒಂದು ಕಾರಣವಾದರೆ. ಆಧುನಿಕ ಔಷಧಿಗಳ ಬಳಕೆಯ ಅಮಲು ಮತ್ತೊಂದು ಕಾರಣ. ರಾಸಾಯನಿಕ ಔಷಧಗಳ ಬಳಕೆಯಿಂದಾಗಿ ಭೂಮಿ ವಿಷಪೂರಿತವಾಗುತ್ತಿದೆ. ಫಲವತ್ತತೆ ವೃದ್ಧಿಸುವ ಎರೆಹುಳುಗಳು ನಾಶವಾಗುತ್ತಿವೆ. ಬೆಳೆ ವಿಷಪೂರಿತವಾಗುತ್ತಿವೆ. ಎಂಬ ಅರಿವಿಲ್ಲದ ರೈತರು ರಾಸಾಯನಿಕಗಳ ಅಮಲಿನಲ್ಲಿ ವಿಹರಿಸುತ್ತಿದ್ದಾರೆ. ಇಂತಹ ಅಪಾಯಕಾರಿ ರಾಸಾಯನಿಕಗಳ ಸಿಂಪಡಣೆಗಳಿಂದ ಕೃಷಿಯನ್ನು ಹೊರತರಲು ಸಾಂಪ್ರದಾಯಿಕ ಕೃಷಿಯನ್ನು ಬಲಪಡಿಸಬೇಕು. ಅದರಲ್ಲಿ ಎತ್ತುಗಳ ಬಳಕೆಯ ಅನಿವಾರ್ಯತೆಯನ್ನು ಕೃಷಿಕರಿಗೆ ಪುನರ್ ಮನನ ಮಾಡಿಕೊಡುವ ಅನಿವಾರ್ಯತೆಗಳು ಇಂದು ಸೃಷ್ಟಿಯಾಗಿವೆ.

**ಮಹಾನವಮಿ**

ದಸರಾ, ನವರಾತ್ರಿ ಎಂತಲೂ ಈ ಹಬ್ಬವನ್ನು ಕರೆಯಲಾಗುತ್ತದೆ. ಧಾರ್ಮಿಕ ಮತ್ತು ಕೃಷಿ ಸಂಬಂಧಿ ಆಚರಣೆಗಳಲ್ಲಿ ಈ ಆಚರಣೆಯು ಮಹತ್ವಪೂರ್ಣವಾದುದು. ಧಾರ್ಮಿಕವಾಗಿ ಈ ಆಚರಣೆಯು ದುಷ್ಟ ಸಂಹಾರ, ಶಿಷ್ಟ ರಕ್ಷಣೆಯ ಹಿನ್ನೆಲೆಯಲ್ಲಿ ಆಚರಿಸಲ್ಪಡುತ್ತದೆ. ನವದುರ್ಗಿಯರು ರಾಕ್ಷಸರನ್ನು ಸಂಹರಿಸಿದ ಪ್ರತೀಕದ ಭಾಗವಾಗಿ ಈ ಹಬ್ಬವನ್ನು ಆಚರಿಸಲಾಗುತ್ತದೆ.

ಕೃಷಿ ಸಮುದಾಯದಲ್ಲಿ ಈ ಹಬ್ಬವನ್ನು 'ಆಯುಧ ಪೂಜೆ' ಹಬ್ಬವೆಂದು ಕರೆಯುತ್ತಾರೆ. ಶಾಸನಗಳಲ್ಲಿ ಈ ಹಬ್ಬದ ಉಲ್ಲೇಖಗಳು ತೀರ ವಿರಳವಾಗಿ ಕಂಡುಬರುತ್ತವೆ. ಕ್ರಿ.ಶ ೧೨೨೦ರ ಶಾಸನವು ಮಹಾನವಮಿಯನ್ನು ಉಲ್ಲೇಖಿಸಿದೆ.[೧೧೧] ಕೃಷಿ ಬದುಕಿಗೆ ಈ ಹಬ್ಬವು ಹೇಗೆ ಮಹತ್ವಪೂರ್ಣ ಆಚರಣೆಯಾಗಿದೆ ಎಂಬುದನ್ನು ಗಮನಿಸಿದರೆ ಈ ಅವಧಿಗೆ 'ಮರ್‍ನ್ನಾಮಿಗೆ ಮಾರ್ಗೋಯ್ಲು' ಎಂಬ ಜನಪದ ಮಾತಿನಂತೆ ಅಡಕೆ ಮೊದಲಾದ ಬೆಳೆಗಳು ಕೊಯ್ಲಿಗೆ ಬಂದಿರುತ್ತದೆ. 'ಮಾರ್‍ನ್ನಾಮಿಗೆ ಮನದಾಗೆಲ್ಲ ಒಡೆ' ಎಂಬ ಮಾತುಗಳು ಹಿಂಗಾರು ಫಸಲಿಗೆ ಸಂಬಂಧಿಸಿವೆ. ಮಹಾನವಮಿಗೆ ಕೊಯ್ಲಿಗೆ ಬರುವ ಬೆಳೆಗಳು ಮುಂಗಾರು ಬೆಳೆಗಳಾಗಿರುತ್ತವೆ. ಹಿಂಗಾರು ಬೆಳೆಗಳು ಸಂಪೂರ್ಣವಾಗಿ ಈ ವೇಳೆಗೆ ಒಡೆ ಕೀಳುತ್ತವೆ. ಕೊಯ್ಲಿಗೆ ಬಂದ ಬೆಳೆಗಳನ್ನು ಕಟಾವು ಮಾಡಲು ಸಿದ್ಧತೆ ಮಾಡಿಕೊಳ್ಳುವ ಹಿನ್ನೆಲೆಯಲ್ಲಿ ಕೊಯ್ಲಿಗೆ ಬೇಕಾದ ಆಯುಧಗಳಾದ ಕುಡುಗೋಲು, ಅರಿವಾಳೆಗಳನ್ನು ಪೂಜಿಸುವ ಸಲುವಾಗಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಒಂಬತ್ತು ದಿನಗಳ ಕಾಲ ಈ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುವುದಿದೆ. ಪಾಂಡವರು ತಮ್ಮ ಅಜ್ಞಾತವಾಸ ಸಮಯದಲ್ಲಿ ತಮ್ಮ ಆಯುಧಗಳನ್ನು ಬನ್ನಿ ಮರಕ್ಕೆ ಕಟ್ಟಿರುತ್ತಾರೆ. ಆಯುಧಗಳ ಕಟ್ಟಿದ ಗಂಟನ್ನು, ವಿರಾಟರಾಜನ ಗೋಗ್ರಹಣದ ಸಂದರ್ಭದಲ್ಲಿ ಈ ಆಯುಧಗಳನ್ನು ಪೂಜಿಸಿ ಹೊರತೆಗೆದ ಹಿನ್ನೆಲೆಯಲ್ಲಿಯೂ ನವರಾತ್ರಿಯ ಆಚರಣೆ ಕಂಡುಬರುತ್ತದೆ. ಬನ್ನಿ ಮರದ ಎದುರು ಬಾಳೆಯ ಮರವನ್ನು ನೆಟ್ಟು ಬಾಳೆಯ ಗಿಡದ ತಲೆಯನ್ನು ಕತ್ತರಿಸುವ ಆಚರಣೆ ಈ ಹಬ್ಬದಂದು ನಡೆಯುತ್ತದೆ. ಈ ಆಚರಣೆಯನ್ನು ಆಯುಧ ಪೂಜೆಯ ಮರುದಿನ ಮಾಡಲಾಗುತ್ತದೆ.

ಈ ಹಬ್ಬವು ಪ್ರಾಚೀನ ಕಾಲದಿಂದ ಇಂದಿನವರೆಗೂ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು ಬಂದಿದೆ. ಹಾಗೆಯೇ ವಿಜೃಂಭಣೆಯಿಂದ ಆಚರಣೆಗೊಳಪಟ್ಟು ಸಾಗುತ್ತಿರುವುದು ಕಂಡುಬರುತ್ತಿದೆ. ಈ ಹಿನ್ನೆಲೆಯಲ್ಲಿ ನಾಡಿನ ಸಂಸ್ಕೃತಿಯನ್ನು ಬಿಂಬಿಸುತ್ತಿದೆ.

**ದೀಪಾವಳಿ**

ದೀಪಾವಳಿಯನ್ನು 'ದೀಪಗಳ ಹಬ್ಬ' ಎಂದು ಕರೆಯುವ ವಾಡಿಕೆ ಇದೆ. ಕರ್ನಾಟಕದ ಎಲ್ಲೆಡೆ ಕಾರ್ತಿಕ ಮಾಸದ ಶರದೃತುವಿನಲ್ಲಿ ಆಚರಿಸುತ್ತಾರೆ. ನಾಡಿನ ತುಂಬಾ ಒಂದೇ ದಿನ ಇದರ ಆಚರಣೆ ಕಂಡುಬರುವುದಿಲ್ಲ. ಬದಲಿಗೆ ಕಾರ್ತಿಕಮಾಸದ ಒಳಗಡೆ ಅವರಿಗೆ ಬೇಕೆಂದ ದಿನ ಆಚರಿಸುತ್ತಾರೆ. ಅದರಲ್ಲೂ ಶುಕ್ರವಾರದಂದು ಹೆಚ್ಚಾಗಿ ಆಚರಿಸುತ್ತಾರೆ. ದೀಪಾವಳಿ ಅಮವಾಸೆಯಿಂದ ಐದು ದಿನಗಳೊಳಗೆ ಆಚರಿಸುವ ದೀಪಾವಳಿಗೆ ಮೊದಲ ಹಬ್ಬವೆನ್ನುತ್ತಾರೆ. ನಂತರ ಆಚರಿಸುವ ದೀಪಾವಳಿಗೆ ಕಿರುದೀವಣಿಗೆ ಎಂದು ಕರೆಯುತ್ತಾರೆ ಮೊದಲ ಹಬ್ಬದ ಐದು ದಿನದ ಆಚರಣೆಗಳನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ, ಮೊದಲದಿನ 'ಜಲಪೂರಣ ಪರ್ವ' ಎಂದು ಆಚರಿಸುತ್ತಾರೆ. ಅಂದರೆ ನೀರು ತುಂಬಿಸುವ ಹಬ್ಬ(ಮಧ್ಯ ಕರ್ನಾಟಕ ಭಾಗದಲ್ಲಿ ಯುಗಾದಿಯ ಅಮವಾಸೆಯ ಮರುದಿನ ನೀರು ತುಂಬಿಸುವ ಹಬ್ಬವೆಂದು ಆಚರಿಸುತ್ತಾರೆ) ಎರಡನೆಯ ದಿನ ಅಂದರೆ ನರಕ ಚತುರ್ದಶಿಯ

ದಿನದಂದು ಅಭ್ಯಂಗ ಸ್ನಾನ ಮಾಡುತ್ತಾರೆ ಸೂರ್ಯೋದಯಕ್ಕೂ ಮುನ್ನ ತೈಲಾಭ್ಯಂಗ ಸ್ನಾನಮಾಡಲಾಗುತ್ತದೆ. ತುರಿಕೆ, ಬಾಯಾರಿಕೆಯಂತಹ ರೋಗಗಳನ್ನು ಪರಿಹರಿಸುವ ಹಿನ್ನೆಲೆಯಲ್ಲಿ ಆಚರಿಸಿದಂತಿದೆ. ವ್ಯಾಪಾರಿಗಳು ತಮ್ಮ ಇಡೀ ವರ್ಷದ ವ್ಯಾವಹಾರಗಳನೆಲ್ಲಾ ದೀಪಾವಳಿ ಅಮಾವಾಸೆಗೆ ಮುಗಿಸುತ್ತಾರೆ. ದೀಪಾವಳಿಯ ಪ್ರತಿ ಪದೆಯನ್ನು ವ್ಯವಹಾರಿಕ ಖಾತೆಯ ಆರಂಭಿಕ ವರ್ಷದ ಮೊದಲ ದಿನವಾಗಿ ಆಚರಿಸುತ್ತಾರೆ. ಮೂರನೆಯ ದಿನ ಲಕ್ಷ್ಮೀ ಪೂಜೆ. ಈ ದಿನವನ್ನು ವ್ಯಾಪಾರಿಗಳು ಆಚರಿಸುವುದು ಅಧಿಕ. ನಾಲ್ಕನೆಯ ದಿನ ಬಲಿಪಾಡ್ಯಮಿ ಐದನೆಯ ದಿನ ಭ್ರಾತೃದ್ವಿತೀಯಾ ಅಂದು ಸಹೋದರರು ಸೋದರಿಯರ ಮನೆಗೆ ಹೋಗಿ ಉಡುಗೊರೆಗಳನ್ನು ನೀಡಿ ಊಟ ಮಾಡುವ ಆಚರಣೆ ಕಂಡುಬರುತ್ತದೆ. ಈ ಆಚರಣೆ ಭೌತಿಕ ಆಚರಣೆಯ ಒಂದು ಭಾಗವಾಗಿದೆ. 'ಗ್ರಾಮ ಒಕ್ಕಲಿಗರು ಬಲೀಂದ್ರಜ್ಜ, ಬಲೀಂದ್ರಜ್ಜಿ'[೧೦೨] ಎಂದು ಮಾಡಿ ಪೂಜಿಸುವ ದೊಡ್ಡ ಹಬ್ಬ ಈ ದೀಪಾವಳಿ. ಕೃಷಿ ಸಂಬಂಧಿಯಾಗಿ ಶಾಸನದಲ್ಲಿ ಇದರ ಉಲ್ಲೇಖಗಳು ದೊರೆಯುತ್ತವೆ. ಬಿಜಾಪುರದ ಮ್ಯೂಸಿಯಂನ ಕ್ರಿ.ಶ. ೧೦೮೩ರ ಶಾಸನವು ದೀಪಾವಳಿಯಲು ಬೇಳೆ ಎಂದಿದೆ.'[೧೦೩] ಕ್ರಿ.ಶ. ೧೧೪೮ರ ಶಾಸನದಲ್ಲಿ ಪ್ರತಿವರಿಷಕ್ಕಂ ಕುಟುಂಬಣವಾಗಿ ಕಿಜೆಯ ದೀಪಾವಳಿಯಲು ತಿಱುವ ಅರುವಣಂ ಗದ್ಯಾಣ ಎಂದಿದೆ.[೧೦೪] ದೀಪಾವಳಿಯನ್ನು ಕಾರ್ತಿಕ ಮಾಸದಲ್ಲಿ ಆಚರಿಸಲಾಗುತ್ತದೆ. ಅಮವಾಸೆಯ ದಿನ ಆಚರಿಸುವ ದೀಪಾವಳಿಗೆ ಮೊದಲ ಹಬ್ಬವೆಂದು, ಮುಂದಿನ ಅಮವಾಸೆಯ ಹಿಂದಿನ ದಿನ ಶುಕ್ರವಾರ ಆಚರಿಸುವ ದೀಪಾವಳಿಗೆ 'ಕಿರು ದೀವಣಿಗೆ' ಅಥವಾ ಕಿರು ದೀಪಾವಳಿ ಎಂದು ಕರೆಯಲಾಗುತ್ತದೆ. ದೀಪಾವಳಿಯನ್ನು ಪ್ರತಿ ಹಳ್ಳಿಯಿಂದ ಹಳ್ಳಿಗೆ ಬೇರೆ ಬೇರೆ ವಾರಗಳಲ್ಲಿ ಆಚರಿಸುವುದಿದೆ. ಅಂದರೆ ಪ್ರತಿ ಶುಕ್ರವಾರದಂದು ಅವರ ಅನುಕೂಲತೆಗೆ ತಕ್ಕಂತೆ ವಾರದ ಒಂದು ದಿನ ಅದರಲ್ಲೂ ಶುಕ್ರವಾರವನ್ನು ನಿಗದಿಪಡಿಸಿಕೊಂಡು ಆಚರಿಸುವುದು ಕಂಡುಬರುತ್ತದೆ. ಒಂದು ತಿಂಗಳಿಡೀ ಈ ಹಬ್ಬವು ಆಚರಣೆಗೊಳ್ಳುತ್ತದೆ. ಕ್ರಿ.ಶ. ೧೧೫೯ರ ಶಾಸನದಲ್ಲಿ ತೀಕೇಶ್ವರ ದೇವರಿಗೆ ಪ್ರತಿ ದೀಪಾವಳಿಗೆ ಒಂದು ಗದ್ಯಾಣವನ್ನು ನೀಡಬೇಕೆಂದಿದೆ.[೧೦೫] ಸಾಲವಾಡಿಯ ರಾಷ್ಟ್ರಕೂಟರ ಶಾಸನವೊಂದರಲ್ಲಿ ಸಾಳವಾಡಿಗೆಯ ಸಿದ್ಧನಾಥ ದೇವರಿಗೆ, ಪಾಪವಿನಾಶ ದೇವಾಲಯಗಳಿಗೆ ಚೈತ್ರ ಪವಿತ್ರ ದೀವಳಿಗೆ ಹಬ್ಬಗಳಿಗೆ ಎಣ್ಣೆಯನ್ನು ಪಟ್ಟಸಾಲೆಗಳು ಒಂದು ಮನೆಗೆ ಒಂದು ಹಾಗವನ್ನು ನೀಡಬೇಕೆಂದಿದೆ.[೧೦೬] ಕ್ರಿ.ಶ ೧೧೪೮ರ ಶಾಸನದಲ್ಲಿ ಕೋಲುಕಾಱರಿರ್ವ್ವರು ಬಿಟ್ಟವೀಸ ೧೦ ದೇವರ ವೀಳೆಯಕ್ಕೆ ಬಿಟ್ಟೆಲೆ೨೦೦ ದೀಪಾವಳಿಯ ಪರ್ವ್ವದಲು ದೇವರ ಬೋಗಕ್ಕೆ ಬಿಟ್ಟ ಮೆಣಸು ಬಳ್ಳಮೆರಡು.[೧೦೭] ಕ್ರಿ.ಶ. ೧೨೩೦ರ ಶಾಸನದಲ್ಲಿ ದೀಪಾವಳಿಯ ಪರ್ವ್ವ ಬೀಯಶುಭ ಶೋಭನಗಳಲ್ಲಿ ಯಗ್ರಪೂಜೆ ಚೆಱು ಗೋದೆವಣ ತಾಂಬೂಳವ ಮುಂಚಿ ಕುಡುವರು.[೧೦೮] ಕ್ರಿ.ಶ. ೧೨೦೭ರ ಶಾಸನದಲ್ಲಿ ದೀಪವಳಿಗೆಯಲು ಇಂಮನೆಣ್ಣೆ ದೇವರ ನಿತ್ಯ ನಿವೇದ್ಯ ನಂದಾದೀವಿಗೆಗೆ ಗಾಣಕ್ಕೆ ಅರವನದ ಸೊಟಗೆಯಣ್ಣೆ ಸಂತೆ ಯೊಳಗೆ ಕೂಡಕ್ಕೆ ಸೊಲ್ಲಗೆ ಸೊಟಿಗೆ ಯಣ್ಣೆ ಯೊಂದುಮಂ ಬಳದ ಸ್ವಾಮ್ಯದಯ್ವತ್ತೊಕ್ಕಲು ಎಂದಿದೆ.[೧೦೯] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಕೇಣಿಕಾಱಿವಿನಯ ಸಿಂಹನಪ್ಪ ಯೋಚಿಸೆಟ್ಟಿ ತನಕ್ಕಸಾಲದ ಕೇಣಿಯಲು ದೀಪಾವಳಿಪರ್ವ್ವದಲು ದೇವರ ವೀಳೆಯಕ್ಕೆ ಬಿಟ್ಟಡಕೆ ೪೦೦ ಎಂದಿದೆ.[೧೧೦] ಕೇಣಿಕಾರರು ಬೆಳೆಗಳನ್ನು, ಹೊಲಗಳನ್ನು ಕೇಣಿ ಪಡೆದಾಗ ಸಂಪೂರ್ಣ ಬೆಳೆಯು ದೀಪಾವಳಿಯ ಸಂದರ್ಭದಲ್ಲಿ ಬಂದು ಕೈ ಸೇರುತ್ತದೆ. ಈ ಕಾರಣದಿಂದಾಗಿ ಬಂದ ಬೆಳೆಯ ಅಥವಾ ಲಾಭದ ಇಂತಿಷ್ಟು ಭಾಗವನ್ನು ದೀಪಾವಳಿಯ ಹಬ್ಬದಂದು ಕೊಡಬೇಕಾಗಿತ್ತು. ಇಂದಿಗೂ ದೇವಾಲಯಗಳಿಗೆ ಬೆಳೆದ ಬೆಳೆಯ ಆಯವನ್ನು ಕೊಡುವಾಗ ದೀಪಾವಳಿ ಅಥವಾ ಕಾರ್ತೀಕ ಮಾಸದಲ್ಲಿ(ಅಡಕೆ ಮೊದಲಾದ ಮುಂಗಾರಿನ ಕೊಯ್ಲಿನ ಬೆಳೆಗಳು) ಕೊಡುವುದು ಕಂಡುಬರುತ್ತದೆ. ಹಿಂಗಾರಿನ ಬೆಳೆಗಳನ್ನು ಸಂಕ್ರಾಂತಿಯ ಸಮಯದಲ್ಲಿ ಕೊಡುವುದು

ಕಂಡುಬರುತ್ತದೆ. ಈ ಶಾಸನದಲ್ಲಿ ದೀಪಾವಳಿಗೆ ೪೦೦ ಅಡಕೆಯನ್ನು ದೀಪಾವಳಿಯ ಹಬ್ಬದಂದು ದೇವರ ವೀಳೆಯಕ್ಕಾಗಿ ಬಿಟ್ಟಿರುವುದನ್ನು ತಿಳಿಸಿದೆ. ಕ್ರಿ.ಶ. ೧೦೦೭ರ ಶಾಸನದಲ್ಲಿ ದೀಪಾವಳಿಯ ಪರ್ವ್ವದಲ್ಲಿ ಬ್ರಹ್ಮ ಜಿನಾಲಯಕ್ಕೆ ದಾನ ನೀಡಬೇಕೆಂದಿದೆ.[೧೧೧]

ಕ್ರಿ.ಶ. ೧೧೧೯ರ ಶಾಸನದಲ್ಲಿ 'ಶ್ರೀ ಮತ್ಪೆರ್ಗ್ಗಡೆ ಕಾವರಾಜಂ ತವಗೆ ದೀಪಾವಳಿಯ ಪರ್ಬ್ಬದಲು ಮಹಾಜನ ಉದಲು ಕುಡುವ ಗದ್ಯಾಣ ಎರಡಱೊಳಗೆ...ಎಂದಿದೆ.[೧೧೨] ಪೆರ್ಗ್ಗಡೆ ಕಾವರಾಜನು ದೀಪಾವಳಿಯ ದಿನ ಮಹಾಜನರು ಕೊಡವ ೨ ಗದ್ಯಾಣದಲ್ಲಿ ಒಂದು ಗದ್ಯಾಣವನ್ನು ದೇವರ ಪೂಜಾರ್ಥವಾಗಿ ನೀಡಿದನೆಂದಿದೆ. ಕ್ರಿ.ಶ ೧೨೬೭ರ ಶಾಸನದಲ್ಲಿ ದೀಪಾವಳಿಗೆಗೆ ಪ್ರಣತೆ ಅಕ್ಕಸಾಲಿ ಬಡಗಿ ಕಮ್ಮಱರೊಕ್ಕಲವೊಂದು ತೆಗೆಯ ಹೊಱ ಹಡಗೆಯಲುಪ್ಪುಮಾನ ೧ ನೂಲಪರ್ವ್ವಕ್ಕೆಯೊಕ್ಕಲಲೊಂದು ನೂಲ ಕಳಿವು...ಖೇಣಿಯಂ ಕೊಡುವವರು ವರಿಶ ಪ್ರತಿ ಪಣ ೨ ಕೊಟಗಮಂ...ಮುಮ್ಮರಿ ದಂಡ ಹಸಗಲೊಂದು ಬಾಳಿಹತ್ತಿ ಸತ್ತಿಯಲು ಹಗರದ ಹೆಡಗೆಗೆ ಕುಡಿತೆಯಭತ್ತ ೧ ಕಿಸುಕಾಡು ೭೦ರ ಹಿರಿಯ ಆಚಿಯಣಂ ತಿಂಗಳಿಗೆ ವೀಸ ೧೦ರ ಲೆಕ್ಕದಲ್ಲಿ ಶ್ರೀ ಸ್ವಯಂ ದೇವರ ಶ್ರೀಕಾರ್ಯ್ಯಗಳಿಗೆ ನೀಡಿದಂತಿದೆ.[೧೧೩] ಈ ಶಾಸನದಲ್ಲಿ ದೀಪಾವಳಿಯ, ನೂಲ ಹಬ್ಬಗಳ ಉಲ್ಲೇಖವಿದ್ದು, ವ್ಯಾಪಾರಿಗಳು, ಒಕ್ಕಲಿಗರು ಬಾಳೆ, ಹತ್ತಿ ಬೆಳೆಗಳಲ್ಲಿ ದೇವರ ಶ್ರೀ ಕಾರ್ಯ್ಯಕ್ಕೆ ಇಂತಿಷ್ಟು ಕೊಡಬೇಕೆಂದಿದೆ.

ಕ್ರಿ.ಶ. ೧೧೪೩ರ ಶಾಸನದಲ್ಲಿ ದೀಪಾವಳಿ ಬಾದಮ್ಮೆಯದಮ್ಮವನು ಸಂಕ್ರಾಂತಿಯ ಕವಡಿಕೆಯನು ಬ್ರಹ್ಮದೇವರ್ಗ್ಗೆ ಗಂಧ ಅಕ್ಷತೆ ಪುಸ್ಪ ಧೂಪ ದೀಪ ಸೋಡರೆಣ್ಣೆವ ಬಿಡಾರದ ಜೊತೆ ಸುಣ್ಣ ಜೀರ್ಣ್ನೋದ್ಧಾರಕಂ ಪೂಜೆಗೆ ಸಿಂಗಬಕ್ಕಂಗೆ ಧಾರಾಪೂರ್ವ್ವಕ್ಕಂ ಮಾಡಿ ಬಿಟ್ಟರು ಎಂದಿದೆ.[೧೧೪] ಕ್ರಿ.ಶ. ೧೨೭೬ರ ಶಾಸನದಲ್ಲಿ ದೀಪಾವಳಿಗೆಯ ದೀಪಮಾಲಿಗೆ ಸ್ಥಾನ ಹತ್ತೂ ಅರ್ಧ್ದಕಂ....ಎಳ್ಳು, ತೊಗರಿ, ಅರಿಶಿನ, ಏಲಕ್ಕಿ, ಬೇಳೆ, ಮೆಣಸುಗಳನ್ನು ಕೊಡಬೇಕೆಂದಿದೆ.[೧೧೫]

ಈ ದೀಪಾವಳಿ ಹಬ್ಬವನ್ನು ಹಟ್ಟಿಹಬ್ಬ, ಹಟ್ಟಿಲಕ್ಕವ್ವನ ಹಬ್ಬ ಎಂದು ಕರೆಯುವ ವಾಡಿಕೆ ಕಂಡುಬರುತ್ತದೆ. 'ಹಟ್ಟಿ' ಎಂದರೆ ದನ ಮತ್ತು ಕುರಿಗಳನ್ನು ಕಟ್ಟಿಹಾಕುವ ಸ್ಥಳ ಎನ್ನಲಾಗಿದೆ. ಕೆಲವು ಕಡೆ 'ಹಟ್ಟೆವ್ವನ ಪೂಜೆ' ಎಂದು ವಿಶೇಷವಾಗಿ ಆಚರಿಸುತ್ತಾರೆ.[೧೧೬] ಅಮವಾಸೆಯ ನಂತರದ ಮೂರನೆಯ ದಿನ ಈ ಹಬ್ಬವನ್ನು ಆಚರಿಸಲಾಗುತ್ತದೆ. ಮತ್ತೆ ಕೆಲವು ಕಡೆ ಅಮವಾಸೆಯ ದಿನ, ಅಮವಾಸೆಯ ಮರುದಿನವೂ 'ಹಟ್ಟೆವ್ವನ ಬದಲಿಗೆ ಹಟ್ಟಿ ಹಬ್ಬ' ಎಂದು ಆಚರಿಸುವರು. ಹೆಸರು ಭಿನ್ನವಾಗಿದ್ದರೂ, ಆಚರಣೆಯ ಕ್ರಮಗಳು ಅಲ್ಪ ಭಿನ್ನತೆಗಳಿಂದ ಕೂಡಿದವುಗಳಾಗಿವೆ. ಸಗಣಿ ಸಾರಿಸಿ, ಸಗಣಿ ಉಂಡೆಗಳನ್ನಿಟ್ಟು, ಹೊಲದಲ್ಲಿ ಬೆಳೆದ ಪೈರುಗಳಾದ ಉತ್ರಾಣಿ, ಜೋಳದ ತೆನೆ, ಕೆಲವೆಡೆ ಸಜ್ಜೆತೆನೆ, ಹನ್ನೆಕಡ್ಡಿ, ಬ್ರಹ್ಮದಂಡೆ, ಕವಸಿ ಹುಲ್ಲು ಮೊದಲಾದವುಗಳನ್ನು ಸಗಣಿಯ ಉಂಡೆಯಲ್ಲಿ ಸೇರಿಸಿ ನಿಲ್ಲಿಸುತ್ತಾರೆ. ಕವಸಿ ಹುಲ್ಲನ್ನು ಮಾತ್ರ ಸಿವುಡು ಕಟ್ಟಿ ಪಕ್ಕದಲ್ಲಿಡುತ್ತಾರೆ. ಒಂದುಕಡೆ ಹೊಲದಲ್ಲಿ ಪೈರು ಬಂದಿರುತ್ತದೆ. ಆ ತುಂಬಿದ ಹೊಲದ ತೆನೆಯನ್ನು ಜೋಡಿಸುವುದು ಒಂದು ಕ್ರಮ. ಮತ್ತೊಂದು ಅಂಶವೆಂದರೆ ಹೊಲದಲ್ಲಿ ಪೈರಿನೊಂದಿಗೆ ಹುಲ್ಲು, ಮುಳ್ಳುಗಳು ಬೆಳೆದಿರುತ್ತವೆ. ಕೆಲವು ಹೊಲದ ಬದುಗಳಲ್ಲಿ ಬೆಳೆಯುತ್ತವೆ.(ತಂಗಡಿಹೂವು, ಕವಸಿಹುಲ್ಲು, ಬ್ರಹ್ಮದಂಡೆ) ಇವುಗಳನ್ನು ಏಕೆ ತಂದಿಟ್ಟು ಪೂಜಿಸುತ್ತಾರೆ ಎಂಬ ಪ್ರಶ್ನೆ ಎದುರಾಗುತ್ತದೆ. ಬದುಗಳಲ್ಲಿ ಬೆಳೆಯುವ ಈ ಹುಲ್ಲುಗಳು ದನಕರುಗಳಿಗೆ ಮೇವುಗಳಾಗಿರುತ್ತವೆ. ಅಲ್ಲದೆ ಬದುಗಳಲ್ಲಿ ಮೇವು ಇರುವುದರಿಂದ ಹೊಲದ ಫಸಲು ಹಾಳಾಗುವುದಿಲ್ಲ. ಜೊತೆಗೆ ಮುಳ್ಳು ಗಂಟಿಗಳಿದ್ದರೆ ದನಗಳು ಬದುವನ್ನು ಹಾದು ಹೊಲಗಳಿಗೆ ಬರುವ ಪ್ರಮಾಣ ಕಡಿಮೆಯಾಗಿರುವ ಸಾಧ್ಯತೆಗಳಿರುತ್ತವೆ. ಇಂದಿಗೂ ಕೆಲವು

ಬುಡಕಟ್ಟುಗಳಲ್ಲಿ ಪ್ರಾಣಿಗಳಿಗಾಗಿ ಸುತ್ತಲೂ ಬೆಳೆಯನ್ನು ಹಾಕಿ ಅವುಗಳಿಗೆ ತಿನ್ನಲು ಬೆಳೆ ಹಾಕುವ ಪದ್ಧತಿ ಇದೆ. ನಂತರ ಹೊಲದ ಮಧ್ಯಭಾಗದಲ್ಲಿ ಅಥವಾ ಹೊಲದ ಒಂದು ಭಾಗದಲ್ಲಿ ಬಿತ್ತಿ ಬೆಳೆಯುವ ಪದ್ಧತಿಗೆ 'ಕಮುನಿ ಬೆಳೆ'(ಕುಮುನಿ ಬೆಳೆ) ಎಂದು ಕರೆಯುತ್ತಾರೆ. ಇದು ಎರವ, ಸಮುದಾಯ, ಕಾಡು ಕುರುಬರು, ಜೇನುಕುರುಬರು ಈ ರೀತಿಯ ಕೃಷಿಯನ್ನು ಅನುಸರಿಸುತ್ತಾರೆ. ಹೆಗ್ಗಡೆ ದೇವನಕೋಟೆ, ಕೊಡಗು, ಕೇರಳ ರಾಜ್ಯಗಳಲ್ಲಿ ಈ ಸಮುದಾಯದವರು ವಾಸಿಸುವುದು ಕಂಡುಬರುತ್ತದೆ.

ಹೊಲಗಳನ್ನು ರಕ್ಷಿಸುವ, ಮುಂದಿನ ಬೆಳೆಗಳಿಗೆ ಗೊಬ್ಬರವಾಗಿ ಮಾರ್ಪಡುವ ಸಸ್ಯಗಳಿಗೆ ಕೃತಜ್ಞತೆ ತಿಳಿಸುವ ಉದ್ದೇಶದ ಹಿನ್ನೆಲೆಯಲ್ಲಿಯೂ ಆಚರಣೆಯಾಗುತ್ತಿರುವ ಸಾಧ್ಯತೆಗಳಿವೆ. ಜೊತೆಗೆ ಹೊಲದಲ್ಲಿ ಪೈರುಗಳೊಂದಿಗೆ ಈ ಉತ್ರಾಣಿ ಹೊಡೆ, ಅನ್ನೆಸೊಪ್ಪಿನಹೊಡೆ, ಕಮಸಿಹುಲ್ಲುಗಳು ಬೆಳೆದರೆ ಪೈರಿಗೆ ತೊಂದರೆಯನ್ನು ಉಂಡುಮಾಡುತ್ತವೆ. ಅಂದರೆ ಪೈರು ಬೆಳೆಯಲು ಬಿಡದೆ ಕುಗ್ಗಿಸುತ್ತವೆ. ಜನಪದರು 'ಅನ್ನೆ ಹುಟ್ಟಿದ ಹೊಲ ಹಾಳು, ಹೆಣ್ಣು ಹುಟ್ಟಿದ ಮನೆ ಹಾಳು' ಎಂದಿರುವರು. ಈ ರೀತಿ ಉಪದ್ರವ ಕೊಡುವ ಸಸ್ಯಗಳನ್ನು ಪೂಜಿಸುವುದು ಒಂದು ಭಾಗವಾಗಿರುವ ಸಾಧ್ಯತೆಗಳಿವೆ.

ಸಗಣಿಯೊಂದಿಗೆ ಜೋಡಿಸಿದ ಎಲ್ಲವುಗಳನ್ನು ಮನೆಯ ಮುಂದೆ ದನಕಟ್ಟುವ ಸ್ಥಳದ ಬಾಗಿಲಮುಂದೆ ಮತ್ತು ಮೊದಲಾದ ಕಡೆ ಇಟ್ಟು ಪುಟ್ಟಿ ಮುಚ್ಚುವ ಪದ್ಧತಿ ಇದೆ. ಪ್ರಮುಖವಾಗಿ ಈ ಹಬ್ಬವು ಸಗಣಿಯನ್ನು ಪೂಜಿಸುವ ಹಬ್ಬವಾಗಿದೆ. ಸಗಣಿ ಎಂದರೆ ಲಕ್ಷ್ಮೀ, ಸಂಪತ್ತು ಈ ಸಂಪತ್ತನ್ನು ರೈತರು ದೀಪಾವಳಿ ಹಬ್ಬವಾಗಿ ಆಚರಿಸುತ್ತಾರೆ. ಸಗಣಿ ರೈತರ ಹೊಲಗಳಿಗೆ ಗೊಬ್ಬರವಾಗುವುದರಿಂದ ಇದು ಫಲವತ್ತತೆಯ ಸಂಕೇತವಾಗಿದೆ. ಭೂಮಿಯನ್ನು ಫಲವತ್ತುಗೊಳಿಸುವುದಲ್ಲದೆ ಮಣ್ಣಿನ ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುತ್ತದೆ. ಆದುದರಿಂದ ಸಗಣಿಯು ಕೀಟನಾಶಕವಾಗಿ ಕೆಲಸ ನಿರ್ವಹಿಸುತ್ತದೆ. ಬಿತ್ತನೆ ಬೀಜಗಳಿಗೆ ಔಷಧಿಯಾಗಿ ಕೆಲಸ ಮಾಡುತ್ತದೆ. ಬಿತ್ತನೆ ಬೀಜಗಳನ್ನು ಸಗಣಿ ಗಂಜಲು ಅಥವಾ ಗೋ ಮೂತ್ರದಲ್ಲಿ ನೆನೆಸಿದರೆ ಬೀಜಗಳಿಗೆ ಕೀಟ ಬಾಧೆ ತಗಲುವುದಿಲ್ಲ. ಪ್ರಾಣಿ ಪಕ್ಷಿಗಳು ಬಿತ್ತಿದ ಬೀಜಗಳನ್ನು ತಿನ್ನುವುದಿಲ್ಲ. ಆದರೆ ಇಂದು ರಾಸಾಯನಿಕ ಬೆರೆಸಿದ ಬೀಜಗಳನ್ನು ಬಿತ್ತನೆಗೆ ಬಳಸುತ್ತಿರುವುದರಿಂದ ಕಾಡುಹಂದಿ, ಪಕ್ಷಿಗಳ ಕಾಟಕ್ಕೆ ಬೀಜಗಳು ಬಲಿಯಾಗುತ್ತಿವೆ. ಜೊತೆಗೆ ಮಣ್ಣಿನ ಆರೋಗ್ಯ ಕ್ಷೀಣಿಸುತ್ತಿದೆ. ಸಗಣಿಯ ಗಂಜಳವನ್ನು ಪೈರುಗಳ ಮೇಲೆ ರಾಡಿಮಾಡಿ ಚೆಲ್ಲಿದರೆ ಕೀಟ ಬಾಧೆಯಾಗಲೀ ದನಕರುಗಳಾಗಲೀ ಮೇಯುವ ಪ್ರಸಂಗ ಎದುರಾಗುವುದಿಲ್ಲ. ಹೀಗೆ ಸಗಣಿ ರೈತರ ಸರ್ವತೋಮುಖ ಅಭಿವೃದ್ಧಿಗೆ ಪಾಲುದಾರಿಕೆಯನ್ನು ಹೊಂದಿದೆ.

ಪ್ರಾಚೀನ ಕೃಷಿಕರು ಗೊಬ್ಬರಕ್ಕೆ ನೀಡಿದ ಮಹತ್ವ ಈ ಹಬ್ಬದ ಹಿನ್ನೆಲೆಯಲ್ಲಿ ಕಂಡುಬರುತ್ತದೆ. ತಿಪ್ಪೆಸುಂಕಗಳು, ಸಗಣಿಯ ಮಹತ್ವವನ್ನು ತಿಳಿಸುತ್ತವೆ. ಇಂದಿನ ಬದಲಾದ ಸನ್ನಿವೇಶದಲ್ಲಿ ದೀಪಾವಳಿ ಹಬ್ಬದ ಆಚರಣೆ ಕಂಡುಬರುತ್ತದೆ. ಆದರೆ ಇದು ಸಿಡಿಮದ್ದು ಹಬ್ಬವಾಗಿ ದೀಪಾವಳಿ ಹಬ್ಬದ ಸಂಸ್ಕೃತಿಯ ಮೂಲ ಆಶಯವನ್ನು ವಿಸ್ಮೃತಿಗೆ ಸರಿಸುತ್ತಿದೆ. ದನಗಾಹಿಗಳ, ಪಶುಪಾಲಕರ ಹಬ್ಬವಾಗಿದ್ದ ಈ ಹಬ್ಬದ ದಿಕ್ಕು ಇಂದು ಬದಲಾಗುತ್ತಿರುವುದು ಖೇದದ ಸಂಗತಿ.

ಏತಕ್ಕಾಗಿ ದೀಪಾವಳಿಯಲ್ಲಿ ಈ ದಾನಕಾರ್ಯ ನಡೆದಿದೆ ಎಂಬುದನ್ನು ಗಮನಿಸಬೇಕು. ಇಂದಿಗೂ ದೀಪಾವಳಿಯಂದು ಖೇಣಿ ತೆಗೆದುಕೊಂಡವರು ಮತ್ತು ಕೊಡುವವರು ದೀಪಾವಳಿಗೆ, ಖೇಣಿ ನೀಡಿದ ಮೊತ್ತದ ಇಂತಿಷ್ಟು ಹಣ ಮತ್ತು ಇಂತಿಷ್ಟು ಬೆಳೆಯ ಭಾಗವನ್ನು ನೀಡಬೇಕೆಂಬ ಒಪ್ಪಂದಗಳಿವೆ. ಇವು ಬೆರಳೆಣಿಕೆಯಷ್ಟು ಉಳಿದುಕೊಂಡು ಬಂದಿವೆ. ದೀಪಾವಳಿಯ ವೇಳೆಗೆ

ಮುಂಗಾರಿನ ಬೆಳೆ ಮುಕ್ಕಾಲುಭಾಗ ಬಂದಿರುತ್ತದೆ. ಇದೂ ಸಹ ಒಂದು ಪ್ರಮುಖ ಕಾರಣವಿರುವ ಸಾಧ್ಯತೆಗಳಿವೆ. ಅಡಕೆ ಬೆಳೆಯು ಈ ವೇಳೆಗೆ ಸಂಪೂರ್ಣವಾಗಿ ಬಂದಿರುತ್ತದೆ. ಸಾಮಾನ್ಯವಾಗಿ ಇದರ ಶ್ರೇಣಿಯು ಪ್ರಾಚೀನ ಕಾಲದಿಂದ ಇಂದಿನವರೆಗೂ ಹೆಚ್ಚಾಗಿ ಕಂಡುಬರುತ್ತಿದೆ.

ಶಾಸನಗಳು ಎಣ್ಣೆಯನ್ನು ಪಟ್ಟಸಾಲೆಗಳು ಒಂದು ಮನೆಗೆ ಒಂದು ಹಾಗ ನೀಡಬೇಕೆಂದಿವೆ. ದೀಪಾವಳಿಯಿಂದ ಕಾರ್ತಿಕಮಾಸ ಮುಗಿಯುವವರೆಗೆ ದೇವಾಲಯದಲ್ಲಿ ದೀಪ ಹಚ್ಚುತ್ತಾರೆ. ದೀಪಾವಳಿಯಂದು ಮನೆಯ ಮುಂದೆ ತಂಕಟಿಕೆ ಹೂವಿನ ಹಟ್ಟಿ ಹಾಕುತ್ತಾರೆ. ಹೊಲದಲ್ಲಿ ಬೆಳೆದ ಪೈರು ಬಲಿತು ಕಾಳುಗಳಾಗಿರುತ್ತವೆ. ಅಂತಹ ಪೈರುಗಳನ್ನು ರಾಗಿ, ಜೋಳ, ಸಜ್ಜೆ, ತೆನೆಗಳನ್ನು ಉತ್ರಾಣೆ ಬ್ರಹ್ಮದಂಡೆ, ಕವಸಿಹುಲ್ಲು, ಅನ್ನೆ ಹೂವುಗಳನ್ನು ಸಗಣಿಯ ಉಂಡೆ ಮಾಡಿ ಅದಕ್ಕೆ ಜೋಡಿಸುತ್ತಾರೆ(ಸಿಗಿಸುತ್ತಾರೆ). ಒಂದು ಪುಟ್ಟಿಗೆ ಕುಂಕುಮ ಅಥವಾ ಕೆಮ್ಮಣ್ಣು ಮತ್ತು ಸುಣ್ಣದಿಂದ ಪುಟ್ಟಿಯಸುತ್ತ ದುಂಡಾಗಿ ಎರಡೆರಡು ಸುತ್ತು ಗೆರೆ ಹಾಕಿ ಅಲಂಕರಿಸುತ್ತಾರೆ. ಅಲಂಕರಿಸಿದ ಈ ಪುಟ್ಟಿಯನ್ನು, ಸಗಣಿ ಉಂಡೆಗಳನ್ನಿಟ್ಟು, ದೀಪ ಹಚ್ಚಿ ಮನೆಯ ಬಾಗಿಲಲ್ಲಿಟ್ಟು ಪುಟ್ಟಿ ಮುಚ್ಚುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶಗಳಿವು.

ದೀಪಾವಳಿಗೂ ಕೃಷಿಗೂ ಇರುವ ಸಂಬಂಧ

ದೀಪಾವಳಿಗೂ ಪಶುಪಾಲನೆಗೂ ಇರುವ ಸಂಬಂಧ

ದೀಪಾವಳಿಗೂ ವ್ಯಾಪಾರಕ್ಕೂ ಇರುವ ಸಂಬಂಧ

ಕೃಷಿ ಮತ್ತು ಪಶುಪಾಲನೆಗೂ ಇರುವ ಸಂಬಂಧದ ಈ ಅಂಶಗಳು ದೀಪಾವಳಿ ಆಚರಣೆಯ ಹಿಂದಿವೆ. ದೀಪಾವಳಿಗೂ ಕೃಷಿಗೂ ಇರುವ ಸಂಬಂಧವನ್ನು ಗಮನಿಸುವಾಗ ಇದು ಹೊಲದಲ್ಲಿ ಫಸಲು ತುಂಬಿದ ಹಬ್ಬ. ಈ ವೇಳೆಯಲ್ಲಿ ಮುಂಗಾರು ಬೆಳೆಗಳು ಹಾಲುಗಾಳು ಮಿಕ್ಕಿ, ಬಲಿತು ನಿಂತಿರುತ್ತವೆ. ಈ ಹಬ್ಬ ಆಚರಿಸುವಾಗ ಸಂಪೂರ್ಣವಾಗಿ ರಾತ್ರಿ ಕತ್ತಲೆಯಿಂದ ಕೂಡಿರುವುದು ಒಂದು. ಕತ್ತಲೆಯನ್ನು ಹೊಡೆದೋಡಿಸುವ ಸಣ್ಣ ಪ್ರಯತ್ನವನ್ನು ಮಾಡುವ ಸಲುವಾಗಿ ಹೀಗೆ ಮಾಡಲಾಗುತ್ತದೆ. ಕೃಷಿ ಸಂಬಂಧಿಯಾಗಿ ನೋಡುವುದಾದರೆ ಈ ಅವಧಿಯಲ್ಲಿ ರೆಕ್ಕೆಯ ಹುಳುಗಳು ಹುಟ್ಟಿರುತ್ತವೆ. ಇವು ಚಿಟ್ಟೆಗಳಂತೆ ಹಾರಾಡುತ್ತಿರುತ್ತವೆ. ಈ ಹುಳುಗಳ ಮೊಟ್ಟೆಗಳು ಕೀಟಗಳಾಗಿ ಬೆಳೆಗೆ ಹಾನಿಮಾಡುತ್ತವೆ ಎಂಬ ಉದ್ದೇಶವಿದೆ. ಈ ಹುಳುಗಳು ದೀಪಾವಳಿಯ ಹಿಂದಿನ ಒಂದೆರಡು ದಿನಗಳಲ್ಲಿ ಹೆಚ್ಚಾಗಿರುತ್ತವೆ. ಇವು ದೀಪಕ್ಕೆ ಆಕರ್ಷಿತವಾಗಿ ಉರಿಯುತ್ತಿರುವ ದೀಪದ ಬೆಳಕನ್ನು ಮುಟ್ಟಲು ಹೋಗಿ ಸಾಯುತ್ತವೆ. ಇದರಿಂದ ಫಸಲು ಸುರಕ್ಷಿತವಾಗುತ್ತದೆ ಎಂಬ ಉದ್ದೇಶದ ಸಾಧ್ಯತೆಗಳಿವೆ. ಪಶುಪಾಲನೆಗೂ ದೀಪಾವಳಿಗೂ ಇರುವ ಸಂಬಂಧವನ್ನು ಗಮನಿಸುವಾಗ, ಮೊದಲೆ ಹೇಳಿದಂತೆ ಸಗಣಿಯ ಉಂಡೆಗೆ ಫಸಲಿನ ತೆನೆಗಳನ್ನು ಸಿಕ್ಕಿಸುತ್ತಾರೆ. ಸಗಣಿ ಕೇವಲ ಪಶುಗಳ ತ್ಯಾಜ್ಯವಲ್ಲ. ಅದು ಭೂಮಿ ಫಲವತ್ತಾಗಿ ಬೆಳೆಯಲು ಬೇಕಾದ ಗೊಬ್ಬರ. ಈ ಸಂದರ್ಭದಲ್ಲಿ ಅದರಲ್ಲೂ ಶುಕ್ರವಾರ ಲಕ್ಷ್ಮಿಯನ್ನು ಪೂಜಿಸುತ್ತಾರೆ. ಲಕ್ಷ್ಮೀ ಎಂದರೆ ಕೇವಲ ಸಂಪತ್ತಿಗಷ್ಟೆ ಸೀಮಿತವಾದುದಲ್ಲ ಸಂಪತ್ತಿನ ಹಿಂದಿನ ಶ್ರಮದ ಜೀವಾಳ. ಲಕ್ಷ್ಮೀಯನ್ನು ಅರ್ಷಿಣಿ ಅಥವಾ ಅರ್ಷಿನಿ ಎಂದು ಕರೆಯುತ್ತಾರೆ. ಅಂದರೆ ಸಗಣಿ ದೇವತೆ ಎಂದರ್ಥ. ಈ ಕಾರಣಕ್ಕೆ ಸಗಣಿ ಕೃಷಿಕರಿಂದ ಪೂಜೆಗೊಳ್ಳುತ್ತದೆ. ಒಂದೆಡೆ ತನಗೆ ಅನ್ನ ನೀಡುವ ಭೂಮಿ ತಾಯಿ ಬೆಳೆಯಲು ಸಹಾಯವಾಗುವ, ಸಗಣಿಯನ್ನು ಪೂಜಿಸುವ ಮೂಲಕ ಕೃತಜ್ಞತೆಯ ಭಾವವನ್ನು ಹೇಳುವುದಾಗಿದೆ. ಈ ಕಾರಣಕ್ಕಾಗಿಯೇ ದೀಪಾವಳಿಯನ್ನು ಹಟ್ಟಿಹಬ್ಬ, ಸಗಣಿಹಬ್ಬ, ಗೊಬ್ಬರದ ಹಬ್ಬ ಎಂದು ಕರೆಯುತ್ತಾರೆ. 'ಕಡ್ಲೇವಾಡದ ಕ್ರಿ.ಶ. ೧೧೭೬ರ ಶಾಸನವು ತಿಪ್ಪೆಸುಂಕವನ್ನು'[೧೧೭] ಉಲ್ಲೇಖಿಸುತ್ತದೆ.

'ಕ್ರಿ.ಶ.೧೧೫೯ರ ಶ್ರಾವಣಬೆಳಗೊಳದ ಭಂಡಾರ ಬಸದಿಯ ಪಶ್ಚಿಮದಲ್ಲಿರುವ ಶಾಸನದಲ್ಲಿ ಶ್ರೀಗೊಮ್ಮಟಪುರದ ತಿಪ್ಪೆಸುಂಕದಲ್ಲಿ ಅಡಕೆಯ ಹೆಜೆಂಗೆ ೨೦೦ ಹಸುಂಬೆಗೆ ಅಯ್ವತು'[೧೧೮] ಮೊದಲಾದವುಗಳಿಗೆ ಸುಂಕವನ್ನು ವಿಧಿಸಿದಂತಿದೆ. ಊರ ತಿಪ್ಪೆಯನ್ನು ಗೊಬ್ಬರವಾಗಿ ಬಳಸಿಕೊಂಡು ಬೆಳೆ ಬೆಳೆದುದರಿಂದ ಸುಂಕ ವಿಧಿಸಿರುವುದು ಕಂಡುಬರುತ್ತದೆ. ಇಂದಿನಂತೆ ಯಾವ ರಾಸಾಯನಿಕ ಗೊಬ್ಬರಗಳಿಲ್ಲದ ಕಾಲವದು. ತಿಪ್ಪೆಸುಂಕಗಳ ಉಲ್ಲೇಖಗಳು ತಿಪ್ಪೆಯ ಗೊಬ್ಬರದ ಮಹತ್ವವನ್ನು ತಿಳಿಸುತ್ತವೆ. ಇದು ಫಲವತ್ತತೆಯ ಸಂಕೇತವಾದ ಕಾರಣಕ್ಕೆ ಇದರ ಆರಾಧನೆಯ ಆಚರಣೆ ಬೆಳೆದುಬಂದ ಸಾಧ್ಯತೆಗಳಿವೆ. ಇದು ಪಶುಪಾಲನೆಗೆ ನೇರ ಸಂಬಂಧವನ್ನು ಹೊಂದಿದೆ. ಪಶುಗಳನ್ನು ಸಾಕುವ ಹಿಂದಿನ ಉದ್ದೇಶ ಒಂದು ಐನುಗಾರಿಕೆಯ ಸಲುವಾಗಿ ಮತ್ತೊಂದು ಭೂಮಿಯ ಫಲವತ್ತತೆಗೆ ಬಳಸಲಾಗುತ್ತದೆ. ಇದು ಕೃಷಿ ಮತ್ತು ಪಶುಪಾಲನೆಗಳ ಅಂತ:ಸತ್ವವನ್ನು ಒಳಗೊಂಡಿದೆ.

ದೀಪಾವಳಿಗೂ ವ್ಯಾಪಾರಕ್ಕೂ ಏನು ಸಂಬಂಧ ಏತಕ್ಕಾಗಿ ವ್ಯಾಪಾರಿಗಳು ಆ ದಿನ ಲಕ್ಷ್ಮಿಯನ್ನು ಪೂಜಿಸುತ್ತಾ. ಎಂಬುದನ್ನು ಗಮನಿಸಿದರೆ, ಲಕ್ಷ್ಮೀಯನ್ನು ಸಂಪತ್ತಿನ, ಸಮೃದ್ಧಿಯ ಸಂಕೇತವಾಗಿ ವ್ಯಾಪಾರಿಗಳು ಪೂಜಿಸುತ್ತಾರೆ. ವ್ಯಾಪಾರಿಗಳ ಲೆಕ್ಕ ಪ್ರಾರಂಭ ಮತ್ತು ಮುಕ್ತಾಯದ ದಿನವಾಗಿ ದೀಪಾವಳಿ ಆಚರಣೆಗೊಳ್ಳುತ್ತದೆ. 'ಕ್ರಿ.ಶ. ೧೧೧೬ರ ಮಾಗಳದ ಶಾಸನವು ದೀಪಾವಳಿಗೆಯಲು ಶ್ರೀ ಸೋಮೇಶ್ವರ ದೇವರಿಗೆಯಿಂನೂರ್ವ್ವರುಂ ವಯ್ನೂರ್ವ್ವರುಂ ನೆರೆದಿರ್ದ್ದು.[೧೧೯] ಇನ್ನೂರ್ವರು ಮತ್ತು ಐನೂರ್ವರು ವ್ಯಾಪಾರಿಗಳು ದಾನ ನೀಡಿದ್ದನ್ನು ಈ ಶಾಸನವು ತಿಳಿಸುತ್ತದೆ. ಈ ದಿನ ತಮ್ಮ ಮುಂದಿನ ದಿನದ ವ್ಯಾಪಾರ ಲಾಭದಾಯವಾಗಲೆಂಬ ಆಶಯವಿದೆ. ತಮ್ಮ ಆದಾಯದ ಮೇಲಿನ ಸುಂಕವನ್ನು ತೆರಿಗೆಯಾಗಿ ಈ ದಿನ ನೀಡಿದಂತಿದೆ. ಆಚರಣೆಗಳು ಕೇವಲ ಆಚರಣೆಗಳಾಗಿ ಕಾಣದೆ ಜೀವನ ವಿಧಾನಗಳಾಗಿ ಮೌಲ್ಯಾಧಾರಿತಗೊಂಡಿರುವುದು ಕಂಡುಬರುತ್ತದೆ.

**ಸಂಕ್ರಾಂತಿ**

ಈ ಹಬ್ಬವು 'ಸುಗ್ಗಿ' ಹಬ್ಬವೆಂದೇ ಜನಜನಿತವಾಗಿದೆ. ಯುಗಾದಿಯನ್ನು 'ಬೇವು ಬೆಲ್ಲದ' ಹಬ್ಬವೆಂದು ಕರೆದರೆ ಸಂಕ್ರಾಂತಿಯನ್ನು 'ಎಳ್ಳು ಬೆಲ್ಲ'ದ ಹಬ್ಬವೆಂದು ಕರೆಯುತ್ತಾರೆ. ಮಳೆ, ಬೆಳೆಗಳು ಸಮೃದ್ಧಿಯಾದರೆ ಕೃಷಿಕನ ಮೊಗದಲ್ಲಿ ಉಂಟಾಗುವ ಹರ್ಷ ಎಳ್ಳು ಬೆಲ್ಲದ ಸಂಕೇತ. ಒಂದು ವೇಳೆ ಬೆಳೆಯು ಅತಿವೃಷ್ಟಿ, ಅನಾವೃಷ್ಟಿಯ ಕಾರಣಗಳಿಂದಾಗಿ ಸಾಧಾರಣವಾದರೆ ಸಂಕ್ರಾಂತಿಯನ್ನು ಆಚರಿಸುವುದಿಲ್ಲವೆಂದಲ್ಲ. ಕೃಷಿಕರು ಮಾನಸಿಕವಾಗಿ ನೊಂದು ನೀರಸವನ್ನು ವ್ಯಕ್ತಪಡಿಸುವುದುಂಟು. ಆದರೂ ಆಚರಣೆಯನ್ನು ಮಾತ್ರ ಮನೆಯಲ್ಲಿ ಆಚರಿಸುತ್ತಾರೆ. ಈ ಸುಗ್ಗಿ ಹಬ್ಬದ ಆಚರಣೆಯ ಬಗೆಗೆ ಋಗ್ವೇದವು ಹೀಗೆ ಉಲ್ಲೇಖಿಸುತ್ತದೆ. 'ಶುಭಕರಿಯಾದ ಸೀತೆಯನ್ನು ಪ್ರತ್ಯಕ್ಷಳಾಗು, ನಿನ್ನನ್ನು ಉದ್ಘೋಷಿಸುತ್ತೇವೆ. ನಮಗೆ ಫಲರೂಪದ ಕಾಣಿಕೆಗಳನ್ನು ನೀಡು. ಇಂದ್ರನು ಸೀತೆಯ ರಕ್ಷಕನಾಗಲಿ. ಪ್ರಶವನು ಅವಳಿಗೆ ಮಾರ್ಗದರ್ಶಕವಾಗಲಿ. ಆಕೆಯು ಸಮೃದ್ಧವಾಗಿ ಜಲವನ್ನು ಸಂರಕ್ಷಿಸಿಕೊಳ್ಳಲು ಅನಂತರ ಕ್ಷೀರಧಾರೆಯಂತೆ ನಮಗೆ ಉತ್ಪನ್ನಗಳನ್ನು ವರ್ಷೇ ವರ್ಷೇ ಕರುಣಿಸಲಿ'[೧೨೦] ಆಚರಣೆಗಳು ಕೃಷಿಯು ಹುಟ್ಟಿ ವಿಕಾಸ ಹೊಂದುವ ಹಂತದಿಂದಲೂ ಬೆಳೆದು ಬಂದವುಗಳಾಗಿವೆ. ಶಾಸನಗಳಲ್ಲಿ ಮೀನ ಸಂಕ್ರಾಂತಿ, ದಕ್ಷಿಣಾಯನ ಸಂಕ್ರಾಂತಿ, ಮೇಷ ಸಂಕ್ರಾಂತಿ, ಉತ್ತರಾಯಣ ಸಂಕ್ರಾಂತಿ, ಸಂಕ್ರಮಣ, ಸಂಕ್ರಾಂತಿಯೆಂದು ಮೊದಲಾದ ವಿಧಗಳಲ್ಲಿ ಉಲ್ಲೇಖಿಸಲಾಗಿದೆ. ಈ ಎಲ್ಲ ವಿಧದ ಸಂಕ್ರಾಂತಿಗಳ ಉಲ್ಲೇಖಗಳು ಇದ್ದಾಗಲೂ ಉತ್ತರಾಯಣ ಸಂಕ್ರಾಂತಿ ಅತಿ ಹೆಚ್ಚಾಗಿ ಉಲ್ಲೇಖಿತವಾಗಿದೆ. ಯಾಕೆ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖ ಬರುತ್ತದೆ? ಯಾಕೆ ಈ

ಸಂಕ್ರಾಂತಿಯಂದೇ ದಾನ ನೀಡುತ್ತಾರೆ? ಸಂಕ್ರಾಂತಿಗೂ ಕೃಷಿಗೂ, ಆರ್ಥಿಕತೆಗೂ ದಾನಕ್ಕೂ ಏನು ಸಂಬಂಧ ಎಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು. ರೈತರು ಬೆಳೆದ ಬೆಳೆಗಳನ್ನು ಕೊಯ್ದು ಕಣಗಳಲ್ಲಿ ಸಂಗ್ರಹಿಸುತ್ತಾರೆ. ಇವರು ವರ್ಷವಿಡೀ ಹೊಲಗಳಲ್ಲಿ ಬೆವರು ಸುರಿಸಿ ದುಡಿದು ಸಾಲೊಂದಿಗರಾಗಿ ಬೆಳೆಯ ರಾಶಿ ಕಾಣುವ ಹಬ್ಬ ಈ ಸಂಕ್ರಾಂತಿ. ಇದು ಕೇವಲ ಆಚರಣೆ ಮಾತ್ರವಲ್ಲ. ಕೃಷಿಕರು ಆರ್ಥಿಕತೆಯ ಭಾಗವಾಗಿ ಆಚರಿಸುವ, ಸಂಭ್ರಮಿಸುವ, ತುಸು ಸಾಂತ್ವನ, ನೆಮ್ಮದಿಯನ್ನು ಕಾಣುವ ಹಬ್ಬವಾಗಿದೆ.

ಕ್ರಿ.ಶ. ೧೦೮೩ರ ಶಾಸನವು 'ಸಂಕ್ರಾಂತಿಯ ಬೇಳೆ' ೨[೧೨೧] ಎಂದು ಉಲ್ಲೇಖಿಸಿದೆ. ಇಂತಹ ಉದಾಹರಣೆಗಳ ಸಂಖ್ಯೆಯ ಉಲ್ಲೇಖ ಶಾಸನಗಳಲ್ಲಿ ಹೇರಳವಾಗಿ ದೊರೆತಿವೆ. ಸಂಕ್ರಾಂತಿಯ ಸುಗ್ಗಿಯನ್ನು ಕುರಿತು ಮಾರ್ಮಿಕವಾದ ಕತೆಯೊಂದಿದೆ. "ಸುಗ್ಗಿಯಲ್ಲಿ ಒಕ್ಕಲಿಗ ತನ್ನ ಮಗನಿಗೆ ಲಗ್ನಕ್ಕೆಂದು ಹೆಣ್ಣು ಕೇಳಲು ರಾಜನ ಅರಮನೆಗೆ ಹೋದನಂತೆ. ಆಗ ರಾಜನು ಮುಗಳ್ನಗೆ ನಕ್ಕು ಆಯಿತು, ಮಗಳನ್ನು ಕೊಡುತ್ತೇನೆ ಆಷಾಡಕ್ಕೆ ಬನ್ನಿ ಎಂದನಂತೆ" ಈ ಚಿಕ್ಕ ಕಥೆಯು ಮೇಲ್ನೋಟಕ್ಕೆ ವಿವಾಹಕ್ಕೆ ಹೆಣ್ಣು ಕೇಳುವ ಸಂದರ್ಭವಷ್ಟನ್ನು ಮಾತ್ರ ಸೂಚಿಸುತ್ತದೆ. ಆದರೆ ಅದರ ಹಿಂದೆ ಕೃಷಿಕರ ಜೀವನದ ವಾಸ್ತವಸ್ಥಿತಿ ಅನಾವರಣಗೊಂಡಿದೆ. ಕೃಷಿಕರು ಸುಗ್ಗಿಯಲ್ಲಿ ಹಿಗ್ಗಿದರೆ ಆಷಾಡದಲ್ಲಿ ಕುಗ್ಗಿ ಹೋಗಿರುತ್ತಾರೆ. ಆಷಾಢದ ವೇಳೆಗೆ ಹಿಂದಿನ ವರ್ಷದ ಬೆಳೆಯ ಹಣವೆಲ್ಲ ಖಾಲಿಯಾಗಿರುತ್ತದೆ. ಆಷಾಢವೆಂದರೆ ಅದು ಬಿತ್ತನೆಯ ಕಾಲ. ಈ ವೇಳೆಗೆ ಬೀಜ, ಗೊಬ್ಬರ ಇತ್ಯಾದಿಗಳಿಗೆ ವ್ಯಯಿಸಿ ಸಾಲೊಂದಿಗರಾಗಿರುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಕೃಷಿಕರು ವಿವಾಹ ಮಾಡುವುದಿರಲಿ, ಜೀವನ ಸಾಗಿಸಲು ಸಾಧ್ಯವಾಗದ ಸ್ಥಿತಿಗೆ ತಲುಪಿರುತ್ತಾರೆ. ಇದನ್ನು ಸೂಚ್ಯವಾಗಿ ಗಮನಿಸಿದರೆ ಈ ಕಥೆಯ ಹಿಂದಿರುವ ಆರ್ಥಿಕ ಮಹತ್ವ ತೆರೆದುಕೊಳ್ಳುತ್ತದೆ.

ಸಂಕ್ರಾಂತಿಯನ್ನು ಕರ್ನಾಟಕದಲ್ಲಿ ಮಾತ್ರವಲ್ಲದೆ ತಮಿಳುನಾಡು, ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿಯೂ ಆಚರಿಸುತ್ತಾರೆ. ಈ ಹಬ್ಬವನ್ನು ತಮಿಳು ನಾಡಿನಲ್ಲಿ 'ಪೊಂಗಲ್' ಎಂದು ಆಚರಿಸುತ್ತಾರೆ.[೧೨೨] ಎಳ್ಳು ಬೆಲ್ಲ ಕೊಳ್ಳು, ಒಳ್ಳೊಳ್ಳೆ ಮಾತನಾಡು; ಹೂವಾಗಿ ಬಾಳೋಣ, ಜಳ್ಳನ್ನು ಗಾಳಿಗೆ ತೂರೋಣ.[೧೨೩] ಎಂಬುದು ಸಂಕ್ರಾಂತಿ ಹಬ್ಬದ ಆಶಯವಾಗಿದೆ. ಸಂಕ್ರಾಂತಿ ಹಬ್ಬದ ಆಚರಣೆಯನ್ನು ಅಧ್ಯಯನಕ್ಕೆ ಒಳಪಡಿಸುವಾಗ ದಾನಕ್ಕು ಕೃಷಿಗೂ ಇರುವ ಸಂಬಂಧ, ಸಂಕ್ರಾಂತಿಗೂ ದಾನಕ್ಕೂ ಇರುವ ಸಂಬಂಧ, ಸಂಕ್ರಾಂತಿಗೂ ಆರ್ಥಿಕತೆಗೂ ಇರುವ ಸಂಬಂಧಗಳೇನು ಎಂಬ ಹಿನ್ನೆಲೆಯಲ್ಲಿ ಗಮನಿಸಬಹುದಾಗಿದೆ. ಸೂರ್ಯನು ದಕ್ಷಿಣಾಯಣದ ಕರ್ಕರಾಶಿಯಿಂದ ಉತ್ತರಾಯಣದ ಮಕರರಾಶಿಗೆ ತನ್ನ ಪಥವನ್ನು ಬದಲಿಸುವ ಈ ಸಮಯವನ್ನು ಪುಣ್ಯಕಾಲ ಎಂದು ಕರೆಯಲಾಗುತ್ತದೆ. ಮಹಾಭಾರತದ ಯುದ್ಧದಲ್ಲಿ ಭೀಷ್ಮಾಚಾರ್ಯರು ದಕ್ಷಿಣಾಯಣ ಕಾಲದಲ್ಲಿ ಬಾಣಗಳಿಗೆ ತುತ್ತಾಗಿ ಸಾಯುವ ಸಂದರ್ಭ ಎದುರಾಗುತ್ತದೆ, ಇಚ್ಛಾ ಮರಣಿಯಾದ ಭೀಷ್ಮರು ದಕ್ಷಿಣಾಯಣದಿಂದ ಉತ್ತರಾಯಣ ಪುಣ್ಯ ಕಾಲ ಬರುವವರೆಗೂ ಶರ(ಬಾಣಗಳ) ಶಯ್ಯೆಯಲ್ಲಿ ಮಲಗಿರುತ್ತಾರೆ. ನಂತರ ಉತ್ತರಾಯಣ ಪುಣ್ಯಕಾಲದಲ್ಲಿ ಮರಣ ಹೊಂದಿರುವುದು ಕಂಡುಬರುತ್ತದೆ. ಈ ರೀತಿಯ ಮಹತ್ವ ಪಡೆದ ಕಾರಣಕ್ಕಾಗಿ ಈ ಅವಧಿಯಲ್ಲಿ ದಾನ ನೀಡಿದರೆ ಪುಣ್ಯವಾಗುತ್ತದೆ ಎಂಬುದರಿಂದ ಉತ್ತರಾಯಣ ಸಂಕ್ರಾಂತಿಯಂದು ಹೆಚ್ಚಾಗಿ ದಾನ ನೀಡಿರುವುದು ಕಂಡುಬರುತ್ತದೆ.

ರೈತರು ತಾವು ಕಷ್ಟಪಟ್ಟು ಬೆವರು ಸುರಿಸಿ ಸಾಲೊಂದಿಗನಾಗಿ ದುಡಿದ ಬೆಳೆಗಳನ್ನು ಕೊಯ್ದು ಕಣಗಳಲ್ಲಿ ಸಂಗ್ರಹಿಸುತ್ತಾರೆ. ರೈತರಿಗಾಗಿ ಸಂಕ್ರಾಂತಿಯ ಈ ಸಂದರ್ಭದಲ್ಲಿ ಕೇವಲ ಆಚರಣೆ ಮಾತ್ರವಲ್ಲ ಅದು ರೈತನ ಆರ್ಥಿಕತೆಯ ಭಾಗವಾಗಿರುತ್ತದೆ. ಸಂಭ್ರಮ, ಸಾಂತ್ವನ, ನೆಮ್ಮದಿಯನ್ನು

ಆರ್ಥಿಕ ಮತ್ತು ಆಚರಣೆ ಎರಡು ನೆಲೆಯಲ್ಲಿಯು ದೇವಾಲಯಗಳು, ಬ್ರಾಹ್ಮಣ ಮೊದಲಾದವರಿಗೆ ದಾನ ನೀಡುತ್ತಿದ್ದರು. ಮತ್ತೊಂದು ಕಡೆ ಭೂಮಿಯನ್ನು ಗೇಣಿಗೆ ಉಳುಮೆ ಮಾಡಿದವರು ಭೂಮಿಯ ಒಡೆಯನಿಗೆ ಪಡಿ ಸಲ್ಲಿಸಬೇಕಾಗುತ್ತದೆ. ಈ ಕಾರಣದಿಂದಾಗಿ ಈ ಹಬ್ಬವು ಋಣಭಾರ ಕಳೆದುಕೊಳ್ಳುವ ಹಬ್ಬವಾಗಿತ್ತು. ಜೊತೆಗೆ ಕೃಷಿಗೆ ಸಹಕರಿಸಿದ ಸಮಾಜದ ಇತರ ವರ್ಗಗಳಾದ ಬಡಿಗಿ, ಕಮ್ಮಾರ, ಮೊದಲಾದ ಪಾಂಚಾಳರಿಗೂ ಪಡಿ ಸಲ್ಲಿಸುವ ಸಂದರ್ಭವಾಗಿ ಈ ಹಬ್ಬವು ಕಂಡುಬರುತ್ತದೆ. ಕೆಲವೊಮ್ಮೆ ರೈತರು ಬೆಳೆಗಳಿಗೆ ಆಪತ್ತು ಬಂದಾಗ ದೇವರಿಗೆ ಹರಕೆಯನ್ನು ಹೊತ್ತು ಪ್ರಾರ್ಥಿಸುತ್ತಿದ್ದರು. ಅಂತಹ ಹರಕೆಗಳಲ್ಲೊಂದನ್ನು ಜನಪದರು ಹೀಗೆ ಹೇಳಿರುವರು.

ಜೋಳದ ಹೊಲವನ್ನು ಏಳು ಮಕ್ಕಳ ತಾಯಿ
ಹಾಳ ಮಾಡಬ್ಯಾಡ ನಂ ಬೆಳಸು। ಸುಗ್ಗ್ಯಾಗ
ಬಲಿಕೊಟ್ಟು ಕೆಯ ಮುಗಿದೇವ[೧೨೪]

ರೈತರಿಗೆ ಆರ್ಥಿಕವಾಗಿ ಶಕ್ತಿ ಬರುವುದು ಸುಗ್ಗಿಯ ಸಂದರ್ಭದಲ್ಲಿ. ವರ್ಷವಿಡೀ ತಾವು ಮಾಡಿಕೊಂಡ ಹರಕೆಗಳನ್ನು ಈ ಸಮಯದಲ್ಲಿ ತೀರಿಸುವುದನ್ನು ಕಾಣಬಹುದಾಗಿದೆ. ಪರಂಪರಾನುಗತವಾಗಿ ಸಾಗಿ ಬಂದ ಈ ಸುಗ್ಗಿ ಹಬ್ಬವನ್ನು ೧೨ನೆಯ ಶತಮಾನದಲ್ಲಿ ಶಿವಶರಣರು ಸುಗ್ಗಿಯನ್ನು ಕುರಿತು ಹೀಗೆ ಹೇಳುವರು.

ಇಳಿಹಾಳ ಬೊಮ್ಮಯ್ಯ, ಹೊಲಗೆಲಸ ಕಾಯಕವ
ನಲುಮೆಯಲಿ ಸುಗ್ಗಿ ದಾಸೋಹ ಹರಸೇವೆ
ಸಲಿಸಿ ಲಿಂಗದೊಳು ಬಯಲಾಗಿ[೧೨೫]

ಒಕ್ಕಲಿಗರಿಗೆ ಹೊಲ ಕೆಲಸವೇ ಕಾಯಕ. ಸುಗ್ಗಿಯೇ ದಾಸೋಹ. ರಾಶಿಯ ದಿನವೇ ಕೊನೆಯ ಆರಾಧನೆಯ ದಿನವಾಗಿತ್ತು.[೧೨೬] ಸುಗ್ಗಿಯ ದಿನದಂದು ಒಕ್ಕಲಿಗರು ರಾತ್ರಿ ಸಂದರ್ಭದಲ್ಲಿ ತಾವು ಕೃಷಿಯಲ್ಲಿ ಬಳಸಿದ ಸಲಕರಣೆಗಳನ್ನು ವಿವರಿಸುವ ಮೂಲಕ ಶಿವ ಗೋಷ್ಠಿಯನ್ನು ಮಾಡಿ ಹಾಡುತ್ತಿದ್ದರು. ಈ ಮೂಲಕ ಶಿವಾನುಭವವನ್ನು ಅರಿಯಲು ಪ್ರಯತ್ನಿಸುವ ಕಾಯಕವು ಶರಣರಲ್ಲಿ ಸುಗ್ಗಿ ಹಬ್ಬದ ಹಿನ್ನೆಲೆಯಲ್ಲಿ ಆಚರಿಸುವ ಕ್ರಮವಾಗಿತ್ತು. ಸುಗ್ಗಿಯ ಸಂದರ್ಭದಲ್ಲಿ ಜನರು ರಾಶಿಪೂಜೆ, ಗೂಡೆ ಪೂಜೆ ಹೀಗೆ ಸುಗ್ಗಿಗೆ ಬಳಸಿದ ಸಲಕರಣೆಯ ಪೂಜೆಗಳನ್ನು ಮಾಡುವ ಮೂಲಕ ಅವುಗಳಿಗೆ ಋಣಸಂದಾಯ ಮಾಡುತ್ತಾರೆ. ಕ್ರಿ.ಶ ೧೭–೧೮ನೆಯ ಶತಮಾನದಲ್ಲಿ ರಾಗಿಮರೂರು ಶಾಸನವೊಂದರಲ್ಲಿ ರಾಗಿಮರೂರು ಗ್ರಾಮದ ರಘುನಾಥರಾಯರಿಗೆ ರಾಗಿಯ ಪೂಜೆಗಂಧ ಪುಷ್ಪ...ಎಂದಿದೆ[೧೨೭] ಎಂದಿದೆ. ಇದರಿಂದ ರಾಗಿ ಪೂಜೆಯನ್ನು ಮಾಡುವ ಪದ್ಧತಿ ಇತ್ತೆಂದು ತಿಳಿಸುತ್ತದೆ. ಹೆಚ್ಚಾಗಿ ಕಣಸುಗ್ಗಿಯಲ್ಲಿ ರಾಗಿಯನ್ನೇ ರಾಶಿಮಾಡಿ ಪೂಜೆ ಮಾಡುವುದು ಇಂದಿಗೂ ಕಂಡುಬರುತ್ತದೆ. ಒಕ್ಕಲಿಗರು ರಾಗಿಯನ್ನು 'ಧಾನ್ಯಗಳ ರಾಜ' ಎಂದು ಕರೆಯುತ್ತಾರೆ. ಇದು ದುಡಿಯುವ ವರ್ಗಕ್ಕೆ ಸತ್ವಯುತ, ಗಟ್ಟಿಯಾದ ಆಹಾರ ಕ್ರಮವಾಗಿರುವುದರಿಂದ ಇದರ ಪರಂಪರೆಯ ಮೌಲ್ಯಗಳು ಹಿರಿದಾಗಿವೆ. ರಾಗಿಯ ಶ್ರೇಷ್ಠತೆಯನ್ನು ರಾಘವನು ಎತ್ತಿ ಹಿಡಿದುದನ್ನು ರಾಮಧಾನ್ಯ ಚರಿತೆ ಕೃತಿಯೂ ಸಹ ಚಿತ್ರಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಎಲ್ಲಾ ಧಾನ್ಯಗಳಿಗಿಂತ ಹೆಚ್ಚಿನ ರಾಗಿ ಆಚರಣೆಯ, ಆರಾಧನೆಯ ಕ್ರಮಗಳು ಹೆಚ್ಚಾಗಿರುತ್ತವೆ. ಜನಪದರು ಈ ಕುರಿತು ಹೀಗೆ ಹೇಳಿರುವರು.

ಕಾಡಕ್ಕಿ ಕುಣಿದಾಗ ಕಣವೇ ಓಲಗ

ಉದ್ದಿಗೆ ಎದ್ದಾಡಿದ ಕಣವೇ ಓಲಗ

ರಾಗಳ್ಳಿ ಬೆಟ್ಟ ಬೆಳ್ದಂಗೆ ಬೆಳೆಯೋ ಓಲಗ[೧೨೮]

ಈ ಹಾಡು ಕಣದಲ್ಲಿ ರಾಶಿಯ ಬಗೆಗೆ ವಿವರಿಸಿರುವುದನ್ನು ಗಮನಿಸಬಹುದಾಗಿದೆ. ಸಂಕ್ರಾಂತಿ ಹಬ್ಬವನ್ನು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಭಿನ್ನವಾಗಿ ಆಚರಿಸುವುದು ಕಂಡುಬರುತ್ತದೆ. ಮಂಡ್ಯ, ಮೈಸೂರು ಭಾಗಗಳಲ್ಲಿ 'ದನಗಳ ಮೆರವಣಿಗೆ, ದನ ಓಡಿಸುವುದು, ಕಿಚ್ಚು ಹಾಯಿಸುವುದು ಕಂಡುಬರುತ್ತದೆ.[೧೨೯] ಮಧ್ಯ ಕರ್ನಾಟಕದ ಭಾಗದಲ್ಲಿ ಎಳ್ಳು ಬೆಲ್ಲದ ಆಚರಣೆಯಾಗಿ ಕಂಡುಬರುತ್ತದೆ. ಉತ್ತರ ಕರ್ನಾಟಕದ ಭಾಗದಲ್ಲಿ ದನಗಳ ಜಾತ್ರೆಯು ನಡೆಯುತ್ತದೆ. ಈ ಸಂದರ್ಭದಲ್ಲಿ ದನಗಳ(ಎತ್ತುಗಳ) ಮಾರಾಟದಂತಹ ಕಾರ್ಯಗಳು ಜರುಗುತ್ತವೆ. ಈ ಹಬ್ಬವನ್ನು ಜಾನುವಾರು ಹಬ್ಬವಾಗಿಯೂ ಆಚರಿಸುವುದು ಕಂಡುಬರುತ್ತದೆ. ಕರಾವಳಿ ಕರ್ನಾಟಕದಲ್ಲಿ ಸುಗ್ಗಿ ಕಟ್ಟುವ ಸ್ಥಳವನ್ನು 'ಕರಿಕಣ' ಎಂದು ಕರೆಯುತ್ತಾರೆ.[೧೩೦] ಕರಿಕಣವೆಂದರೆ ಸುಮಾರು ಹತ್ತು ಅಡಿ ಎತ್ತರದಲ್ಲಿ ಚೌಕಾಕಾರದ ಚಪ್ಪರವನ್ನು ಹಾಕುತ್ತಾರೆ. ಮಧ್ಯದ ಕಂಬವನ್ನು 'ಸುರಗಿ ಕಂಬ' ಎನ್ನುವರು. ಇದಕ್ಕೆ ಹಲವಾರು ಟಿಸಿಲುಗಳಿದ್ದು, ಸುಗ್ಗಿ ಕುಣಿತದ ಸಲಕರಣೆಗಳನ್ನು ಈ ಟಿಸಿಲು(ಕೊಂಬೆ)ಗಳಿಗೆ ನೇತು ಹಾಕುತ್ತಾರೆ.[೧೩೧] ಈ ರೀತಿ ಕರಾವಳಿ ಕರ್ನಾಟಕದಲ್ಲಿ ಸುಗ್ಗಿಯನ್ನು ಸುಗ್ಗಿ ಕುಣಿತ ಎಂದು ಆಚರಿಸುವ ಕ್ರಮವಿದೆ. ರೈತರಿಗೆ ಧಾನ್ಯ ಸಂಗ್ರಹಣೆಯ ಈ ಕಾಲ ಹರ್ಷದಾಯಕವಾದದು. ಕೃಷಿ ಕಾರ್ಯಗಳು ಸಂಪೂರ್ಣ ಈ ವೇಳೆಗೆ ಕೊನೆಗೊಳ್ಳುವ ಹಿನ್ನೆಲೆಯಲ್ಲಿ ಇಂತಹ ಸಾಂಸ್ಕೃತಿಕ ಕಾರ್ಯಕ್ರಗಳನ್ನು ಆಚರಿಸುವುದು ಕಂಡುಬರುತ್ತದೆ.

ಶಾಸನಗಳಲ್ಲಿ ಸಂಕ್ರಾಂತಿಯ ಉಲ್ಲೇಖಗಳು ಹೇರಳವಾಗಿ ಕಂಡುಬರುತ್ತವೆ. ಅವುಗಳಲ್ಲಿ ವಿವಿಧ ರೂಪದ ಸಂಕ್ರಾಂತಿಗಳ ಉಲ್ಲೇಖವಿದ್ದು, ಆ ಸಂದರ್ಭದಲ್ಲಿ ದಾನ ನೀಡಿದಂತೆ ತಿಳಿಸಿವೆ. ಅವುಗಳನ್ನು ಈ ಕೆಳಗೆ ಉಲ್ಲೇಖಿಸಿದೆ. ಕ್ರಿ.ಶ ೯೭೨ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೩೨] ಕ್ರಿ.ಶ. ೧೦೭೪ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೩೩] ಕ್ರಿ.ಶ. ೧೦೪೮, ಕ್ರಿ.ಶ. ೧೧೦೩, ಕ್ರಿ.ಶ. ೧೧೮೨ ಮತ್ತು ಕ್ರಿ.ಶ. ೧೧೮೩ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೩೪] ಕ್ರಿ.ಶ ೧೧೭೮ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೩೫] ಕ್ರಿ.ಶ. ೧೧೪೮ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯಂದು ದಾನ ನೀಡಿದ ಉಲ್ಲೇಖವಿದೆ.[೧೩೬] ಕ್ರಿ.ಶ. ೧೧೪೯ರ ಶಾಸನವು ಉತ್ತರಾಯಣ ಸಂಕ್ರಾಂತಿಯನ್ನು ಉಲ್ಲೇಖಿಸುತ್ತದೆ.[೧೩೭] ಕ್ರಿ.ಶ. ೧೦೭೪ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೩೮] ಕ್ರಿ.ಶ. ೧೨೪೪ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೩೯] ಕ್ರಿ.ಶ. ೧೦೫೭ರ ಶಾಸನದಲ್ಲಿ ಚಂದ್ರಗ್ರಹಣ ಮೇಷ ಸಂಕ್ರಾಂತಿಯ ಉಲ್ಲೇಖವಿದೆ.[೧೪೦] ಕ್ರಿ.ಶ ೧೧೭೮ರ ಶಾಸನದಲ್ಲಿ ದಕ್ಷಿಣಾಯನ ಸಂಕ್ರಾಂತಿಯ ಉಲ್ಲೇಖವಿದೆ.[೧೪೧] ಕ್ರಿ.ಶ ೧೦೭೧ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೪೨] ಕ್ರಿ.ಶ ೧೩ನೆಯ ಶತಮಾನದ ಶಾಸನದಲ್ಲಿ ವೊಕ್ಕಲಲು ಚೈತ್ರಕ್ಕೆ ಬೇಳೆ ಪವಿತ್ರಕ್ಕೆ ಹಾಗ, ಸಂಕ್ರಮಣದಲು ಬೇಳೆಯನ್ನು ದೇವರಿಗೆ ದಾನವಾಗಿ ನೀಡಿದ ಉಲ್ಲೇಖವಿದೆ.[೧೪೩] ಕ್ರಿ.ಶ. ೧೦೧೪ರ ಶಾಸನದಲ್ಲಿ ಧನುರ್ ಸಂಕ್ರಾಂತಿಯ ಉಲ್ಲೇಖವಿದೆ.[೧೪೪] ಕ್ರಿ.ಶ. ೧೧೭೩ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೪೫] ಕ್ರಿ.ಶ. ೧೧೭೧ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯಂದು ಬ್ರಹ್ಮೇಶ್ವರ ದೇವರ ಬ್ರಹ್ಮರಾಶಿ ಜೀಯ್ಯರ್ಗ್ಗೆ ಗದ್ದೆ ದಾನ ನೀಡಿದ ಉಲ್ಲೇಖವಿದೆ.[೧೪೬] ಕ್ರಿ.ಶ. ೧೧೯೫-೯೬ರ ಶಾಸನದಲ್ಲಿ ಸೋಮವಾರ ಸಂಕ್ರಾಂತಿಯಲು ಬಿಟ್ಟಿದೇವ ಕಿಕ್ಕೇರಿಯ್ರ್ಯ ಮೂಲಸ್ಥಾನ ಬ್ರಹ್ಮೇಶ್ವರ ದೇವರ್ಗ್ಗೆ ಬಿಟ್ಟ ಗದ್ದೆ ಕಣ್ಡುಗ

೧೫ ಎಂದಿದೆ.[೧೪೭] ಕ್ರಿ.ಶ. ೧೧೧೩ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೪೮] ಕ್ರಿ.ಶ. ೧೧೪೦ರ ಶಾಸನದಲ್ಲಿ ಉತ್ತರ ಭಾದ್ರಪದ ತೊಲೆಯ ಸಂಕ್ರಮಣದ ಉಲ್ಲೇಖವಿದೆ.[೧೪೯] ಕ್ರಿ.ಶ. ೧೦೧೨ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೫೦] ಕ್ರಿ.ಶ. ೧೧೭೩ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೫೧] ಕ್ರಿ.ಶ. ೧೧೦೪ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೫೨] ಕ್ರಿಶ ೧೧೭೩ರ ಶಾಸನದಲ್ಲಿ ಬಲದೇವನಾಯಕರು ಸಂಕ್ರಾಂತಿ ತೋಟದ ಹೇಜೆಿನ ಬೀರವಣಮಂ ದೇವರ ನೈವೇದ್ಯಕ್ಕೆಂದು ಬಿಟ್ಟರು.[೧೫೩] ಕ್ರಿ.ಶ. ೧೧೭೪ರ ಶಾಸನದಲ್ಲಿ 'ಸೋಮವಾರ ಸಂಕ್ರಾಂತಿ ಕಮ್ಮಱಗೆಯಿ' ಉಲ್ಲೇಖವಿದೆ.[೧೫೪] ಕ್ರಿ.ಶ. ೧೧೭೯ರ ಶಾಸನದಲ್ಲಿ ಸಂಕ್ರಾಂತಿ ಬ್ಯತಿಪಾತ ಎಂದಿದೆ.[೧೫೫] ಇದೇ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿ 'ಬಳ್ಳ ಭತ್ತಯಂ' ಎಂದಿದೆ. ಕ್ರಿ.ಶ. ೧೨೦೭ರ ಶಾಸನದಲ್ಲಿ ಉತ್ತರಾಯಣ ಸಂಕ್ರಮಣದಲಾ ವೊಕ್ಕಲಲು ಹಾಗ ಎಂದಿದೆ.[೧೫೬] ಕ್ರಿ.ಶ. ೧೨೧೧ರ ಶಾಸನದಲ್ಲಿ ಸೋಮವಾರ ಬ್ಯತೀಪಾತ ಸಂಕ್ರಾಂತಿಯ ಉಲ್ಲೇಖವಿದೆ.[೧೫೭] ಕ್ರಿ.ಶ. ೧೧೫೮ರ ಸೋಮವಾರ ದಕ್ಷಿಣಾಯನ ಸಂಕ್ರಾಂತಿಯಂದು ಪಂಚಲಿಂಗ ದೇವರಂಗಭೋಗ ನಿವೇದ್ಯ ಮೊದಲಾದವುಗಳಿಗೆ ಅಱುವತ್ತೊಕ್ಕಲು ಒಕ್ಕಲಲ್ಲಿ ಬಣ್ಣಿಗೆಗೊಳಗ ೧ ಒಂದು ಹೊಱ ೧ ತೋಂಟಿಗರು ಒಕ್ಕಲಲ್ಲಿ ಚೈತ್ರಕ್ಕೆ ಪಾಗ ಹೊಱಗೆ ಅರೆವೀಸ ಮೊದಲಾದವುಗಳನ್ನು ಬಿಟ್ಟರು.[೧೫೮] ಕ್ರಿ.ಶ. ೧೨ನೆಯ ಶತಮಾನದ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯಂದು ದೇವರಿಗೆ ಅಡಕೆ ತೋಟ ೨ನ್ನು ದಾನ ಮಾಡಿರುವುದನ್ನು ತಿಳಿಸುತ್ತದೆ.[೧೫೯] ಕ್ರಿ.ಶ. ೧೦೫೦ರ ಶಾಸನದಲ್ಲಿ ದ್ವಿತೀಪಾತ ಉತ್ತರಾಯಣ ಸಂಕ್ರಾಂತಿ ಎಂದಿದೆ. ಇದರಲ್ಲಿ ಯಜ್ಜರಸನು ದಾನ ನೀಡಿದ ಉಲ್ಲೇಖವಿದೆ.[೧೬೦] ಕ್ರಿ.ಶ. ೧೧೧೧ರ ಶಾಸನದಲ್ಲಿ ಸೋಮವಾರ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೬೧] ಕ್ರಿಶ ೧೧೪೬ರ ಶಾಸನದಲ್ಲಿ ಸಂಕ್ರಾಂತಿಯ ಉಲ್ಲೇಖವಿದೆ.[೧೬೨] ಕ್ರಿ.ಶ. ೧೯೫ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೬೩] ಕ್ರಿ.ಶ. ೧೦೩೨ರ ಶಾಸನದಲ್ಲಿ ಮೀನ ಸಂಕ್ರಾಂತಿಯ ಉಲ್ಲೇಖವಿದೆ.[೧೬೪] ಕ್ರಿ.ಶ. ೧೦೬೫ರ ಶಾಸನದಲ್ಲಿ ಸೋಮವಾರ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೬೫] ಕ್ರಿ.ಶ. ೧೧೭೨ರ ಶಾಸನದಲ್ಲಿ ಕರ್ಕಾಟಕ ಸಂಕ್ರಾಂತಿಯ ಉಲ್ಲೇಖವಿದೆ.[೧೬೬] ಕ್ರಿ.ಶ. ೧೦೬೧ರ ಶಾಸನದಲ್ಲಿ ಸೋಮವಾರ, ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೬೭] ಕ್ರಿ.ಶ. ೧೯೯ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೬೮] ಕ್ರಿ.ಶ. ೧೧೨೦ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ. ಮಲೆ ಸಮ್ಮರ ದೇವರಿಗೆ ನೈವೇದ್ಯಕ್ಕೆ ಕಣನ ಎತಿನ ಭತ್ತ ಒಂದು ಕೊಟ್ಟ ಎಂದಿದೆ.[೧೬೯] ಈಸೂರಿನ ತ್ರಿಭುವನಮಲ್ಲನ ಕಾಲದ ಶಾಸನದಲ್ಲಿ ವಡ್ಡರಾವುಳದ ಸುಂಕಾದಿಧಿಷ್ಠಾಯಕಂ ದಂಡನಾಯಕ ಮಾದಿರಾಜನು ಉತ್ತರಾಯಣ ಸಂಕ್ರಾಂತಿಯಂದು ವಿಷ್ಣುದೇವರ್ಗ್ಗೆ ಅಡಕೆಯ ವಡ್ಡರಾವುಳದ ಸುಂಕ ಕಿಱುಕುಳಸುಂಕದೊಳಗೆ ಬಿಲ್ಕಡೆಯ ಎಲೆಯ ಹೇಜೆಿಂಗೆ ದವಸವನ್ದ ಧವಸಾಯ ಬಿಟ್ಟರೆಂದು ತಿಳಿಸುತ್ತದೆ.[೧೭೦] ಕ್ರಿ.ಶ. ೧೨೦೩ರ ಶಾಸನದಲ್ಲಿ ಉತ್ತರಾಯಣ ಸಂಕ್ರಾಂತಿಯಂದು ಶ್ರೀ ರಾಮನಾಥ ದೇವರ ನಿತ್ಯ ಪೂಜೆಗೆ ಆ ಸ್ಥಳದ ಎಲ್ಲ ತೋಟದ ಸುಂಕವನ್ನು ಬಿಟ್ಟರೆಂದಿದೆ.[೧೭೧] ಕ್ರಿ.ಶ. ೧೨೧೧ರ ಶಾಸನದಲ್ಲಿ ವ್ಯತೀಪಾತ ಉತ್ತರಾಯಣ ಸಂಕ್ರಾಂತಿಯ ಉಲ್ಲೇಖವಿದೆ.[೧೭೨] ಕ್ರಿ.ಶ. ೧೧೪೮ರ ಶಾಸನವು ಸೋಮವಾರ ಉತ್ತರಾಯಣ ಸಂಕ್ರಾಂತಿಯನ್ನು ಉಲ್ಲೇಖಿಸಿದೆ.[೧೭೩] ಕ್ರಿ.ಶ. ೧೨೪೦ರ ಶಾಸನದಲ್ಲಿ ಗ್ರಹಣ ಸಂಕ್ರಾಂತಿಯನ್ನು ಉಲ್ಲೇಖಿಸಿದೆ.[೧೭೪]

ಈ ರೀತಿ ವ್ಯತೀಪಾತ ಸಂಕ್ರಾಂತಿ, ಉತ್ತರಾಯಣ ಸಂಕ್ರಾಂತಿ, ಕರ್ಕಾಟಕ ಸಂಕ್ರಾಂತಿ, ಮೀನ ಸಂಕ್ರಾಂತಿ, ಉತ್ತರ ಭಾದ್ರಪದ, ತೊಲೆಯ ಸಂಕ್ರಾಂತಿ ಮೊದಲಾದ ರಾಶಿಗನುಗುಣವಾಗಿ

ಸಂಕ್ರಾಂತಿಗಳ ಉಲ್ಲೇಖಗಳು ಕಂಡುಬರುತ್ತವೆ. ಧನಧಾನ್ಯದ ಸಮೃದ್ಧಿಯನ್ನು ಬಲ್ಲಕುಂದೆಯ ಶಾಸನವೊಂದು ಹೀಗೆ ವರ್ಣಿಸಿದೆ.

ಪೊಲನೆಲ್ಲಂ ಗಂಧಶಾಲಿಪ್ರಕರ ಪರಿವೃತಂ, ನಂದನ ಶ್ರೇಣಿಯೆಲ್ಲಂ
ಫಳಭಾರಾನಮ್ರ ಚೂತಾವನಿಜವಳಯಿತುಂ, ದೀರ್ಘಕಾನೀಕ ಮೆಲ್ಲಂ।
ದಳಿತಾಂಭೋಜಾತ ರೇಣುಸ್ಥಗಿತ ಲಲಿತಮೂರೂರ್ಗಳೆಲ್ಲಂ ಪ್ರಜಾಸಂ
ಕುಳ ಗೋಧಾನ್ಯ ಪ್ರಕೀರ್ಣಾಂಚಿತಮೆನಲೆಸೆಗುಂ ಕುಂತಳೋರ್ವಿ ವಿಳಾಸಂ॥[೧೭೫]
ಬಳೆದು ಮಡಲ್ತ ಶಾಲಿವನದಿಂ,
ಬೆಳದಾಗಸಮಂ ತುಡುಕುತುಗಿಳಿಗಳ ಪಿಂಡಿನಿಂದೆಸೆವ ಕೆಯ್ವೊಲದಿಂ,
ಮುಗಿಲುದ್ದವಾಗಿ ಮೂ।
ವಳಿಸಿದ ಕೋಟೆಯಿಂ, ಧನದಧಾನ್ಯದ ಸೊಮ್ಮಿನ ಸೊಕ್ಕಿನಿಂದ ಮಾ
ರ್ಗಳದೊರೆ ನಮ್ಮೊಳೆಂಬ ಕುಡಿಯೊಕ್ಕಲ ಮಕ್ಕಳಿನೂರ್ಗಳೊಪ್ಪುಗುಂ॥[೧೭೬]

ಪ್ರಾಚೀನ ಕಾಲದಿಂದ ಜನರು ಈ ರೀತಿ ಧನಧಾನ್ಯ ಸೊಂಪಿನಿಂದ ಬಾಳುತ್ತಿರುವ ಉದಾಹರಣೆಯನ್ನು ಶಾಸನವು ಚಿತ್ರಿಸಿರುವುದು ಕಂಡುಬರುತ್ತದೆ. ಬೆಳೆಯ ಸಮೃದ್ಧಿ, ಬೆಳೆಕೊಯ್ಲು, ಧಾನ್ಯದ ಸಮೃದ್ಧಿಯನ್ನು ಶಾಸನವು ವಿವರಿಸಿದೆ. ಈ ಧನ ಧಾನ್ಯದ ಸಮೃದ್ಧಿಯು ಸುಗ್ಗಿಕಾಲದ ಸಂಕೇತವಾಗಿದೆ.

ಇಂದಿನ ಬದಲಾದ ಸನ್ನಿವೇಶದಲ್ಲಿ ಸುಗ್ಗಿ ಹಬ್ಬ ಕೃತಕಗೊಳ್ಳುತ್ತಿದೆ. ನಗರೀಕರಣದ ವಲಸೆ ಪ್ರವೃತ್ತಿಯಿಂದಾಗಿ ಹಳ್ಳಿಯ ಸೊಗಡು, ಆಚರಣೆಗಳು ಯಾಂತ್ರಿಕಗೊಳ್ಳುವ ಮೂಲಕ ಮರೆಯಾಗುತ್ತಿವೆ. ಸುಗ್ಗಿಗೆ ತಕ್ಕ ಪೈರುಗಳ ಸಮೃದ್ಧಿ ಇಂದು ಕಂಡುಬರುತ್ತಿಲ್ಲ. ಕೌಟುಂಬಿಕ ವಿಘಟನೆಯಿಂದಾಗಿ ಭೂಮಿ ತುಂಡಾಗಿ ಹೋಗಿದೆ. ಇದರಿಂದ ಸಾಮರಸ್ಯದ ಬದುಕು ಕಣ್ಮರೆಯಾಗುತ್ತಿದೆ. ಇದರಿಂದ ಸುಗ್ಗಿ ಹಬ್ಬವನ್ನು ಆಚರಿಸುವ ಸಾಮಾಜಿಕ ಮನೋವೃತ್ತಿ ಬದಲಾವಣೆಗೆ ಒಳಪಟ್ಟಿದೆ. ತಂತ್ರಜ್ಞಾನದ ಬಳಕೆಯಿಂದಾಗಿ ಸುಗ್ಗಿ ಮಾಡಲು ಬಳಸುತ್ತಿದ್ದ ರೋಣಗಲ್ಲು, ಅವುಗಳ ಪಟ್ಟೆ, ನೊಗ, ಎತ್ತು, ಮೆರೆ, ಗ್ವಾರೆ, ಹಲುಬೆ, ಬರ್ಲು ಮೊದಲಾದವುಗಳು ಮರೆಯಾಗುತ್ತಿವೆ. ಅಲ್ಲದೆ ಸುಗ್ಗಿ ಆಚರಿಸುವ ಕಣಗಳು ಮಾಯವಾಗಿ ಜನರು ಸುಗ್ಗಿ ಮಾಡಲು ರಸ್ತೆಗಿಳಿಯುತ್ತಿರುವುದು ಕಂಡುಬರುತ್ತಿದೆ. ಬೆದ್ದಲು ಭೂಮಿಗಳು ನೀರಾವರಿ ಭೂಮಿಗಳಾಗಿ ಹೆಚ್ಚಾಗಿ ಪರಿವರ್ತನೆಗೊಂಡಿರುವ ಈ ಹಿನ್ನೆಲೆಯಲ್ಲಿ ಆಹಾರ ಧಾನ್ಯಗಳನ್ನು ಬೆಳೆಯುವ ಕ್ರಮವೇ ವಿರಳಗೊಂಡಿದೆ. ಇದರಿಂದಾಗಿ ಸುಗ್ಗಿ ಹಬ್ಬ ನಿಧಾನವಾಗಿ ವಿಸ್ಮೃತಿಗೆ ಜಾರುತ್ತಿದೆ.

**ಶಿವರಾತ್ರಿ**

ಸಮಾಜದ ಜನರು ಆಚರಿಸುವಂತೆ ದೇವಾಲಯಗಳಲ್ಲಿ ಈ ಶಿವರಾತ್ರಿ ಹಬ್ಬವನ್ನು ಹೆಚ್ಚಾಗಿ ಆಚರಿಸಲಾಗುತ್ತದೆ. ಈ ಹಬ್ಬವು ಜನಸಮೂಹಕ್ಕಿಂತ ದೇವಾಲಯಗಳಲ್ಲಿ ವಿಜೃಂಭಣೆಯಿಂದ ಆಚರಣೆಗೊಳ್ಳುತ್ತದೆ. ಶಿವನನ್ನು ಕುರಿತು ಸತತ ಮೂರು ರಾತ್ರಿ ಆಚರಣೆಗೊಳ್ಳುವ ಹಬ್ಬವಿದು. ರಾತ್ರಿ ಪೂರ್ತಿ ಜಾಗರಣೆ ಮಾಡುವ ಹಬ್ಬವಿದು. ಈ ಹಿನ್ನೆಲೆಯಲ್ಲಿ ದೇವಾಲಯಗಳಿಗೆ ದಾನವನ್ನು ನೀಡುವುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಶಿವರಾತ್ರಿಯ ದಿನ ಶಿವನು ಧ್ಯಾನದಲ್ಲಿ ಕುಳಿತಿರುತ್ತಾನೆ. ಈ ದಿನಗಳಲ್ಲಿ ಮರಣಿಸಿದವರಿಗೆ ಸ್ವರ್ಗ ಲಭಿಸುತ್ತದೆ ಎಂಬ ನಂಬಿಕೆಯಿದೆ.

ಶಿವರಾತ್ರಿಯ ದಿನಗಳಲ್ಲಿ ಶಿವನು ಧ್ಯಾನಕ್ಕೆ ಕುಳಿತಿರುವಾಗ ಅವನ ಧ್ಯಾನದ ಸ್ಥಳದ ಬಾಗಿಲು ತೆರೆದಿರುತ್ತದೆ. ಭಕ್ತಿಯಿಂದ ಮರಣವಪ್ಪಿದ ಜನರನ್ನು ತನ್ನ ಬಳಿ ಕರೆದುಕೊಳ್ಳುತ್ತಾನೆ, ಅಪ್ಪಿಕೊಳ್ಳುತ್ತಾನೆ ಎಂಬ ನಂಬಿಕೆ ಜನರಲ್ಲಿದೆ. ಈ ದಿನ ಜನರು ಒಂದೊತ್ತು, ಉಪವಾಸಗಳಂತಹ ವ್ರತಗಳನ್ನು ಮಾಡುವ ಮೂಲಕ ಇಡೀ ರಾತ್ರಿ ಜಾಗರಣೆ, ಭಜನೆಗಳ ಮೂಲಕ ದೇವಾಲಯಗಳಲ್ಲಿ ವ್ರತಗಳನ್ನು ಆಚರಿಸುವ ಪದ್ಧತಿ ರೂಢಿಯಲ್ಲಿದೆ.

ಕೃಷಿ ಸಂಬಂಧಿಯಾಗಿಯೂ ಈ ಹಬ್ಬವನ್ನು ಆಚರಿಸಲಾಗುತ್ತದೆ. ಕೃಷಿಕರಿಗೆ ಸುಗ್ಗಿಯ ದಿನಗಳನ್ನು ಅಂತ್ಯಗೊಳಿಸುವ ಹಬ್ಬವಿದು. 'ಶಿವರಾತ್ರಿಗೆ ಗಾಳಿಯು ಶಿವ ಶಿವ ಎಂದು ಹೋಗುತ್ತದೆ' ಎಂಬ ಮಾತು ಜನರು ರೂಢಿಯಿಂದ ಮಾತನಾಡುವುದಿದೆ. ಗಾಳಿಗೂ, ಕೃಷಿಗೂ ಏನು ಸಂಬಂಧವಿದೆ ಎಂಬ ಅಂಶವನ್ನು ಇಲ್ಲಿ ಗಮನಿಸುವ ಅಗತ್ಯವಿದೆ. ಸುಗ್ಗಿ ಆಚರಿಸಲು ಗಾಳಿಯ ಮಹತ್ವ ಹಿರಿದಾದುದು. ಕಣಗಳಲ್ಲಿ ತುಳಿಸಿದ ಧಾನ್ಯಗಳನ್ನು ಸ್ವಚ್ಛಗೊಳಿಸಲು ಮೊರಗಳನ್ನು ಬಳಸಿ ಅದರಿಂದ ತೂರುತ್ತಾರೆ. ಈ ಸಂದರ್ಭದಲ್ಲಿ ಗಾಳಿಯಿದ್ದರೆ ಮಾತ್ರ ತೂರಲು ಸಾಧ್ಯ. ಗಾಳಿಯು ಕಸ ಕಡ್ಡಿಗಳನ್ನು ಮುಂದಕ್ಕೆ ಕೊಂಡೊಯ್ದು ಧಾನ್ಯಗಳನ್ನು ಧೂಳಿನಿಂದ ಬೇರ್ಪಡಿಸುತ್ತದೆ. ಧಾನ್ಯಗಳು ಹಿಂದೆ ಉಳಿಯುತ್ತವೆ. ಈ ಹಿನ್ನೆಲೆಯಲ್ಲಿ ಕೃಷಿಯ ಸುಗ್ಗಿ ಬದುಕಿಗೆ ಗಾಳಿಯು ಅನಿವಾರ್ಯತೆಯ ಮೂಲಕ ಮಹತ್ವ ಪಡೆದುಕೊಂಡಿದೆ.

ಶಿವರಾತ್ರಿ ವೇಳೆಗೆ ಸುಗ್ಗಿಯ ಬದುಕು ಮುಗಿಸಿದ ರೈತರು ಧಾನ್ಯಗಳನ್ನು ಸಂಗ್ರಹಿಸಿದ ಸಂತಸದಲ್ಲಿರುವುದು ಒಂದು ಕಡೆ. ಈ ಅವಧಿ ಮುಗಿಸಲು ಗಾಳಿಯು ಒಂದು ಕಾರಣವಾದರೆ, ಶಿವರಾತ್ರಿ ಮುಗಿದ ಹದಿನೈದು ದಿನಗಳಿಗೆ ಹೋಳಿ ಹುಣ್ಣಿಮೆ ಬರುತ್ತದೆ. ಈ ಹೋಳಿ ಹುಣ್ಣಿಮೆಗೆ 'ಹೋಣಿ ಎಲ್ಲ ನೀರು' ಎಂದು ಮಳೆ ಪ್ರಾರಂಭವಾಗುತ್ತದೆ. ಈ ಅವಧಿಗೆ ಕಣಗಡಕ ಮತ್ತು ಬೆದೆಗಡುಕ ಎಂಬ ಮಳೆಗಳು ಬರುವುದರಿಂದ ಮಳೆ ಪ್ರಾರಂಭವಾದರೆ ಸುಗ್ಗಿಗೆ ತೊಂದರೆ ಉಂಟಾಗುತ್ತದೆ. ಮಳೆ ನೀರಿಗೆ ಹುಲ್ಲು ಮತ್ತು ಧಾನ್ಯಗಳು ನೆನೆಯುವುದರಿಂದ ಹುಲ್ಲು ದನಕರುಗಳಿಗೆ ತಿನ್ನಲು ಬಾರದಂತೆ ಮುಗ್ಗು ಹಿಡಿಯುತ್ತದೆ. ಹೋಳಿ ಹಬ್ಬಕ್ಕೆ ಮಳೆ ಬರುವ ಸಾಧ್ಯತೆ ಹೆಚ್ಚಿರುವುದರಿಂದ ಈ ಅವಧಿಗೆ ಬಣವೆ ಹೊಟ್ಟುವ ಕಾರ್ಯವನ್ನು ಪೂರ್ಣಗೊಳಿಸಬೇಕು. ಅದರಂತೆ ಧಾನ್ಯಗಳು ಮುಗ್ಗು ಹಿಡಿದು ಆಹಾರಕ್ಕೂ ಮತ್ತು ಮಾರಾಟಕ್ಕೂ ಯೋಗ್ಯವಲ್ಲದ ಸ್ಥಿತಿ ನಿರ್ಮಾಣಗೊಳ್ಳುತ್ತದೆ. ಈ ಕಾರಣದಿಂದಾಗಿ ಸುಗ್ಗಿಯ ಬದುಕು ಶಿವರಾತ್ರಿಗೆ ಅಂತ್ಯಗೊಳ್ಳುತ್ತದೆ. ಅಲ್ಲದೆ ಈ ಅವಧಿಯಲ್ಲಿ ರೈತರು ಸುಗ್ಗಿಕಾರ್ಯಗಳನ್ನು ಮುಗಿಸಿ ನೆಮ್ಮದಿಯಿಂದಿರುತ್ತಾರೆ. ಜೊತೆಗೆ ಪ್ರಕೃತಿಯಲ್ಲಿ ಬಿಸಿಲಿನ ತಾಪಮಾನವು ಹೆಚ್ಚಾಗಿರುತ್ತದೆ. ಜನರು ಹೆಚ್ಚು ಊಟಮಾಡಿದರೆ ಹೊಟ್ಟೆಯ ಸಮಸ್ಯೆಯಿಂದ ಬಳಲುತ್ತಾರೆ. ತಾಪಮಾನದ ಏರಿಕೆಯಿಂದಾಗಿ ರಾತ್ರಿ ಇಡೀ ನಿದ್ದೆಬಾರದ ಸ್ಥಿತಿಯೂ ನಿರ್ಮಾಣವಾಗುತ್ತದೆ. ಈ ಹಿನ್ನೆಲೆಯಲ್ಲಿ ಉಪವಾಸ, ಜಾಗರಣೆಯಂತಹ ಆಚರಣೆಗಳಲ್ಲಿ ಮಜ್ಜಿಗೆ ಎಳನೀರು, ಹಣ್ಣು ಫಲಹಾರದ ದಿನವೆಂದೇ ಆಚರಿಸಲಾಗುತ್ತದೆ. ಪ್ರಕೃತಿಯಲ್ಲಾಗುವ ಹವಾಮಾನದ ಏರಿಕೆಯಿಂದಾಗಿ ಪರಿಹಾರ ಕಂಡುಕೊಳ್ಳುವ ಹಿನ್ನೆಲೆಯ ಒಂದು ಭಾಗವಾಗಿ ಶಿವರಾತ್ರಿ ಹಬ್ಬದಂತಹ ಆಚರಣೆಗಳು ಬೆಳೆದುಬಂದಿರುವ ಸಾಧ್ಯತೆಗಳಿವೆ. ಪ್ರಕೃತಿಯೂ ಈ ಹವಾಮಾನಕ್ಕೆ ಪೂರಕವಾಗಿ ಕಲ್ಲಂಗಡಿ, ಕರ್ಬೂಜ, ಎಳನೀರು ಇಂತಹ ತಂಪಾದ ಫಲಭಕ್ಷ್ಯ ಬೆಳೆಯ ಮೂಲಕ ಕೊಡುಗೆ ನೀಡಿರುವುದು ಕಂಡುಬರುತ್ತದೆ. ಹಿಂದುಗಳು ಶಿವರಾತ್ರಿಯೆಂದು ಆಚರಿಸಿದರೆ ಜೈನರು ಈ ಹಬ್ಬವನ್ನು ಜಿನರಾತ್ರಿ ಎಂದು ಆಚರಿಸುತ್ತಾರೆ.

ಶಾಸನಗಳು ಈ ಹಬ್ಬದಂದು ದಾನನೀಡಿರುವುದನ್ನು ತಿಳಿಸಿವೆ. ಕ್ರಿ.ಶ. ೧೨೩೪ರ ಶಾಸನದಲ್ಲಿ ಶಿವರಾತ್ರಿಯ ಉಲ್ಲೇಖವಿದೆ.[೧೭೭] ಕ್ರಿ.ಶ. ೧೧೮೦ರ ಶಾಸನದಲ್ಲಿ ಖಾಂಡೆಯ ಮಾರ್ಕಂಡೇಶ್ವರ ದೇವರ ಶ್ರೀ ಕಾರ್ಯಕ್ಕೆ ಸಿದ್ಧಾಯದ ಗದ್ಯಾಣದಲ್ಲಿ ಹಣದಲ್ಯೆವತ್ತು...ಶಿವರಾತ್ರಿಯ ಪರ್ವ್ವದಿಂದಿನ ಮಾಲೆ ದೀವಿಗೆ... ಶಿವರಾತ್ರಿಯ ಪರ್ವ್ವದಲು ಆದಿಶೇಷ ಮಹಾಜನಂಗಳು ದಿನಮಾಲೆ ಸೆಡರೆಂಣೆ ಎಂದಿದೆ.[೧೭೮] ಕ್ರಿ.ಶ. ೧೩ನೆಯ ಶತಮಾದ ಶಾಸನದಲ್ಲಿ ಶಿವರಾತ್ರಿಯ ಮಹಾ ನಿವೇದ್ಯಕೆ ಅಕ್ಕಿ ಹಾಗ ೪ರ ಉಲ್ಲೇಖವಿದೆ.[೧೭೯] ಕ್ರಿ.ಶ. ೧೯೪ನೆಯ ಶತಮಾನದ ಶಾಸನದಲ್ಲಿ ಸೋಮವಾರ ಶಿವರಾತ್ರಿಯ ಉಲ್ಲೇಖವಿದೆ.[೧೮೦] ಕ್ರಿ.ಶ. ೧೧೧೧ರ ಶಾಸನದಲ್ಲಿ ಕ್ರಿಷ್ಣ ಪಕ್ಷ ಸಿವರಾತ್ರಿ ಸೋಮವಾರದ ಉಲ್ಲೇಖವಿದೆ.[೧೮೧] ಈ ಹಬ್ಬವು ಅಮವಾಸೆಯ ದಿನದಂದು ಆಚರಿಸುವುದು ಕಂಡುಬರುತ್ತದೆ. ಕ್ರಿ.ಶ. ೧೨೮೫ರ ಶಾಸನದಲ್ಲಿ ಶಿವರಾತ್ರೆಯ ಮಾಯಿದೇವರಿಗೆ ಗೋಪೆಯ ಶಿವದೇವರ ಮಗ ಶಿವಶರಣ.........ಕ್ರಯಪತ್ರವ ಬರೆದುಕೊಟ್ಟಕ್ರಮವೆಂತೆಂದಡೆ ಚತುಸ್ಸೀಮೆಗೆ ಸಲುವ ಹೂದೋಟವನ್ನು ಬಿಟ್ಟಂತೆ ತಿಳಿಸಿದೆ.[೧೮೨] ಕ್ರಿ.ಶ. ೧೨೯೧ರ ಶಾಸನದಲ್ಲಿ ಸಿವರಾತ್ರಿಯಲು ದೇವರುಗಳ ವುಪ್ಪಾರ ದೀವಿಗೆಯಯೆಂಣ್ಣೆಗೆ ಪ೨ ಎಂದಿದೆ.[೧೮೩] ಕ್ರಿ.ಶ. ೧೨೬೫ರ ಶಾಸನವೊಂದರಲ್ಲಿ ಸಿವರಾತ್ರೆಗೆ ಗದ್ದೆ ಭೂಮಿಯ ಉಳುಮೆ ಮಾಡಿದುದಕ್ಕೆ ಸಿದ್ಧಾಯವನಿಕ್ಕಬೇಕೆಂದು ತಿಳಿಸಿದೆ.[೧೮೪] ಕ್ರಿ.ಶ. ೧೨೪೦ರ ಶಾಸನದಲ್ಲಿ ಶಿವರಾತ್ರಿಯ ಬೀಯದ ಉಲ್ಲೇಖವಿದೆ.[೧೮೫]

ಶಿವರಾತ್ರಿ ಹಬ್ಬದ ಸಮಯದಲ್ಲಿ ದೇವರ ಪೂಜೆಗೆ ಹೂತೋಟ ದಾನ, ದೀಪಗಳಿಗೆ ಎಣ್ಣೆ ನೈವೇದ್ಯಕ್ಕೆ ಅಕ್ಕಿ ದಾನ ನೀಡಿರುವುದು ಕಂಡುಬಂದಿದೆ. ಸುಗ್ಗಿಯ ಮುಕ್ತಾಯದ ದಿನವಾದುದರಿಂದ ಭೂಮಿಯಲ್ಲಿ ಉಳುಮೆಮಾಡುವವರು ಬೆಳೆಯ ಸಿದ್ಧಾಯವನ್ನು, ಕೆಲವು ತೆರಿಗೆಯನ್ನು ಈ ಹಬ್ಬಕ್ಕೆ ನೀಡಿರುವುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಇಂದು ಶಿವರಾತ್ರಿ ಹಬ್ಬದ ಧಾರ್ಮಿಕ ಆಚರಣೆಗಳು ವಿರಳವಾಗುತ್ತಿವೆ. ಪ್ರಕೃತಿಯಲ್ಲಿನ ತಾಪಮಾನದ ಏರಿಕೆಗೆ ಆಧುನಿಕ ತಂತ್ರಜ್ಞಾನದ ಮೂಲಕ ಏರ್‌ಕಂಡಿಷನರ್, ಏರ್‌ಕೂಲರ್, ಫ್ಯಾನುಗಳು ಮನರಂಜನಾ ಮಾಧ್ಯಮಗಳ ಮೂಲಕ ಪರ್ಯಾಯಗಳನ್ನು ಕಂಡುಕೊಂಡು ಜನರು ಯಾಂತ್ರಿಕ ಸಂಸ್ಕೃತಿಗೆ ಮಾರು ಹೋಗುತ್ತಿರುವುದರಿಂದ ಧಾರ್ಮಿಕ ಸಂಸ್ಕೃತಿಗೆ ಪೆಟ್ಟು ಬೀಳುತ್ತಿದೆ.

**ಸೋಮವಾರ**

ಶಾಸನಗಳಲ್ಲಿ ಉಳಿದ ವಾರಗಳಿಗಿಂತ ಹೆಚ್ಚಾಗಿ ಸೋಮವಾರದ ಉಲ್ಲೇಖಗಳು ಬರುತ್ತವೆ. ಮತ್ತು ಈ ದಿನದಂದು ದಾನಕೊಟ್ಟಿರುವವರ ಸಂಖ್ಯೆಯೂ ಹೆಚ್ಚಾಗಿ ಕಂಡುಬರುತ್ತದೆ. ಸೋಮವಾರವನ್ನು ಕೃಷಿಕರ ಬಿಡುವಿನ ದಿನವನ್ನಾಗಿ ಘೋಷಿಸಲಾಗಿದೆ. ವಾರವಿಡೀ ದುಡಿಯುವ ಎತ್ತುಗಳನ್ನು ಅಂದು ಬೇಸಾಯ ಹೂಡದೆ ವಿಶ್ರಾಂತಿಯಿಂದರಲು ಬಿಡುವರು. ಅದರಂತೆ ಕೃಷಿಕರಿಗೂ ಬಿಡುವಿನ ದಿನ. ಈ ಬಿಡುವಿನ ಸಂದರ್ಭದಲ್ಲಿ ರೈತರ ಸಮಯವನ್ನು ಹಾಳುಮಾಡಬಾರದೆಂಬ ಹಿನ್ನೆಲೆಯಲ್ಲಿ ರಾಜ ಅಥವಾ ಅಧಿಕಾರಿವರ್ಗ ಮೊದಲಾದವರು ದಾನ ನೀಡುವಾಗ ಕೃಷಿಕ ಸಮುದಾಯದ ಸಮ್ಮುಖದಲ್ಲಿ ದಾನ ನೀಡಿರುವ ಸಾಧ್ಯತೆಗಳಿವೆ. ಬಸವಣ್ಣನಿಗೆ ಪೂಜೆ ಸಲ್ಲಿಸುವ ಈ ವಾರದಂದು ಭೂದಾನ ಮಾಡಿದರೆ ಶ್ರೇಯಸ್ಸುಂಟಾಗುತ್ತದೆ ಎಂಬ ನಂಬಿಕೆಯಿಂದ ಈ ವಾರದ ದಿನದಂದು ದಾನಗಳನ್ನು ಮಾಡಿರುವಂತಿದೆ. ಅಲ್ಲದೆ ದಾನದ ಭೂಮಿಯನ್ನು ಉಳುಮೆ ಮಾಡುವವರು ರೈತರೇ ಆಗಿರುವುದು ಮತ್ತೊಂದು ಕಾರಣವಿದ್ದಿರುವ ಸಾಧ್ಯತೆಗಳಿವೆ.

ಕ್ರಿ.ಶ. ೧೨೮೨ರ ಶಾಸನದಲ್ಲಿ ಸೋಮವಾರದ ಉಲ್ಲೇಖವಿದೆ.[೧೮೬] ಕ್ರಿ.ಶ. ೧೧೫೦ರ ಶಾಸನದಲ್ಲಿ ಸೋಮವಾರ ಸೂರ್ಯಗ್ರಹಣದ ಉಲ್ಲೇಖವಿದೆ.[೧೮೭] ಕ್ರಿ.ಶ. ೧೯೮ರ ಶಾಸನವು

ಸೋಮವಾರವನ್ನು ಉಲ್ಲೇಖಿಸಿದೆ.[೧೮೮] ಕ್ರಿ.ಶ. ೧೧೮೮ರ ಶಾಸನದಲ್ಲಿ ಸೋಮವಾರದ ಉಲ್ಲೇಖವಿದೆ.[೧೮೯] ಕ್ರಿ.ಶ. ೧೨೧೫ರ ಶಾಸನದಲ್ಲಿ ಚಂದ್ರಗ್ರಹಣ ಸೋಮವಾರದ ಉಲ್ಲೇಖವಿದೆ.[೧೯೦] ಕ್ರಿ.ಶ. ೧೧೭೬ರ ಶಾಸನದಲ್ಲಿ ಸೋಮವಾರದ ಉಲ್ಲೇಖವಿದೆ.[೧೯೧] ಕ್ರಿ.ಶ. ೧೧೭೩ ಮತ್ತು ಕ್ರಿ.ಶ. ೧೧೪೯ರ ಶಾಸನಗಳು ಸೋಮವಾರವನ್ನು ಉಲ್ಲೇಖಿಸಿವೆ.[೧೯೨] ಕ್ರಿ.ಶ. ೧೧೯೯ರ ಶಾಸನದಲ್ಲಿ ಸೋಮವಾರದ ಉಲ್ಲೇಖವಿದೆ.[೧೯೩] ಕ್ರಿ.ಶ. ೧೧೦೭ರ ಶಾಸನದಲ್ಲಿ ಸೋಮವಾರ ಸೂರ್ಯಗ್ರಹಣದ ಉಲ್ಲೇಖವಿದೆ.[೧೯೪] ಹೀಗೆ ಸೋಮವಾರ, ಸಂಕ್ರಾಂತಿ, ಚಂದ್ರಗ್ರಹಣ, ಸೂರ್ಯಗ್ರಹಣದಂದು ಹೆಚ್ಚಾಗಿ ದಾನ ನೀಡಿರುವ ಉಲ್ಲೇಖಗಳು ಕಂಡುಬರುತ್ತವೆ. ಈ ದಿನಗಳಲ್ಲಿ ಭೂದಾನ ಮತ್ತು ಇತರೆ ದಾನ ಮಾಡುವುದು ಶ್ರೇಯಸ್ಕರ ಎಂಬ ಭಾವನೆಯಿಂದ ಈ ಸಂದರ್ಭದ ದಾನಗಳು ಹೆಚ್ಚಾಗಿರುವ ಸಾಧ್ಯತೆಗಳಿವೆ.

**ಬಾದುಬ್ಬೆ**

ನಂಬಿಕೆ, ಆಚರಣೆಗಳಿಗೆ ಮೂಲ ಮತ್ತು ತಾಯಿ ಬೇರು ಹಳ್ಳಿಗಳಾಗಿವೆ. ಹಳ್ಳಿ ಅಥವಾ ಗ್ರಾಮಗಳಲ್ಲಿ ಪ್ರತಿ ಊರಿಗೊಂದು ಗ್ರಾಮ ದೇವತೆ ಇರುತ್ತದೆ. ಇದು ಊರಿನ ಜನರನ್ನು ಸಂರಕ್ಷಿಸುವ ಹೊಣೆಗಾರಿಕೆ ಹೊಂದಿರುತ್ತದೆ ಎಂಬುದು ಜನರ ನಂಬಿಕೆಯಾಗಿದೆ. ಗ್ರಾಮ ದೇವತೆಗಳಿಗೆ ಸಂಬಂಧಿಸಿದ ಆಚರಣೆಗಳು ಹೆಚ್ಚಾಗಿ ಜನಪದ ಸಾಹಿತ್ಯ ಮೊದಲಾದವುಗಳಲ್ಲಿ ಮಿಳಿತಗೊಂಡಿದೆ. ಅಪರೂಪವೆಂಬಂತೆ ಶಾಸನಗಳಲ್ಲಿ ಬಾದುಬ್ಬೆಯ ಉಲ್ಲೇಖ ಕಂಡುಬರುತ್ತದೆ. ಚಿದಾನಂದಮೂರ್ತಿಯವರು ಅಬ್ಬೆ-ಅಮ್ಮ-ಬಾದುಬ್ಬೆ ಎಂದು ಬಳಸಿರುವರು. ಬಾದಮ್ಮ, ಭಳಾರಿ ಚೋದುಂಬೆ, ಬಾದುಬ್ಬೆಯ ಪರ್ವ, ಬಾದುವೆ, ಬಾದುವಯ್ಯ, ಬಾದುಂಬೆ ಎಂಬ ಕೆರೆಯ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ.[೧೯೫]

ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಕಂದಲಿ ಗ್ರಾಮದ ಕ್ರಿ.ಶ. ೧೦೫೦ರ ಶಾಸನದಲ್ಲಿ ಎಡಹಳ್ಳಿ ಗಾಲಯ್ಯ[ನಣು]ಗ ಮಾರಯ್ಯ ಮಾಡಿಸಿದಂ ಕನ್ನಲೆಯಲು ಬಾದುಬ್ಬೆಯಂ[೧೯೬] ಎಂದಿದೆ. ಬರ್ಮಗಾವುಂಡ ಬಾದುಂಬೆಯ ಪ್ರತಿಷ್ಠೆಯ ಮಾಡಿಸಿದ ಎಂದು ಬಾಳೂರು ಶಾಸನವು ತಿಳಿಸುತ್ತದೆ.[೧೯೭] ಉತ್ತರ ಕರ್ನಾಟಕದಲ್ಲಿ ಬಾದುಂಬೆಯನ್ನು ಗಜಲಕ್ಷ್ಮೀ, ಸೀಮೆ ಲಕ್ಕವ್ವ ಎಂದು ಆಚರಿಸುವುದರಿಂದ ಲಕ್ಕವ್ವ, ಲಕ್ಷ್ಮಿ ಇರಬಹುದೆಂದು ಡಾ.ಗುರವ ಊಹಿಸಿದ್ದಾರೆ.[೧೯೮] ಇದನ್ನು ಗಮನಿಸಿದರೆ ಯಾವ ಗ್ರಾಮದೇವತೆಗೂ ಅದರಲ್ಲೂ, ಶಾಸನಗಳಲ್ಲಿ ಉಲ್ಲೇಖಿತ ದಾಖಲೆಯ ಪ್ರಕಾರ ಬಾದುಂಬೆಗೆ ಅಧಿಕಾರಿವರ್ಗದಿಂದ ಸಿಕ್ಕ ಮನ್ನಣೆ ಮತ್ತಾವ ಗ್ರಾಮದೇವತೆಗೂ ಸಿಕ್ಕಿರುವುದು ವಿರಳವಾಗಿ ಕಂಡುಬರುತ್ತದೆ. 'ಪಿ.ಬಿ.ದೇಸಾಯಿಯವರು ವಸಂತಾಂಬೆ ಎಂದು, ಡಿ.ಎಲ್.ನರಸಿಂಹಾಚಾರ್ ಅವರು ಭದ್ರಾಂಬಾ ಎಂದು, ಚಿದಾನಂದಮೂರ್ತಿಯವರು ರೈತರು ಬಾಡುಬ್ಬೆಯ ಎಂದಿದ್ದು, ಬಾದುಬ್ಬೆ ಎಂದಿರಬೇಕು.[೧೯೯] ಬಾಡುಬ್ಬೆಗೆ ಹರಸಿಕೊಳ್ಳುತ್ತಿದ್ದ ಸಂಪ್ರದಾಯವೊಂದನ್ನು ೧೨ನೆಯ ಶತಮಾನದ ಬ್ರಹ್ಮಶಿವನು ಹೆಸರಿಸುತ್ತಾನೆ. ಈ ಸಸ್ಯಾಧಿ ದೇವತೆಯಾದ ಬಾದುಬ್ಬೆಯೂ ವನದೇವತೆ ಬನದಬ್ಬೆಯೂ (ಬನಶಂಕರಿ) ಒಂದೇ ಎಂದಿದ್ದಾರೆ.[೨೦೦] ಬಾಡುಬ್ಬೆಯು ಬಾಡು=ಗ್ರಾಮ, ಅಬ್ಬೆ=ತಾಯಿ ಎಂದು ಬಾದುಬ್ಬೆಗೆ ಇರುವ ಬಾಡುಬ್ಬೆ ಎಂಬ ಪಾಠಾಂತರವನ್ನು ಆರ್.ಎಸ್.ಗುರುವ ಅವರು ಅದೇ ಮೂಲ ಪಾಠವಾಗಿದೆ ಎಂದಿದ್ದಾರೆ.[೨೦೧] ಶಾಸನಗಳಲ್ಲಿ ಬಾದುಬ್ಬೆಗೆ ಸಂಬಂಧಿಸಿದ ಉಲ್ಲೇಖಗಳು ಈ ಕೆಳಗಿನಂತಿವೆ.

ಕ್ರಿ.ಶ. ೧೦೦೭ರ ಶಾಸನದಲ್ಲಿ ಬಾದುಬೆಯ ಉಲ್ಲೇಖವಿದೆ.[೨೦೨] ಕ್ರಿ.ಶ. ೧೦೬೮ರ ಶಾಸನದಲ್ಲಿ ಮಾರೇಶ್ವರ ದೇವರಿಗೆ ಗದ್ದೆ ಮತ್ತು ತೋಟನ್ನು ಸೂಳೆವಾಳ ಮಾರಮಯ್ಯನು ವನದ

ಪರ್ವ್ವನಿಮಿತ್ತಂದಿಂದ ಕೊಟ್ಟನೆಂದಿದೆ.[೨೦೩] ಬಾಗಳಿಯ ರಾಷ್ಟ್ರಕೂಟ ದೊರೆ ಇಂದ್ರವಲ್ಲಭನ ಶಾಸನದಲ್ಲಿ ಬಾದಮ್ಮೆಗೆ ಬೂದೆಗೊವಿನಿತ್ತೂರ್ ಕೆಱೆಗೆಕೊಟ್ಟಂನಿದನಯ್ವದಿಮ್ಬರುಂ ಸಲಿಸುವೋರ್ಬ್ಬಹಸ್ಪತಿ ಕಮ್ಬದೊಳಿರೆ ಪಡೆದೊಂ[೨೦೪] ಎಂದಿದೆ. ಕ್ರಿ.ಶ ೧೨೯೮ರ ಶಾಸನದಲ್ಲಿ ಬಾದುಂಬೆಯ ಕಟ್ಟೆಯು'[೨೦೫] ಎಂದಿದೆ. ಕ್ರಿ.ಶ ೧೧೪೩ರ ಶಾಸನದಲ್ಲಿ 'ಬಾದಮ್ಮೆಯದಮ್ಮವನು'[೨೦೬] ಎಂದಿದೆ. ಬಾದುಬೆಯ ಬಗೆಗೆ ವಿದ್ವಾಂಸರಲ್ಲಿ ಒಮ್ಮತ ಅಭಿಪ್ರಾಯ ಕಂಡುಬರುವುದಿಲ್ಲ. ಇದು ಗ್ರಾಮದೇವತೆಗೆ ಸಂಬಂಧಿಸಿದೆಯೋ, ವ್ಯಕ್ತಿಗೆ ಸಂಬಂಧಿಸಿದೆಯೋ ಎಂಬ ಗೊಂದಲಗಳಿಂದ ತುಂಬಿದೆ. ಅದೇನಿದ್ದರೂ ಇದೊಂದು ದೇವತೆಯಾಗಿರುವ ಸಾಧ್ಯತೆಗಳಿರುವಂತಿದೆ. ಎಲ್ಲಕ್ಕಿಂತ ಹೆಚ್ಚಾಗಿ ಬಾದುಬೆ ಎಂಬುದು ಹಬ್ಬವಾಗಿ ಆಚರಿಸಲ್ಪಡುತ್ತಿತ್ತು ಎಂಬುದು ಸ್ಪಷ್ಟ. ಇದು ಜೈನರಲ್ಲಿಯೂ ಆಚರಣೆಯಲ್ಲಿದ್ದಂತೆ ಶಾಸನಗಳಲ್ಲಿ ಕಂಡುಬರುತ್ತದೆ. ಇದಲ್ಲದೆ ಹಳ್ಳಿಯ ಜನರು ಮಾರಿಕವ್ವೆ ಮೊದಲಾದ ಗ್ರಾಮದೇವತೆಗಳ ಜಾತ್ರೆ, ಉತ್ಸವಗಳನ್ನು ಸಂಸ್ಕೃತಿಯ ಹಿನ್ನೆಲೆಯಲ್ಲಿ ಆಚರಿಸುವುದು ಕಂಡುಬರುತ್ತದೆ. ಉಳಿದ ಹಬ್ಬಗಳಿಗೆ ಹೋಲಿಸಿದರೆ ಕೃಷಿಕರು ಗ್ರಾಮದೇವತೆಗಳ ಹಬ್ಬ, ಉತ್ಸವ, ಜಾತ್ರೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದು ಸಮಾಜದಲ್ಲಿ ಇಂದಿಗೂ ಕಂಡುಬರುತ್ತದೆ.

**ಇತರೆ ಆಚರಣೆಗಳು**

ಕ್ರಿ.ಶ. ೧೧೨೧ರ ಶಾಸನದಲ್ಲಿ ಗೋವಿಂದರಸ ದಂಡನಾಥನು ತನ್ನ ಸೊಸೆ ಪದ್ಮಾವ ಸ್ವರ್ಗದ ದಿವಸವಾದ ಮಾಘ ಹುಣ್ಣಿಮೆಯ ದಿವಸ ಆಂಧ್ರ ದಂಡದ ಪರ್ಷೆಗೆ ಭೋಜನ ಮಾಡಿಸಲು ೨೫ ಜಗದಳ ಗದ್ಯಾಣವನ್ನು ನೀಡಿದನೆಂದು ಶಾಸನವು ತಿಳಿಸುತ್ತದೆ.[೨೦೭] ಕ್ರಿ.ಶ. ೧೧೫೦ರ ಶಾಸನದಲ್ಲಿ ಚೈತ್ರ ಪವಿತ್ರ ಪರ್ವ ಬಿಯಕ್ಕೆ ವೊಕ್ಕಲಲು ಎಲೆ ಸಾಯಿರವೊಂದು ತೆಲ್ಲಿಗರಯ್ವತ್ತೊಕ್ಕಲು ದೇವರನಂದಾದೀವಿಗೆಗೆ ಗಾಣಂಗಳಲು ಪ್ರತ್ಯೇಕ ಎಣ್ಣೆ[೨೦೮] ಎಂದಿದೆ. ಕ್ರಿ.ಶ. ೧೨೯೧ರ ಶಾಸನದಲ್ಲಿ ಕಾರ್ತೀಕದ ಪೌರ್ನ್ನಮಿಯ ವುಪ್ಪಾರ ತುಪ್ಪದೀವಿಗೆ ಪ೨ ಎಂದಿದೆ.[೨೦೯] ಕಾರ್ತಿಕ ಮಾಸದಲ್ಲಿ ದೇವರಿಗೆ ವಿಶೇಷ ಪೂಜೆಯನ್ನು ಮಾಡುವ ಪದ್ಧತಿ ಇದ್ದು, ಇಂದಿಗೂ ನಡೆದುಕೊಂಡು ಬರಲಾಗಿದೆ. ಈ ಸಮಯದಲ್ಲಿ ದೇವಾಲಯದಲ್ಲಿ ಹೆಚ್ಚು ದೀಪಗಳನ್ನು ಹಚ್ಚಿಡಲಾಗುತ್ತದೆ. ದೇವರ ಎಲ್ಲ ಕಾರ್ಯಗಳಿಗೆ ಈ ಸಮಯದಲ್ಲಿ ದಾನ ನೀಡಿರುವುದು ಕಂಡುಬರುತ್ತದೆ. ಕ್ರಿ.ಶ. ೧೨೮೧ರ ಶಾಸನದಲ್ಲಿ ಸುಗ್ಗಿಯ ಕಂಬಳಕೆ ೨ ಎತ್ತು ಕರದುಬಹರು ಆಸಡಿಯ ಹಬ್ಬಕೆ ೧[೨೧೦] ಎಂದಿದೆ. ಕ್ರಿ.ಶ. ೧೨೭೬ರ ಶಾಸನದಲ್ಲಿ ಕೇಶವ ದೇವರ ತಿರುನಾಳ ಹಬ್ಬ ಹಬ್ಬಕ್ಕೆ ಗದ್ಯಾಣಂ ಎಪ್ಪತ್ತು ಎಂದಿದೆ.[೨೧೧] ತಲಕಾಡಿನ ವೀರನರಸಿಂಹದೇವರ ತಮಿಳು ಶಾಸನದಲ್ಲಿ ತಿರುವೊಣಂ ಹಬ್ಬದ ಉಲ್ಲೇಖವಿದೆ.[೨೧೨] ಕ್ರಿ.ಶ. ೧೦೭೦ರ ಶಾಸನವು ಅಕ್ಷಯ ತೃತೀಯವನ್ನು ಉಲ್ಲೇಖಿಸಿದೆ.[೨೧೩]

ಶಾಸನದಲ್ಲಿ ಹಬ್ಬಗಳನ್ನು ಪರ್ವ್ವಗಳೆಂದು ಗುರುತಿಸಲಾಗಿದೆ. ಸಂಕ್ರಾಂತಿ, ದೀಪಾವಳಿ, ಕಾರಹುಣ್ಣಿಮೆ, ಶಿವರಾತ್ರಿ, ಬಾದುಬೆ, ಮಹಾನವಮಿಗಳ ಉಲ್ಲೇಖಗಳು ಶಾಸನದಲ್ಲಿ ಕಂಡುಬಂದಿವೆ. ಇವುಗಳೊಂದಿಗೆ ಚೈತ್ರ ಪವಿತ್ರಪಾವುಳ, ಕಾರ್ತೀಕಮಾಸ, ಅಕ್ಷಯ ತೃತೀಯ, ವೊಣಂ ಮೊದಲಾದ ಉತ್ಸವಗಳ ಆಚರಣೆಗಳು ಉಲ್ಲೇಖಗೊಂಡಿವೆ.

ಪ್ರಾಚೀನ ಸಂದರ್ಭದಿಂದ ಇಂದಿನ ಆಧುನಿಕ ಸಂದರ್ಭದಲ್ಲಿಯೂ ಬದಲಾವಣೆಯೊಂದಿಗೆ ವಿಸ್ಮೃತಿಗೆ ಸರಿಯುತ್ತಿರುವ ಸಂಸ್ಕೃತಿ ಪ್ರತೀಕಗಳಾಗಿ ಹಬ್ಬಗಳು ಇಂದು ಉಸಿರಾಡುತ್ತಿವೆ. ಇಂತಹ ಸ್ಥಿತಿಗೆ ಪ್ರಮುಖ ಕಾರಣ ಆಧುನಿಕ ಜೀವನ ಶೈಲಿ, ತಂತ್ರಜ್ಞಾನದ ಅಭಿವೃದ್ಧಿಗಳು ಕಾರಣವಾಗುತ್ತಿವೆ. ಅಭಿವೃದ್ಧಿಯ ಹೆಸರಿನಲ್ಲಿ ಸಂಸ್ಕೃತಿ ಅಧಃಪತನಗೊಳ್ಳುತ್ತಿದೆ. ಪುನಃ ಹಬ್ಬಗಳನ್ನು ಆಚರಿಸುವ ಮೂಲಕ

ಪ್ರಾಚೀನ ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಸವಾಲುಗಳು ಇಂದು ಸಮಾಜದೆರು ನಿರ್ಮಾಣಗೊಂಡಿವೆ. ಸಂಸ್ಕೃತಿಯೊಂದಿಗೆ ಸಂಬಂಧಗಳ ವಿಘಟನೆಯೂ ಉಂಟಾಗುತ್ತಿದೆ. ಇವುಗಳನ್ನು ಪುನಃ ಸಮಾಜದಲ್ಲಿ ನೆಲೆಗೊಳಿಸಿದಾಗ ಮಾತ್ರ ಮಾನವೀಯ ಮೌಲ್ಯಗಳು ಜೀವಂತಗೊಳ್ಳಲು ಸಾಧ್ಯವಾಗುತ್ತದೆ. ಸಂಸ್ಕೃತಿಯ ಮೇಲಾಗುವ ವಿಸ್ಮೃತಿಯ ದೂಳು ಸಮಾಜಕ್ಕೆ ಅಂಟಿಕೊಂಡಾಗ ಸಮಾಜ ಕತ್ತಲೆಯ ಗೂಡಾಗುತ್ತದೆ. ಇಂತಹ ಅಪಾಯ ಮತ್ತು ಆತಂಕಕಾರಿ ಅಂಶಗಳನ್ನು ನಂಬಿಕೆ ಮತ್ತು ಆಚರಣೆಗಳ ಮೂಲಕ ಪುನಃ ಬಲಗೊಳಿಸಬಹುದಾದ ಸಾಧ್ಯತೆಗಳಿವೆ.

## ಅಡಿಟಿಪ್ಪಣಿಗಳು

೧. ಮಂಜುನಾಥ ಸಿ.ಯು., ಶಾಸಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೩೫೭.
೨. ಅದೇ, ಪು. ೩೫೭.
೩. ಅದೇ, ಪು. ೩೫೭.
೪. ಅದೇ, ಪು. ೩೫೭.
೫. ನರಸಿಂಹಾಚಾರ್ ಡಿ.ಎಲ್., ಪೀಠಿಕೆಗಳು ಮತ್ತು ಲೇಖನಗಳು, ಪು. ೧೨೧.
೬. K1. Vol. I, ಪು. ೨೫.
೭. Sll. Vol. XV, ೨೨೯.
೮. ಅದೇ, Xl, ೬೫.
೯. ಅದೇ, ೧೧೨.
೧೦. Sll. Vol. Xl, BKI, Vol. l, ii, ೧೭೨.
೧೧. ಅದೇ, ೧೯೮.
೧೨. EC. Vol. VI,. ಶ್ರೀರಂಗಪಟ್ಟಣ ೧೬೪.
೧೩. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ, ೭೯.
೧೪. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು. ೧೪೨.
೧೫. EC. Vol. VIII, ಹಾಸನ ೧೬೧.
೧೬. ಅದೇ, ಹೊಳೇನರಸೀಪುರ ೭೮.
೧೭. ಅದೇ, ಹಾಸನ ೭೧.
೧೮. ಅದೇ, V, ಟಿ.ನರಸೀಪುರ ೧೨೦.
೧೯. ಕ.ವಿ.ಹಂ.ಶಾ.ಸಂ.೧೦, ಇಂಡಿ ೭೭.
೨೦. ಅದೇ, ಮುದ್ದೇಬಿಹಾಳ ೨.
೨೧. EC. Vol. XV, ೨೨೦.
೨೨. Sll. Vol. Xl, BKI, Vol. l, ii, ೧೪೫.
೨೩. Sll. Vol. Xl, ೬೯.
೨೪. ಅದೇ, XV, ೫೫೯
೨೫. ಕ.ವಿ.ಹಂ.ಶಾ.ಸಂ.೧೦, ಇಂಡಿ ೩೨.
೨೬. ಅದೇ, ಬಿಜಾಪುರ ೩೮.
೨೭. ಅದೇ, ಬಾಗೇವಾಡಿ ೨೨.
೨೮. EC(ರೈ.ಸಂ). Vol. IX, ದೊಡ್ಡ ಬಳ್ಳಾಪುರ ೩೧.
೨೯. EC. Vol. VIII, ಹಾಸನ ೧೩೦.
೩೦. Sll. Vol. XVIII, ೩೮೧.
೩೧. ಅದೇ, XV, ೩೯೨.
೩೨. EC. Vol. V, ಟಿ.ನರಸೀಪುರ ೮೮.

೩೩. ಮಂಜುನಾಥ ಸಿ.ಯು., ಮಂಜುನಾಥ್, ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೩೬೯-೩೭೦.

೩೪. EC. Vol. V, ಮೈಸೂರು ೨೨೪.

೩೫. ಮಂಜುನಾಥ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೩೬೯-೩೭೨.

೩೬. ಕ.ವಿ.ಹಂ.ಶಾ.ಸಂ.೧೦, ಬಾಗೇವಾಡಿ ೩೮.

೩೭. EC. Vol. XI, ಚಿಕ್ಕಮಗಳೂರು ೧೧೧.

೩೮. E I. Vol. IV, P. ೫೦.

೩೯. EC(ರೈ.ಸಂ). Vol. VII, ಶಿಕಾರಿಪುರ ೧೦೨.

೪೦. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೬೭

೪೧. ಅದೇ, ಪು. ೧೬೭

೪೨. ಭಗವತಿ ಎಸ್.ಎಸ್., ಮೇಲಿನಮನಿ ಎಚ್.ಎಸ್., ಕನ್ನಡ ಶಾಸನಗಳ ಅಧ್ಯಯನ, ಪು. ೨೧೫.

೪೩. KI. ಸಂ. V, ಪು. ೬೪.

೪೪. ಮಂಜುನಾಥ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೩೭೮.

೪೫. ಅದೇ, ಪು. ೩೭೮.

೪೬. EC(ರೈ.ಸಂ). Vol. V, ಬೇಲೂರು ೧೧೫.

೪೭. ಕ.ವಿ.ಹಂ.ಶಾ.ಸಂ.೧, ಬಾಗೇವಾಡಿ ೧.

೪೮. ಅದೇ, ೪೦.

೪೯. ಅದೇ, ೬೦.

೫೦. ಅದೇ, ೫೯.

೫೧. ಅದೇ, ೭೪.

೫೨. SIl. Vol. XVIIl, ೧೫೧.

೫೩. ಅದೇ, Xl, ೫೩ .

೫೪. ಅದೇ, Xl, ೧೦೦.

೫೫. EC(ರೈ.ಸಂ). Vol. VII, ಕಡೂರು ೬೮.

೫೬. ಅದೇ, IX, ಚನ್ನರಾಯಪಟ್ಟಣ ೬೬.

೫೭. EC. Vol. VI, ಕೃಷ್ಣರಾಜಪೇಟೆ ೮೬.

೫೮. EC(ರೈ.ಸಂ). Vol. V, ಬೇಲೂರು ೧೧೫.

೫೯. ಅದೇ, V, ಬೇಲೂರು ೧೧೫.

೬೦. ಅದೇ, X, ಮುಳಬಾಗಿಲು ೧೮.

೬೧. ಅದೇ, Xl, ಹೊಳಲಕೆರೆ ೧.

೬೨. ಅದೇ, V, ಬೇಲೂರು ೯೦.

೬೩. SIl. Vol. XX, ೧೭೫.

೬೪. ಮಂಜುನಾಥ ಸಿ.ಯು., ಶಾಸಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೩೮೦.

೬೫. EC(ರೈ.ಸಂ). Vol. V, ಬೇಲೂರು ೧೨೯.
೬೬. ಅದೇ, XI, ಹೊಳಲಕೆರೆ ೧.
೬೭. EC. Vol. II, ಶ್ರವಣಬೆಳಗೊಳ ೧೬೨.
೬೮. ಅದೇ, ೧೭೬.
೬೯. ಅದೇ, ३೦೦.
೭೦. ಅದೇ, ३४೬.
೭೧. ಅದೇ, ३೫३.
೭೨. ಅದೇ, ४೫೮.
೭೩. ಅದೇ, ೫೧೬.
೭೪. ನಂಜುಂಡ ಸ್ವಾಮಿ ಎಸ್., ರಾಷ್ಟ್ರಕೂಟರ ಇತಿಹಾಸ, ಪು. ೪೩.
೭೫. ಅದೇ, ಪು. ೪೩.
೭೬. EC(ರೈ.ಸಂ). Vol. VII, ಶಿಕಾರಿಪುರ ೬೦.
೭೭. ಕ.ವಿ.ಹಂ.ಶಾ.ಸಂ.೯, ಬದಾಮಿ ೯೫.
೭೮. ಅದೇ, ೧೦೪.
೭೯. ಅಣ್ಣಿಗೇರಿ ಎ.ಎಂ., ಮೇವುಂಡಿ ಮಲ್ಲಾರಿ,(ಸಂ) ಶಾಸನ ಸಾಹಿತ್ಯ ಸಂಚಯ, ಪು. ೩೨
೮೦. ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು. ೪೩೪.
೮೧. ಅದೇ, ಪು. ೪೩೫.
೮೨. ಅದೇ, ಪು. ೪೩೭.
೮೩. ಅದೇ, ಪು. ೪೩೭.
೮೪. ಅದೇ, ಪು. ೨೫೧.
೮೫. ಅದೇ, ಪು. ೨೬೯.
೮೬. ವಸಂತಕುಮಾರ ಎಂ.ಸಿ., ಜಾನಪದ ನಂಬಿಕೆಗಳು, ಪ್ರಸ್ತಾವನೆ, ಪು. Viii.
೮೭. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೨೭೧.
೮೮. ಗದ್ದಗಿಮಠ ಬಿ.ಎಸ್., ಕನ್ನಡ ಜಾನಪದ ಗೀತೆಗಳು, ಪು. ೧೩೭.
೮೯. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೨೭೩.
೯೦. ಅದೇ ಪು. ೨೭೪.
೯೧. ವೀರೇಂದ್ರ ಶಿಲವಂತ, ಕೃಷಿ ಆಚರಣೆಗಳು, ಪು. ೧೯.
೯೨. ಅದೇ ಪು. ೨೦.
೯೩. SII. Vol. XV, ೬೦.
೯೪. ಅದೇ, XI, ೫೩.
೯೫. ಅದೇ, IX,i ೧೭೦.
೯೬. ದೇವೇಂದ್ರ ಕುಮಾರ ಹಕಾರಿ, ಸಂಧ್ಯಾರೆಡ್ಡಿ ಕೆ.ಆರ್., ಗ್ರಾಮೀಣ ಪಶುಸಾಕಾಣಿಕೆ, ಪು. ೪೪.
೯೭. ರಮೇಶ್ ಸ.ಚಿ., ಕೃಷಿ; ಪಾರಂಪರಿಕ ಜ್ಞಾನ, ಪು. ೪೦.
೯೮. ದೇವೇಂದ್ರ ಕುಮಾರ ಹಕಾರಿ ಮತ್ತು ಸಂಧ್ಯಾರೆಡ್ಡಿ ಕೆ.ಆರ್., ಗ್ರಾಮೀಣ ಪಶುಸಾಕಾಣಿಕೆ, ಪು. ೪೪.

೯೯. ಅದೇ, ಪು. ೧೭.

೧೦೦. ಅದೇ, ಪು. ೪೪.

೧೦೧. EC(ರೈ.ಸಂ). Vol. V, ಬೇಲೂರು ೧೧೫.

೧೦೨. ಗಣಪತಿ ಗೌಡ, ಗ್ರಾಮ ಒಕ್ಕಲಿಗರ ಸಾಂಸ್ಕೃತಿಕ ಅನನ್ಯತೆ ಮತ್ತು ಸಮಕಾಲೀನ ಸಂದರ್ಭಗಳು, ಪು. ೨೭.

೧೦೩. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೧೩.

೧೦೪. ಅದೇ, ಸಿಂದಗಿ ೬೪.

೧೦೫. ಅದೇ, ಬಾಗೇವಾಡಿ ಪು. ೪೦.

೧೦೬. ಅದೇ, ೫೯.

೧೦೭. Sll. Vol. XV, ೬೦.

೧೦೮. ಅದೇ, ೧೫೯.

೧೦೯. ಅದೇ, ೨೨೦.

೧೧೦. ಅದೇ, ೧೫೯.

೧೧೧. ಅದೇ, Xl, ೫೩.

೧೧೨. ಕ.ವಿ.ಹಂ.ಶಾ.ಸಂ.೧, ಹರಪನಹಳ್ಳಿ ೧೭೯.

೧೧೩. ಅದೇ, ೨, ಕುಷ್ಟಗಿ ೨೭.

೧೧೪. ಅದೇ, ೮, ಬಸವಕಲ್ಯಾಣ ೩.

೧೧೫. EC. Vol. V, ಟಿ.ನರಸೀಪುರ ೮೮.

೧೧೬. ಈರಯ್ಯ ಕಿಲ್ಲೇದಾರ, ಸಾಂಪ್ರದಾಯಿಕ ಒಕ್ಕಲುತನ, ಪು. ೨೬.

೧೧೭. ಕ.ವಿ.ಹಂ.ಶಾ.ಸಂ.೧೦ ಸಿಂದಗಿ ೪೫.

೧೧೮. EC. Vol.ll, ಶ್ರವಣಬೆಳಗೊಳ ೪೮೧.

೧೧೯. ಕ.ವಿ.ಹಂ.ಶಾ.ಸಂ.೧, ಹೂವಿನಹಡಗಲಿ ೬೮.

೧೨೦. ರಮೇಶ್ ಸ.ಚಿ.,(ಸಂ), ಕೃಷಿ; ಪಾರಂಪರಿಕ ಜ್ಞಾನ, ಪು. ೮೫.

೧೨೧. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೧೩.

೧೨೨. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೨೫೯.

೧೨೩. ಅದೇ, ಪು. ೨೮೮.

೧೨೪. ಗದ್ದಗಿಮಠ ಬಿ.ಎಸ್., ಕನ್ನಡ ಜನಪದ ಗೀತೆಗಳು, ಪು. ೨೮

೧೨೫. ರಮೇಶ್ ಸ.ಚಿ.,(ಸಂ) ಕೃಷಿ; ಪಾರಂಪರಿಕ ಜ್ಞಾನ, ಪು. ೮೮.

೧೨೬. ಅದೇ, ಪು. ೮೭.

೧೨೭. ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಪು. ೧೨೯.

೧೨೮. ರಮೇಶ್ ಸ.ಚಿ.,(ಸಂ) ಕೃಷಿ ಪಾರಂಪರಿಕ ಜ್ಞಾನ, ಪು. ೯೨.

೧೨೯. ಮಲ್ಲಿಕಾರ್ಜುನ ಹೊಸಪಾಳ್ಯ, ಕೃಷಿ ಆಚರಣೆಗಳು, ಪು. ೬೯.

೧೩೦. ವಾಮನ ನಂದಾವರ, ಕರಾವಳಿ ಆಚರಣೆಗಳು–೨, ಪು. ೨೨೪.

೧೩೧. ಅದೇ, ಪು. ೨೨೪.

೧೩೨. ಕ.ವಿ.ಹಂ.ಶಾ.ಸಂ.೧, ಹಗರಿಬೊಮ್ಮನಹಳ್ಳಿ ೧೭.

೧೩೩. ಅದೇ, ೯, ಹುನಗುಂದ ೯೪.

೧೩೪. EC. Vol. VII, ನಾಗಮಂಗಲ ೭೨.
೧೩೫. ಅದೇ, XI, ಚಿಕ್ಕಮಗಳೂರು ೮೮.
೧೩೬. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೨.
೧೩೭. ಅದೇ, ೬.
೧೩೮. ಅದೇ, ಬಿಜಾಪುರ ೭.
೧೩೯. ಅದೇ, ೯.
೧೪೦. ಅದೇ, ಇಂಡಿ ೧೭.
೧೪೧. ಅದೇ, ಬಾಗೇವಾಡಿ ೩೪.
೧೪೨. ಅದೇ, ೩೬.
೧೪೩. ಅದೇ, ೭೪.
೧೪೪. ಅದೇ, ಮುದ್ದೇಬಿಹಾಳ ೪೨.
೧೪೫. ಅದೇ, ೬೪.
೧೪೬. EC. Vol. VII, ಕೃಷ್ಣರಾಜಪೇಟೆ ೨೭.
೧೪೭. ಅದೇ, ೩೭.
೧೪೮. ಅದೇ, ಕೃಷ್ಣರಾಜಪೇಟೆ ೭೫.
೧೪೯. ಅದೇ, VI, ಶ್ರೀರಂಗಪಟ್ಟಣ ೯೬.
೧೫೦. ಅದೇ, ೭೮.
೧೫೧. EC. Vol. X, ಚನ್ನರಾಯಪಟ್ಟಣ ೫೬೫.
೧೫೨. EC(ರೈ.ಸಂ). Vol. V, ಚನ್ನರಾಯಪಟ್ಟಣ ೧೪೯.
೧೫೩. SII. Vol. XV, ೧೨೧.
೧೫೪. ಅದೇ, ೧೫೮.
೧೫೫. ಅದೇ, ೧೩೫.
೧೫೬. ಅದೇ, ೨೨೦.
೧೫೭. ಅದೇ, ೨೨೧.
೧೫೮. ಅದೇ, ೨೨೯.
೧೫೯. ಅದೇ, ೫೭೨.
೧೬೦. ಅದೇ, XI, ೮೬.
೧೬೧. ಕ.ವಿ.ಹಂ.ಶಾ.ಸಂ.೧, ಕೂಡ್ಲಿಗಿ ೧೨.
೧೬೨. ಅದೇ, ಹಗರಿಬೊಮ್ಮನಹಳ್ಳಿ ೨೨.
೧೬೩. ಅದೇ, ೭, ದೇವದುರ್ಗ ೧೧.
೧೬೪. ಅದೇ, ಲಿಂಗಸುಗೂರು ೩೩.
೧೬೫. EC(ರೈ.ಸಂ). Vol. XI, ಚಿತ್ರದುರ್ಗ ೪೭.
೧೬೬. EC. Vol. XIII, ಭದ್ರಾವತಿ ೩೫.
೧೬೭. ಕ.ವಿ.ಹಂ.ಶಾ.ಸಂ.೨, ಕೊಪ್ಪಳ ೬.
೧೬೮. ಅದೇ, ಕುಷ್ಟಗಿ ೨೨.

೧೭೯. ಅದೇ, ೮, ಹುಮನಾಬಾದ್ ೧.
೧೭೦. EC(ರೈ.ಸಂ). Vol. Vll ಶಿಕಾರಿಪುರ ೧೩.
೧೭೧. ಅದೇ, ೫೮೨.
೧೭೨. EC. Vol. XII, ಕಡೂರು ೧೩೪.
೧೭೩. ಅದೇ, ತರೀಕೆರೆ ೨೦.
೧೭೪. EC. Vol. X, ಚನ್ನರಾಯಪಟ್ಟಣ. ೧೧೩.
೧೭೫. ಅಣ್ಣೀಗೇರೆ ಎ.ಎಂ., ಮೇವುಂಡಿ ಮಲ್ಲಾರಿ, ಶಾಸನ ಸಾಹಿತ್ಯ ಸಂಚಯ, ಪು.೮೩.
೧೭೬. ಅದೇ, ಪು. ೮೨.
೧೭೭. EC. Vol. VII, ಮಂಡ್ಯ ೧೧೧.
೧೭೮. ಅದೇ, XI, ಚಿಕ್ಕಮಗಳೂರು ೧೭೯.
೧೭೯. ಅದೇ, X, ಮೂಡಿಗೆರೆ ೮೬.
೧೮೦. ಕ.ವಿ.ಹಂ.ಶಾ.ಸಂ.೧೦, ಇಂಡಿ ೬೮.
೧೮೧. Sll. Vol. Xl, BKI.Vol. l, ii, ೧೬೦.
೧೮೨. EC. Vol. lX, ಬೇಲೂರು ೨೨೪.
೧೮೩. ಅದೇ, Xll, ಕಡೂರು ೧೨೬.
೧೮೪. ಅದೇ, X, ಅರಸೀಕೆರೆ ೨೩೩.
೧೮೫. ಅದೇ, X, ಚನ್ನರಾಯಪಟ್ಟಣ ೧೧೩.
೧೮೬. ಕ.ವಿ.ಹಂ.ಶಾ.ಸಂ.೧೦, ಬಿಜಾಪುರ ೪೧.
೧೮೭. ಅದೇ, ಇಂಡಿ ೬೯.
೧೮೮. ಅದೇ, ಸಿಂಧಗಿ ಪು. ೬.
೧೮೯. ಅದೇ, ಮುದ್ದೇಬಿಹಾಳ ೨೮. '
೧೯೦. ಅದೇ, ೫೯.
೧೯೧. ಅದೇ, ೧, ಬಳ್ಳಾರಿ ೭.
೧೯೨. ಅದೇ, ೧೮, ೪೦.
೧೯೩. ಕ.ವಿ.ಹಂ.ಶಾ.ಸಂ.೭, ದೇವದುರ್ಗ ೧೬.
೧೯೪. ಅದೇ, ೨, ಯಲಬುರ್ಗ ೩೯.
೧೯೫. ಚಿದಾನಂದಮೂರ್ತಿ ಎಂ., ಜನ-ಜನಪದ-ಜಾನಪದ, ಪು. ೪೧೦.
೧೯೬. ಅದೇ, ಪು. ೪೧೧.
೧೯೭. ಅದೇ, ಪು. ೪೧೦.
೧೯೮. ಅದೇ, ಪು. ೪೧೦.
೧೯೯. ಮಂಜನಾಥ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೧೫೦.
೨೦೦. ಅದೇ, ಪು. ೧೫೦.
೨೦೧. ಅದೇ, ಪು. ೧೫೦-೧೫೧.
೨೦೨. Sll. Vol. XI, ೪೨.
೨೦೩. ಕ.ವಿ.ಹಂ.ಶಾ.ಸಂ.೧, ಹರಪನಹಳ್ಳಿ ೯.

೨೦೪. SII. Vol. IX, i, ೫೯.

೨೦೫. ಅದೇ, ೩೨೯.

೨೦೬. ಕ.ವಿ.ಹಂ.ಶಾ.ಸಂ.೮, ಬಸವಕಲ್ಯಾಣ ೩.

೨೦೭. ಅದೇ, ೧೦, ಬಿಜಾಪುರ ೧೯.

೨೦೮. EC(ರೈ.ಸಂ). Vol. VII, ಶಿಕಾರಿಪುರ ೧೧೮.

೨೦೯. EC. Vol. XII, ಕಡೂರು ೧೨೬.

೨೧೦. SII. Vol. XX, ೨೧೬.

೨೧೧. EC. Vol. V, ಟಿ.ನರಸೀಪುರ ೮೮.

೨೧೨. ಅದೇ, ೧೮೮.

೨೧೩. ಕ.ವಿ.ಹಂ.ಶಾ.ಸಂ.೯, ಬೀಳಗಿ ೧.

## ಅಧ್ಯಾಯ: ಏಳು

# ಸಮಾರೋಪ

ಕರ್ನಾಟಕದಂತಹ ಕೃಷಿ ಪ್ರಾಧಾನ್ಯತೆಯ ಒಂದು ಭಾಗವಾದ ಪ್ರದೇಶಗಳ ಜೀವಧಾರೆಗಳಲ್ಲೊಂದಾದ ಕೃಷಿಯನ್ನು ಕುರಿತು ಒಟ್ಟು ಆರು ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಈ ಅಧ್ಯಯನದ ಮೂಲಕ ಪ್ರತಿ ಅಧ್ಯಾಯದಲ್ಲೂ ಒಳನೋಟಗಳು ಮತ್ತು ಸೂಕ್ಷ್ಮ ದೃಷ್ಟಿಗಳನ್ನು ಗ್ರಹಿಸಲಾಗಿದೆ. ಪ್ರಾಚೀನ ಕೃಷಿಗಿಂತ ಪರ್ಯಾಯ ದಿಕ್ಕಿನಲ್ಲಿ ಸಾಗುತ್ತಿರುವ ಇಂದಿನ ಕೃಷಿಗೆ ಉತ್ತರದಾಯಿಯಾದ ಅಂಶಗಳು ಈ ಅಧ್ಯಯನದಿಂದ ದೊರೆತವು. ಈ ಅಧ್ಯಯನದಲ್ಲಿ ಪ್ರಾಚೀನ ಕೃಷಿಯನ್ನು ಪ್ರಸ್ತುತ ಸಮಕಾಲೀನ ಸಂದರ್ಭಕ್ಕೆ ಮುಖಾಮುಖಿಗೊಳಿಸುವ ಮೂಲಕ ಅಧ್ಯಯನ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಇಂದು ವಿಜ್ಞಾನ, ತಂತ್ರಜ್ಞಾನ ಬಲದಿಂದ ಮಾನವನು ಪ್ರಕೃತಿಯನ್ನು ತನ್ನ ನಿಯಂತ್ರಣದಲ್ಲಿ ಇರಿಸಿಕೊಂಡಿದ್ದಾನೆ. ಇಂದಿನ ಬದಲಾದ ಸನ್ನಿವೇಶಗಳನ್ನು ಗಮನಿಸಿದರೆ ಮಾನವನ ವಿಕೃತ ಮತ್ತು ವಿಧ್ವಂಸಕಾರಿ ಘಟನೆಗಳು ಹೆಚ್ಚುತ್ತಿವೆ. ಈ ಹಿನ್ನೆಲೆಯಲ್ಲಿ ಪ್ರಕೃತಿ ಮಾನವನನ್ನು ನಿಯಂತ್ರಿಸುವ ಕಾಲ ಸಮೀಪದ ಹಂಚಿನಲ್ಲಿರುವ ಸೂಚನೆಗಳು ಕಂಡುಬರುತ್ತಿವೆ. ಮುಂದೊದಗಬಹುದಾದ ಇಂತಹ ವಿಪತ್ತಿಗೆ ಪ್ರಾಚೀನ ಕೃಷಿಯಲ್ಲಿ ಉತ್ತರಗಳಿರುವುದು ಕಂಡುಬಂದಿದೆ. ಅವುಗಳನ್ನು ಪುನಃ ಆಧುನಿಕ ಕೃಷಿಯಲ್ಲಿ ಅಳವಡಿಸಿಕೊಳ್ಳುವ ಮೂಲಕ ಪಾರಂಪರಿಕ ಪ್ರಾಚೀನ ಕೃಷಿಯನ್ನು ಬಲವರ್ಧನೆಗೊಳಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕೃಷಿಗೆ ಆಧುನಿಕ ಕೃಷಿಯನ್ನು ಮುಖಾಮುಖಿಗೊಳಿಸುವ ಕೆಲಸವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

## ಫಲಿತಗಳು

- ಪ್ರಾಚೀನ ಕೃಷಿಬದುಕು ಸ್ವತಂತ್ರ, ಸ್ವಾವಲಂಬಿ ಚಟುವಟಿಕೆಯಾಗಿ ಕಂಡುಬರುತ್ತದೆ. ಪ್ರಾಚೀನ ಕೃಷಿಯು ಒಂದು ವೃತ್ತಿ ಅಥವಾ ಕಸುಬಾಗಿತ್ತು ಎನ್ನುವುದಕ್ಕಿಂತ ಅದು ಜನರ ಜೀವನ ವಿಧಾನವಾಗಿತ್ತು. ಅವರ ದೈನಂದಿನ ಚಟುವಟಿಕೆಗಳಲ್ಲೂ ಕೃಷಿಯೇ ಜೀವಾಳ ಮತ್ತು ಅಂತರ್ಗತವಾಗಿ ಜನರ ನಾಡಿಮಿಡಿತವಾಗಿತ್ತು. ಇಂತಹ ಕೃಷಿಯು ಚರಿತ್ರೆಯಲ್ಲಿ ಸಾಗಿ ಬಂದುದನ್ನು ಗುರುತಿಸಲಾಗಿದೆ. ಇಂದಿನಂತೆ ಪ್ರಾಚೀನ ಕೃಷಿಯಲ್ಲಿಯೂ ಏಳುಬೀಳುಗಳು ನಿರಂತರವಾಗಿದ್ದವು. ಇಂದು ಪ್ರಕೃತಿಯಲ್ಲಿ ಘಟಿಸುವ ಅತಿವೃಷ್ಟಿ ಅನಾವೃಷ್ಟಿಯಂತಹ ಘಟನೆಗಳು ಅಂದೂ ಸಹ ಜರುಗುತ್ತಿದ್ದವು. ಇಂತಹ ಉದಾಹರಣೆಗಳು ಪ್ರಾಚೀನ ಕೃಷಿಯಲ್ಲಿ ಕಂಡುಬರುತ್ತವೆ. ಮೌರ್ಯರ ಕಾಲದಲ್ಲಿ ಚಂದ್ರಗುಪ್ತನ ಆಳ್ವಿಕೆಯ ಸಂದರ್ಭದಲ್ಲಿ ರಾಜ್ಯವು ಭೀಕರ ಕ್ಷಾಮ ಮತ್ತು ಬರಗಾಲಕ್ಕೆ ತುತ್ತಾಗಿತ್ತು. ಇದರಿಂದ ನೊಂದ ರಾಜನು ಅದರ ನಿವಾರಣೆಗಾಗಿ ದೈವದ ಮೊರೆ ಹೋದನು. ಈ ಹಿನ್ನೆಲೆಯಲ್ಲಿ ಜೈನ ದೀಕ್ಷೆ ತೆಗೆದುಕೊಂಡನೆಂದು ತಿಳಿಯುತ್ತದೆ. ಅಲ್ಲದೆ ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನ ಅವಧಿಯಲ್ಲಿ ಇಂತಹದ್ದೇ ಸ್ಥಿತಿ ನಿರ್ಮಾಣಗೊಂಡಿತ್ತು. ಅಂತಹ ಸಂದರ್ಭದಲ್ಲಿ ಕೊಲ್ಲಾಪುರದ ಮಹಾಲಕ್ಷ್ಮಿದೇವಿಗೆ ತನ್ನ ಹೆಬ್ಬೆರಳನ್ನು ನೃಪತುಂಗನು ಅರ್ಪಿಸಿದನೆಂದು ಹೂವಿನ ಹಿಪ್ಪರಗಿ ಶಾಸನವು ತಿಳಿಸಿದೆ. ಈ ಸನ್ನಿವೇಶಗಳು ಇಂದಿನಂತೆ ಪ್ರಾಚೀನ ಕಾಲದಲ್ಲೂ ಕ್ಷಾಮ ಮೊದಲಾದ ಬರಗಾಲದ ಪರಿಸ್ಥಿತಿ ಎದುರಾಗುತ್ತಿತ್ತು ಎಂಬ ಅಂಶಗಳನ್ನು ತಿಳಿಸುತ್ತವೆ. ಆದರೆ ಇಂದಿನ

ಕೃಷಿಯಂತೆ ಪ್ರಾಚೀನ ಕೃಷಿ ಧೃತಿಗೆಟ್ಟು ನೈತಿಕ ಸ್ಥೈರ್ಯವನ್ನು ಕಳೆದುಕೊಂಡಂತೆ ಕಂಡುಬರುವುದಿಲ್ಲ.

➢ ಕೃಷಿಯು ಹುಟ್ಟಿ ಬಂದ ಹಾದಿಯಲ್ಲಿ ಏಳು ಬೀಳುಗಳನ್ನು ಕಂಡುಕೊಂಡೇ ಸಾಗಿ ಬಂದಿರುವುದು ತಿಳಿದು ಬರುತ್ತದೆ. ಕೃಷಿಯ ಹುಟ್ಟು ಆರಂಭದಲ್ಲಿ ಉದ್ದೇಶಪೂರಕ ಆವಿಷ್ಕಾರಕ್ಕಿಂತ ಅದೊಂದು ಆಕಸ್ಮಿಕ ಅವಿಷ್ಕಾರದಂತೆ ಕಂಡುಬರುತ್ತದೆ. ಇದರಿಂದ ಕೃಷಿಗೆ ಸುಮಾರು ೧೦೦೦೦ ವರ್ಷಗಳ ಇತಿಹಾಸವಿರುವುದು ಕಂಡುಬಂದಿದೆ. ಕರ್ನಾಟಕದ ಮಟ್ಟಿಗೆ ಕ್ರಿ.ಪೂ. ೨೪೦೦ ರಿಂದ ೧೮೦೦ ವರ್ಷಗಳ ಇತಿಹಾಸವನ್ನು ಹೊಂದಿದೆ ಎಂಬುದು ತಿಳಿಯುತ್ತದೆ. ಇಂತಹ ಇತಿಹಾಸವನ್ನು ಹೊಂದಿ, ಬೆಳೆದುಬಂದ ಕೃಷಿಯು ಇತಿಹಾಸ ಪೂರ್ವ ಅವಧಿಯಲ್ಲಿ ಕೃಷಿಕರ ಇಚ್ಛೆಗನುಸಾರವಾಗಿ, ಸ್ವತಂತ್ರ ಜೀವನ ಧಾರೆಯಾಗಿ, ಸ್ವಚ್ಛಂದವಾಗಿ ವಿಹರಿಸುವ ಹಕ್ಕಿಯೋಪಾದಿಯಲ್ಲಿ ಎಲ್ಲೆಂದರಲ್ಲಿ ಅಂದರೆ ತಮಗನಿಸಿದ ಯೋಗ್ಯ ಸ್ಥಳದಲ್ಲಿ, ಕೃಷಿ ಚಟುವಟಿಕೆಗಳು ಜರುಗುತ್ತಿದ್ದವು. ಅರಸಕೇಂದ್ರಿತ ರಾಜ್ಯಾಡಳಿತ, ಸಾಮ್ರಾಜ್ಯಶಾಹಿ ಧೋರಣೆ ಮತ್ತು ವಿಸ್ತರಣೆಗಳಿಂದಾಗಿ ಸ್ವಚ್ಛಂದವಾಗಿದ್ದ ಕೃಷಿ ಬದುಕು ಒಂದು ರೀತಿಯ ಕರಾರಿಗೊಳಪಟ್ಟು, ಸೀಮಿತ ವ್ಯಾಪ್ತಿ ಮತ್ತು ಚೌಕಟ್ಟಿನಲ್ಲಿ ನಿಗದಿಯಾಯಿತು. ಈ ಮೂಲಕ ಕೃಷಿಕರ ಸ್ವತಂತ್ರ ಕೃಷಿ ಬದುಕನ್ನು ಹತ್ತಿಕ್ಕುವ ಕಾರ್ಯಗಳು ಅರಸಕೇಂದ್ರಿತ ವ್ಯವಸ್ಥೆಯಿಂದ ಸಾಗಿಬಂದವು ಎಂಬುದು ತಿಳಿದುಬಂದಿದೆ.

➢ ಪ್ರಾಚೀನ ಕಾಲದಲ್ಲಿ ಅಂದಿನ ಜನಸಂಖ್ಯೆ, ಜನವಸತಿ ಮೊದಲಾದ ಜನಸಾಂದ್ರತೆಗೆ ಅನುಗುಣವಾಗಿ ಕೃಷಿ ಭೂಮಿಯು ವಿಸ್ತರಣೆಗೆ ಒಳಪಟ್ಟಿತ್ತು. ಅವಶ್ಯಕತೆಗೆ ತಕ್ಕಷ್ಟು ಉಳುಮೆ ಮತ್ತು ಉತ್ಪಾದನೆಯಂತಹ ಚಟುವಟಿಕೆಗಳು ಜರುಗುತ್ತಿದ್ದವು. ಇದಕ್ಕೆ ಪ್ರಮುಖ ಕಾರಣ ಪ್ರಾಚೀನ ಕೃಷಿಯು ತೀರದ ಲಾಭಗಳಿಕೆಯ ಉದ್ದೇಶವನ್ನು ಹೊಂದಿರಲಿಲ್ಲ. ಪರಂಪರಾನುಗತ ಪ್ರಾಚೀನ ಕೃಷಿಯಲ್ಲಿ ಕೃಷಿಕರು ಕೃಷಿಯ ಬಗೆಗೆ ಲೋಕದೃಷ್ಟಿಯನ್ನು ಹೊಂದಿದ್ದರು. ಇದರಿಂದಾಗಿಯೇ ಹವಾಗುಣಕ್ಕೆ ತಕ್ಕಂತೆ ಮಣ್ಣಿನ ಗುಣವನ್ನು ಅರಿತು ಕೃಷಿ ಕಾರ್ಯವನ್ನು ಮಾಡುತ್ತಿದ್ದರು. ಶಾಸನಗಳಲ್ಲಿ ಒಣಭೂಮಿ ಅಂದರೆ ಬೆದ್ದಲು ಭೂಮಿಯನ್ನು ಹೇರಳವಾಗಿ ದಾನ ನೀಡಿರುವುದು ಕಂಡುಬರುತ್ತದೆ. ಇದರಿಂದ ಒಣಭೂಮಿ ಬೇಸಾಯವನ್ನು ಅಭಿವೃದ್ಧಿಪಡಿಸುವ ಭಾಗವಾಗಿ ನೀಡಿರುವ ಸಾಧ್ಯತೆಗಳನ್ನು ಗುರುತಿಸಲಾಗಿದೆ. ಅಲ್ಲದೆ ನೀರಾವರಿ ಭೂಮಿಯು ಇಂದಿನಂತೆ ಅಂದೂ ಸಹ ಮೌಲ್ಯಾಧಾರಿತವಾಗಿತ್ತು ಎಂಬುದು ತಿಳಿದುಬರುತ್ತದೆ. ಇದರಿಂದಾಗಿ ಬೆದ್ದಲು ಭೂಮಿಯಷ್ಟು ಪ್ರಮಾಣದಲ್ಲಿ ನೀರಾವರಿ ಭೂಮಿಯನ್ನು ದಾನ ನೀಡಿರುವುದು ಕಂಡುಬರುವುದಿಲ್ಲ. ಅಲ್ಲದೆ ಪ್ರಾಚೀನ ಕೃಷಿಯು ಜೀವನಾವಶ್ಯಕತೆಗೆ ತಕ್ಕಷ್ಟು ವಿಸ್ತರಿಸಿದ್ದರಿಂದ ಸಹಜವಾಗಿ ಬೆದ್ದಲು ಭೂಮಿಗಳಲ್ಲಿ ಆಹಾರದ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ರಾಷ್ಟ್ರಕೂಟರ ಆಳ್ವಿಕೆಯವರೆಗೂ ಕೃಷಿಯ ಉತ್ಪನ್ನಗಳನ್ನು ತೆರಿಗೆಯ ರೂಪದಲ್ಲಿ ಪಡೆಯಲಾಗುತ್ತಿತ್ತು. ಅಲ್ಲದೆ ವಸ್ತುವಿನಿಮಯದಂತಹ ಕೊಡುಕೊಳುಗೆಗಳು ರೂಢಿಯಲ್ಲಿದ್ದವು. ಕೃಷಿಯಲ್ಲಿ ಇಂತಹ ವ್ಯವಸ್ಥೆಗೆ ಕಡಿವಾಣ ಬಿದ್ದದ್ದು, ಕಲ್ಯಾಣಿ ಚಾಲುಕ್ಯರ ಆಳ್ವಿಕೆಯಿಂದಾಗಿ ಸಂಭವಿಸಿತು. ಇದಕ್ಕೆ ಪ್ರಮುಖ ಕಾರಣ ಆಡಳಿತದ ವಿಕೇಂದ್ರೀಕರಣ ವ್ಯವಸ್ಥೆಯ ಜಾರಿಯ ಪರಿಣಾಮದಿಂದಾಗಿ ಸಂಭವಿಸಿತು. ಇದರಿಂದಾಗಿ ಗಾವುಂಡ, ಪೇರ್ಗಡೆ, ಮಾಂಡಳೀಕ, ಸಾಮಂತ ಮೊದಲಾದ ಅಧಿಕಾರಿ ವರ್ಗಗಳ ಕೈಯಲ್ಲಿ ಆಡಳಿತವು ವಿಭಜನೆಗೊಂಡು, ಇವರಲ್ಲಿ ಅಧಿಕಾರ ಕೇಂದ್ರೀಕೃತವಾಯಿತು. ಇದರಿಂದಾಗಿ ಆರ್ಥಿಕ ಬಿಕ್ಕಟ್ಟು ಸಹಜವಾಗಿಯೇ ಸಂಭವಿಸಿದ ಕಾರಣದಿಂದಾಗಿ ಆರ್ಥಿಕತೆಯು ಗ್ರಾಮೀಣ ಕೃಷಿಯನ್ನು ಅವಲಂಭಿಸಿತು. ಈ ಹಿನ್ನಲೆಯಲ್ಲಿ ಕೃಷಿಯು ಆರ್ಥಿಕ ಕೇಂದ್ರಿತ ಉತ್ಪನ್ನವಾಗಿ ಪರಿಣಮಿಸಲು ಆರಂಭಿಸಿತು. ಒಣಭೂಮಿ ಕೃಷಿಯ

ಅವಲಂಬನೆಯವರೆಗೂ ಕೃಷಿಯ ಅಭಿವೃದ್ಧಿ ಮತ್ತು ಬೆಳವಣಿಗೆಗಳು ಅಷ್ಟಾಗಿ ಕಂಡುಬಂದಿರುವುದಿಲ್ಲ. ಕೃಷಿ ಕೇಂದ್ರ ಬದುಕಿನ ಕಡೆಗೆ ಅಧಿಕಾರ ವ್ಯವಸ್ಥೆಯ ಗಮನ ತಿರುಗಿದಾಗ, ಕೃಷಿಯು ನೀರಾವರಿಗೆ ಒಳಪಡುವ ಮೂಲಕ ಅಭಿವೃದ್ಧಿಯ ಮೇಲ್ಚಲನೆಗೆ ದಾಪುಗಾಲನ್ನು ಇಟ್ಟಿತು.

➢ ಬೆದ್ದಲು ಭೂಮಿಯ ಕೃಷಿಯು ಇಂದಿನಂತೆ ಪ್ರಾಚೀನ ಕಾಲದಲ್ಲಿಯೂ ಸಹ ಲಾಭದಾಯಕವಾಗಿರಲಿಲ್ಲ. ಈ ಭೂಮಿಯಲ್ಲಿ ವರ್ಷಕ್ಕೆ ಒಂದು ಬೆಳೆ, ಕೆಲವೊಮ್ಮೆ ಎರಡು ಬೆಳೆಗಳನ್ನು ವಿರಳವಾಗಿ ಬೆಳೆಯಲಾಗುತ್ತಿತ್ತು. ಜನಸಂಖ್ಯೆಗೆ ಅನುಗುಣವಾಗಿ ಬೆದ್ದಲು ಕೃಷಿಗೆ ಅವಲಂಬಿತವಾಗದೆ ನೀರಾವರಿ ಬೇಸಾಯವು ಸಹ ಅಗತ್ಯಕ್ಕೆ ಅನುಸಾರವಾಗಿ ಜಾರಿಯಲ್ಲಿತ್ತು. ನೀರಾವರಿ ಬೇಸಾಯದಲ್ಲಿ ಸಾಮಾನ್ಯವಾಗಿ ಎರಡು ಬೆಳೆಗಳನ್ನು ಬೆಳೆಯುತ್ತಿದ್ದರು. ಅಲ್ಲದೆ ಪ್ರಧಾನವಾಗಿ ಭತ್ತದ ಬೆಳೆಯನ್ನು ಹೇರಳವಾಗಿ ಬೆಳೆದಿರುವುದು ಉಲ್ಲೇಖಿತ ಶಾಸನಗಳಿಂದ ತಿಳಿದುಬರುತ್ತದೆ. ಇದಕ್ಕೆ ಪ್ರಮುಖ ಕಾರಣ ಭತ್ತವು ಉನ್ನತ ವರ್ಗದವರೆಂದು ಕರೆಯಲ್ಪಡುವ ಬ್ರಾಹ್ಮಣರ ಆಹಾರ ಪದ್ಧತಿಯಾಗಿತ್ತೆಂದು ತಿಳಿದುಬಂದಿದೆ. ಈ ಹಿನ್ನೆಲೆಯಲ್ಲಿ ದಾನ ನೀಡುವಾಗ, ಕೃಷಿಕರು ಪಡಿಸಲಿಸುವಾಗ ಭತ್ತವನ್ನೆ ನೀಡಿರುವುದು ಕಂಡುಬರುತ್ತದೆ. ಕ್ರಿ.ಶ. ೮ನೆಯ ಶತಮಾನದ ನಂತರ ಭತ್ತವು ಪ್ರಮುಖ ಆರ್ಥಿಕ ವಹಿವಾಟಿನ ಆಹಾರದ ಆರ್ಥಿಕ ಬೆಳೆಯಾದಂತೆ ಕಂಡುಬರುತ್ತದೆ. ಇಂತಹ ಬೆಳೆಗಳನ್ನು ಬೆಳೆಯಲು ಹೇರಳವಾದ ನೀರಿನ ಅಗತ್ಯವಿರುತ್ತದೆ. ಈ ಹಿನ್ನೆಲೆಯಲ್ಲಿಯೂ ಕೃಷಿ ಭೂಮಿಯನ್ನು ನೀರಾವರಿಗೆ ಒಳಪಡಿಸಿದಂತೆ ಕಂಡುಬಂದಿದೆ. ಕ್ರಿ.ಶ. ೮, ೯ನೆಯ ಶತಮಾನದ ನಂತರ ಬೆದ್ದಲು ಭೂಮಿಗಳನ್ನು ನೀರಾವರಿ ಭೂಮಿಗಳಾಗಿ ಪರಿವರ್ತಿಸಿರುವುದು ಕಂಡುಬಂದಿದೆ. ಅದರಲ್ಲೂ ಕ್ರಿ.ಶ. ೯ನೆಯ ಶತಮಾನದ ಮಳವಳ್ಳಿ ತಾಲೂಕು ಯಮ್ಮದೂರು ಶಾಸನವು ಗ್ರಾಮವನ್ನು ನೆಲ್ಲು ಬೆಳೆಯುವ ಗದ್ದೆಯನ್ನಾಗಿ ಪರಿವರ್ತಿಸಲು ದಾನ ನೀಡಿದ್ದನ್ನು ತಿಳಿಸುತ್ತದೆ. ಈ ಅವಧಿಯನ್ನು ಮೊದಲುಗೊಂಡಂತೆ ಹೊಯ್ಸಳರ ಅವಧಿಯಲ್ಲಿ ಈ ರೀತಿಯ ಪರಿವರ್ತನೆಯ ಕಾರ್ಯಗಳು ದುಪ್ಪಟ್ಟು ಹೆಚ್ಚಾದುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆ ಎಂಬಂತೆ ಕ್ರಿ.ಶ. ೧೨೯೯ರ ಶಾಸನದಲ್ಲಿ ಪೆರುಮಾಳ ದಂಡನಾಯಕನು ಕೆರೆಯನ್ನು ತೋಡಿಸಿ ಕಾಲುವೆಯ ಕೆಳಗಿನ ಬೆದ್ದಲು ಭೂಮಿಯನ್ನು ಗದ್ದೆ ಭೂಮಿಯನ್ನಾಗಿ ಪರಿವರ್ತಿಸಿದನೆಂದು ತಿಳಿಸುತ್ತದೆ. ಕೃಷಿಯನ್ನು ನೀರಾವರಿಗೆ ಒಳಪಡಿಸುವ ದೃಷ್ಟಿಯಿಂದ ಕ್ರಿ.ಶ. ೮ನೆಯ ಶತಮಾನದಿಂದ ಕೆರೆಗಳ ನಿರ್ಮಾಣ ಕಾರ್ಯಗಳು ನಿಧಾನ ಗತಿಯಲ್ಲಿ ಬೆಳೆದು ೯,೧೦ನೆಯ ಶತಮಾನದ ವೇಳೆಗೆ ವೇಗಗತಿಯಲ್ಲಿ ಬೆಳೆದು ಬಂದುದು ತಿಳಿದುಬರುತ್ತದೆ. ಈ ರೀತಿ ಕೆರೆ ನಿರ್ಮಿಸಿದಾಗ ಕೆರೆಯ ಸುತ್ತಲಿನ ಪ್ರದೇಶವು ನೀರಾವರಿಗೆ ಒಳಪಡುತ್ತಿತ್ತು. ಇಂತಹ ಭೂಮಿಯು ಹೆಚ್ಚು ಫಲವತ್ತತೆಯಿಂದ ಕೂಡಿದ ಸಂಪದ್ಭರಿತ ಭೂಮಿಯಾಗಿತ್ತು. ಈ ಕಾರಣದಿಂದಾಗಿ ಇಂತಹ ಭೂಮಿಯನ್ನು ದಾನ ನೀಡುವಾಗ ಬೇರೆಡೆಯ ಭೂಮಿಗಿಂತ ಪ್ರಮಾಣದಲ್ಲಿ ಕಡಿಮೆ ಭೂಮಿಯನ್ನು ದಾನ ನೀಡಿರುವುದು ಕಂಡುಬಂದಿದೆ.

➢ ಪ್ರಾಚೀನ ಸಂದರ್ಭದ ಅರಸ ಮೊದಲಾದ ಅಧಿಕಾರಿ ವರ್ಗದವರು ಕೆರೆ, ಕಟ್ಟೆ, ಬಾವಿ ಮುಂತಾದವುಗಳನ್ನು ನಿರ್ಮಿಸುವ ಮೂಲಕ ನೀರಾವರಿ ಕೃಷಿಯನ್ನು ಅಭಿವೃದ್ಧಿಪಡಿಸಿ ಆ ಮೂಲಕ ಆರ್ಥಿಕ ಉತ್ಪನ್ನದ ಹೆಚ್ಚಳಕ್ಕೆ ಪರಿಹಾರ ಕಂಡುಕೊಂಡರು. ಕೆರೆ ನಿರ್ಮಾಣದ ಕಾರ್ಯಗಳು ಅಷ್ಟು ಸುಲಭವಾಗಿರಲಿಲ್ಲ. ಕೆಲವೊಮ್ಮೆ ನಿರ್ಮಾಣದ ಸಂದರ್ಭದಲ್ಲಿ ಭೂಮಿ ಮುಳುಗಡೆಯಾಗುವ ಪ್ರಸಂಗಗಳು ಎದುರಾಗುತ್ತಿದ್ದವು. ಅಲ್ಲಾಳ ಸಮುದ್ರದ ಕೆರೆಯನ್ನು ನಿರ್ಮಿಸಿದಾಗ ಶ್ರೀರಂಗಪುರದ ಬೆದ್ದಲು ಭೂಮಿ ಮುಳುಗಡೆಯಾದುದನ್ನು ನಾಗಮಂಗಲದ

ಶಾಸನವು ತಿಳಿಸುತ್ತದೆ. ಇದರಿಂದ ಆಡಳಿತದ ಅಧಿಕಾರ ವಿಕೇಂದ್ರೀಕರಣ ವ್ಯವಸ್ಥೆಯ ಫಲಶೃತಿಯಾಗಿಯೇ, ಕೆರೆಗಳ ದ್ವಿಗುಣ ಕಾರ್ಯಗಳು ಸಾಗಿಬಂದವೆಂಬುದು ತಿಳಿದುಬಂದಿದೆ. ಇದರಿಂದಾಗಿ ಕೃಷಿ ಅಭಿವೃದ್ಧಿಯ ಪರ್ವವೇ ಈ ಅವಧಿಯಲ್ಲಿ ನಡೆಯಿತೆಂದು ತಿಳಿಯುತ್ತದೆ.

- ಕ್ರಿ.ಶ. ೮ ರಿಂದ ೧೧ನೆಯ ಶತಮಾನದ ನಂತರದ ಕೃಷಿಯು ಆರ್ಥಿಕತೆಯ ಭಾಗವಾಗಿ ಮುಂದುವರೆಯಿತು. ಇದು ರಾಜ್ಯದ ಆದಾಯದ ಮೂಲವಾಗಿತ್ತು. ಸಮಾಜದ ವಿವಿಧ ವರ್ಗಗಳು ಇದನ್ನು ಅವಲಂಬಿಸಿದ್ದವು. ಆಹಾರೋತ್ಪಾದನೆಯೊಂದಿಗೆ ಆರ್ಥಿಕತೆಯ ಮೂಲ ಸೆಲೆಯಾಗಿಯೂ ಪರಿಣಮಿಸಿತ್ತು. ಕೃಷಿಯಿಂದ ಬರುವ ತೆರಿಗೆಯು ರಾಜ್ಯದ ಬೊಕ್ಕಸಕ್ಕೆ ಅಧಿಕ ಆದಾಯವನ್ನು ಭರಿಸುತ್ತಿತ್ತು. ಇದು ಶಾಸನದಲ್ಲಿ ದಾಖಲಾಗಿರುವ ಕೃಷಿ ತೆರಿಗೆಗಳ ಅಧ್ಯಯನದಿಂದ ತಿಳಿದುಬಂದಿದೆ. ಅಲ್ಲದೆ ತೆರಿಗೆಗೆ ನೀಡಿದ ಪ್ರಾಮುಖ್ಯತೆ ಕೃಷಿಕರಿಗೆ ನೀಡಿರುವುದು ಕಂಡುಬರುವುದಿಲ್ಲ. ರಾಜ್ಯದ ಆದಾಯಕ್ಕೆ ಉಳಿದ ವರ್ಗಕ್ಕಿಂತ ಹೆಚ್ಚಾಗಿ ಸಾಮಾನ್ಯ ವರ್ಗವೆಂದು ಕರೆಸಿಕೊಂಡ ಕೃಷಿವರ್ಗದ ಮೂಲಕ ಸಂದಾಯವಾಗುತ್ತಿದ್ದ ತೆರಿಗೆಯ ಪ್ರಮಾಣ ಅಧಿಕವಾಗಿ ಕಂಡುಬರುತ್ತದೆ. ಭೂರಹಿತ ಕೂಲಿ ಕೃಷಿಕರಿಗೂ ತೆರಿಗೆ ವಿಧಿಸುತ್ತಿದ್ದುದು ಕಂಡುಬಂದಿದೆ. ಇಂದಿನ ತೆರಿಗೆಗೆ ಹೋಲಿಕೆ ಮಾಡಿದರೆ ಪ್ರಾಚೀನ ಸಂದರ್ಭದಲ್ಲಿ ಪಾವತಿಸುವ ಕೃಷಿ ತೆರಿಗೆಗಳು ಅಧಿಕವಾಗಿದ್ದವು. ಭತ್ತ ಕೊಳ್ಳುವವರು ಭತ್ತದ ಕಾಲು ಭಾಗ ಭತ್ತವನ್ನು ತೆರಿಗೆಯಾಗಿ ನೀಡಬೇಕಿತ್ತೆಂಬ ಅಂಶಗಳು ಕೃಷಿಕರ ಶೋಷಣೆಯ ಪ್ರಮಾಣವನ್ನು ಸೂಚಿಸುತ್ತವೆ. ಈ ಅಂಶಗಳು ಈ ಅಧ್ಯಯನದ ಮೂಲಕ ತಿಳಿದುಬಂದಿವೆ. ಇಂದಿನ ಆಧುನಿಕ ಸಂದರ್ಭದಲ್ಲಿ ಇದಕ್ಕೆ ವ್ಯತಿರಿಕ್ತ ಸ್ಥಿತಿ ನಿರ್ಮಾಣಗೊಂಡಿದೆ. ಕೃಷಿಯಿಂದ ಸರ್ಕಾರಕ್ಕೆ ಬರುವ ಆದಾಯದ ಪ್ರಮಾಣವು ತೀರ ಕಡಿಮೆಯಾಗುತ್ತಿದೆ. ರಾಜ್ಯದ ಇತರ ಆದಾಯ ಮೂಲಗಳಿಂದ ಅಧಿಕ ತೆರಿಗೆ ಸಂಗ್ರಹವಾಗುತ್ತಿದೆ. ಅಲ್ಲದೆ ಕೃಷಿಯಿಂದ ಸರ್ಕಾರಕ್ಕೆ ಆದಾಯ ಬರುವುದಿರಲಿ ಸರ್ಕಾರವೇ ಕೃಷಿಗೆ ವಿನಿಯೋಗಿಸುವ ಸ್ಥಿತಿಗೆ ಇಂದಿನ ಕೃಷಿ ಬಂದು ತಲುಪಿದೆ. ನೀಡುವ ಕೈ ಬೇಡಿ ತಿನ್ನುವ ಕೈಯಾಗಿ ಪರಿಣಮಿಸಿದೆ. ಇಂತಹ ಸಮಸ್ಯಾತ್ಮಕ ಅಂಶಗಳಿಗೆ ಪ್ರಾಚೀನ ಕೃಷಿಯಲ್ಲಿ ಉತ್ತರಗಳಿರುವುದು ಕಂಡುಬಂದಿದೆ. ಪ್ರಾಚೀನ ಕಾಲದ ರಾಜರುಗಳು ಕೃಷಿಯ ಅಭಿವೃದ್ಧಿಗಾಗಿ ಕೃಷಿಯನ್ನು ನೀರಾವರಿಗೆ ಒಳಪಡಿಸುವ ನಿಟ್ಟಿನಲ್ಲಿ ಕೆರೆಗಳ ನಿರ್ಮಾಣ ನಿರ್ವಹಣೆ, ಜೀರ್ಣೋದ್ಧಾರಗಳಂತಹ ಪರಿಹಾರವನ್ನು ಕಂಡುಕೊಂಡಿದ್ದುದು ತಿಳಿದುಬರುತ್ತದೆ. ಈ ಮೂಲಕ ಕೃಷಿಗಾಗಿ ನೀರನ್ನು ಸಂಗ್ರಹಿಸುತ್ತಿದ್ದರು. ಇಂತಹ ಕಾರ್ಯಗಳು ಇಂದು ಸರ್ಕಾರಕ್ಕೆ ಏಕೆ ಸಾಧ್ಯವಾಗುತ್ತಿಲ್ಲವೆಂಬ ಪ್ರಶ್ನೆಯೊಂದಿಗೆ ಸವಾಲಾಗಿ ನಿಂತಿದೆ. ಕೆರೆಗಳ ನಿರ್ಮಾಣ ಕಾರ್ಯಗಳನ್ನು ಮಾಡುವುದಕ್ಕಿಂತ ಈಗಾಗಲೇ ಇರುವ ಕೆರೆಗಳನ್ನು ಜೀರ್ಣೋದ್ಧಾರ ಮಾಡುವ ಮೂಲಕ ಹೂಳೆತ್ತುವ, ತೂಬು, ಏರಿ, ಕೋಡಿ ಮೊದಲಾದವುಗಳ ದುರಸ್ಥಿ ಕಾರ್ಯವನ್ನು ಲಭ್ಯವಿರುವ ಸ್ಥಳೀಯ ಸಂಪನ್ಮೂಲಗಳನ್ನು ಬಳಕೆ ಮಾಡಿಕೊಂಡು, ಇಂತಹ ಕಾರ್ಯಗಳನ್ನು ಮಾಡುವ ಸಾಧ್ಯತೆಗಳಿವೆ. ಈ ನಿಟ್ಟಿನಲ್ಲಿ ಸರ್ಕಾರಗಳು ಕಾರ್ಯ ಪ್ರವೃತ್ತವಾಗುವ ಅಗತ್ಯತೆಗಳಿವೆ. ಪ್ರಾಚೀನ ಶಾಸನಗಳು ಬಾವಿ ತೋಡಿಸಿದುದನ್ನು ಉಲ್ಲೇಖಿಸಿವೆ. ಆದರೆ ಎಲ್ಲಿ ತೋಡಿಸಬೇಕು? ಹೇಗೆ ತೋಡಿಸಬೇಕೆಂಬ ಜ್ಞಾನವನ್ನು ಪ್ರಾಚೀನ ಕೃತಿಗಳಾದ ಬೃಹತ್ ಸಂಹಿತೆ ಮತ್ತು ಲೋಕೋಪಕಾರ ಕೃತಿಗಳು ತಿಳಿಸುತ್ತವೆ. ಹೀಗೆ ಬಾವಿಗಳನ್ನು ನಿರ್ಮಿಸುವ ಮೂಲಕ ಭೂಮಿಯನ್ನು ನೀರಾವರಿಗೆ ಒಳಪಡಿಸಲಾಗಿತ್ತೆಂಬ ಅಂಶವು ತಿಳಿದು ಬಂದಿದೆ.
- ಕ್ರಿ.ಶ. ೮ ರಿಂದ ೧೧ನೆಯ ಶತಮಾನದ ನಂತರ ಕೃಷಿಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಪ್ರಭುತ್ವವು ಹೇರಳವಾಗಿ ಹಣವನ್ನು ವಿನಿಯೋಗಿಸಿದುದು ಕಂಡುಬಂದಿದೆ. ಇದಕ್ಕೆ ಪ್ರತಿಯಾಗಿ ಕೃಷಿಯೂ ಸಹ ಅಭಿವೃದ್ಧಿಯೊಂದಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸಿತು. ಈ ಮೂಲಕ

ಇಳಿಮುಖಗೊಂಡ ವ್ಯಾಪಾರಕ್ಕೆ ಪುನಃ ಚಾಲನೆ ದೊರೆತದು ತಿಳಿದುಬರುತ್ತದೆ. ಇಂದಿನ ಕೃಷಿಯ ಅಭಿವೃದ್ಧಿಗೆ ಸರ್ಕಾರಗಳು ವಿನಿಯೋಗಿಸುತ್ತಿರುವುದು ವಿರಳ. ಅದರಂತೆ ಇದರಿಂದ ಸರ್ಕಾರಕ್ಕೆ ಸಂದಾಯವಾಗುವ ಕೃಷಿ ಆದಾಯದ ಪ್ರಮಾಣವೂ ಸಹ ವಿರಳತೆಯಿಂದಲೇ ಕೂಡಿದೆ.

- ಪಾರಂಪರಿಕ ಪ್ರಾಚೀನ ಕೃಷಿಯು ಬೇಸಾಯ ವಿಧಾನ, ಉಪಕರಣಗಳ ಬಳಕೆ, ಭೂಮಿಯ ಫಲವತ್ತತೆಯ ಕಡೆಗೆ ಹೆಚ್ಚಿನ ಗಮನಹರಿಸಿರುವುದು ಕಂಡುಬರುತ್ತದೆ. ಈ ಮೂಲಕ ಕೃಷಿಕರಲ್ಲಿ ಭೂಮಿಯ ಬಗೆಗೆ ದೈವೀ ಭಾವನೆಯನ್ನು ನಂಬಿಕೆಯ ಮೂಲಕ ನೆಲೆಗೊಳಿಸಿತ್ತು. ಜೊತೆಗೆ ಅರ್ಥಶಾಸ್ತ್ರಕಾರನು ಹೇಳುವಂತೆ ಮನರಂಜನೆ ಮೊದಲಾದ ಮಾಧ್ಯಮಗಳು ಕೃಷಿ ಗ್ರಾಮಕ್ಕೆ ಪ್ರವೇಶ ಮಾಡಬಾರದು ಎಂದಿದ್ದಾನೆ. ಇಂದಿನ ಆಧುನಿಕ ಮಾಧ್ಯಮಗಳಿಂದ ಒದಗಬಹುದಾದ ವಿಪತ್ತುಗಳನ್ನು ಪ್ರಾಚೀನ ಕೃಷಿಯಲ್ಲಿ ಅರ್ಥಶಾಸ್ತ್ರಕಾರನು ಅಂದೇ ತಿಳಿಸಿರುವುದು ಕಂಡುಬಂದಿದೆ. ಕೃಷಿಕರೊಂದಿಗಿನ ಭೂಮಿಯ ಸಂಬಂಧವು ತಾಯಿಮಕ್ಕಳ ಸಂಬಂಧವನ್ನು ಹೊಂದಿರಬೇಕು. ಪ್ರಾಚೀನ ಕೃಷಿಕರು ಭೂಮಿಯೊಂದಿಗೆ ಇಂತಹ ಸಂಬಂಧವನ್ನು ಹೊಂದಿದ್ದರು. ಆ ಮೂಲಕ ಭೂಮಿಯೊಂದಿಗೆ ದಿನವಿಡೀ ಕಾಲಕಳೆಯುತ್ತಿದ್ದರು. ಇದರಿಂದ ಬೆಳೆಗಳಲ್ಲಿ ಸಂಭವಿಸಬಹುದಾದ ಕೀಟಬಾಧೆ ಮೊದಲಾದ ರೋಗಗಳನ್ನು ತಮ್ಮ ಪಾರಂಪರಿಕ ಜ್ಞಾನದ ಮೂಲಕ ತಕ್ಷಣ ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯವಾಗುತ್ತಿತ್ತು. ಚಾವುಂಡರಾಯನು ಲೋಕೋಪಕಾರದಲ್ಲಿ ಗಿಡಮರಗಳಿಗೆ ಧೂಪಕೊಡುವ ವಿಧಾನವನ್ನು ಸೂಚಿಸಿದ್ದಾನೆ. ವೃಕ್ಷಗಳ ಬೊಡ್ಡೆಗಳಿಗೆ ಗಿಡಮೂಲಿಕೆಗಳನ್ನು ಅರೆದು ಲೇಪಿಸುವಂತೆ ನಿರ್ದೇಶಿಸಿದ್ದಾನೆ. ಇದಕ್ಕೆ ಪ್ರಾಣಿಜನ್ಯ, ಸಸ್ಯಜನ್ಯ ಪದಾರ್ಥಗಳ ಕಷಾಯವನ್ನು ವಿಶೇಷವಾಗಿ ಸಸ್ಯಗಳ ಬುಡಕ್ಕೆ ತಳಿಯುವ ಸಲಹೆಗಳು ಉತ್ತಮವಾಗಿವೆ. ಹೊಗೆ ಹಾಕುವಿಕೆಯಿಂದ ಕೀಟಬಾಧೆ, ಬೆಳೆಗಳಿಗೆ ಉಪದ್ರವ ನೀಡುವ ಇಲಿಗಳನ್ನು ನಾಶಪಡಿಸಬಹುದಾಗಿದೆ. ಈ ರೀತಿಯ ವೈಜ್ಞಾನಿಕ ಅಂಶಗಳ ಪರಿಹಾರೋಪಾಯಗಳು ಪ್ರಾಚೀನ ಕೃಷಿಯಿಂದ ತಿಳಿದುಬಂದಿದೆ. ಇಂದು ಕೃಷಿ ಕುರಿತ ಹಬ್ಬ ಆಚರಣೆಗಳಲ್ಲಿ ಕೆಲವು ಇಂದಿಗೂ ಈ ರೀತಿಯ ವೈಜ್ಞಾನಿಕ ಸತ್ಯವನ್ನು ಒಳಗೊಂಡಿವೆ. ಗೌರಿಹಬ್ಬ, ನಾಗರಪಂಚಮಿಗಳಲ್ಲಿ ಹೊಲ ಮತ್ತು ತೋಟಗಳಲ್ಲಿ ದೀಪ, ಧೂಪಗಳನ್ನು ಬೆಳಗಲಾಗುತ್ತದೆ. ಈ ಹಬ್ಬದ ಕಾಲವು ಪೈರು ಬೆಳೆದು ನಿಂತ ಕಾಲವಾಗಿರುತ್ತದೆ. ಈ ವೇಳೆಯಲ್ಲಿ ಬೆಳೆಯು ಕೀಟಬಾಧೆ, ಇಲಿಗಳ ಕಾಟಕ್ಕೆ ಬಲಿಯಾಗುತ್ತದೆ. ಇದರಿಂದಾಗಿ ಬೆಳೆಗಳಿಗೆ ಉಪದ್ರವ ಉಂಟು ಮಾಡುವ ಇಲಿಗಳನ್ನು ತಿನ್ನುವ ರೈತನ ಮಿತ್ರನಾದ ಹಾವಿಗೆ ಪೂಜೆ ಸಲ್ಲಿಸುವ ಮೂಲಕ ಕೃತಜ್ಞತೆ ಸಲ್ಲಿಸುವುದು ಕಂಡುಬರುತ್ತದೆ. ದೀಪ, ಧೂಪಗಳನ್ನು ಹಚ್ಚಿ ಹೊಲದ ಸುತ್ತಲೂ ಸುತ್ತುವರೆಯುವುದರಿಂದ ಕೀಟಬಾಧೆ, ಜಗಿರೋಗದಂತಹ ಬಾಧೆಗಳು ಕಡಿಮೆಯಾಗುತ್ತವೆ. ಹೊಲ ಅಥವಾ ತೋಟಗಳಲ್ಲಿ ಊಟಮಾಡಿ ಉಳಿದ ಪದಾರ್ಥವನ್ನು ಸಂಗ್ರಹಿಸಿ ನೀರಿನ ಮಿಶ್ರಣ ಮಾಡಿ ಚರಗ ಹಾಕುವುದರಿಂದ ಆಹಾರದ ಈ ಪದಾರ್ಥವು ಬೆಳೆ ಅಥವಾ ಭೂಮಿಯ ಮೇಲೆ ಬೀಳುತ್ತದೆ. ಬಿದ್ದ ಮೂರ್ನಾಲ್ಕು ದಿನಗಳಿಗೆ ಈ ಪದಾರ್ಥವು ವಿಷಕಾರಿಯಾಗಿ ಪರಿವರ್ತನೆಗೊಳ್ಳುತ್ತದೆ. ಬೆಳೆಗೆ ತಗಲಿದ ಕೀಟಗಳು ಇದನ್ನು ತಿನ್ನುವುದರಿಂದ ಕೀಟಗಳು ಸತ್ತು ಬೆಳೆಗಳ ಸಂರಕ್ಷಣೆಯಾಗುತ್ತದೆ. ಈ ರೀತಿಯ ಸೂಕ್ಷ್ಮತೆಯ ಅರಿವಿನ ವಿಸ್ಮೃತಿಗೆ ಇಂದಿನ ಆಧುನಿಕ ಕೃಷಿ ಜಾರಿರುವುದು ಕಂಡುಬರುತ್ತಿದೆ. ಇಂತಹ ಪರಂಪರೆಯ ಜ್ಞಾನದ ಮೂಲಕ ಅರಿವು ಮೂಡಿಸುವ ಅಗತ್ಯತೆ ಇಂದು ಎದುರಾಗಿದೆ. ಈ ದಿಶೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಮಾಡಲಾಗಿದೆ.
- ಪ್ರಾಚೀನ ಕೃಷಿಯಲ್ಲಿ ಶಾಸನಗಳು ತಿಳಿಸುವಂತೆ ವೀಳ್ಯೆದೆಲೆಯ ಉಲ್ಲೇಖ ಹೇರಳವಾಗಿ ಕಂಡುಬರುತ್ತದೆ. ಇದರೊಂದಿಗೆ ಅಡಕೆ, ಭತ್ತ, ಕಬ್ಬು ಬೆಳೆಗಳು ಕಂಡುಬರುತ್ತದೆ.

ವೀಳ್ಯದೆಲೆಯಂತಹ ಬೆಳೆಯು ತೋಟಗಳಲ್ಲಿ ಪ್ರಧಾನ ಬೆಳೆಗಿಂತ ಉಪಬೆಳೆಯಾಗಿ ಕಂಡುಬರುತ್ತದೆ. ಪ್ರಾಚೀನ ಕೃಷಿಕರು ತೋಟದಲ್ಲಿ ಈ ರೀತಿಯ ಏಕ ಬೆಳೆಗಳನ್ನು ಬೆಳೆಯದೆ ಮಿಶ್ರಬೆಳೆಗಳನ್ನು ಬೆಳೆಯುತ್ತಿದ್ದರು. ಈ ಅಂಶಗಳು ಅಧ್ಯಯನದಿಂದ ತಿಳಿದುಬಂದಿವೆ. ಇದರಿಂದಾಗಿಯೇ ಪ್ರಾಚೀನ ಕೃಷಿಯು ಇಂದಿನಷ್ಟು ನಷ್ಟವನ್ನು ಅನುಭವಿಸಿರುವುದು ವಿರಳದ ಸಂಗತಿಯಾಗಿ ಕಂಡುಬರುತ್ತದೆ. ತೋಟವೊಂದರಲ್ಲಿ ಪ್ರಾಚೀನ ಕೃಷಿಕರು ಅಡಕೆಯೊಂದಿಗೆ, ಎಲೆ, ಬಾಳೆ, ಮೆಣಸು ಮೊದಲಾದವುಗಳನ್ನು ಬೆಳೆಯುತ್ತಿದ್ದರು. ಅಡಕೆ ವಾರ್ಷಿಕ ಬೆಳೆಯಾಗಿರುತ್ತಿತ್ತು. ಅದರೊಂದಿಗೆ ರೈತರಿಗೆ ಎಲೆ, ಬಾಳೆ, ಮೆಣಸುಗಳು ಉಪ ಉತ್ಪನ್ನಗಳಾಗಿ ರೈತರ ದೈನಂದಿನ ಖರ್ಚುಗಳನ್ನು ನಿಭಾಯಿಸುತ್ತಿದ್ದವು. ಈ ರೀತಿಯಾಗಿ ಒಂದು ಕಡೆ ಭೂಮಿಯ ಫಲವತ್ತತೆಯನ್ನು ಕಾಯ್ದುಕೊಳ್ಳುತ್ತಿದ್ದರು. ಮತ್ತೊಂದು ಕಡೆ ನೀರಾವರಿ ಕೃಷಿಯನ್ನು ಲಾಭದಾಯಕ ವೃತ್ತಿಯನ್ನಾಗಿಸಿಕೊಂಡಿದ್ದರು. ಇಂದಿನ ಆಧುನಿಕ ಕೃಷಿಯು ಏಕ ಬೆಳೆ ಬೆಳೆಯುವ ಮೂಲಕ ಏಕ ಮುಖ ಚಲನೆಯಲ್ಲಿ ಸಾಗುತ್ತಿದೆ. ಜೊತೆಗೆ ಬಾಳೆಯಂತಹ ಬೆಳೆಗಳನ್ನು ಬೆಳೆಯಲು ನೀರಿನ ಅಭಾವದ ಸೃಷ್ಟಿ ಮತ್ತು ಮಾರುಕಟ್ಟೆಯಲ್ಲಿ ವೈಜ್ಞಾನಿಕ ಬೆಲೆಯ ಕೊರತೆ, ಮಧ್ಯವರ್ತಿಗಳ ಹಾವಳಿಯ ಕಾರಣದಿಂದಾಗಿ ಸಾಧ್ಯವಾಗುತ್ತಿಲ್ಲ. ಈ ಕಾರಣದಿಂದಾಗಿ ಇಂದಿನ ಆಧುನಿಕ ಕೃಷಿಯು ಸೋಲನ್ನು ಅನುಭವಿಸುತ್ತಿದೆ.

- ಭತ್ತ, ಅಡಕೆ, ವಿಳ್ಯೆದೆಲೆಯಂತಹ ಬೆಳೆಗಳು ಉಳಿದ ಬೆಳೆಗಳ ಪ್ರಮಾಣಕ್ಕಿಂತ ಅಧಿಕವಾಗಿ ಕಂಡುಬರುತ್ತವೆ. ಪ್ರಾಚೀನ ಕೃಷಿಯು ಅಂದಿನ ಜನಸಂಖ್ಯೆಗೆ ಅನುಗುಣವಾಗಿ ಹೇರಳವಾಗಿ ಅಡಕೆ ವೀಳ್ಯದೆಲೆ ಭತ್ತವನ್ನು ಬೆಳೆಯುತ್ತಿತ್ತು. ಇಂದು ನೀರಿನ ಅಭಾವದಿಂದಾಗಿ ವೀಳ್ಯಾದೆಲೆ ಬೆಳೆಯ ಪ್ರಮಾಣ ಗಣನೀಯವಾಗಿ ಕಡಿಮೆಯಾಗುತ್ತಿದೆ. ತೋಟಗಾರಿಕಾ ಮತ್ತು ವಾಣಿಜ್ಯ ಬೆಳೆಯೂ ಆಗಿರುವ ಅಡಕೆ ಬೆಳೆಯ ಪ್ರಮಾಣವು ಪ್ರಾಚೀನ ಕಾಲದಲ್ಲಿ ಹೇರಳವಾಗಿ ಕಂಡುಬಂದಿದೆ. ಜೊತೆಗೆ ವೀಳ್ಯೆದೆಲೆಯ ನಂತರ ಅತಿ ಹೆಚ್ಚು ತೆರಿಗೆಯನ್ನು ಈ ಬೆಳೆಗೆ ವಿಧಿಸಿರುವುದು ಕಂಡುಬರುತ್ತದೆ. ಆದರೆ ಇದು ಅಂದಿನ ಕಾಲ ಮತ್ತು ಜನಸಂಖ್ಯೆಗೆ ಅನುಗುಣವಾಗಿ ಆರೋಗ್ಯಕರವಾಗಿತ್ತು. ಇಂದು ಈ ಬೆಳೆಯು ಅತ್ಯಧಿಕ ವೇಗಗತಿಯಲ್ಲಿ ಸಾಗುತ್ತಿದೆ. ಆರ್ಥಿಕ ಲಾಭಗಳಿಕೆಯ ಉದ್ದೇಶಗಳಿಗಾಗಿ ರೈತರು ಈ ಬೆಳೆಯ ಮೊರೆಹೋಗುತ್ತಿದ್ದಾರೆ. ಇದರಿಂದ ಸಮಾಜದಲ್ಲಿ ಯಾರಿಗೆ ಲಾಭ? ಎಂಬ ಪ್ರಶ್ನೆ ಎದುರಾಗಿದೆ. ಸೀಮಿತ ವ್ಯಾಪ್ತಿಗೆ ಉಪಯೋಗವಾಗುವ ಈ ಬೆಳೆಯಿಂದಾಗಿ ಪ್ರಕೃತಿ ಮತ್ತು ಅದನ್ನವಲಂಬಿಸಿದ ರೈತರ ಸ್ಥಿತಿ ಚಿಂತಾಜನಕವಾಗುತ್ತಿದೆ. ಒಂದೆಡೆ ಪ್ರಕೃತಿಯಲ್ಲಿ ಕಾಲಕ್ಕೆ ತಕ್ಕಂತೆ ಮಳೆ ಸುರಿಯುತ್ತಿಲ್ಲ. ಅಡಕೆ ಬೆಳೆಯನ್ನು ನಂಬಿದ ರೈತರು ಅದರ ಉಳಿವಿಗಾಗಿ ಅಂತರ್ಜಲವನ್ನು ಬರಿದು ಮಾಡುತ್ತಿದ್ದಾರೆ. ಅಲ್ಲದೆ ಕೊಳವೆ ಬಾವಿಗಳನ್ನು ಹೆಚ್ಚಾಗಿ ಕೊರೆಸುವ ದೃಷ್ಟಿಯಿಂದ ಅದಕ್ಕೆ ಬಂಡವಾಳವನ್ನು ಹೂಡುತ್ತಿರುವ ಹಿನ್ನೆಲೆಯಲ್ಲಿ ಜೂಜಾಟವಾಡುತ್ತಿದ್ದಾರೆ. ಇದಕ್ಕೆ ಬಲಿಯಾಗಿ ರೈತ ಆತ್ಮಹತ್ಯೆಯಂತಹ ಪ್ರಕರಣಗಳು ಹೆಚ್ಚಾಗುತ್ತಿವೆ. ಇದರ ಬಗೆಗೆ ಜನರಲ್ಲಿ ಜಾಗೃತಿ ಮೂಡಿಸುವ ಮತ್ತು ಇಂತಹ ಪ್ರಕ್ರಿಯೆಯನ್ನು ನಿಯಂತ್ರಿಸುವ ಹೊಣೆ ಸರ್ಕಾರದ ಮೇಲಿದೆ. ಜೊತೆಗೆ ರೈತರೆ ಸ್ವಯಂ ಪ್ರೇರಿತರಾಗಿ ಇದರ ಬಗೆಗೆ ಮನಗಾಣುವ ಅಗತ್ಯವಿದೆ. ಈ ಬಗೆಗೆ ರೈತರು ಜಾಗೃತಿ ಹೊಂದದ ಹೊರತು ಪ್ರಕೃತಿಯ ಉಳಿವು ಅಸಾಧ್ಯವಾಗಿದೆ. ಇಂತಹ ಅನಾವುತಗಳಿಗೆ ದಂಡ ತೆರವು ಕಾಲ ಎದುರು ನಿಲ್ಲುತ್ತಿದೆ.

- ಪ್ರಾಚೀನ ಕೃಷಿಯಲ್ಲಿ ಬೆದ್ದಲು ಬೆಳೆಗಳಾಗಿ ಎಳ್ಳು, ರಾಗಿ, ಜೋಳ, ನವಣೆ ಮೊದಲಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಇದರೊಂದಿಗೆ ಬಹು ಬೆಳೆಗಳನ್ನು ಬೆಳೆಯುತ್ತಿದ್ದರು. ಇದರಿಂದ ತಮಗೆ ಜೀವನಾವಶ್ಯಕತೆಗೆ ಬೇಕಾದ ಸಾಕಷ್ಟು ಬೆಳೆಗಳನ್ನು ತಾವೇ ಬೆಳೆದುಕೊಳ್ಳುತ್ತಿದ್ದರು.

ಬೆಳೆಯದ ಬೆಳೆಯನ್ನು ಬೇರೆಯವರಿಂದ ವಿನಿಮಯ ಮಾಡಿಕೊಳ್ಳುವ ಪದ್ಧತಿ ಜಾರಿಯಲ್ಲಿತ್ತು. ಇಲ್ಲವಾದರೆ ಕಡ(ಒಂದು ರೀತಿಯ ಸಾಲದೋಪಾದಿಯದು) ದಂತೆ ಪಡೆಯುತ್ತಿದ್ದರು. ತಾವು ಬೆಳೆದಾಗ ಕಡ ತೆಗೆದುಕೊಂಡ ಧಾನ್ಯಗಳನ್ನು ವಾಪಸ್ಸು ನೀಡುತ್ತಿದ್ದರು. ಇದರಿಂದಾಗಿ ಕೃಷಿಯು ಹೊರೆಯಾಗಿರಲಿಲ್ಲ ಮತ್ತು ಹಾನಿಗೊಳಗಾಗಿರಲಿಲ್ಲ. ಆದರೆ ಇಂದು ಆರ್ಥಿಕ ಲಾಭಗಳಿಕೆಯ ಉದ್ದೇಶ ಸಾಧನೆಗಾಗಿ ಆಹಾರ ಬೆಳೆಗಳನ್ನು ಬೆಳೆಯುವ ಪ್ರಮಾಣ ಕಡಿಮೆಯಾಗುತ್ತಿದೆ. ಬದಲಿಗೆ ವಾಣಿಜ್ಯ ಬೆಳೆಗಳಿಗೆ ರೈತರು ಮಾರು ಹೋಗಿದ್ದಾರೆ. ಇಂದಿನ ವೆಚ್ಚದಾಯಕ ಕೃಷಿಯಿಂದಾಗಿ ಅಕ್ಷಯದ ಪಾತ್ರೆಯಂತಿದ್ದ ಕೃಷಿಕನ ನೀಡುವ ಕೈ ಬೇಡುವ ಕೈ ಆಗಿ ಕಂಡುಬರುತ್ತಿದೆ. ಈಗೆಂದ ಮಾತ್ರಕ್ಕೆ ಪ್ರಾಚೀನ ಕಾಲದ ಕೃಷಿಕರು ಶ್ರೀಮಂತರಾಗಿದ್ದರೆಂದಲ್ಲ. ಅಂದೂ ಸಹ ಬೆದ್ದಲು ಬೆಳೆಗಳಾದ ಆಹಾರದ ಬೆಳೆಗಳು ಲಾಭದಾಯಕವಾಗಿದ್ದಂತೆ ಕಂಡುಬರುವುದಿಲ್ಲ. ಬದಲಿಗೆ ಅಂದಿನ ಜೀವನ ನಿರ್ವಹಣೆಗೆ ಮತ್ತು ಸರಳ ಬದುಕಿಗೆ ಪೂರಕವಾಗಿದ್ದವು ಪ್ರಾಚೀನ ಕಾಲದಲ್ಲಿಯೂ ನೀರಾವರಿ ಬೆಳೆಗಳಿಂದ ಬರುತ್ತಿದ್ದ ಆದಾಯದ ಪ್ರಮಾಣಕ್ಕೆ ಹೋಲಿಸಿದರೆ, ಬೆದ್ದಲು ಬೆಳೆಗಳಾದ ಆಹಾರಧಾನ್ಯಗಳಿಂದ ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುತ್ತಿದ್ದ ಆದಾಯ ಕಡಿಮೆಯಾಗಿಯೇ ಆಗಿ ಕಂಡುಬರುತ್ತದೆ. ಇಂದು ಈ ಬೆಳೆಗಳನ್ನು ಬೆಳೆಯುವ ರೈತರು ಆರ್ಥಿಕ ಸಂಕಷ್ಟದಲ್ಲಿದ್ದಾರೆ. ಇವುಗಳಿಗೆ ವೈಜ್ಞಾನಿಕ ಬೆಲೆಯ ಕೊರತೆ ಕಂಡುಬರುತ್ತಿದೆ. ಆದರೆ ಆಹಾರದ ಬೆಳೆಗಳು ಸಹ ಈ ಸಂಕಟದಿಂದ ಹೊರಬಂದಿಲ್ಲ. ಬದಲಿಗೆ ಕಡಿಮೆ ಮಳೆ, ಕಡಿಮೆ ಖರ್ಚಿನಲ್ಲಿ ಬೆಳೆಯುವ ಬೆಳೆಗಳಾಗಿ ಕಂಡುಬರುತ್ತವೆ. ಆದರೂ ವಾಣಿಜ್ಯ ಬೆಳೆಗೆ ಹೋಲಿಸಿದರೆ ಕಡಿಮೆ ಇಳುವರಿಯನ್ನು ಕೊಡುತ್ತವೆ. ಇವುಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆಯ ಕೊರತೆ ಮತ್ತು ಬೆಲೆಯ ಕೊರತೆ ಕಂಡುಬರುತ್ತದೆ. ಜೊತೆಗೆ ಮಧ್ಯವರ್ತಿಗಳ ಹಾವಳಿಗೆ ಸಿಕ್ಕು ನಲುಗುತ್ತಿವೆ. ಸರ್ಕಾರಗಳು ಮಧ್ಯೆ ಪ್ರವೇಶಿಸಿ ಈ ಬೆಳೆಗಳಿಗೆ ವೈಜ್ಞಾನಿಕ ಬೆಲೆಯನ್ನು ನಿಗದಿ ಮಾಡಿದರೆ ಮಾತ್ರ ಈ ಬೆಳೆಗಳು ಲಾಭದಾಯಕವಾಗುವ ಸಾಧ್ಯತೆಗಳಿವೆ. ಪ್ರಾಚೀನ ಕೃಷಿಯಲ್ಲಿ ಆವರ್ತನ ಬೆಳೆಗಳನ್ನು, ಬಹುಬೆಳೆಗಳನ್ನು ಬೆಳೆಯುವ ಮೂಲಕ ಭೂಮಿಯ ಫಲವತ್ತತೆಯನ್ನು ಕಾಯ್ದುಕೊಂಡಿದ್ದರು. ಆದರೆ ಇಂದು ಪ್ರತಿ ವರ್ಷವು ಏಕ ಬೆಳೆಗಳನ್ನು ಬೆಳೆಯುವ ಮೂಲಕ ಭೂಮಿಯನ್ನು ಬಂಜೆಯಾಗಿಸಲಾಗುತ್ತಿದೆ. ಈ ಹಿನ್ನಲೆಯಲ್ಲಿ ಮಣ್ಣಿನ ಆರೋಗ್ಯ ಹದಗೆಡುತ್ತಿದೆ. ಆಧುನಿಕತೆಯ ಸೋಗಿನಲ್ಲಿ ಅಭಿವೃದ್ಧಿಯ ಲೇಪನ ಹಚ್ಚಿಕೊಂಡು ಭೂರಹಿತರಾಗುತ್ತಿದ್ದಾರೆ. ಪ್ರಾಚೀನ ಕಾಲದಲ್ಲಿ ಅಧಿಕಾರಶಾಹಿಯ ಕಪಿಮುಷ್ಠಿಗೆ ಸಿಕ್ಕಿ ಕೃಷಿಕರು ಹೆಚ್ಚಿನ ಸಂಖ್ಯೆಯಲ್ಲಿ ಭೂರಹಿತ ಕೃಷಿಕರಾಗಿದ್ದರು. ಆದರೆ ಇಂದು ಆಧುನಿಕತೆಯ ಅತಿಯಾದ ಅಳವಡಿಕೆ ಕೃಷಿಕರನ್ನು ಭೂರಹಿತರನ್ನಾಗಿ ಮಾಡುತ್ತಿದೆ ಎಂಬ ಅಂಶಗಳನ್ನು ಅಧ್ಯಯನದ ಮೂಲಕ ತಿಳಿದುಬಂದಿದೆ.

- ಶಾಸನಗಳಲ್ಲಿ ಕಂಡುಬರುವ ತುಱುಗೋಳ್ ವೀರಗಲ್ಲುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಕೃಷಿಗಾಗಿ ಪಶುಪಾಲನೆಗೆ ನೀಡಿದ ಮಹತ್ವವು ಸೂಚ್ಯವಾಗಿ ಅಧ್ಯಯನದ ಮೂಲಕ ಹೊರಬರುತ್ತದೆ. ಪ್ರಾಚೀನ ಕೃಷಿಯಲ್ಲಿ ಕಂಡು ಬರುವ ಕೃಷಿಯೊಂದಿಗಿನ ಪಶುಪಾಲನೆಯ ಸಂಬಂಧವು ಕೃಷಿ ಭೂಮಿ ಮತ್ತು ಬೆಳೆಗಳ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಗಿತ್ತೆಂದು ತಿಳಿದುಬರುತ್ತದೆ. ಕೃಷಿ ಭೂಮಿಗೆ ಗೊಬ್ಬರದ ಅಗತ್ಯವನ್ನು ಚಾವುಂಡರಾಯನು ವಿವರಿಸಿದ್ದಾನೆ. ಇವನು ತೋಟದ ಬೆಳೆಗಳಿಗೆ ನೀರ್ಗೊಬ್ಬರ ಉಪಯುಕ್ತ. ಘನರೂಪದ ಗೊಬ್ಬರವು ಸಮಯವನ್ನು ತೆಗೆದುಕೊಳ್ಳುತ್ತದೆ. ಎಳೆ ಮತ್ತು ಸಸಿಗಳ ಮೇಲೆ ಘನರೂಪದ ಗೊಬ್ಬರ ಬಿದ್ದರೆ ಸಸಿಗಳು ಕೊಳೆತು ಹೋಗುವ ಅಥವಾ ಸುಟ್ಟು ಹೋಗುವ ಸಂಭವವಿರುತ್ತದೆ. ಈ ರೀತಿಯ ಜ್ಞಾನವು ಪ್ರಾಚೀನ ಕೃಷಿಯಿಂದ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಕೃಷಿ ಮತ್ತು ಪಶುಪಾಲನೆಗಳ ಸಂಬಂಧವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ

ಕೃಷಿಯ ಸಮೃದ್ಧಿಗೆ ಪಶುಪಾಲನೆಯು ಹೇಗೆ ಪೂರಕವಾಯಿತು ಎಂಬ ಅಂಶವನ್ನು ಗುರುತಿಸಲಾಗಿದೆ. ಹಸುಗಳು ಫಲವಂತಿಕೆಯ ಸಂಕೇತಗಳಾಗಿ ಕೃಷಿಗೆ ಅಗತ್ಯವಾದ ಎತ್ತುಗಳ ಜನನಕ್ಕೆ ಕಾರಣವಾಗುತ್ತವೆ. ಕೃಷಿ ಭೂಮಿಗೆ ಗೊಬ್ಬರವನ್ನು ಪೂರೈಸುತ್ತವೆ. ಕೃಷಿಕರ ದೈನಂದಿನ ವ್ಯವಹಾರಗಳ ವ್ಯಯಕ್ಕಾಗಿ ಹೈನುಗಾರಿಕೆಯ ಮೂಲಕ ಸಹಕಾರಿಯಾಗುತ್ತವೆ ಎಂಬ ಅಂಶಗಳನ್ನು ಅಧ್ಯಯನದ ಮೂಲಕ ಗುರುತಿಸಲಾಗಿದೆ. ಈ ಮೂಲಕ ಪ್ರಾಚೀನರು ಲಾಭದಾಯಕ ಕೃಷಿಗೆ ಕಂಡುಕೊಂಡ ಪರ್ಯಾಯ ಚಿಂತನೆಯಾಗಿ ಕಂಡುಬರುತ್ತದೆ. ಇದಕ್ಕೆ ಪೂರಕವೆಂಬಂತೆ ಧಾನ್ಯಗಳಿಂದ ಬೇರ್ಪಡಿಸಿದ ಹುಲ್ಲಿನ ಬವಣೆಗಳು ಪಶುಗಳಿಗೆ ಆಹಾರವಾಗುವ ಮೂಲಕ ಕೃಷಿಯೊಂದಿಗೆ ಹೊಂದಿದ ಸಂಬಂಧವನ್ನು ತಿಳಿಸುತ್ತವೆ.

- ಪ್ರಾಚೀನ ಕೃಷಿಯಲ್ಲಿ ಬಳಕೆಯಾದ ನೇಗಿಲು ಮೊದಲಾದ ಉಪಕರಣಗಳು ಭೂಮಿಯ ಫಲವತ್ತತೆಯನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಸಹಕಾರಿಯಾಗಿದ್ದವು. ಅಲ್ಲದೆ ಇವುಗಳು ವೆಚ್ಚದಾಯಕವಾಗಿರಲಿಲ್ಲ. ಆದರೆ ಇಂದಿನ ವೈಜ್ಞಾನಿಕ ಉಪಕರಣವಾದ ಟ್ರಾಕ್ಟರ್ ಬಳಕೆಯಿಂದಾಗಿ ಭೂಮಿಯ ಫಲವತ್ತಾದ ಮೇಲ್ಪದರವು ನಶಿಸಿಹೋಗುವತ್ತ ದಾರಿ ಮಾಡಿಕೊಡುತ್ತಿದೆ. ಕಾರಣ ಈ ಉಪಕರಣವು ವ್ಯವಸಾಯ ಚಟುವಟಿಕೆ ಜರುಗಬೇಕಾದ ಉಳುಮೆಗಿಂತ ಆಳಕ್ಕೆ ಇಳಿದು ಉಳುತ್ತಿವೆ. ಇದರಿಂದ ಮಣ್ಣಿನ ಮೇಲ್ಪದರದಂತಹ ನಷ್ಟಗಳು ಕಂಡುಬರುತ್ತಿವೆ. ಜೊತೆಗೆ ಭೂಮಿಯು ದಿನದಿಂದ ದಿನಕ್ಕೆ ಬಂಜರಾಗುತ್ತಿದೆ. ಇದರಿಂದ ಪುನಃ ದೇಶಿ ಉಪಕರಣಗಳನ್ನು ಬಳಸುವ ಮೂಲಕ ಮಣ್ಣಿನ ಮೇಲ್ಪದರದ ರಕ್ಷಣೆಯನ್ನು ಮಾಡುವ ಅಗತ್ಯವಿದೆ. ಪ್ರಾಚೀನ ಕೃಷಿಯಲ್ಲಿ ಬಹುತೇಕ ಸರಕು ಸಾಗಾಣಿಕೆಯ ವಾಹನಗಳಾಗಿ ಎತ್ತಿನಗಾಡಿಗಳು ಕಂಡುಬರುತ್ತವೆ. ಇವುಗಳಿಂದಾಗಿ ರೈತರ ಕೃಷಿಕಾರ್ಯ ಸುಗಮವಾಗಿ ಸಾಗುತ್ತಿತ್ತಲ್ಲದೆ ಸಾಗಾಣಿಕೆಯ ಆರ್ಥಿಕ ಹೊರೆಯನ್ನು ತಗ್ಗಿಸುತ್ತಿತ್ತು. ಈ ಕಾರಣದಿಂದಲೂ ಪ್ರಾಚೀನ ಕೃಷಿ ವೆಚ್ಚದಾಯಕವಾಗಿರಲಿಲ್ಲವೆಂಬ ಅಂಶವು ತಿಳಿದುಬಂದಿದೆ.
- ಆಧುನೀಕ ಕೃಷಿಯ ಅಸ್ತಿತ್ವದಿಂದಾಗಿ ಕೃಷಿಕನ ಶ್ರಮವು ಕಣ್ಮರೆಯಾಗುತ್ತಿದೆ. ಇದರಿಂದಾಗಿ ಶ್ರಮಿಕರು ನಿರುದ್ಯೋಗಿಗಳಾಗುತ್ತಿದ್ದಾರೆ. ಬಿತ್ತನೆ ಬೀಜದಿಂದ ಮೊದಲುಗೊಂಡು ಕೃಷಿಯು ಪರಾವಲಂಬಿಯಾಗಿದೆ. ಇದಕ್ಕೆ ಪರ್ಯಾಯವೆಂಬ ದಿಕ್ಕಿನಲ್ಲಿ ಪ್ರಾಚೀನ ಕೃಷಿ ಕಂಡುಬಂದಿದೆ. ಕೃಷಿಯು ಬಿತ್ತನೆ ಬೀಜದಿಂದ ಧಾನ್ಯ ಸಂಗ್ರಹಣೆಯ ಹಂತದವರೆಗೂ ಸ್ವಾವಲಂಬಿಯಾಗಿತ್ತು ಎಂಬುದು ಕಂಡುಬಂದಿದೆ.
- ಲೋಕೋಪಕಾರನು ತಿಳಿಸುವ ಬಿತ್ತನೆ ಬೀಜಗಳ ಸಂಸ್ಕರಣೆ ಇಂದಿಗೂ ಸಾಧ್ಯವಾದರೆ ಕೃಷಿಯಲ್ಲಿ ಬಿತ್ತನೆ ಬೀಜಗಳ ಸ್ವಾವಲಂಬನೆ ಸಾಧ್ಯವಾಗುತ್ತದೆ. ದೇಶೀ ಬೀಜ ಸಂಸ್ಕರಣಾ ವಿಧಾನವನ್ನು ಕೃಷಿಕರು ಬಳಸುವ ಮೂಲಕ ಇದರ ಹೊರೆಯನ್ನು ಇಳಿಸಿಕೊಳ್ಳುವ ಸಾಧ್ಯತೆಗಳಿವೆ. ಕೃಷಿಕರು ಇಂದಿನಂತೆ ಅಂದೂ ಸಹ ಕಷ್ಟ ನಿಷ್ಠೂರಗಳನ್ನು ಅನುಭವಿಸಿ, ಭೂಮಿಯಲ್ಲಿ ಕಷ್ಟಪಟ್ಟು ದುಡಿದು ಲಾಭದಾಸೆಯಿಂದ, ಬೆಳೆಗಳನ್ನು ಹಾಳು ಮಾಡಿಕೊಳ್ಳುತ್ತಿದ್ದರು. ಇದು ಕ್ರಿ.ಶ. ೧೧೧೫ರ ಬರ್ಮ್ಮಣ್ಣನ ಶಾಸನದಿಂದ ತಿಳಿದುಬಂದಿದೆ.
- ಪ್ರಾಚೀನ ಕೃಷಿ ವೆಚ್ಚದಾಯಕವಾಗಿರಲ್ಲಿಲ್ಲ. ಕೃಷಿಯಿಂದ ಅಧಿಕ ತೆರಿಗೆಯು ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುತ್ತಿತ್ತೆಂಬ ಅಂಶವು ಅಧ್ಯಯನದ ಮೂಲಕ ತಿಳಿದುಬಂದಿದೆ.
- ಉಳ್ಳವರ ಅರಸಕೇಂದ್ರಿತ ಅಧ್ಯಯನದ ನೆಲೆಯಲ್ಲಿ ಸಾಗಿದ ಅಧ್ಯಯನಗಳು ಚರಿತ್ರೆಯಲ್ಲಿ ಕೃಷಿಕನ ಶ್ರಮವನ್ನು ಗೌಣವಾಗಿಸಿ ತೆರಿಗೆ ಪಾವತಿಸುವ ಸರಕಾಗಿ ಕೃಷಿಕರನ್ನು ಪರಿಭಾವಿಸಿರುವುದು ತಿಳಿದುಬರುತ್ತದೆ.

- ಆರ್ಥಿಕತೆಯ ಮೂಲಕ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಬೆಳವಣಿಗೆಗಳಿಗೆ ವ್ಯಾಪಾರವು ಕಾರಣವಾಯಿತೆಂಬ ಅಂಶಗಳು ಅಧ್ಯಯನದಿಂದ ತಿಳಿದುಬಂದಿವೆ.
- ಪ್ರಾಚೀನ ಕೃಷಿಯಲ್ಲಿ ಬಹುತೇಕ ಕೃಷಿಕರು ಶ್ರೀಮಂತ ವರ್ಗದವರು ನೀಡಿದ ಗೇಣಿ ಭೂಮಿಯಲ್ಲಿ ಉಳುಮೆ ಮಾಡುತ್ತಿದ್ದರು. ಇಂದಿಗೆ ಹೋಲಿಕೆ ಮಾಡಿದರೆ ಪ್ರಾಚೀನ ಕೃಷಿಯಲ್ಲಿ ಭೂಕಂದಾಯದ ಪ್ರಮಾಣ ಅಧಿಕವಿದ್ದಂತೆ ಕಂಡುಬರುತ್ತದೆ. ಇದಕ್ಕೆ ಪ್ರಮುಖ ಕಾರಣ ರಾಜ್ಯದ ಆದಾಯವು ಕೃಷಿಯನ್ನು ಅವಲಂಬಿಸಿತ್ತು. ಇಂದು ರೈತರ ಭೂಕಂದಾಯಕ್ಕಿಂತ ಬೇರೆ ಮೂಲಗಳಿಂದ ಅಧಿಕ ತೆರಿಗೆ ರಾಜ್ಯದ ಆದಾಯಕ್ಕೆ ಸಂದಾಯವಾಗುತ್ತಿದೆ. ಪ್ರಾಚೀನ ಕೃಷಿಕರು ತಮ್ಮ ಅನುಭವದ ಆಧಾರದ ಮೇಲೆ ಭೂಮಿಯ ಪ್ರಮಾಣಕ್ಕೆ ಅನುಗುಣವಾಗಿ ಇಂತಿಷ್ಟು ಬೀಜಗಳನ್ನು ಬಿತ್ತಬೇಕೆಂಬುದನ್ನು ಕಂಡುಕೊಂಡಿದ್ದರು. ಇದು ಬಿತ್ತನೆ ಸಾಮರ್ಥ್ಯಕ್ಕೆ ಅನುಗುಣವಾಗಿ ಉಲ್ಲೇಖಿಸಿದ ಅಳತೆ ಪ್ರಮಾಣದಿಂದ ತಿಳಿಯುತ್ತದೆ. ಚಿಕ್ಕಮಗಳೂರಿನ ಅಂಬಳೆಯ ಶಾಸನವು ಬಿತ್ತನೆ ಸಾಮರ್ಥ್ಯ ಮೂರು ಖಂಡುಗ ಎಂದಿದೆ. ಭೂಮಿಯ ಅಳತೆಗೆ ಸಂಬಂಧಿಸಿದಂತೆ ಆಗಾಗ ಸಂಭವಿಸುವ ಭೂವ್ಯಾಜ್ಯದ ಹಿನ್ನೆಲೆಯಲ್ಲಿ ಈ ರೀತಿಯ ಅಳತೆ ಮಾಪನಗಳು ರೂಢಿಗೆ ಬಂದವೆಂದು ತಿಳಿಯುತ್ತದೆ. ಜಮೀನಿನ ವಿಸ್ತಾರ ಮತ್ತು ಹರವುಗಳನ್ನು ಗುರುತಿಸಲು ಇದರಿಂದ ಸಾಧ್ಯವಾಯಿತು. ಸಂತೆಗಳು ಆಧುನಿಕ ಮಾರುಕಟ್ಟೆಗಳಂತೆ ಕಂಡುಬರುತ್ತವೆ. ಇಂದಿನ ಮಾರುಕಟ್ಟೆಯಲ್ಲಿ ದೊರೆಯುವಂತೆ ಎಲ್ಲ ರೀತಿಯ ವಸ್ತುಗಳು ದೊರೆಯುತ್ತಿದ್ದವು. ಇದು ಕಲ್ಯಾಣಿ ಚಾಲುಕ್ಯರಿಂದ ಆರಂಭಗೊಂಡು ವಿಜಯನಗರದ ವೇಳೆಗೆ ಕುಮ್ಮಟಿಗಳು ಬಂದ ಹಾಗೆ ಕ್ಷೀಣಿಸಿತೆಂದು ತಿಳಿದುಬರುತ್ತದೆ. ಸಂತೆಗಳು ಪ್ರಾಚೀನ ಕೃಷಿ ಉತ್ಪನ್ನಗಳ ವ್ಯಾಪಾರ ಮತ್ತು ವ್ಯವಹಾರಗಳ ಕೇಂದ್ರ ಸ್ಥಾನಗಳಾಗಿದ್ದವು ಎಂಬ ಅಂಶವು ಈ ಅಧ್ಯಯನದಿಂದ ತಿಳಿದುಬಂದಿದೆ.
- ದೇವಾಲಯಗಳು ಬಹುಮುಖಿ ಕಾರ್ಯಗಳನ್ನು ನಿರ್ವಹಿಸಿರುವುದು ಈ ಅಧ್ಯಯನದಿಂದ ತಿಳಿಯಲಾಯಿತು.
- ಇಂದು ವಿಸ್ಮೃತಿಗೊಳಗಾಗಿರುವ ಸಾಂಸ್ಕೃತಿಕ ಅನನ್ಯತೆ ಮತ್ತು ಸಂಬಂಧಗಳು ಪ್ರಾಚೀನ ಕೃಷಿಯಲ್ಲಿ ದೇವಾಲಯ ಮತ್ತು ಧರ್ಮಗಳ ಮೂಲಕ ನಂಬಿಕೆಯ ತಳಹದಿಯಲ್ಲಿ ರೂಪಗೊಂಡಿದ್ದವು. ರೈತರು ಸಂಕ್ರಾಂತಿ, ದೀಪಾವಳಿ, ಶಿವರಾತ್ರಿ ಮೊದಲಾದ ಹಬ್ಬಗಳಲ್ಲಿ ಬೆಳೆದ ಬೆಳೆಗಳನ್ನು ದಾನ ನೀಡುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ನಂಬಿಕೆ ಆಚರಣೆಗಳು ರೈತರ ಆತ್ಮಸ್ಥೈರ್ಯ ಮತ್ತು ನೈತಿಕ ಸ್ಥೈರ್ಯವನ್ನು ಗಟ್ಟಿಗೊಳಿಸುವ ಸಾಧನಗಳಾಗಿದ್ದವು. ಇವು ಗಟ್ಟಿಗೊಂಡ ಕಾರಣಕ್ಕೆ ಸಮಾಜದಲ್ಲಿ ಆರೋಗ್ಯಕರ ವಾತಾವರಣ ನಿರ್ಮಾಣಗೊಂಡಿತ್ತು. ದೇವಾಲಯಗಳು ದಾನದ ಮೂಲಕ ಬರುವ ಆದಾಯದಿಂದ ಠೇವಣಿಯನ್ನು ಸಂಗ್ರಹಿಸಿ ಇಟ್ಟುಕೊಂಡಿದ್ದವು. ಇದನ್ನು ರೈತರಿಗೆ ಮತ್ತು ಸಮಾಜದ ಇತರ ವ್ಯಾಪಾರಿ ಮೊದಲಾದ ವರ್ಗದವರಿಗೆ ಸಾಲ ನೀಡುತ್ತಿದ್ದವು. ಇಂದಿಗೆ ಹೋಲಿಸಿದರೆ ಬಡ್ಡಿಯ ಪ್ರಮಾಣ ಅಧಿಕವಾಗಿತ್ತು. ಸಮಯಕ್ಕೆ ಸರಿಯಾಗಿ ಸಾಲ ಪಾವತಿಸದಿದ್ದರೆ ದಂಡ ವಿಧಿಸಲಾಗುತ್ತಿತ್ತು. ಸಾಲಕ್ಕೆ ಸಂಬಂಧಿಸಿದಂತೆ ಪ್ರಾಚೀನ ಕೃಷಿಯಲ್ಲಿ ಕಠಿಣ ಕರಾರುಗಳಿದ್ದವು. ಇದರಿಂದಾಗಿ ಸಾಲ ಪಡೆಯುವ ವ್ಯಾಪಾರಿಗಳಿಗೆ ಹೋಲಿಸಿದರೆ ಕೃಷಿಕರ ಸಂಖ್ಯೆಯ ಪ್ರಮಾಣ ವಿರಳವಾಗಿದ್ದಂತೆ ಕಂಡುಬರುತ್ತದೆ. ಜನರು ಆತ್ಮಹತ್ಯೆಯಂತಹ ಯತ್ನಗಳನ್ನು ಮಾಡುವುದಿರಲಿ ಸಾಲವನ್ನು ಮಾಡಲು ಭಯಪಡುವಂತಹ ಸ್ಥಿತಿ ನಿರ್ಮಾಣಗೊಂಡಿತ್ತು.

- ಪ್ರಾಚೀನ ಕೃಷಿಯಲ್ಲಿ ಕಂಡುಬರುವ ಈ ಎಲ್ಲ ಅಂಶಗಳ ಸಾಧ್ಯತೆಗಳಿಂದಾಗಿ ಸಮಾಜವು ಆರೋಗ್ಯಕರವಾಗಿ, ನೆಮ್ಮದಿಯಿಂದ ಜೀವಿಸಿರುವುದು ಕಂಡುಬರುತ್ತದೆ. ಈ ಎಲ್ಲ ಅಂಶಗಳು ಪ್ರಸ್ತುತ ಅಧ್ಯಯನದಿಂದ ದೊರೆತ ಫಲಿತಗಳಾಗಿವೆ. ಈ ಫಲಿತಗಳು ಪ್ರಾಚೀನ ಕೃಷಿಯಲ್ಲಿ ಕಂಡುಬರುವ ಸಮಸ್ಯೆಗಳಾಗಿ ಕಂಡುಬರುವುದಿಲ್ಲ. ಬದಲಾಗಿ ಅದಕ್ಕಿಂತ ಹೆಚ್ಚಾಗಿ ಆಧುನಿಕ ಕೃಷಿಯಿಂದ ಉಂಟಾದ ಸಮಸ್ಯೆಗಳಿಗೆ ಪರಿಹಾರೋಪಾಯಗಳಾಗಿ ಕಂಡುಬರುತ್ತದೆ. ಇಂದು ಕೃಷಿಕರು ಸಮಾಜದಲ್ಲಿ ಆರ್ಥಿಕ ಸಮಸ್ಯೆಯ ಮೂಲಕ ಸಾಮಾಜಿಕ ಸಮಸ್ಯೆಗಳನ್ನು ಸೃಷ್ಟಿಸಿಕೊಳ್ಳುತ್ತಿದ್ದಾರೆ. ಆಧುನಿಕ ಆವಿಷ್ಕಾರಗಳ ಬಳಕೆಯಿಂದಾಗಿ ಕೃಷಿ ಬದುಕು ತತ್ತರಿಸಿ ನಲುಗುತ್ತಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕೃಷಿಯಲ್ಲಿ ಸೂಕ್ತ ಪರಿಹಾರಗಳಿವೆ ಎಂಬ ಅಂಶಗಳು ಅಧ್ಯಯನದಿಂದ ದೊರೆತಿದ್ದು, ಇವುಗಳ ಮರುಬಳಕೆ ಸಾಧ್ಯವಾದರೆ ಕೃಷಿಯ ಜೀವಂತಿಕೆ ಸಮಾಜದಲ್ಲಿ ನೆಲೆಯನ್ನು ಕಂಡುಕೊಳ್ಳುವ ಮೂಲಕ ಅಭಿವೃದ್ಧಿ ಸಾಧಿಸಲು ಸಾಧ್ಯವಿದೆ.

# ಪರಾಮರ್ಶನ ಗ್ರಂಥಗಳು


**ಶಾಸನ ಸಂಪುಟಗಳು**

- ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು
- ಕಲ್ಯಾಣ ಚಾಲುಕ್ಯರ ಶಾಸನಗಳು.
- ಧಾರವಾಡ ಜಿಲ್ಲೆಯ ಶಾಸನ ಸೂಚಿ.
- ರಾಷ್ಟ್ರಕೂಟರ ಶಾಸನಗಳು.

**Inscription Volumes**

- Annual Reports of South Indian Epigraphy.
- Annual Reports of Indian Epigraphy.
- Annual Reports of Archaeological Survey of India.
- Bombay Karnataka Inscriptions.
- Epigraphia Carnatica.
- Epigraphia Carnatica(Rice B.L.)
- Epigraphia Indica.
- Indian Antiquary .
- Inscriptions of North Karnataka and Kolhapura State
- Karnataka Inscriptions.
- Mysore Archaeological Annual Reports.
- South Indian Inscriptions.

**ಆನುಷಂಗಿಕ ಆಕರಗಳು**

- ಅಣ್ಣಿಗೇರಿ ಎ.ಎಂ., ಮೇವುಂಡಿ ಮಲ್ಲಾರಿ, ಶಾಸನ ಸಾಹಿತ್ಯ ಸಂಚಯ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೬೧.
- ಅಣ್ಣಿಗೇರಿ ಎ.ಎಂ., ಶೇಷಶಾಸ್ತ್ರಿ ಆರ್., (ಸಂ) ಶಾಸನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭.
- ಅನಂತರಂಗಾಚಾರ್ ಎನ್., ಪಂಪಭಾರತ,(ಅನು) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.
- ಇರ್ಫಾನ್ ಹಬೀಬ್, ಪೂರ್ವೇತಿಹಾಸ,(ಅನು) ಪ್ರದೀಪ್ ಬೆಳಗಲ್, ಚಿಂತನ ಪ್ರಕಾಶನ, ಬೆಂಗಳೂರು, ೨೦೧೪.
- ಇರ್ಫಾನ್ ಹಬೀಬ್, ಭಾರತ ಚರಿತ್ರೆಯಲ್ಲಿ ರೈತ,(ಅನು) ಸುಜ್ಞಾನಮೂರ್ತಿ ಬಿ., ಲಡಾಯಿ ಪ್ರಕಾಶನ, ಗದಗ, ೨೦೧೬.
- ಇರ್ಫಾನ್ ಹಬೀಬ್, ವಿವೇಕಾನಂದ ಝಾ., ಮೌರ್ಯರ ಕಾಲದ ಭಾರತ,(ಅನು) ನಗರಗೆರೆ ರಮೇಶ್, ಚಿಂತನ ಪ್ರಕಾಶನ, ಬೆಂಗಳೂರು, ೨೦೧೪.
- ಇರ್ಫಾನ್ ಹಬೀಬ್, ವಿಜಯಕುಮಾರ್ ಠಾಕೂರ್, ವೈದಿಕಯುಗ,(ಅನು) ಚಂದ್ರಪ್ಪ ಸಿ., ಪ್ರದೀಪ ಬಿ., ಚಿಂತನ ಪ್ರಕಾಶನ, ಬೆಂಗಳೂರು, ೨೦೧೪.

- ಇರ್ಫಾನ್ ಹಬೀಬ್, ಸಿಂಧೂ ಕಣಿವೆ ನಾಗರೀಕತೆ, (ಅನು) ಪ್ರದೀಪ್ ಬೆಳಗಲ್, ಜೈಕುಮಾರ್ ಹೆಚ್.ಎಸ್., ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೧೧.
- ಈರಯ್ಯ ಕಿಲ್ಲೇದಾರ, ಸಾಂಪ್ರದಾಯಿಕ ಒಕ್ಕಲುತನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.
- ಈಶ್ವರಪ್ಪ ಎಂ.ಜಿ., ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.
- ಕಂಚ ಐಲಯ್ಯ, ತಿರುಗಿ ತಿರುಗಿಸು ನೇಗಿಲು ಉಳು(ಅನು), ಸುಜ್ಞಾನಮೂರ್ತಿ ಬಿ., ಲಡಾಯಿ ಪ್ರಕಾಶನ, ಗದಗ, ೨೦೧೬.
- ಕರಣಂ ವಿರೂಪಾಕ್ಷಗೌಡ, ಹೂವಿನ ಹಡಗಲಿ, ತಾಲ್ಲೂಕು ಸಮಗ್ರ ಶಾಸನಗಳ ಅಧ್ಯಯನ, ಮಮತಾ ಎಂಟರ್ ಪ್ರೈಸಸ್, ಬೆಂಗಳೂರು, ೨೦೧೨.
- ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ ೧–೨, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೧೯೯೫.
- ಕಲಬುರ್ಗಿ ಎಂ.ಎಂ., (ಸಂ) ಸೋಮೇಶ್ವರ ವಿರಚಿತ, ಮಾನಸೋಲ್ಲಾಸ ಸಂಪುಟ ೧, ೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮.
- ಕುಲಕರ್ಣಿ ಜಿ.ಬಿ., ರಾಷ್ಟ್ರಕೂಟರ ಚರಿತೆ ಮತ್ತು ಸಂಸ್ಕೃತಿ, ಅನ್ನಪೂರ್ಣ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೧೨.
- ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ಕೌಟಿಲೀಯಅರ್ಥಶಾಸ್ತ್ರ, ಅಂಕಿತ ಪುಸ್ತಕ, ಬೆಂಗಳೂರು, ೨೦೦೫.
- ಕೃಷ್ಣ ಭಟ್ಟ ಕುಕ್ಕಿಲ, (ಅನು) ಸಿಲಪ್ಪದಿಗಾರಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫.
- ಕೃಷ್ಣ ಮೋಹನ್ ಶ್ರೀಮಾಲಿ, ಕಬ್ಬಿಣ ಯುಗ ಮತ್ತು ಧಾರ್ಮಿಕ ಕ್ರಾಂತಿ, (ಅನು) ದಿವಾಕರ ನಾ.,ಚಿಂತನ ಪ್ರಕಾಶನ, ಬೆಂಗಳೂರು, ೨೦೧೫.
- ಕೈಂತಜೆ ವಿಷ್ಣುಭಟ್ಟ., ಕೃಷಿ ಲೋಕ ಪ್ರವೇಶ, ಕನ್ನಡ ಪ್ರಪಂಚ ಪ್ರಕಾಶನ, ಬೆಂಗಳೂರು, ೧೯೯೨.
- ಕೊಟ್ರಯ್ಯ ಸಿ.ಟಿ.ಎಂ., ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, (ಅನು) ಧ್ರುವನಾರಾಯಣ ಎಂ., ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.
- ಕೋಸಾಂಬಿ ಡಿ. ಡಿ., ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರೀಕತೆ,(ಅನು) ವೇಣುಗೋಪಾಲ್ ಟಿ. ಎಸ್., ಶೈಲಜಾ, ಚಿಂತನ ಪ್ರಕಾಶನ, ಬೆಂಗಳೂರು, ೨೦೧೧.
- ಕಲ್ಯಾಣರಾವ್ ಜಿ ಪಾಟೀಲ, ಡಾ. ಎಂ. ಎಂ. ಕಲಬುರ್ಗಿಯವರ ಶೋಧಗಳು, ಡಾ. ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೧೭.
- ಗಣಪತಿಗೌಡ, ಗ್ರಾಮ ಒಕ್ಕಲಿಗರ ಸಾಂಸ್ಕೃತಿಕ ಅನನ್ಯತೆ ಮತ್ತು ಸಮಕಾಲೀನ ಸಂದರ್ಭಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.
- ಗದ್ದಗಿಮಠ ಬಿ.ಎಸ್., ಕನ್ನಡ ಜಾನಪದಗೀತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೩.
- ಗಾಣದಾಳು ಶ್ರೀಕಂಠ, ಕೃಷಿ ಉಪಕರಣಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.
- ಗಿಲ್ಬಟ್ ನಿಕ್ವೇರಾ, ಪೂರ್ವ ಪ್ರಾಚೀನ ಭಾರತದ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೨೦೦೪.

- ಗುಂಡ್ಮಿ ಚಂದ್ರಶೇಖರ ಐತಾಳ, (ಅನು) ಕರ್ಣಾಟಕ ಪಂಚತಂತ್ರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩.
- ಘನಮಠದ ಶಿವಯೋಗಿಗಳು, ಕೃಷಿ ಜ್ಞಾನ ಪ್ರದೀಪಿಕೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.
- ಚಂದ್ರಕಾಂತ ಎಂ.ಜಿ., ಮಹದೇವಪ್ಪ ಎಂ.,(ಸಂ) ಭಾರತೀಯ ಸಂಸ್ಕೃತಿ ಮತ್ತು ಕೃಷಿ, ದಿ ಮಿಥಿಕ್ ಸೊಸೈಟಿ, ಬೆಂಗಳೂರು, ೨೦೦೯.
- ಚಂದ್ರಪೂಜಾರಿ ಎಂ., (ಸಂ) ಸಮುದಾಯ ಮತ್ತು ಸಹಭಾಗಿತ್ವ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.
- ಚಂದ್ರಶೇಖರಪ್ಪ ಟಿ.ಜಿ., ಸಮಗ್ರ ಭಾರತದ ಇತಿಹಾಸ, ಪೂರ್ಣ ಪ್ರಕಾಶನ, ಶಿವಮೊಗ್ಗ, ೨೦೦೨.
- ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೧.
- ಚಿದಾನಂದಮೂರ್ತಿ ಎಂ., ಜನ-ಜನಪದ-ಜಾನಪದ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨.
- ಚಿದಾನಂದಮೂರ್ತಿ ಎಂ., ಹೊಸತು ಹೊಸತು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩.
- ಚೆನ್ನಸ್ವಾಮಿ ಸೋಸಲೆ ಎನ್., ರಮೇಶ ನಾಯಕ, ಕೊಟ್ರೇಶ್ ಎಂ., ಬಾದಾಮಿ ಚಾಲುಕ್ಯರು; ಲೇಖನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
- ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೧೬.
- ದೀಕ್ಷಿತ್ ಜಿ.ಎಸ್., ಕುಪ್ಪುಸ್ವಾಮಿ ಜೆ.ಆರ್., ಕರ್ನಾಟಕದಲ್ಲಿ ಕೆರೆ ನೀರಾವರಿ,(ಅನು) ಮೋಹನ್ ಎಸ್.ಕೆ.., ನೀಲತ್ತಹಳ್ಳಿ ಕಸ್ತೂರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.
- ದೇವರಕೊಂಡಾರೆಡ್ಡಿ, ಕರ್ನಾಟಕ ಶಾಸನಗಳಲ್ಲಿ ಶಾಪಾಶಯ, ಕರ್ನಾಟಕ ಇತಿಹಾಸ ಸಂಶೋಧನ ಮಂಡಳಿ, ಧಾರವಾಡ, ೨೦೦೮.
- ದೇವೇಂದ್ರ ಕುಮಾರ ಹಕಾರಿ, ಸಂಧ್ಯಾ ರೆಡ್ಡಿ ಕೆ.ಆರ್., ಗ್ರಾಮೀಣ ಪಶುಪಾಲನೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦.
- ನಂಜುಂಡಸ್ವಾಮಿ ಎ.ಎಸ್., ಕದಂಬ-ಗಂಗರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೨೦೧೨.
- ನಂಜುಂಡಸ್ವಾಮಿ ಎ.ಎಸ್., ಚಾಲುಕ್ಯರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೨೦೦೯.
- ನಂಜುಂಡಸ್ವಾಮಿ ಎ.ಎಸ್., ರಾಷ್ಟ್ರಕೂಟರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೨೦೧೨.
- ನಂಜುಂಡಸ್ವಾಮಿ ಎ.ಎಸ್., ಹೊಯ್ಸಳರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೨೦೧೨.
- ನರಸಿಂಹಮೂರ್ತಿ ಎ.ವಿ., ಕರ್ನಾಟಕ ನಾಣ್ಯಶಾಸ್ತ್ರ ಅಧ್ಯಯನ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೦.
- ನರಸಿಂಹಶಾಸ್ತ್ರಿ ಕೆ.ಎಲ್., ಆದಿಪುರಾಣ (ಅನು) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯.

- ನರಸಿಂಹಾಚಾರ್ ಡಿ.ಎಲ್., ಪೀಠಿಕೆಗಳು ಮತ್ತು ಲೇಖನಗಳು, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೦೫.
- ನರಸಿಂಹಾಚಾರ್, ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨.
- ನಾಗಭೂಷಣ ಸ್ವಾಮಿ ಓ.ಎಲ್., ವಚನ ಸಾವಿರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.
- ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೨.
- ನಾಗರಾಜು ಡಿ.ಎಂ., ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಗೌತಮ ಪ್ರಕಾಶನ, ಮೈಸೂರು, ೨೦೧೨.
- ನಾರಾಯಣಶಾಸ್ತ್ರೀ ಹ.ವೆ., (ಗದ್ಯಾನುವಾದ) ಕರ್ನಾಟಕ ಕಾದಂಬರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯.
- ನಾರಾಯಣಸ್ವಾಮಿ ಎಂ., ಜಾನುವಾರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.
- ನೀಲತ್ತಹಳ್ಳಿ ಕಸ್ತೂರಿ, (ಅನು) ಕರ್ನಾಟಕದಲ್ಲಿ ಕೆರೆ ನೀರಾವರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.
- ಪಂಚಮುಖಿ ಆರ್.ಎಸ್., ಕರ್ನಾಟಕ ಇತಿಹಾಸ ಸಂಪುಟ ೧, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮
- ಪತ್ರೆ, ಮಣ್ಣು ಮತ್ತು ನೀರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.
- ಪುಸಾಳ್ಕರ್ ಎ. ಡಿ., ಮಜುಂದಾರ್ ಎ.ಕೆ., ವೇದಯುಗ, ಭಾಗ ಎರಡು, (ಅನು) ನಾಗರಾಜ್‌ರಾವ್ ಎಚ್.ಎಂ., ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೭.
- ಪೂರ್ಣ ಪ್ರಜ್ಞ ಬೇಳೂರು, ತೋಟಗಾರಿಕೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.
- ಬಸವರಾಜ ಕುಂಚೂರು, ನಮ್ಮೂರ ಕೆರೆಗಳು, ಶ್ರೀ ಚಕ್ರಪ್ರಕಾಶನ, ಹರಪನಹಳ್ಳಿ, ೨೦೦೯.
- ಬಸವರಾಜ ಕಲ್ಗುಡಿ, ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೭.
- ಬಸವರಾಜ ನೆಲ್ಲಿಸರ, ಶಿವಕುಮಾರಸ್ವಾಮಿ ಸಿ.ಎಸ್., ಜನಪದ ಸಾಹಿತ್ಯ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೩.
- ಬಾಲಕೃಷ್ಣ ಜೆ., ಕೃಷಿ ವಿಜ್ಞಾನ ಸಾಹಿತ್ಯ ನಡೆದು ಬಂದ ಹಾದಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.
- ಬಾಲಗೋಪಾಲ್ ಕೆ., ಪ್ರಾಚೀನ ಭಾರತದ ಚರಿತ್ರೆ, ಡಿ.ಡಿ. ಕೊಸಾಂಬಿಯವರ ಚಿಂತನೆಗಳು (ಅನು), ಶ್ರೀಮತಿ ಎಚ್.ಎಸ್., ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨.
- ಬಾಶಮ್ ಎ.ಎಲ್., ಪ್ರಾಚೀನ ಭಾರತವೆಂಬ ಅದ್ಭುತ, (ಅನು) ಮಿರ್ಜಿ ಡಿ.ಆರ್., ಐಬಿಹೆಚ್ ಪ್ರಕಾಶನ, ಬೆಂಗಳೂರು, ೨೦೧೨.
- ಭಗವತಿ ಎಸ್.ಎಸ್., ಮೇಲಿನಮನಿ ಎಚ್.ಎಸ್., ಕನ್ನಡ ಶಾಸನಗಳ ಅಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪.

- ಮಂಜುನಾಥ್ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಚಿತ್ಕಲ ಪ್ರಕಾಶನ, ಕುಪ್ಪಂ, ೨೦೧೨.
- ಮನ್ವಾಚಾರ ಕಲವೀರ, ಮಾತೃದೇವತೆ; ಉಗಮ ಮತ್ತು ವಿಕಾಸ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೨೦.
- ಮಲ್ಲಣ್ಣ ಶಂಕರಣ್ಣ ನಾಗರಾಳ, ಒಣ ಬೇಸಾಯ ಪದ್ಧತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.
- ಮಲ್ಲಿಕಾರ್ಜುನ ಹೊಸಪಾಳ್ಯ, ಕೃಷಿ ಆಚರಣೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮
- ಮುಜುಮ್‌ದಾರ್, ರಾಯ್‌ಚೌದರಿ, ಭಾರತದ ಪ್ರೌಢ ಇತಿಹಾಸ, (ಅನು) ಶಾರದ ಪ್ರಸಾದ್ ಎನ್.ಎಸ್., ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು, ೨೦೦೩.
- ಮುನಿಸ್ವಾಮಿ ಗೌಡ, ಆಹಾರ ಬೆಳೆಗಳ ಸಾವಯವ ಕೃಷಿ, ಕೃಷಿ ವಿಕಾಸ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೭.
- ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭
- ರಂಗಸ್ವಾಮಯ್ಯ ಮತ್ತು ಶಿವಣ್ಣ, ಉತ್ತರ ಭಾರತದ ಇತಿಹಾಸ, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು, ೨೦೦೩.
- ರಂಗಸ್ವಾಮಿ ಎ., ಚಾವುಂಡರಾಯನ ಲೋಕೋಪಕಾರ ಒಂದು ಅಧ್ಯಯನ, ರಾಜೇಂದ್ರ ಪ್ರಿಂಟರ್ಸ್, ಮೈಸೂರು, ೧೯೯೬.
- ರಮೇಶ ಎಚ್., ಅರಸೀಕೆರೆ ಚರಿತೆ ಮತ್ತು ಸಂಸ್ಕೃತಿ, ಶ್ರೀ ಕೋಲ ಶಾಂತೇಶ್ವರ ಕಲ್ಯಾಣ ಕೇಂದ್ರ, ಅರಸೀಕೆರೆ, ೨೦೧೯.
- ರಮೇಶ ನಾಯಕ, (ಸಂ) ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.
- ರಮೇಶ್ ಸ. ಚಿ., ಕೃಷಿ:ಪಾರಂಪರಿಕ ಜ್ಞಾನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧
- ರಾಗೌ,(ಸಂ) ಸರ್ವಜ್ಞನಸಮಗ್ರ ತ್ರಿಪದಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩
- ರಾಜಶೇಖರಪ್ಪ ಬಿ., ದುರ್ಗಶೋಧನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೯.
- ರಾಜಾರಾಮ ಹೆಗಡೆ, (ಸಂ) ಕೆರೆ ನೀರಾವರಿ ನಿರ್ವಹಣೆ; ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.
- ರಾಮದಾಸರೆಡ್ಡಿ, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯.
- ರಾಮಯ್ಯಂಗಾರ್ ಎಚ್.ಜೆ., ಭಾರತ ಹಿಂದೆ ಇಂದು ಮುಂದೆ, ವಸಂತ ಪ್ರಕಾಶನ, ಬೆಂಗಳೂರು, ೨೦೦೭.
- ರೊಮಿಲ ಥಾಪರ್, ಪ್ರಾಚೀನ ಭಾರತ, (ಅನು) ಉಮೇಶ್ ಎಚ್.ಎಸ್., ಶಶಿಕುಮಾರ್ ಜೆ., ಮತ್ತು ದೀಪ, ವಿಸ್ಮಯ ಪ್ರಕಾಶನ, ಮೈಸೂರು, ೨೦೧೬.
- ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ್ ಎಂ.ಡಿ., (ಸಂ) ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ೧೯೯೫.

- ವಾಮನ ನಂದಾವರ, (ಸಂ) ಕರಾವಳಿ ಆಚರಣೆಗಳು, ಭಾಗ-೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೪.
- ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.
- ವಿಠ್ಠಲ ಎಸ್ ಬಡಿಗೇರ, ಹೊಯ್ಸಳರ ಕಾಲದ ನೀರಾವರಿ ಪದ್ಧತಿ, ಕನ್ನಡದಲ್ಲಿ ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, ೨೦೧೭.
- ವಿರೂಪಾಕ್ಷಪ್ಪ ಹೆಚ್.ಎಸ್., ಕನ್ನಡದಲ್ಲಿ ಕೃಷಿಶಾಸ್ತ್ರ ಸಾಹಿತ್ಯ, ಬಂಡಾರ ಪ್ರಕಾಶನ, ಮಸ್ಕಿ, ೨೦೧೩.
- ವೀರೇಂದ್ರ ಶೀಲವಂತ, ಕೃಷಿ ಆಚರಣೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೨೦
- ವೀರೇಶ ಬಡಿಗೇರ, ಜಲಶಾಸ್ತ್ರದ ಹಸ್ತ ಪ್ರತಿಗಳು ಮತ್ತು ದೇಸಿ ವಿವೇಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೫.
- ವಿಲ್ ಡ್ಯೂರಾಂಟ್, ನಮ್ಮ ಪ್ರಾಚ್ಯ ಪರಂಪರೆ, ನಾಗರೀಕತೆಯ ಕಥೆ ೧, (ಸಂ) ಶೇಷಗಿರಿರಾವ್ ಎಲ್.ಎಸ್., ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭.
- ಶಂಕರ ಕೆದಿಲಾಯ ಎ., ಪೆರಿಯಪುರಾಣಂ, ಸಂಪುಟ ೧,೨, ಮದ್ರಾಸು ವಿಶ್ವವಿದ್ಯಾಲಯ, ಮದ್ರಾಸು, ೧೯೭೪.
- ಶರ್ಮಾ ಆರ್.ಎಸ್., ಪ್ರಾಚೀನ ಭಾರತ,(ಅನು) ಶಂಕರ ನಾರಾಯಣರಾವ್ ಎನ್.ಪಿ., ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೭.
- ಶಿರೂರು ಬಿ.ವ್ಹಿ., (ಸಂ) ಡಾ. ಎಸ್.ಸಿ. ನಂದಿಮಠರ ಲೇಖನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೭.
- ಶಿವರಾಮ ಕಾರಂತ ಕೆ., ಚೋಮನದುಡಿ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೬.
- ಶಿವರುದ್ರ ಸ್ವಾಮಿ ಎಸ್.ಎನ್., ಭಾರತದ ಇತಿಹಾಸ, ಪೌರಸ್ತ್ಯ ಪ್ರಕಾಶನ ಮೈಸೂರು, ೨೦೦೦.
- ಶಿವಾನಂದ ವಿ., (ಸಂ) ಹೈದ್ರಾಬಾದ್ ಕರ್ನಾಟಕದ ಕನ್ನಡ ಶಿಲಾಶಾಸನಗಳು, ಕನ್ನಡಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೨೦೦೭.
- ಶೆಟ್ಟರ್ ಷ., ಹಳಗನ್ನಡ, ಅಭಿನವ ಪ್ರಕಾಶನ, ಬೆಂಗಳೂರು, ೨೦೧೭.
- ಶೇಷಶಾಸ್ತ್ರಿ. ಆರ್., ಕರ್ನಾಟಕ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೪.
- ಶೇಷಅಯ್ಯಂಗಾರ್ ಹೆಚ್., ಲೋಕೋಪಕಾರ ,(ಸಂ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೫೦.
- ಶ್ರೀಕಂಠಶಾಸ್ತ್ರೀ ಎಸ್., ಪುರಾತತ್ವ ಶೋಧನೆ, ಸುಮೇರ ಸಾಹಿತ್ಯ, ಬೆಂಗಳೂರು, ೨೦೧೬.
- ಶ್ರೀಪತಿ ಕಲ್ಲೂರಾಯ, ಕೃಷಿ ರಂಗ ಒಂದು ಅವಲೋಕನ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೮೮.
- ಸಕಲೇಶ್ ಮ., ಹೊಯ್ಸಳೋದಯ ಸಂಶೋಧನ, ಹಿಮಶೈಲ ಪ್ರಕಾಶನ, ಶಿವಮೊಗ್ಗ, ೨೦೦೨.
- ಸರ್ದೇಸಾಯಿ ಈ., ಭಾರತೀಯ ಇತಿಹಾಸದ ವೈಲಕ್ಷಣ್ಯಗಳು, (ಅನು), ಗೋಪಾಲಕೃಷ್ಣಯ್ಯ ಕೆ.ಎಲ್., ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೬.

- ಸುಂದರ ಅ., ಕರ್ನಾಟಕ ಚರಿತ್ರೆ ಸಂಪುಟ ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.
- ಸುಜಾತ ಎಸ್.ಸಿ., ಹೊಯ್ಸಳ ಆಳ್ವಿಕೆಯ ಕಾಲದಲ್ಲಿ ಮಹತ್ವದ ಕೊಡುಗೆಗಳು, ರಚನ ಪ್ರಕಾಶನ, ಬೆಂಗಳೂರು, ೨೦೧೫.
- ಸುಮಂಗಲಾ ಅತ್ತಿಗೇರಿ, ಕೃಷಿ ಜಾನಪದ ಮತ್ತು ಮಹಿಳೆ, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು, ೨೦೧೦.
- ಸುರೇಂದ್ರರಾವ್ ಬಿ., (ಸಂ) ಕರ್ನಾಟಕ ಚರಿತ್ರೆ, ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮.
- ಸೂರ್ಯನಾಥ ಯು ಕಾಮತ್, (ಸಂ) ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೨, ಲೋಟಸ್ ಪ್ರಿಂಟರ್ಸ್, ಬೆಂಗಳೂರು, ೧೯೮೫.
- ಸೋಮಣ್ಣ, ವ್ಯವಸಾಯ ಸಂಬಂಧಿ ಆಚರಣೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.
- ಹನುಮಾಕ್ಷಿ ಗೋಗಿ, ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ, ೧೯೯೬.
- ಹಿರೇಮಠ ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬.
- ಹೊಸಮನಿ ಎ.ಎಂ., ಚಂದ್ರಯ್ಯ ಎಸ್.ಸಿ., ಕೃಷಿ ಉಪಕರಣಗಳು, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು, ೧೯೯೩.
- ಹೊಸಮನಿ ಎಂ.ಎಂ., ಶರ್ಮಾ ಕೆ.ಎಂ.ಎಸ್., ಬಹು ಬೆಳೆ ಯೋಜನೆ, ಕನ್ನಡ ಅಧ್ಯಯನ ವಿಭಾಗ, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು, ೧೯೯೩.
- ಕರ್ನಾಟಕ ಪರಂಪರೆ ಸಂಪುಟ೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೪.
- ಸಾಮ್ರಾಜ್ಯ ಏಕತಾಯುಗ ಭಾಗ ೧, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮
- Altekar A.S., The Rashtrakutas and Their Times, Orental Book Agency, Poona, 1967.
- Altekar A.S., State and Government in Ancient India, Motilal banarsi Dass Publishers private limited, Delhi, 2001
- Appadorai A., Economic Conditions in Southern India, A. D. 1000 to 1500 2 Volumes, University of Madras, Madras, 1936.
- Desai P.B., (Ed) A history of Karnataka, Karnataka University, Dharwad , 1970.
- Dikshit G.S., Local Self Government in medieval Karnataka, Karnataka University, Dharwad ,1974.
- Dikshit D.P., Political History of The Chalukyas of Badami, Abhinav Publications, New Delhi, 1980.
- Gopal B.R., The Chalukyas of Kalyana and tha Kalachuris, Karnataka University, Dharawad ,1981.
- Gopal B.R., (Ed) The Rashtrakutas of Malkhed: Studies their History and culture, The Mythic Society, Bangalore, 1994.
- Gururajachar S., Some Aspects of Economic and Social life in Karnataka, Mysore University, Mysore, 1974.

